ಶ್ರೀ:

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ



# ಯುಕ್ತಿಮಲ್ಲಿಕಾ

## ಭೇದಸೌರಭ-೩

ಸಂಪುಟ-೬

॥ ಶ್ರೀಃ ॥

'ಶ್ರೀಶಸ್ತೇ ಸುಶ್ರಿಯಂ ದದ್ಯಾತ್'

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ

# ಯುಕ್ತಿಮಲ್ಲಿಕಾ

ಮೂಲಸಹಿತ ಸಮಗ್ರ ಕನ್ನಡಾನುವಾದ

ಶ್ರೀ ಶ್ರೀ ಸುರೋತ್ತಮತೀರ್ಥಶ್ರೀಪಾದವಿರಚಿತಾ

## ಭಾವವಿಲಾಸಿನೀ

ಸಂಸ್ಕೃತ ವ್ಯಾಖ್ಯಾನ ಹಾಗೂ ಸಮಗ್ರ ಕನ್ನಡಾನುವಾದ

## ಭೇದಸೌರಭಮ್ - ೩

## ಸಂಪುಟ - ೬

ಅನುಗ್ರಹ :

ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು

ಪ್ರಥಮಪರ್ಯಾಯ, ಸೋದೆ ಶ್ರೀವಾದಿರಾಜಮಠ, ಉಡುಪಿ

ಸಂಪಾದಕರು:

ಪಿ.ಎಸ್. ಶೇಷಗಿರಿ ಆಚಾರ್ಯ

ಪ್ರಕಾಶಕರು:

ಶ್ರೀಮದ್‌ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನಕೇಂದ್ರ

ಸೋದೆ ಶ್ರೀವಾದಿರಾಜ ಮಠ, ರಥಬೀದಿ, ಉಡುಪಿ.

# ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತ ಯುಕ್ತಿಮಲ್ಲಿಕಾ-

ಶ್ರೀ ಸುರೋತ್ತಮತೀರ್ಥವಿರಚಿತ ಭಾವವಿಲಾಸಿನೀ ವ್ಯಾಖ್ಯಾನ ಮತ್ತು ಕನ್ನಡ ಅನುವಾದ ಸಹಿತ

**ಭೇದಸೌರಭ - ಭಾಗ ೩**




ಪುಟಗಳು - V + 409 = 415

ಸಂಪುಟ - ೬(೧೦)

ಮುದ್ರಿತ ಪ್ರತಿಗಳು - ೧೦೦೦

ಪ್ರಕಾಶಕರು - ಶ್ರೀಮದ್ ವೃಂದಾವನಾಚಾರ್ಯ ಸಂಶೋಧನ
ಹಾಗೂ ಪ್ರಕಾಶನ ಕೇಂದ್ರ,
ಸೋದೆ ಶ್ರೀವಾದಿರಾಜಮಠ, ರಥಬೀದಿ, ಉಡುಪಿ.

ಮುಖಪುಟವಿನ್ಯಾಸ : ಎಂ. ಶರತ್ ಚಂದ್ರ

ಪುಟ ಸಂಯೋಜನೆ : ಬದರಿನಾರಾಯಣಾಚಾರ್ಯ ಎಸ್. ಕಡ್ಡಿ

ಅಕ್ಷರ ಜೋಡಣೆ : ಕೆ. ಗಣಪತಿ ಭಟ್
ಶ್ರೀಮತಿ ನಾಗಲತಾ (ಸುಧಾ),
ಎಂ. ಶರತ್ ಚಂದ್ರ

ಮುದ್ರಕರು : ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್
ಮೈಸೂರು. ✆ : 7899779255

ಗ್ರಂಥಪ್ರಾಪ್ತಿ : ಸೋದೆ ಶ್ರೀವಾದಿರಾಜಮಠ, ಉಡುಪಿ.

# ಉತ್ತರಕಲ್ಪಸಮೀರರ ಪರಾಕು



★ ''ಉದ್ದಂಡೋದ್ದಂಡ, ಪರವಾದಿ ಪ್ರಚಂಡ, ಗೆಂಡಭೇರುಂಡ, ಮಾಯಿಮತ ವಿಧ್ವಂಸಕ, ಮಧ್ವಮತೋದ್ಧಾರಕ, ಸುಧಾರಸ ಆಸ್ವಾದ, ದಿಗ್ವಿಜಯೀಕೃತ ಆಸೇತುಮರ್ಯಾದ, ಭಾವಿಹನುಮಚ್ಚಕ್ರವರ್ತಿನ್, ಗುರುಸಾರ್ವಭೌಮ ಹಂಸಾರೂಢವಾದಿರಾಜ ಭೋ ಪರಾಕ್!''

★ ''ಮಧ್ವಾಗಮ ಸಿದ್ಧಾಗಮ. ಈ ಮಧ್ವಮತವೆ ಸಕಲಮತಕೆ ಮೇಲೆನಿಸಿದ ಮತ. ಈ ಮಧ್ವಮತವನು ಪಿಡಿದು ಅಬದ್ಧಮತವನು ತ್ಯಜಿಸಿ ನಡೆದರೆ (ಜಯಿಸಿದರೆ) ಮುಕ್ತಿಗೈವುದಾ ಸುಕೃತವು (ಸುಕೃತಂ) ಒಂಮ ಕ್ಷಣದಲ್ಲಿ ವಾದಿರಾಜರ ದ್ವಂದ್ವ ಪದವನು ಭಜಿಸಿದವರಿಗೆ ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು; ಈ ಮಂದಮತಿಗಳು ಬಲ್ಲರೇ ಗೋವಿಂದ ಭಕ್ತಮಹಿಮೆಯನು ಪುರಂದರಾದಿಗಳು ಅರಿವರಲ್ಲದೇ ಮಿಕ್ಕವರರಿಯಬಹುದೇ! ಪಾರಮೇಷ್ಠಿ ಪದಾಧಿಕಾರಿ ಋಜುಗಣಸ್ಥ (ಪದಸ್ಥ) ಗುರುರಾಜ ಪಟ್ಟಭದ್ರವ್ಯಾಖ್ಯಾನಸಿಂಹಾಸನಾಧೀಶ್ವರ ಅಜ್ಞಾನತಿಮಿರಮಾರ್ತಾಂಡ ಸುಜ್ಞಾನ ತೇಜೋಮಯ!''

# ರಾಜರ ಸಂದೇಶ



## ''ರತ್ನದಂತೆ ರಾಜ-ಮಧ್ವರು''

ಗೃಹೀತಮರ್ಥಂ ಯಃ ಪಶ್ಚಾನ್ನ
ಜಹಾತಿ ಸ ವೈ ಮಹಾನ್ ।
ತೃಣಗ್ರಾಹೀ ಮಣಿರ್ಮಾನ್ಯಃ
ಪೌರ್ಣಮಾಸೀ ವಿಧುಶ್ಶಶೀ ॥

ಯುಕ್ತಿಯುಕ್ತವಾಗಿ ಗ್ರಹಿಸಿದ ಅರ್ಥವನ್ನು ಪ್ರಾಜ್ಞನು ಎಂದಿಗೂ ಬಿಡಲಾರ. ಅವನೇ ಪ್ರಾಜ್ಞಶಿರೋಮಣಿ. ರತ್ನಮಣಿಯಾದರೂ ತೃಣವನ್ನು ಗ್ರಹಿಸುವ ಗುಣಬಿಡದು. ಚಂದ್ರನೂ ಶಶಾಂಕವಾಗಿಯೇ ಬೆಳಗುತ್ತಿದ್ದಾರೆ. ಆಗಮೋಕ್ತ ಹರಿಗುಣಗಳನ್ನು ಬಿಡದೆ ಹಿಡಿದ ರತ್ನರಾಜ ರಾಜ-ಮಧ್ವರು.

## ''ವೇದವೃಕ್ಷವನ್ನಾಶ್ರಯಿಸಿರಿ''

ಗೃಹ್ಣೀಯಾತ್ತಿಂತ್ರಿಣೀಶಾಖಾಂ
ಶಿಗ್ರುಶಾಖಾಗ್ರಹೇಣ ಕಿಮ್ ।
ಜಗೃಹುಸ್ತದ್ವಿದೋ ವೇದಂ
ವಾದಿವಾಕ್ಯಾನ್ಯಕೋವಿದಾಃ ॥

ಟೊಳ್ಳಾದ ನುಗ್ಗೆಮರದ ಟೊಂಗೆಯನ್ನಾಶ್ರಯಿಸುವವರು ದಡ್ಡರು. ಬಲಿಷ್ಠವಾದ ಹುಣಸೆರೆಂಬೆಯನ್ನಾಶ್ರಯಿಸುವವ ಜಾಣ. ವಿಮರ್ಶೆಮಾಡಿದ ಪಂಡಿತರು ವೇದವೆಂಬ ತಿಂತ್ರಿಣಿಯನ್ನು ಆಶ್ರಯಿಸಿದರೆ, ಅಜ್ಞರಾದ ಮಂದಿ ಶಿಗ್ರುಶಾಖೆಯಂತಹ ಜೈನಾದಿ ಆಗಮಗಳನ್ನು ಆಶ್ರಯಿಸಿ ಅನರ್ಥಕ್ಕೀಡಾಗಿದ್ದಾರೆ.

# ಭೇದಸೌರಭಮ್ – ಸಂಪುಟ – ೬

## ವಿಷಯಾನುಕ್ರಮಣಿಕೆ


| ವಿಷಯ | | ಶ್ಲೋಕಸಂಖ್ಯೆ |
|---|---|---|
| ೧. | 'ಯೇ ಸ್ಮರಂತ್ಯಾತ್ಮನಿ ಭಿದಾಂ' ಎಂಬ ಶ್ರುತಿಗೀತಾದಿವಾಕ್ಯಗಳಿಂದ ಮತ್ತು ನಾನಾನಿದರ್ಶನಗಳಿಂದ 'ತತ್ ತ್ವಮಸಿ' ಎಂಬ ಶ್ರುತಿಗೆ ಭೇದಪರತ್ವಸಮರ್ಥನೆ | ೧೦೬೨-೧೧೭೨ |
| ೧. | ಪೌಂಡ್ರಕವಾಸುದೇವಾದಿ ದೃಷ್ಟಾಂತದಿಂದ ಅಹಂಭಾವವನ್ನು ನಿಂದಿಸಿ, ಅಂತಹವರಿಗೆ ಅಸುರತ್ವಸಮರ್ಥನೆ | ೧೧೭೩-೧೧೯೨ |
| ೨. | 'ದ್ವಾಸುಪರ್ಣಾ' ಎಂಬ ಶ್ರುತ್ಯರ್ಥವನ್ನು ವಿಸ್ತಾರವಾಗಿ ಪ್ರತಿಪಾದಿಸುವುದರ ಮೂಲಕ ಭೇದಕ್ಕೆ ವ್ಯಾವಹಾರಿಕತ್ವ ನಿರಾಕರಣೆ | ೧೧೯೩-೧೩೩೦ |
| ೩. | ಭೇದವಾಕ್ಯಗಳಿಗೆ ಅನುವಾದಕತ್ವನಿರಾಸ | ೧೩೩೧-೧೩೯೫ |
| ೪. | 'ನೇದಂ ಯದಿದಂ' ಎಂಬ ಶ್ರುತ್ಯರ್ಥವಿವರಣಪೂರ್ವಕ ಮಿಥ್ಯೋಪಾಸನೆಯ ನಿರಾಸ | ೧೩೯೬-೧೪೬೭ |
| ೫. | 'ಯದಾ ಪಶ್ಯಃ' ಎಂಬ ಶ್ರುತಿಯಿಂದ ಮಾಧ್ವಮತವೈಶಿಷ್ಟ್ಯಸ್ಪಷ್ಟೀಕರಣ | ೧೪೬೮-೧೪೭೫ |
| ೬. | ವ್ಯಾಹತ್ಯಾದಿದೋಷಗಳಿಂದ ಐಕ್ಯವಾದವನ್ನು ನಿರಾಕರಿಸಿ, 'ನೇತಿ ನೇತಿ' ಇತ್ಯಾದಿ ಶ್ರುತಿಗಳಿಗೆ ಭೇದಪರತ್ವ ಸಮರ್ಥನೆ | ೧೪೭೬-೧೪೯೬ |
| ೭. | 'ವಿದ್ಯಾಽಽತ್ಮನಿ ಭಿದಾಬೋಧಃ' ಎಂಬ ವ್ಯಾಕ್ಯಾರ್ಥವಿವರಣ | ೧೪೯೭-೧೫೨೦ |
| ೮. | ಜೀವಪರಮಾತ್ಮರಲ್ಲಿ ಬಿಂಬಪ್ರತಿಬಿಂಬಭಾವ ಸಮರ್ಥನೆಯ ಮೂಲಕ ಬಿಂಬಪ್ರತಿಬಿಂಬೈಕ್ಯನಿರಾಸ | ೧೫೨೧-೧೫೯೦ |
| ೯. | ತಮ್ಮ ಉಪಾಸ್ಯಮೂರ್ತಿ ಶ್ರೀಹಯಗ್ರೀವದೇವರಿಗೆ ಭೇದಸೌರಭ – ಸಮರ್ಪಣೆ | ೧೫೯೧ |

**ಪರಿಶಿಷ್ಟ :** ''ಭೇದಸೌರಭೋದಾಹೃತಸ್ವಾರಸಿಕಯುಕ್ತಯಃ''


—o—

ವಿಶಿಷ್ಟಾರ್ಥಪರತ್ವೇಪಿ ವಿಶೇಷಣಬಲಾನ್ನ ತತ್ ।
ಅವಿಶಿಷ್ಟಾರ್ಥನಿಷ್ಠತ್ವೇ ಸಾಧಕಾಭಾವತೋ ನ ತತ್ ॥ ೧೦೬೨ ॥

**ಅರ್ಥ–** ವಿಶಿಷ್ಟಾರ್ಥಪರತ್ವೇಪಿ= ವಿಶಿಷ್ಟಾರ್ಥ ಪರತ್ವವನ್ನು ಅಂಗೀಕರಿಸಿದರೆ, ವಿಶೇಷಣ ಬಲಾತ್= ವಿಶೇಷಣಗಳ ಬಲದಿಂದಲೇ, ತತ್ ನ= ಐಕ್ಯವು ಇಲ್ಲ, ಅವಿಶಿಷ್ಟಾರ್ಥನಿಷ್ಠತ್ವೇ= ವಿಶಿಷ್ಟಾರ್ಥವನ್ನು ಬಿಟ್ಟು ಕೇವಲ ಚೈತನ್ಯಮಾತ್ರ ಪರತ್ವವನ್ನು ಹೇಳಿದರೆ, ಸಾಧಕಾಭಾವತಃ= ಐಕ್ಯವನ್ನು ಸಾಧಿಸಲು ಪ್ರಮಾಣವಿಲ್ಲವಾದ್ದರಿಂದ, ತತ್ ನ= ಐಕ್ಯವಿಲ್ಲ.

**ಅನುವಾದ–** ವಿಶಿಷ್ಟಾರ್ಥಪರತ್ವವನ್ನು ಒಪ್ಪಿದರೆ ವಿರುದ್ಧವಾದ ವಿಶೇಷಣಗಳ ಸಾಮರ್ಥ್ಯದಿಂದಲೇ ಐಕ್ಯವು ಇರುವುದಿಲ್ಲ. ಅವಿಶಿಷ್ಟಾರ್ಥಪರತ್ವವನ್ನು ಒಪ್ಪಿದರೂ ಐಕ್ಯದಲ್ಲಿ ಪ್ರಮಾಣವೇ ಇಲ್ಲವಾದ್ದರಿಂದ ಐಕ್ಯವು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ತದೇವೋಪಪಾದಯತಿ – **ವಿಶಿಷ್ಟೇತಿ** ॥ ಅಖಂಡಾರ್ಥತ್ವಸಂತ್ಯಾಗೇ ಹಿ ತತ್ತ್ವಂ ಪದಯೋರ್ವಿಶಿಷ್ಟಾರ್ಥಪರತ್ವಮೇವ ಸ್ಯಾತ್ । ತಸ್ಮಿಂಶ್ಚ ವಿಶೇಷಣಬಲಾತ್ ವಿರುದ್ಧ ಸರ್ವಜ್ಞಾಲ್ಪಜ್ಞತ್ವರೂಪವಿಶೇಷಣಬಲಾತ್ ತದೈಕ್ಯಂ ನ । ಅವಿಶಿಷ್ಟಾರ್ಥನಿಷ್ಠತ್ವೇ ಬ್ರಹ್ಮಸ್ವರೂಪ-ಮಾತ್ರಪರತ್ವ ಇತ್ಯರ್ಥಃ । ಸಾಧಕಾಭಾವತಃ ಐಕ್ಯಪ್ರತಿಪಾದಕಪ್ರಮಾಣಾಭಾವತಃ ॥೧೦೬೨॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಮೇಯವನ್ನೇ ಇಲ್ಲಿ ಸ್ಪಷ್ಟಪಡಿಸುತ್ತಾರೆ.

ಐಕ್ಯಸ್ಯಾನ್ಯಸ್ಯ ವಾ ವಾಕ್ಯಾದ್ ವೈಶಿಷ್ಟ್ಯಂ ಭಾಸತೇ ಯದಿ ।
ನಿಷ್ಪ್ರಕಾರಕಧೀರಂತೇ ಶಬ್ದಾದಿತಿ ಗತಂ ಮತಮ್ ।
ತಸ್ಮಾದೈಕ್ಯಂ ನ ವೈ ಶಕ್ಯಂ ವಾಕ್ಯೈಃ ಸಾಧಯಿತುಂ ತ್ವಯಾ ॥ ೧೦೬೩ ॥

**ಅರ್ಥ–** ಯದಿ= ಒಂದು ಪಕ್ಷ, ವಾಕ್ಯಾತ್= ವಾಕ್ಯಜನ್ಯವಾದ ಅಪರೋಕ್ಷ ಜ್ಞಾನದಲ್ಲಿ, ಐಕ್ಯಸ್ಯಾನ್ಯಸ್ಯ ವಾ= ಐಕ್ಯದ್ದಾಗಲೀ ಅಥವಾ ಬೇರೆ ಧರ್ಮದ್ದಾಗಲೀ, ವೈಶಿಷ್ಟ್ಯಂ= ವೈಶಿಷ್ಟ್ಯವು, ಭಾಸತೇ= ವಾಕ್ಯದಿಂದ ತೋರುವುದಾದರೆ, ಅಂತೇ= ಕೊನೆಯಲ್ಲಿ, ಶಬ್ದಾತ್= ಶಬ್ದದಿಂದ, ನಿಷ್ಪ್ರಕಾರಕಧೀಃ= ನಿಷ್ಪ್ರಕಾರ ಜ್ಞಾನವುಂಟಾಗುತ್ತದೆ ಎಂಬ, ಮತಂ= ನಿನ್ನ ಮತವು, ಗತಂ=

ಹೊರಟು ಹೋಯಿತು, ತಸ್ಮಾತ್= ಆದ್ದರಿಂದ, ತ್ವಯಾ= ನಿನ್ನಿಂದ, ವಾಕ್ಯೈಃ= ವಾಕ್ಯಗಳಿಂದ, ಐಕ್ಯಂ ಸಾಧಯಿತುಂ= ಐಕ್ಯವನ್ನು ಸಾಧಿಸಲು, ನ ಶಕ್ಯಂ= ಶಕ್ಯವಾಗುವುದಿಲ್ಲ.

**ಅನುವಾದ–** ಅದ್ವೈತವಾಕ್ಯಜನ್ಯಚರಮಸಾಕ್ಷಾತ್ಕಾರದಲ್ಲಿ ಐಕ್ಯವಾಗಲೀ ಅಥವಾ ಬೇರೆಯ ಧರ್ಮವಾಗಲೀ ಚೈತನ್ಯ ಸಂಬಂಧದಿಂದ ತೋರಿದರೆ ಅದು ನಿಷ್ಪ್ರಕಾರಜ್ಞಾನವೇ ಆಗುವುದಿಲ್ಲ. ಆಗ ಚರಮ ಸಾಕ್ಷಾತಾರವು ನಿಷ್ಪ್ರಕಾರವಾದುದು ಎಂಬ ನಿನ್ನ ಮತವು ಹೊರಟು ಹೋಗುತ್ತದೆ. ಆದ್ದರಿಂದ ನೀನು ಯಾವ ವಾಕ್ಯದಿಂದಲೂ ಐಕ್ಯವನ್ನು ಸಮರ್ಥನೆ ಮಾಡಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ತರ್ಹ್ಯಖಂಡಾರ್ಥವಾದಸ್ತ್ಯಜ್ಯತ ಇತಿ ಪಕ್ಷಂ ಪ್ರಾಗ್‌ದೂಷಿತಮಪಿ ದೂಷಣಾಂತರೇಣ ದೂಷಯತಿ ॥ಐಕ್ಯಸ್ಯೇತಿ॥ ತಸ್ಮಾದಖಂಡಾರ್ಥವಾದತ್ಯಾಗಾಯೋಗಾತ್॥

ಯೇ ಸ್ಮರಂತ್ಯಾತ್ಮನಿ ಭಿದಾಂ ನಿರುಪಾಧಿಕಯೋಗಿನಃ ।
ತ್ವಂ ತಾನುಪವಿಶೇತ್ಯಾಹ ವಿಸ್ಪಷ್ಟಂ ಶ್ರುತಿಗೀತಿಕಾ ।
ಸ್ಫುಟತ್ವಾತ್ ಶ್ರುತಿಮೂಲತ್ವಾತ್ ಫಲವತ್ತ್ವಾದ್ ಬಲೀಯಸೀ ॥ ೧೦೬೪ ॥

**ಅರ್ಥ–** ಯೇ= ಯಾವ, ನಿರುಪಾಧಿಕ ಯೋಗಿನಃ= ನಿರ್ವ್ಯಾಜ ಯೋಗಿಗಳಾದವರು, ಆತ್ಮನಿ= ತಮ್ಮಲ್ಲಿ (ಅಥವಾ ನಿನ್ನಲ್ಲಿ), ಭಿದಾಂ= ಭೇದವನ್ನು, ಸ್ಮರಂತಿ= ತಿಳಿಯುತ್ತಾರೆಯೋ, ತ್ವಂ= ನೀನು, ತಾನ್= ಅವರನ್ನು ಉಪವಿಶ= ಪ್ರವೇಶಿಸು, ಇತಿ= ಎಂದು, ಶ್ರುತಿಗೀತಿಕಾ= ಶ್ರುತಿಗೀತೆಯು, ವಿಸ್ಪಷ್ಟಂ= ಅತ್ಯಂತ ಸ್ಪಷ್ಟವಾಗಿ, ಆಹ= ಹೇಳಿದೆ, ಸ್ಫುಟತ್ವಾತ್= ಸ್ಪಷ್ಟವಾಗಿರುವುದರಿಂದಲೂ, ಶ್ರುತಿಮೂಲತ್ವಾತ್= ಶ್ರುತಿ ಮೂಲವಾಗಿರುವುದರಿಂದಲೂ, ಫಲವತ್ತ್ವಾತ್= ಸಪ್ರಯೋಜನವಾಗಿರುವುದರಿಂದಲೂ, ಬಲೀಯಸೀ= ಈ ಶ್ರುತಿ ಗೀತೆಯ ವಾಕ್ಯವು ಪ್ರಬಲವಾದುದು.

**ಅನುವಾದ–** ಯಾವ ನಿರ್ವ್ಯಾಜ ಯೋಗಿಗಳು ನಿನ್ನಲ್ಲಿ ಭೇದವನ್ನು ತಿಳಿಯುತ್ತಾರೆಯೋ ಅಂತಹವರನ್ನು ನೀನು ಪ್ರವೇಶಿಸು ಎಂದು ಶ್ರುತಿಗೀತೆಯು ಸ್ಪಷ್ಟವಾಗಿ ಹೇಳುತ್ತದೆ. ಈ ಶ್ರುತಿಗೀತೆಯ ವಾಕ್ಯವು ಸ್ಪಷ್ಟವಾಗಿರುವುದರಿಂದಲೂ, ಶ್ರುತಿಮೂಲ ವಾಗಿರುವುದರಿಂದಲೂ ಮತ್ತು ಸಪ್ರಯೋಜನವಾಗಿರುವುದರಿಂದಲೂ ಪ್ರಬಲವಾಗಿದೆ.

**ಭಾವವಿಲಾಸಿನೀ–** ಅಧುನಾ ಜೀವೇಶ್ವರಭೇದ ಪ್ರಮಾಣಂ ದರ್ಶಯತಿ ॥ ಯೇ ಸ್ಮರಂತೀತಿ ॥ ಅನೇನ 'ತರ್ಹಿ ನ ಸನ್ನ ಚಾಸದುಭಯಂ ನಚ ಕಾಲಜವಃ ಕಿಮಪಿ ನ ತತ್ರ ಶಾಸ್ತ್ರಮಪಕೃಷ್ಯ ಶಯೀತ ಯದಾ । ಜನಿಮಸತಃ ಸತೋಽಮೃತಿಮುತಾತ್ಮನಿ ಯೇ ಚ ಭಿದಾಂ ವಿಪಣಮೃತೇ ಸ್ಮರಂತ್ಯುಪವಿಶದ್ವಮಾರುವತಃ' ಇತಿ ಶ್ರುತಿಗೀತಿಕಾವಚನಂ ಸಂಗೃಹ್ಣಾತಿ । ತತ್ರ ವಿಪಣಮೃತೇ ಆತ್ಮನಿ ಭಿದಾಂ ಯೇ ಸ್ಮರಂತೀತ್ಯಸ್ಯಾರ್ಥಕಥನಂ ನಿರುಪಾಧಿಕಯೋಗಿನ ಇತಿ ॥ ತ್ವಂ

ತಾನುಪವಿಶೇತಿ ಉಪವಿಶಧ್ವನಿಮಾರುವತ ಇತ್ಯಸ್ಯ ತಾತ್ಪರ್ಯಕಥನಮ್ । ತೇಷಾಂ ಧ್ವನಿಂ ವೇದವ್ಯಾಖ್ಯಾನಾದಿಧ್ವನಿಂ ಉಪವಿಶ ಧ್ವನಿಂ ಕುರ್ವತಾಂ ತೇಷಾಂ ಹೃದಿ ಸದಾ ತಿಷ್ಠೇತ್ಯರ್ಥಃ। ಆಸಮಂತಾತ್ ರುವನ್ ಪ್ರಾಣಘೋಷಂ ಕುರ್ವನ್ಮುಖ್ಯಪ್ರಾಣಃ ಆರುವನ್ । ತಸ್ಮಾತ್ ತಸ್ಯ ಪ್ರಸಾದಾತ್ ಉಪವಿಶೇತಿ ಸಂಬಂಧಃ । ಸ್ಫುಟತ್ವಾತ್ ಆತ್ಮನಿ ಪರಮಾತ್ಮನಿ ಭಿದಾಮಿತಿ ಸ್ಪಷ್ಟಾರ್ಥತ್ವಾದಿತ್ಯರ್ಥಃ। ಫಲವತ್ತ್ವಾತ್ ಉಪವಿಶೇತಿ ಫಲಶ್ರವಣಾದಿತ್ಯರ್ಥಃ ॥ ೧೦೬೪ ॥

**ವಿವರಣೆ–** ಇಂತಹ ಪ್ರಬಲ ವಾಕ್ಯದ ವಿರೋಧ ಬಂದಾಗ ಯಾವ ಪ್ರಮಾಣವೂ ಅಥವಾ ಯಾವ ವಾಕ್ಯವೂ ಅಭೇದವನ್ನು ಹೇಳಲಾರದು ಎಂದು ಅಭಿಪ್ರಾಯ. ಶ್ರುತಿ ಗೀತೆಯ ಪೂರ್ಣಪಾಠ ಹೀಗಿದೆ :-

'ತರ್ಹಿ ನ ಸನ್ನಚಾಸದುಭಯಂ ನ ಚ ಕಾಲಜವಃ ಕಿಮಪಿ ಚ ತತ್ರ
ಶಾಸ್ತ್ರಮಪಕೃಷ್ಯ ಶಯೀತ ಯದಾ । ಜನಿಮಸತಃ ಸತೋ ನಿಜಾತ್ಮನಿ ಯೇ ಚ
ಭಿದಾಂ ವಿಪಣಮೃತೇ ಸ್ಮರಂತ್ಯುಪವಿಶ ಧ್ವನಿಮಾರುವತಃ'

ಎಂಬುದಾಗಿದೆ. ಇಲ್ಲಿ ಮೊದಲನೆಯ ಎರಡು ವಾಕ್ಯ ಖಂಡಗಳಿಂದ ಇದು ಪ್ರಳಯಕಾಲವೆಂದು ಗೊತ್ತಾಗುತ್ತದೆ. ಆಗ ಸತ್‌ಶಬ್ದಿತವಾದ ಮೂರ್ತದ್ರವ್ಯವು ಅಸತ್ ಶಬ್ದಿತವಾದ ಅಮೂರ್ತದ್ರವ್ಯವು ಉಭಯ ಶಬ್ದಿತವಾದ ಮೂರ್ತಾಮೂರ್ತ ದ್ರವ್ಯವು ಮತ್ತು ಕಾಲದ ಕ್ಷಣಲವಾದಿ ವೇಗವು ಇರಲಿಲ್ಲ. ಶಾಸ್ತ್ರಂ ಅಪಕೃಷ್ಯ ಎಂದರೆ ವೇದವನ್ನು ಹಿಂದೆ ತೆಗೆದುಕೊಂಡು ಬ್ರಹ್ಮನು ಮಲಗಿದ್ದನು. ಅಸತಃ= ಅವ್ಯಕ್ತನಾದ ಪರಮಾತ್ಮನಿಂದ, ಸತಃ= ವ್ಯಕ್ತವಾದ ಜಗತ್ತಿಗೆ, ಜನಿಂ ಮೃತಿಂಚ= ಉತ್ಪತ್ತಿಯನ್ನು ಮತ್ತು ಮರಣವನ್ನು ಹಾಗೂ ಆತ್ಮನಿ= ತಮ್ಮಲ್ಲಿ ಅಥವಾ ನಿನ್ನಲ್ಲಿ, ವಿಪಣಮೃತೇ= ನಿರ್ವ್ಯಾಜವಾಗಿ, ಆರುವತಃ= ವಾಯುದೇವರ ಅನುಗ್ರಹದಿಂದ, ಯೇ= ಯಾರು, ಭಿದಾಂ ಸ್ಮರಂತಿ= ಭೇದವನ್ನು ಸ್ಮರಿಸುತ್ತಾರೆಯೋ (ತಿಳಿಯುತ್ತಾರೆಯೋ) ಅಂತಹವರ, ಧ್ವನಿಂ= ವಾಕ್ಯಗಳನ್ನು, ಉಪವಿಶ= ಪ್ರವೇಶಿಸು ಎಂದು ಅರ್ಥ. ಆದ್ದರಿಂದ ಪ್ರಳಯ ಕಾಲದಲ್ಲಿಯೂ ಭೇದವನ್ನು ಸ್ಮರಿಸುವವರಿಗೆ ವಾಯುದೇವರ ಅನುಗ್ರಹವನ್ನು ಮತ್ತು ದೇವರ ಅನುಗ್ರಹವನ್ನು ಹೇಳುವ ಈ ಶ್ರುತಿ ಗೀತೆಯ ವಚನವು ಸ್ಪಷ್ಟವಾಗಿ ಭೇದವನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ ಐಕ್ಯವು ಅಪ್ರಾಮಾಣಿಕವಾದುದು.

**ಉಪಸ್ಥಿತಾತ್ ಸ್ಮರ್ತೃತಯಾ ಜೀವಾಖ್ಯಾತ್ ಪ್ರತಿಯೋಗಿನಃ ।**
**ಪರಮಾತ್ಮನಿ ಭೇದೋಽತ್ರ ಪ್ರಲಯೇ ಪ್ರತಿಪಾದ್ಯತೇ ॥ ೧೦೬೫ ॥**

**ಅರ್ಥ–** ಸ್ಮರ್ತೃತಯಾ= ಸ್ಮರಣೆ ಮಾಡುವ ಕಾರಣದಿಂದ, ಉಪಸ್ಥಿತಾತ್= ಉಪಸ್ಥಿತರಾದ, ಜೀವಾಖ್ಯಾತ್ಪ್ರತಿಯೋಗಿನಃ= ಜೀವ ಎಂಬ ಹೆಸರಿನ ಪ್ರತಿಯೋಗಿಗಳಿಂದ,

ಪರಮಾತ್ಮನಿ ಭೇದಃ= ಪರಮಾತ್ಮನಲ್ಲಿ ಇರುವ ಭೇದವು, ಪ್ರಲಯೇ= ಪ್ರಳಯ ಕಾಲದಲ್ಲಿ, ಅತ್ರ ಪ್ರತಿಪಾದ್ಯತೇ= ಇಲ್ಲಿ ಪ್ರತಿಪಾದಿಸಲ್ಪಡುತ್ತದೆ.

**ಅನುವಾದ–** ಸ್ಮರಣೆ ಮಾಡುವ ಕಾರಣದಿಂದ ಉಪಸ್ಥಿತರಾದ ಜೀವರೂಪವಾದ ಪ್ರತಿಯೋಗಿಗಳಿಂದ ಪರಮಾತ್ಮನಲ್ಲಿ ಪ್ರಳಯ ಕಾಲದಲ್ಲಿ ಇರುವ ಭೇದವು ಇಲ್ಲಿ ಪ್ರತಿಪಾದಿಸಲ್ಪಡುತ್ತದೆ.

**ಭಾವವಿಲಾಸಿನೀ–** ಆತ್ಮನಿ ಭಿದಾಮಿತಿ ಪರಮಾತ್ಮನಿಷ್ಠತಯಾ ಪ್ರತೀಯಮಾನಭೇದಸ್ಯ ಪ್ರತಿಯೋಗೀ ಕ ಇತ್ಯತ ಆಹ – **ಉಪಸ್ಥಿತಾದಿತಿ ॥** ಸ್ಮರಂತೀತ್ಯತ್ರ ಸ್ಮರ್ತೃತಯೋಪಸ್ಥಿತಾತ್ ಜೀವಾಖ್ಯಾತ್ ಜೀವಸಮುದಾಯಾಖ್ಯಾತ್ ಪ್ರತಿಯೋಗಿನ ಇತಿ ಸಂಬಂಧಃ । ಅತ್ರ ವಾಕ್ಯೇ ಉಪಸ್ಥಿತಪರಿತ್ಯಾಗೇ ಕಾರಣಾಭಾವಾತ್ ಜೀವಪ್ರತಿಯೋಗಿಕಃ ಪರಮಾತ್ಮಧರ್ಮಿಕ ಏವ ಭೇದಃ ಪ್ರತಿಪಾದ್ಯತ ಇತಿ ಭಾವಃ । ಅಜೇತಿ ಪರಮಾತ್ಮನಃ ಸಂಬುದ್ಧಿಃ । ಉಪಲಕ್ಷಣಂ ಚೈತತ್ । ಜಗತ್‌ಜನ್ಮಮರಣಹೇತುತಯಾ ಉಪಸ್ಥಿತಾತ್ ಪರಮಾತ್ಮನಃ ಆತ್ಮನಿ ಸ್ವೇಷು ಭಿದಾಮಿತಿ ಯೋಜನಯಾ ಜೀವಧರ್ಮಿಕೋಽಪಿ ಭೇದೋ ಗ್ರಾಹ್ಯಃ । ಅತ ಏವ ಆತ್ಮನೀತಿ ಸಾಮಾನ್ಯಪದಮ್ ॥ ೧೦೬೫ ॥

**ವಿವರಣೆ–** ಇಲ್ಲಿ ಯೇ ಭಿದಾಂ ಸ್ಮರಂತಿ' ಎಂದು ಯಾರು ಭೇದವನ್ನು ಸ್ಮರಿಸುತ್ತಾರೆಯೋ ಎಂದು ಇಷ್ಟೇ ವಾಕ್ಯವಿದೆ. ಯತ್ಪ್ರತಿಯೋಗಿಕಭೇದ ಎಂದು ಹೇಳಿಲ್ಲ. ಆದರೆ ಸ್ಮರಂತಿ ಎಂಬ ಶಬ್ದದಿಂದ ಸ್ಮರಣೆ ಮಾಡುವ ಯೋಗಿಗಳ ಪ್ರಸಕ್ತಿ ಇರುವುದರಿಂದ ತತ್ಪ್ರತಿಯೋಗಿಕವಾದ ಭೇದವನ್ನೇ ಇಲ್ಲಿ ತೆಗೆದುಕೊಳ್ಳಬೇಕು. ಆದ್ದರಿಂದ ಜೀವ ಪ್ರತಿಯೋಗಿಕವಾದ ಪರಮಾತ್ಮ ಧರ್ಮಿಕವಾದ ಭೇದವೇ ಇಲ್ಲಿ ಹೇಳಲ್ಪಡುತ್ತದೆ. ಉಪಸ್ಥಿತವಾದ ಭೇದವನ್ನು ಪರಿತ್ಯಾಗ ಮಾಡುವ ಯಾವ ಕಾರಣವೂ ಇಲ್ಲವಾದ್ದರಿಂದ ಆ ಭೇದವನ್ನು ಪಾರಮಾರ್ಥಿಕ ಎಂದೇ ಅಂಗೀಕರಿಸಬೇಕು. ಅಥವಾ ಉಪಸ್ಥಿತಾತ್ ಎಂದರೆ ಉಪಸ್ಥಿತವಾದ ಎಂದು ಅರ್ಥ. ಜಗತ್ತಿನ ಜನ್ಮಮರಣಹೇತುವಾಗಿ ಉಪಸ್ಥಿತನಾದವನು ಪರಮಾತ್ಮ. ಆದ್ದರಿಂದ ಉಪಸ್ಥಿತಾತ್ ಭೇದ ಎಂದರೆ ಪರಮಾತ್ಮ ಪ್ರತಿಯೋಗಿಕ ಭೇದ. ಎಂದರೆ ಪರಮಾತ್ಮ ಪ್ರತಿಯೋಗಿಕವಾದ ಜೀವಧರ್ಮಿಕವಾದ ಭೇದವನ್ನು ಯಾರು ಸ್ಮರಣೆ ಮಾಡುತ್ತಾರೆಯೋ ಎಂದು ಅರ್ಥ. ಆದ್ದರಿಂದ ಈ ವಾಕ್ಯವು ಈಶ್ವರ ಧರ್ಮಿಕ ಮತ್ತು ಜೀವ ಧರ್ಮಿಕ ಭೇದವನ್ನು ಪ್ರತಿಪಾದನೆ ಮಾಡುತ್ತದೆ ಎಂದು ಅಭಿಪ್ರಾಯ.

**ಅಪಕೃಷ್ಯ ಶಯೀತೇತಿ ಪ್ರಸ್ತಾವಃ ಪ್ರಲಯಸ್ಯ ಹಿ ।**
**ಯಃ ಸರ್ವಸ್ಯ ಲಯೇ ಚಾಸ್ತಿ ಸೋಽಸ್ತ್ಯೇವ ಪರಮಾತ್ಮವತ್ ॥ ೧೦೬೬ ॥**

**ಅರ್ಥ–** ಅಪಕೃಷ್ಯ ಶಯೀತ= ಎಲ್ಲವನ್ನೂ ಹಿಂದೆ ತೆಗೆದುಕೊಂಡು ಮಲಗಿರುತ್ತಾನೆ, ಇತಿ= ಎಂಬುದು, ಪ್ರಲಯಸ್ಯ ಪ್ರಸ್ತಾವಃ ಹಿ= ಪ್ರಳಯದ್ದೇ ಪ್ರಸ್ತಾವವಷ್ಟೇ, ಯಃ= ಯಾವ ಜೀವೇಶ್ವರ ಭೇದವು, ಸರ್ವಸ್ಯ ಲಯೇ ಚ= ಎಲ್ಲ ವಸ್ತುಗಳ ನಾಶವಾದರೂ, ಅಸ್ತಿ=

ಇರುತ್ತದೆಯೋ, ಸಃ= ಅದು, ಪರಮಾತ್ಮವತ್= ಪರಮಾತ್ಮನಂತೆ, ಅಸ್ತ್ಯೇವ= ಪಾರಮಾರ್ಥಿಕ ಸತ್ಯವೇ ಆಗಿದೆ.

**ಅನುವಾದ–** **ಅಪಕೃಷ್ಯ ಶಯೀತ ಎಂಬುದು ಪ್ರಳಯದ ಪ್ರಸ್ತಾವವೇ ಆಗಿದೆ. ಯಾವ ಜೀವೇಶ್ವರ ಭೇದವು ಸರ್ವದ್ರವ್ಯಗಳು ನಾಶವಾದರೂ ಇರುತ್ತದೆಯೋ, ಅದು ಪರಮಾತ್ಮನಂತೆ ಯಾವಾಗಲೂ ಇರುತ್ತದೆ.**

**ಭಾವವಿಲಾಸಿನೀ–** ಪ್ರಲಯತ್ವ ಜ್ಞಾಪಕಮಾಹ – **ಅಪಕೃಷ್ಯೇತಿ** ॥ ಅನೇನ ತರ್ಹಿನ ಸನ್ನಿತ್ಯಾದಿ ಶ್ಲೋಕಾರ್ಥಂ ಗೃಹ್ಣಾತಿ । ಶಾಸ್ತ್ರಂ ವೇದವ್ । ಪೂರ್ವಾರ್ಥಪರ್ಯಾಲೋಚನಯಾ ಮಹಾಪ್ರಲಯಕಾಲೋಽಯಮಿತಿ ಜ್ಞಾಯತ ಇತಿ ಭಾವಃ । ಯಃ ಜೀವೇಶ್ವರಭೇದಃ । ಅನೇನ ಜೀವೇಶ್ವರಭೇದಃ ಪಾರಮಾರ್ಥಿಕಸನ್ ಮಹಾಪ್ರಲಯೇಽಪ್ಯುರ್ವರಿತತ್ವಾತ್ ಬ್ರಹ್ಮವದಿತಿ ಯುಕ್ತಿಮೂಲತಯಾಪ್ಯಸ್ಯ ವಾಕ್ಯಸ್ಯ ಬಲೀಯಸ್ತ್ವಮಿತಿ ಜ್ಞಾಪಯತಿ ॥ ೧೦೬೬ ॥

**ವಿವರಣೆ–** ಅಪಕೃಷ್ಯ ಎಂದರೆ ಹಿಂದಕ್ಕೆ ತೆಗೆದುಕೊಂಡು ಎಂದು ಅರ್ಥ. ಮುಖ್ಯವಾಗಿ ವೇದವನ್ನು ಹಿಂದಕ್ಕೆ ತೆಗೆದುಕೊಳ್ಳುತ್ತಾನೆ. ಪ್ರಳಯಕಾಲದಲ್ಲಿ ವೇದಗಳಿಗೆ ಸಂಚಾರವಿರುವುದಿಲ್ಲ. ಏಕೆಂದರೆ ಆಗ ಜೀವನನ್ನು ಉದ್ದೇಶಿಸಿ ಪ್ರವೃತ್ತವಾಗುವ ವಿಧಿ ನಿಷೇಧಗಳು ಅಸಂಗತವಾಗುತ್ತವೆ. ಆಗಲೂ ಇಲ್ಲಿ ಜೀವೇಶ್ವರಭೇದವನ್ನು ಪ್ರತಿಪಾದನೆ ಮಾಡುವುದರಿಂದ ಅದು ಪರಮಾತ್ಮನಂತೆ ಸತ್ಯವೇ ಆಗುತ್ತದೆ. ಆದ್ದರಿಂದ ಈ ವಾಕ್ಯವು ಪ್ರತಿಪಾದನೆ ಮಾಡುವ ಭೇದವು ಯುಕ್ತಿಸಹಾಯವನ್ನು ಹೊಂದಿರುವುದರಿಂದ ಈ ವಾಕ್ಯವೂ ಪ್ರಬಲ ಮತ್ತು ಇದರಿಂದ ಪ್ರತಿಪಾದಿತವಾಗುವ ಭೇದವೂ ಸತ್ಯ ಎಂದು ಅಭಿಪ್ರಾಯ.

**ಫಲಂ ಚ ಸ್ಮರ್ತೃಜೀವೇಷು ಪ್ರವೇಶಃ ಕಿಲ ನೈಕತಾ ॥ ೧೦೬೭ ॥**

**ಅರ್ಥ–** ಫಲಂ ಚ= ಫಲವಾದರೂ, ಸ್ಮರ್ತೃಜೀವೇಷು= ಸ್ಮರಣೆ ಮಾಡುವ ಜೀವರಲ್ಲಿ, ಪ್ರವೇಶಃ= ಪ್ರವೇಶ ಮಾತ್ರ, ಏಕತಾ ನ ಕಿಲ= ಐಕ್ಯವು ಅಲ್ಲವಷ್ಟೇ?

**ಅನುವಾದ–** **ಇಲ್ಲಿ ಹೇಳಿರುವ ಫಲವಾದರೂ ಸ್ಮರಣೆ ಮಾಡುವ ಜೀವರಲ್ಲಿ ಪ್ರವೇಶ ಮಾತ್ರ ಹೊರತು ಐಕ್ಯವಲ್ಲ.**

**ಭಾವವಿಲಾಸಿನೀ–** ತತ್ತಸ್ಮಾತ್ ಮಹಾಪ್ರಲಯಕಾಲೀನಸ್ಮರಣಫಲತಯಾಪಿ ಭಗವತಃ ಜೀವೇಷು ಪ್ರವೇಶಸ್ಯೈವ ಶ್ರವಣಾತ್ ॥ ೧೦೬೭ ॥

**ತತ್ತೇ ಬ್ರಹ್ಮೈಕತಾ ನಾಭೂದ್ ವಿರುದ್ಧೇ^ದೃಗ್ಗಿರಃ ಪರಮ್ ।**
**ಸಭಾಯಾಮಸಹಾಯಸ್ಯ ಸ್ಯಾದೇಕಾಕಿತಯೈಕತಾ ॥ ೧೦೬೮ ॥**

**ಅರ್ಥ–** ತತ್= ಆದ್ದರಿಂದ, ತೇ ಬ್ರಹ್ಮೈಕತಾ= ನಿನಗೆ ಅಭಿಮತವಾದ ಬ್ರಹ್ಮೈಕವು, ನಾಭೂತ್= ಸಿದ್ಧವಾಗಲಿಲ್ಲ, ಪರಂ= ಮತ್ತು, ದೃಗ್ಗಿರಃ= ನಾಹಂ ಸರ್ವಜ್ಞಃ ಎಂಬ ಪ್ರತ್ಯಕ್ಷವು

ಹಿಂದೆ ಉದಾಹರಿಸಿದ ವಾಕ್ಯಗಳೂ ಸಹ ಐಕ್ಯಕ್ಕೆ ವಿರುದ್ಧವಾಗಿವೆ, ಸಭಾಯಾಂ= ಸಭೆಯಲ್ಲಿ, ಅಸಹಾಯಸ್ಯ= ಅಸಹಾಯನಾದ ನಿನಗೆ, ಏಕಾಕಿತಯಾ= ಏಕಾಕಿತ್ವವೇ ಬರುವುದರಿಂದ, ಏಕತಾ ಸ್ಯಾತ್= ಏಕತೆಯು ಉಂಟಾಗುತ್ತದೆ.

**ಅನುವಾದ–** 'ನಾಹಂ ಸರ್ವಜ್ಞಃ' ಎಂಬ ಪ್ರತ್ಯಕ್ಷವೂ ಹಿಂದೆ ಉದಾಹರಿಸಿದ ಶ್ರುತಿ ಸ್ಮೃತಿ ವಾಕ್ಯಗಳೂ ಸಹ ಐಕ್ಯಕ್ಕೆ ವಿರುದ್ಧವಾಗಿರುವುದರಿಂದ ನಿನ್ನ ಐಕ್ಯವು ಸಿದ್ಧವಾಗುವುದಿಲ್ಲ. ಸರ್ವಾನುಭವ ವಿರುದ್ಧವಾದ ಮಾತುಗಳನ್ನು ಆಡುವ ನಿನಗೆ ಸಭೆಯಲ್ಲಿ ಸಹಾಯ ಮಾಡುವವರು ಯಾರೂ ಇಲ್ಲದೇ ಇರುವುದರಿಂದ ನೀನು ಏಕಾಕಿಯಾಗುತ್ತೀಯೆ. ಆದರಿಂದ ಮಾತ್ರ ಏಕತ್ವವು ಬರುತ್ತದೆ.

**ಭಾವವಿಲಾಸಿನೀ–** ತರ್ಹ್ಯೈಕ್ಯಾಶಾಯಾಃ ಕಾ ಗತಿರಿತ್ಯತ ಆಹ – ವಿರುದ್ಧೇತಿ ॥ ಸರ್ವಾನುಭವ-ವಿರುದ್ಧವಾದಿನಸ್ತವ ಕೋಽಪಿ ಸಹಾಯೋ ನ ಭವಿಷ್ಯತೀತಿ ಏಕಾಕಿತ್ವರೂಪೈಕ್ಯೇನೈವ ತ್ವದಾಶಾಪೂರಣಂ ಕುರ್ವಿತಿ ಭಾವಃ ॥ ೧೦೬೮ ॥

**ವಿವರಣೆ–** ನಿನಗೆ ಅಭಿಪ್ರೇತವಾದ ಐಕ್ಯವು ಬರುವುದಿಲ್ಲ. ದೋಷಾಪವಾದಕವಾದ ಐಕ್ಯವು ಬರುತ್ತದೆ ಎಂದು ಇಲ್ಲಿ ಪರಿಹಾಸ ಮಾಡುತ್ತಾರೆ.

**ಕ್ವ ಶೋಕಮೋಹೌ ಸ್ನೇಹೋ ವಾ ಭಯಂ ವಾ ಯೇಽಜ್ಞಸಂಭವಾಃ ।**
**ಕ್ವ ಚಾಖಂಡಿತವಿಜ್ಞಾನಜ್ಞಾನೈಶ್ವರ್ಯೇಶ್ವರೋ ಹರಿಃ ॥ ೧೦೬೯ ॥**

**ಇತಿ ಭಾಗವತೇ ಪ್ರೋಕ್ತ್ಯಾ ಸದಾ ದೋಷೋಪಮರ್ದನೇ ।**
**ಸುಶಕ್ತಮೀಶಚೈತನ್ಯಂ ತದಶಕ್ತಮನೀದೃಶಂ ॥ ೧೦೭೦ ॥**

**ಜೀವಚೈತನ್ಯಮಿತಿ ತಚ್ಚೈತನ್ಯದ್ವಯಮೇವ ಹಿ ।**
**ಮಿಥೋ ವಿರುದ್ಧಂ ನೀಚೋಚ್ಚಚಿತೋರೈಕ್ಯಂ ಕಥಂ ವದ ॥ ೧೦೭೧ ॥**

**ಅರ್ಥ–** ಯೇ ಅಜ್ಞಸಂಭವಾಃ= ಯಾವುವು ಅಜ್ಞಾನಿಗಳಲ್ಲಿಯೇ ಸಂಭಾವಿತವಾಗಿವೆಯೋ ಅಂತಹ, ಶೋಕಮೋಹೌ= ಶೋಕಮೋಹವಾಗಲೀ, ಸ್ನೇಹೋ ವಾ= ದುರ್ವಿಷಯ ಸ್ನೇಹವಾಗಲೀ, ಭಯಂ ವಾ= ಅಥವಾ ಭಯವಾಗಲೀ, ಕ್ವ= ಎಲ್ಲಿ, ಅಖಂಡಿತವಿಜ್ಞಾನಜ್ಞಾನೈಶ್ವರ್ಯೇಶ್ವರಃ = ನಿತ್ಯವಾದ ವಿಜ್ಞಾನಜ್ಞಾನೈಶ್ವರ್ಯಗಳಿಗೆ ಈಶ್ವರನಾದ, ಹರಿಃ= ಹರಿಯು, ಕ್ವ= ಎಲ್ಲಿ, ಇತಿ= ಈ ರೀತಿಯಾಗಿ, ಭಾಗವತೇ= ಭಾಗವತದಲ್ಲಿ, ಪ್ರೋಕ್ತ್ಯಾ= ಹೇಳಿರುವುದರಿಂದ, ದೋಷೋಪಮರ್ದನೇ= ದೋಷವನ್ನು ಪರಿಹಾರ ಮಾಡುವುದಕ್ಕೆ, ಈಶ ಚೈತನ್ಯಂ= ಈಶ್ವರ ಚೈತನ್ಯವು, ಸದಾಸುಶಕ್ತಂ= ಯಾವಾಗಲೂ ಅತ್ಯಂತ ಸಮರ್ಥವಾಗಿದೆ, ಅನೀದೃಶಂ= ಅಂತಹದಲ್ಲದ, ಜೀವಚೈತನ್ಯಂ= ಜೀವಚೈತನ್ಯವು, ತದಶಕ್ತಂ= ದೋಷವನ್ನು ಪರಿಹರಿಸಿಕೊಳ್ಳಲು ಅಶಕ್ತವಾಗಿದೆ, ಇತಿ= ಎಂದು,

ತಚ್ಚೈತನ್ಯದ್ವಯಮೇವ= ಆ ಎರಡು ಚೈತನ್ಯಗಳೇ, ಮಿಥೋ ವಿರುದ್ಧಂ ಹಿ= ಪರಸ್ಪರವಾಗಿ ವಿರುದ್ಧವಾಗಿವೆಯಷ್ಟೇ, ನೀಚೋಚ್ಚಚಿತೋಃ= ನೀಚ ಚೈತನ್ಯಕ್ಕೂ ಮತ್ತು ಉತ್ಕೃಷ್ಟ ಚೈತನ್ಯಕ್ಕೂ, ಐಕ್ಯಂ= ಐಕ್ಯವು, ಕಥಂ= ಹೇಗೆ ಎಂದು, ವದ= ಹೇಳು.

**ಅನುವಾದ–** **ಅಜ್ಞಾನಿಗಳಲ್ಲೇ ಸಂಭವಿಸುವ ಶೋಕಮೋಹಗಳು ಮತ್ತು ದುರ್ವಿಷಯ ಸ್ನೇಹವು ಅಥವಾ ಭಯವು ಎಲ್ಲಿ? ನಿತ್ಯವಾದ ವಿಜ್ಞಾನ, ಜ್ಞಾನ ಮತ್ತು ಐಶ್ವರ್ಯಕ್ಕೆ ಪ್ರಭುವಾದ ಹರಿಯು ಎಲ್ಲಿ? ಈ ರೀತಿಯಾಗಿ ಭಾಗವತದಲ್ಲಿ ಹೇಳಿರುವುದರಿಂದ ಈಶ್ವರಚೈತನ್ಯವು ಸದಾ ದೋಷವನ್ನು ಪರಿಹಾರ ಮಾಡಲು ಅತ್ಯಂತ ಶಕ್ತವಾದುದು. ಹಾಗಿಲ್ಲದ ಜೀವಚೈತನ್ಯವು ಅಶಕ್ತವಾದುದು. ಆದ್ದರಿಂದ ಆ ಎರಡು ಚೈತನ್ಯಗಳೇ ಪರಸ್ಪರ ವಿರುದ್ಧವಾಗಿವೆ. ನೀಚವಾದ ಜೀವಚೈತನ್ಯಕ್ಕೂ ಮತ್ತು ಉಚ್ಚವಾದ ಬ್ರಹ್ಮಚೈತನ್ಯಕ್ಕೂ ಐಕ್ಯವು ಹೇಗೆ ಉಂಟಾಗುತ್ತದೆ ಎಂದು ನೀನೇ ಹೇಳು.**

**ಭಾವವಿಲಾಸಿನೀ–** ಯುಕ್ತಿಗರ್ಭಭಾಗವತವಾಕ್ಯಾಂತರೇಣಾಪಿ ಜೀವೇಶ್ವರಭೇದಂ ಸಾಧಯನ್ ತನ್ಮೂಲಯುಕ್ತೀಶ್ಚ ದರ್ಶಯತಿ – **ಕ್ವೇತಿ** ॥ ಅಜ್ಞಸಂಭವಾಃ ಅಜ್ಞೇಷು ಸಂಭವಂತೀತ್ಯಜ್ಞ-ಸಂಭವಾಃ। ಅಜ್ಞಾನನಿಷ್ಠೇವ ಶೋಕಮೋಹಾದೀನಾಂ ಸಂಭವಃ। ನ ತ್ವಜ್ಞಾನಾತಿದೂರೇ ನಿರವಧಿಕಜ್ಞಾನೈಶ್ವರ್ಯ ಸಂಪನ್ನೇ ಬ್ರಹ್ಮಚೈತನ್ಯ ಇತಿ ಭಾವಃ । ಇತಿ ಹೇತೋಃ ತತ್ ಜೀವಚೈತನ್ಯ ಬ್ರಹ್ಮಚೈತನ್ಯಾಖ್ಯಂ ಚೈತನ್ಯದ್ವಯಂ ಮಿಥೋ ವಿರುದ್ಧಮೇವೇತಿ ಸಂಬಂಧಃ । ಏವಂಚ ನೀಚೋಚ್ಚಚಿತೋರನಯೋರೈಕ್ಯಂ ಕಥಂ। ನ ಕಥಂಚಿತ್। ಅಜ್ಞಾನಮೂಲಂ ಹಿ ಶೋಕಾದಿಕಂ ಅಜ್ಞಾನಂ ಚ ಚಿನ್ಮಾತ್ರಾಶ್ರಿತಮಿತಿ ತವಾಪಿ ಮತಮ್ । ಏವಂ ಚಾನರ್ಥಹೇತೋರ-ಜ್ಞಾನಸ್ಯಾವಕಾಶಂ ದದತ್ ಜೀವಚೈತನ್ಯಮುಪಮರ್ಥತ್ವಾನ್ನೀಚಂ ಬ್ರಹ್ಮಚೈತನ್ಯಂ ಚ ತಸ್ಯ ತನ್ಮೂಲಶೋಕಾದೇಶ್ಚ ವಿದ್ರಾವಣಸಮರ್ಥತ್ವಾತ್ ಅತ್ಯುಚ್ಚಮ್। ನೀಚೋಚ್ಚಯೋಶ್ಚ ತಯೋಃ ಕಥಮೈಕ್ಯಮಿತಿ ಭಾವಃ ॥ ೧೦೬೯-೧೦೭೦ ॥

**ವಿವರಣೆ–** ಯುಕ್ತಿಗರ್ಭಿತವಾದ ಭಾಗವತವಾಕ್ಯದಿಂದಲೂ ಜೀವೇಶ್ವರಭೇದವನ್ನು ಸ್ಥಾಪಿಸಿ ಆ ಯುಕ್ತಿಯನ್ನು ವಿವರಿಸುತ್ತಾರೆ. ಶೋಕಮೋಹಾದಿಗಳಿಗೆ ಜೀವನಲ್ಲಿ ಮಾತ್ರ ಅವಕಾಶ ಉಂಟು, ಹರಿಯಲ್ಲಿ ಇಲ್ಲ. ಅಖಂಡಿತ ವಿಜ್ಞಾನಗಳಿಗೆ ಹರಿಯಲ್ಲಿ ಮಾತ್ರ ಅವಕಾಶ ಉಂಟು, ಜೀವನಲ್ಲಿ ಇಲ್ಲ. ಆದ್ದರಿಂದ ಹರಿಗೆ ದೋಷಪರಿಹಾರ ಸಾಮರ್ಥ್ಯವು ಜೀವನಿಗೆ ತದಭಾವವು ಇದೆ. ಆದ್ದರಿಂದ ತತ್ತ್ವಮಸಿ ಎಂಬ ವಾಕ್ಯದಲ್ಲಿ ಲಕ್ಷಣಾವೃತ್ತಿಯಿಂದ ಚೈತನ್ಯವೆಂದೇ ಅರ್ಥಮಾಡಿದರೂ ಆ ಚೈತನ್ಯಗಳೇ ಪರಸ್ಪರ ವಿರುದ್ಧವಾಗಿರುವುದರಿಂದ ಅವುಗಳಿಗೆ ಐಕ್ಯವು ಉಂಟಾಗುವುದಿಲ್ಲ ಎಂದು ಇಲ್ಲಿ ತಿಳಿಸುತ್ತಾರೆ.

**ಏವಂ ಚ ಬ್ರಹ್ಮಚೈತನ್ಯಂ ನೈವ ಜೀವಸ್ಯ ಚಿತ್ ಕ್ವಚಿತ್ ।**
**ಅಭಯತ್ವಾದಮೋಹತ್ವಾದಶೋಕತ್ವಾಚ್ಚ ಕುಡ್ಯವತ್ ॥ ೧೦೭೧ ॥**

**ಅರ್ಥ–** ಏವಂ ಚ= ಆದ್ದರಿಂದ, ಬ್ರಹ್ಮಚೈತನ್ಯಂ= ಬ್ರಹ್ಮಚೈತನ್ಯವು, ಕ್ವಚಿತ್= ಎಂದೂ, ಜೀವ ಚೈತನ್ಯಂ ನೈವ= ಜೀವ ಚೈತನ್ಯವಾಗುವುದಿಲ್ಲ, ಅಭಯತ್ವಾತ್= ಭಯರಹಿತ ವಾದುದರಿಂದ, ಅಮೋಹತ್ವಾತ್= ಮೋಹರಹಿತವಾದುದರಿಂದ, ಅಶೋಕತ್ವಾಚ್ಚ= ಮತ್ತು ಶೋಕರಹಿತವಾದುದರಿಂದ, ಕುಡ್ಯವತ್= ಗೋಡೆಯಂತೆ.

**ಅನುವಾದ–** ಆದ್ದರಿಂದ ಬ್ರಹ್ಮಚೈತನ್ಯವು ಎಂದೂ ಜೀವಚೈತನ್ಯವಲ್ಲ. ಅಭಯತ್ವ, ಅಮೋಹತ್ವ ಮತ್ತು ಅಶೋಕತ್ವವು ಇರುವುದರಿಂದ ಗೋಡೆಯಂತೆ.

**ಭಾವವಿಲಾಸಿನೀ– ತತಶ್ಚೈತದ್ವಾಕ್ಯಾದನುಮಾತ್ರಯಂ ಸಿದ್ಧಮಿತ್ಯಾಹ – ಏವಂಚೇತಿ ॥ ಕ್ವಚಿದಪಿ ಜೀವಸ್ಯ ಚಿನ್ನೈವಜೀವಚಿದಭಿನ್ನಂ ನೈವೇತಿ ಯಾವತ್ । ಹೇತೌ ಚ ಭಯಾದ್ಯತ್ಯಂತಾಭಾವಾಧಿ ಕರಣತ್ವಂ ವಿವಕ್ಷಿತಮ್ । ಅತೋ ನ ಜೀವಚೈತನ್ಯೇ ವ್ಯಭಿಚಾರಃ ॥ ೧೦೭೨ ॥**

**ವಿವರಣೆ–** ಉದಾಹರಿಸಿದ ಭಾಗವತ ವಾಕ್ಯದ ಆಧಾರದಿಂದ ಸಿದ್ಧವಾಗುವ ಅನುಮಾನದ ರೀತಿಯನ್ನು ಇಲ್ಲಿ ಪ್ರದರ್ಶಿಸುತ್ತಾರೆ. 'ಬ್ರಹ್ಮಚೈತನ್ಯಂ ಕ್ವಚಿದಪಿ ಜೀವಚೈತನ್ಯಂ ನ ಅಭಯತ್ವಾತ್ ಅಮೋಹತ್ವಾತ್ ಅಶೋಕತ್ವಾತ್ ಕುಡ್ಯವತ್' ಎಂಬ ಅನುಮಾನವು ಸಿದ್ಧವಾಗುತ್ತದೆ. ಕುಡ್ಯ ಎಂದರೆ ಗೋಡೆಯಲ್ಲಿ ಅಭಯತ್ವಾದಿ ಹೇತುವಿರುವುದರಿಂದ ಹೇಗೆ ಜೀವಭೇದವಿದೆಯೋ, ಅದರಂತೆ ಈ ಹೇತುಗಳಿಂದ ಬ್ರಹ್ಮಚೈತನ್ಯದಲ್ಲಿಯೂ ಜೀವಚೈತನ್ಯ ಭೇದವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಕಿಂ ನ ಶ್ರುತಂ ಹರಿರ್ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ ।**
**ಇತಿ ನಾಮಸಹಸ್ರಸ್ಥಂ ಪುಣ್ಯನಾಮ ಮಹಾತ್ಮನಃ ॥ ೧೦೭೩ ॥**

**ಅರ್ಥ–** ಹರಿಃ= ಹರಿಯು, ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ= ಬ್ರಹ್ಮರುದ್ರಾದಿಗಳಿಗಿಂತ ಉತ್ಕೃಷ್ಟನಾದ ಚೈತನ್ಯನೆಂದು, ನಾಮಸಹಸ್ರಸ್ಥಂ= ವಾಸುದೇವ ಸಹಸ್ರನಾಮದಲ್ಲಿರುವ, ಮಹಾತ್ಮನಃ= ಮಹಾನುಭಾವನಾದ ಅವನ, ಪುಣ್ಯನಾಮ= ಪವಿತ್ರವಾದ ನಾಮವನ್ನು, ಕಿಂ ನ ಶ್ರುತಂ= ಕೇಳಿಲ್ಲವೇನು?

**ಅನುವಾದ–** ವಾಸುದೇವ ಸಹಸ್ರನಾಮದಲ್ಲಿರುವ 'ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ' ಎಂಬ ಮಹಾನುಭಾವನ ಪವಿತ್ರವಾದ ನಾಮವನ್ನು ನೀನು ಕೇಳಿಲ್ಲವೇನು?

**ಭಾವವಿಲಾಸಿನೀ– ಪ್ರಕಾರಾಂತರೇಣಾಪಿ ಚೈತನ್ಯಯೋರೇವ ನೀಚೋಚ್ಚಭಾವಂ ಸಾಧಯತಿ – ಕಿಂ ನ ಶ್ರುತಮಿತಿ ॥ ೧೦೭೩ ॥**

**ವಿವರಣೆ–** ವಾಸುದೇವ ಸಹಸ್ರನಾಮದಲ್ಲಿ 'ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ' ಎಂಬುದು ಒಂದು ನಾಮ. ಅದು ಹರಿಯ ಚೈತನ್ಯಕ್ಕೆ ಬ್ರಹ್ಮರುದ್ರಾದಿಗಳಿಗಿಂತಲೂ ಉತ್ಕರ್ಷವನ್ನು ಹೇಳುತ್ತಿದೆ. ಆದ್ದರಿಂದ ಚೈತನ್ಯಗಳೇ ವಿರುದ್ಧಸ್ವಭಾವವುಳ್ಳವು. ಲಕ್ಷಣಾ ಮಾಡಿದರೂ ಏನೂ ಪ್ರಯೋಜನವಾಗುವುದಿಲ್ಲ ಎಂದು ಅಭಿಪ್ರಾಯ.

**ಉತ್ಕೃಷ್ಟಚೇತನತ್ವೋಕ್ತ್ಯಾ ಚಿನ್ಮಾತ್ರಮಪಿ ಮಾಪತೇಃ ।**
**ಅತ್ಯುಚ್ಚಂ ಜೀವಚೈತನ್ಯಾದಿತ್ಯರ್ಥಃ ಕಿಂ ನ ಸಿದ್ಧ್ಯತಿ ॥ ೧೦೭೪ ॥**

**ಅರ್ಥ–** ಉತ್ಕೃಷ್ಟಚೇತನತ್ವೋಕ್ತ್ಯಾ= ಉತ್ಕೃಷ್ಟಚೈತನ್ಯನೆಂದು ಹೇಳಿರುವುದರಿಂದ, ಮಾಪತೇಃ= ಲಕ್ಷ್ಮೀಪತಿಯ, ಚಿನ್ಮಾತ್ರಮಪಿ= ಚೈತನ್ಯ ಮಾತ್ರವೂ ಸಹ, ಜೀವಚೈತನ್ಯಾತ್= ಜೀವಚೈತನ್ಯಕ್ಕಿಂತಲೂ, ಅತ್ಯುಚ್ಚಂ= ಅತ್ಯಂತ ಉತ್ಕೃಷ್ಟವಾದುದು, ಇತ್ಯರ್ಥಃ= ಎಂಬ ಅರ್ಥವು, ಕಿಂ ನ ಸಿದ್ಧ್ಯತಿ= ಸಿದ್ಧಿಸುವುದಿಲ್ಲವೇನು?

**ಅನುವಾದ– ಉತ್ಕೃಷ್ಟಚೇತನ ಎಂದು ಹೇಳಿರುವುದರಿಂದ ಲಕ್ಷ್ಮೀಪತಿಯ ಚಿನ್ಮಾತ್ರವೂ ಸಹ ಜೀವಚೈತನ್ಯಕ್ಕಿಂತಲೂ ಅತ್ಯಂತ ಉತ್ಕೃಷ್ಟವಾದುದು ಎಂಬ ಅರ್ಥವು ಸಿದ್ಧವಾಗುವುದಿಲ್ಲವೇನು?**

**ಭಾವವಿಲಾಸಿನೀ–** ಜೀವಚೈತನ್ಯಾದತ್ಯುಚ್ಚಮಿತ್ಯರ್ಥ ಇತಿ ಸಂಬಂಧಃ ॥ ೧೦೭೪ ॥

**ವಿವರಣೆ–** ವಿಷ್ಣು ಚೈತನ್ಯದಲ್ಲಿಯೇ ಸ್ವತಃ ಉತ್ಕರ್ಷವಿದೆ. 'ಚೇತನಶ್ಚೇತನಾನಾಂ' ಎಂಬ ಶ್ರುತಿಯು ನಿರ್ಧಾರಣ ಷಷ್ಠಿಯಿಂದ ಕೂಡಿರುವುದರಿಂದ ಜೀವಚೇತನಕ್ಕಿಂತಲೂ ಬ್ರಹ್ಮಚೇತನವು ಅತ್ಯಂತ ಉತ್ಕೃಷ್ಟವೆಂದು ತಿಳಿಸುತ್ತದೆ. ಆದ್ದರಿಂದ ಎರಡು ಪದಗಳಿಗೂ ಚಿನ್ಮಾತ್ರ ಲಕ್ಷಣಾ ಮಾಡಿದರೂ ಐಕ್ಯವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ।**
**ಇತಿ ಭಾಗವತೋಕ್ತ್ಯಾ ಚ ಸಮರ್ಥಾ ನೃಹರೇರ್ಹಿ ಚಿತ್ ॥ ೧೦೭೫ ॥**

**ಅರ್ಥ–**ಮಾಯಾಂ= ಮಾಯೆಯನ್ನು, ಚಿಚ್ಛಕ್ತ್ಯಾ= ತನ್ನ ಚಿಚ್ಛಕ್ತಿಯಿಂದ, ವ್ಯುದಸ್ಯ= ದೂರ ಮಾಡಿ, ಕೈವಲ್ಯೇ= ಜಡಾಮಿಶ್ರವಾದ, ಆತ್ಮನಿ= ತನ್ನ ಸ್ವರೂಪದಲ್ಲಿ, ಸ್ಥಿತಃ= ಇರುವವನು, ಇತಿ= ಎಂಬ, ಭಾಗವತೋಕ್ತ್ಯಾ= ಭಾಗವತ ವಾಕ್ಯದಿಂದಲೂ, ನೃಹರೇಃ= ನರಹರಿಯ, ಚಿತ್= ಚೈತನ್ಯವೇ, ಸಮರ್ಥಾ ಹಿ= ಸಮರ್ಥವಾಗಿದೆ.

**ಅನುವಾದ– 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಎಂಬ ಭಾಗವತ ಶ್ಲೋಕವು ತನ್ನ ಚಿಚ್ಛಕ್ತಿಯಿಂದಲೇ ಹರಿಯು ಮಾಯೆಯನ್ನು ದೂರ ಮಾಡುತ್ತಾನೆಂದು ಹೇಳಿರುವುದರಿಂದ ಚಿಚ್ಛಕ್ತಿಯೇ ಉತ್ಕೃಷ್ಟವಾದುದು ಮತ್ತು ಸಮರ್ಥವಾದುದು.**

**ಭಾವವಿಲಾಸಿನೀ–** ಭಾಗವತವಚನಾಂತರೇಣಾಪಿ ಭಗವಚ್ಚಿತೋಽತಿಸಮರ್ಥಭೂತಾಯಾ ಉಚ್ಚತಾಂ ಸಾಧಯತಿ **– ಮಾಯಾಮಿತಿ** ॥ ತತ್ತಸ್ಮಾತ್ ॥ ೧೦೭೫ ॥

**ವಿವರಣೆ–** ಚಿಚ್ಛಕ್ತಿಗೆ ಮಾಯಾನಿರಸನ ಶಕ್ತಿಯನ್ನು ಒಪ್ಪಿರುವುದರಿಂದ ಹರಿಯ ಚೈತನ್ಯವು ಅಸಮರ್ಥವಾದ ಜೀವಚೈತನ್ಯಕ್ಕಿಂತ ಉತ್ಕೃಷ್ಟವಾದುದು ಎಂದು ಸಿದ್ಧವಾಗುತ್ತದೆ.

**ತತ್ಪೂರ್ಣಾಪೂರ್ಣಯೋಃ ಶಕ್ತಾಶಕ್ತಯೋರುಚ್ಚನೀಚಯೋಃ ।**
**ಜೀವಬ್ರಹ್ಮಚಿತೋರೈಕ್ಯಮಪಿ ಶಕ್ಯಂ ಕಥಂ ವದ ॥ ೧೦೭೬ ॥**

**ಅರ್ಥ–** ತತ್= ಆದ್ದರಿಂದ, ಪೂರ್ಣಾಪೂರ್ಣಯೋಃ= ಪೂರ್ಣವಾದ ಮತ್ತು ಅಪೂರ್ಣವಾದ, ಶಕ್ತಾಶಕ್ತಯೋಃ= ಶಕ್ತವಾದ ಮತ್ತು ಅಶಕ್ತವಾದ, ಉಚ್ಚ ನೀಚಯೋಃ= ಉತ್ಕೃಷ್ಟವಾದ ಮತ್ತು ನೀಚವಾದ, ಜೀವಬ್ರಹ್ಮಚಿತೋಃ= ಬ್ರಹ್ಮಚೈತನ್ಯ ಮತ್ತು ಜೀವರಿಗೆ, ಐಕ್ಯಂ= ಐಕ್ಯವು, ಕಥಂ= ಹೇಗೆ, ಶಕ್ಯಂ= ಸಾಧ್ಯವಾಗುತ್ತದೆ ಎಂದು, ವದ= ಹೇಳು.

**ಅನುವಾದ– ಆದ್ದರಿಂದ ಪೂರ್ಣಾಪೂರ್ಣಗಳಾದ, ಶಕ್ತಾಶಕ್ತಗಳಾದ, ಉತ್ಕೃಷ್ಟ ನೀಚಗಳಾದ ಬ್ರಹ್ಮ ಚೈತನ್ಯಕ್ಕೂ ಜೀವಚೈತನ್ಯಕ್ಕೂ ಐಕ್ಯವು ಹೇಗೆ ಉಂಟಾಗುತ್ತದೆ ಎಂದು ಹೇಳು.**

**ಭಾವವಿಲಾಸಿನೀ– ಜೀವಬ್ರಹ್ಮಚಿತೋರಪ್ಯೈಕ್ಯಂ ಕಥಂ ಶಕ್ಯಮ್ ॥ ೧೦೭೬ ॥**

**ವಿವರಣೆ–** ಇಂತಹ ಭಾಗವತಾದಿ ವಾಕ್ಯಗಳಿಂದ ಬ್ರಹ್ಮಚೈತನ್ಯ ಮತ್ತು ಜೀವಚೈತನ್ಯಗಳಿಗೆ ಸ್ವಭಾವದಲ್ಲಿಯೇ ವ್ಯತ್ಯಾಸವಿರುವುದರಿಂದ 'ತತ್-ತ್ವಂ' ಎರಡು ಪದಗಳಿಗೂ ಲಕ್ಷಣಾವೃತ್ತಿಯನ್ನು ಮಾಡಿ ಚೈತನ್ಯಪರತ್ವವನ್ನು ಹೇಳಿದರೂ ಅವುಗಳಿಗೆ ಅಭೇದವನ್ನು ಹೇಳಲು ಸಾಧ್ಯವಿಲ್ಲವೆಂದು ಅಭಿಪ್ರಾಯ.

**ವೃಥಾಮುಂಡನಮೇವೇದಂ ತಸ್ಮಾತ್ ತದ್ಧರ್ಮಮುಂಡನಮ್ ।**
**ನ್ಯಾಸಾನರ್ಹಸ್ಯ ಶೂದ್ರಸ್ಯ ಯಥಾ ಮೂರ್ಧಜಮುಂಡನಮ್ ॥ ೧೦೭೭ ॥**

**ಅರ್ಥ–** ತಸ್ಮಾತ್ = ಆದ್ದರಿಂದ, ಯಥಾ = ಹೇಗೆ, ನ್ಯಾಸ ಅನರ್ಹಸ್ಯ = ಸನ್ಯಾಸಕ್ಕೆ ಅಯೋಗ್ಯನಾದ, ಶೂದ್ರಸ್ಯ = ಶೂದ್ರನ, ಮೂರ್ಧಜಮುಂಡನಂ = ತಲೆಕೂದಲುಗಳನ್ನು ಬೋಳಿಸುವುದು, ವೃಥಾ = ವ್ಯರ್ಥವೋ, ತಥಾ = ಅದೇ ರೀತಿಯಾಗಿ, ಇದಂ = ಅದ್ವೈತಶಾಸ್ತ್ರದಲ್ಲಿ ಮಾಡಿರುವ, ತದ್ಧರ್ಮಮುಂಡನಂ = ತತ್ = ಈಶ್ವರ ಮತ್ತು ಜೀವರ, ಧರ್ಮ = ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವಗಳೆಂಬ ಧರ್ಮಗಳ, ಮುಂಡನಂ = ತ್ಯಾಗವು, ವೃಥಾ = ವ್ಯರ್ಥವಾದ, ಮುಂಡನಂ ಏವ = ತ್ಯಾಗವೇ ಆಗಿದೆ.

**ಅನುವಾದ– ಆದ್ದರಿಂದ ತತ್ ತ್ವಂ ಪದ ಮುಖ್ಯಾರ್ಥರಾದ ಬ್ರಹ್ಮ ಮತ್ತು ಜೀವರಿಗೆ ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವವನ್ನು ಪರಿತ್ಯಾಗ ಮಾಡುವುದು ವ್ಯರ್ಥವಾದುದು. ಇದು ಸಂನ್ಯಾಸ ಅನರ್ಹನಾದ ಶೂದ್ರನಿಗೆ ಕೇಶ ಮುಂಡನವನ್ನು ಮಾಡಿದಂತೆ.**

**ಭಾವವಿಲಾಸಿನೀ– ತಸ್ಮಾಚ್ಚೈತನ್ಯಯೋರೇವ ನೀಚೋಚ್ಚತ್ವೇನ ವಿರುದ್ಧತ್ವಾತ್ । ತದ್ಧರ್ಮ-ಮುಂಡನಂ ಜೀವಬ್ರಹ್ಮಚೈತನ್ಯನಿಷ್ಠಸರ್ವಜ್ಞತ್ವಾಲ್ಪಜ್ಞತ್ವಾದಿಧರ್ಮಮುಂಡನಮ್ । ಚಿತೋರೈಕ್ಯ-ಘಟನಾಯ ಹಿ ವಿರುದ್ಧಧರ್ಮ ಮುಂಡನಮ್ । ಉಕ್ತವಿಧಯಾ ಚಿತೋರೇವ ನೀಚೋಚ್ಚತಯಾ**

ವಿರುದ್ಧತ್ವೇನೈಕ್ಯಾಯೋಗೇ ವ್ಯರ್ಥಂ ಧರ್ಮಮುಂಡನಮಿತಿ ಭಾವಃ । ತತ್ರ ದೃಷ್ಟಾಂತಮಾಹ – ನ್ಯಾಸಾನರ್ಹೇತಿ ॥ ೧೦೭೭ ॥

**ವಿವರಣೆ–** ಅದ್ವೈತಿಗಳು ಜೀವ ಬ್ರಹ್ಮರಿಗೆ ಅಭೇದವನ್ನು ಹೇಳಬೇಕು. ಆದರೆ ಅವರಲ್ಲಿ ಅಲ್ಪಜ್ಞತ್ವ ಮತ್ತು ಸರ್ವಜ್ಞತ್ವ ರೂಪವಾದ ವಿರುದ್ಧ ಧರ್ಮಗಳು ಇರುವುದರಿಂದ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಅಲ್ಪಜ್ಞತ್ವ ಮತ್ತು ಸರ್ವಜ್ಞತ್ವ ಅಂಶಗಳನ್ನು ಪರಿತ್ಯಾಗ ಮಾಡಿ ಕೇವಲ ಚಿದಂಶವನ್ನು ಎರಡು ಕಡೆಗಳಲ್ಲಿಯೂ ಇಟ್ಟುಕೊಂಡು ಅಭೇದವನ್ನು ಹೇಳುವುದು ಅವರಿಗೆ ಇಷ್ಟ. ಆದರೆ ಅದೂ ಯುಕ್ತವಲ್ಲ ಎಂದು ಈ ಶ್ಲೋಕದಲ್ಲಿ ಹೇಳುತ್ತಾರೆ. ಎರಡು ಕಡೆಗಳಲ್ಲಿಯೂ ಕೇವಲ ಚಿತ್ ಅನ್ನೇ ತೆಗೆದುಕೊಂಡರೂ ಆ ಚಿತ್‌ಗಳಿಗೆ ಉಚ್ಚ ನೀಚ ಭಾವವಿರುವುದರಿಂದ ಐಕ್ಯವು ಕೂಡುವುದಿಲ್ಲ. ಆದ್ದರಿಂದ ಯಾವ ಉದ್ದೇಶದಿಂದ ಅಲ್ಪಜ್ಞತ್ವ, ಸರ್ವಜ್ಞತ್ವವನ್ನು ಪರಿತ್ಯಾಗ ಮಾಡಿದರೋ ಆ ಉದ್ದೇಶವು ನೆರವೇರುವುದಿಲ್ಲ. ಸಂನ್ಯಾಸ ಅನರ್ಹನಾದ ಶೂದ್ರನಿಗೆ ಕೇಶ ಮುಂಡನವನ್ನು ಮಾಡಿದರೆ ಹೇಗೆ ಸಂನ್ಯಾಸಯೋಗ್ಯತೆಯು ಬರುವುದಿಲ್ಲವೋ ಹಾಗೆ ಐಕ್ಯಕ್ಕೆ ಅಯೋಗ್ಯವಾದ ಜೀವ ಚಿತ್ ಮತ್ತು ಬ್ರಹ್ಮ ಚಿತ್‌ಗಳಿಗೆ ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವವನ್ನು ಪರಿತ್ಯಾಗ ಮಾಡಿದರೂ ಐಕ್ಯವು ಬರುವುದಿಲ್ಲವಾದ ಕಾರಣ ಇದು ವ್ಯರ್ಥವಾದ ಪ್ರಯತ್ನ ಎಂದು ಅಭಿಪ್ರಾಯ.

**ಯತಶ್ಚ ಮುಂಡಿತಾವ್ಯಕ್ತಿರಪಿ ತೇಽರ್ಥಸ್ಯ ಬಾಧಿಕಾ ।**
**ಯಸ್ಮಾಚ್ಚಿನ್ಮಾತ್ರಮಪ್ಯೈಶಂ ಶಕ್ತಂ ಶೋಕಾದಿಧೂನನೇ ।**
**ಜೈವಂ ತು ತದಶಕ್ತಂ ಚೇತ್ಯುಕ್ತಂ ಭಾಗವತೇ ಸ್ಫುಟಂ ॥ ೧೦೭೮ ॥**

**ಅರ್ಥ–** ಚ = ಮತ್ತು, ಯತಃ = ಯಾವ ಕಾರಣದಿಂದ, ಮುಂಡಿತಾ = ತನ್ನ ಗುಣಧರ್ಮಗಳಿಂದ ರಹಿತವಾಗಿ ಮಾಡಲ್ಪಟ್ಟ, ವ್ಯಕ್ತಿಃ ಅಪಿ = ಚಿದ್ವ್ಯಕ್ತಿಯೂ ಕೂಡ, ತೇ = ನಿನ್ನ, ಅರ್ಥಸ್ಯ = ಅದ್ವೈತವೆಂಬ ತತ್ವಕ್ಕೆ, ಬಾಧಿಕಾ = ಬಾಧಕವೇ ಆಗುತ್ತವೋ, ತತಃ = ಆದ್ದರಿಂದ, ಇದಂ = ಈ, ಮುಂಡನಂ = ಚಿದ್ವ್ಯಕ್ತಿಯನ್ನು ತನ್ನ ಗುಣಗಳಿಂದ ರಹಿತನನ್ನಾಗಿ ಮಾಡುವುದು, ವೃಥಾಏವ = ವ್ಯರ್ಥವೇ ಆಗಿದೆ, ಯಸ್ಮಾತ್ = ಯಾವಕಾರಣದಿಂದ, ಐಶಂ= ಈಶನಿಗೆ ಸಂಬಂಧಿಸಿದ, ಚಿನ್ಮಾತ್ರಂ ಅಪಿ = ಚೈತನ್ಯವೂ ಕೂಡ, ಶೋಕಾದಿಧೂನನೇ = ಅಜ್ಞಾನಾದಿಗಳನ್ನು ಪರಿಹರಿಸಲು, ಶಕ್ತಂ = ಸಮರ್ಥವಾಗಿದೆ, ಜೈವಂ = ಜೀವನಿಗೆ ಸಂಬಂಧಪಟ್ಟ, ಚೈತನ್ಯಂತು = ಚೈತನ್ಯವಾದರೂ, ತದಶಕ್ತಂ ಚ = ಅಜ್ಞಾನಾದಿಗಳನ್ನು ದೂರವಿಡಲು ಸಮರ್ಥವೂ ಆಗಿಲ್ಲ. ಇತಿ = ಹೀಗೆ, ಭಾಗವತೇ = ಭಾಗವದಲ್ಲಿ, ಸ್ಫುಟಂ = ಸ್ಪಷ್ಟವಾಗಿ, ಉಕ್ತಂ = ಹೇಳಲ್ಪಟ್ಟಿವೆಯೋ, ತಸ್ಮಾತ್ = ಆ ಕಾರಣದಿಂದ, ಮುಂಡಿತಾ = ತನ್ನ ಗುಣಧರ್ಮಗಳಿಂದ ರಹಿತವಾಗಿ ಮಾಡಲ್ಪಟ್ಟ, ವ್ಯಕ್ತಿಃ ಅಪಿ = ಚಿದ್ವ್ಯಕ್ತಿಯೂ ಕೂಡ, ತೇ = ನಿನ್ನ, ಅರ್ಥಸ್ಯ = ಅದ್ವೈತವೆಂಬ ತತ್ವಕ್ಕೆ, ಬಾಧಿಕಾ = ಭಾದಕವೇ ಆಗುತ್ತವೆ.

**ಅನುವಾದ–** ಮುಂಡಿತವಾದ ಚಿದ್ಶಕ್ತಿಯೂ ಸಹ ನಿನಗೆ ಅಭೀಷ್ಟವಾದ ಅರ್ಥಕ್ಕೆ ಬಾಧಕವಾಗುತ್ತದೆ. ಏಕೆಂದರೆ ಈಶ ಚೈತನ್ಯವು ಅಜ್ಞಾನವನ್ನು ನಾಶ ಮಾಡಲು ಸಮರ್ಥವಾಗಿದೆ. ಜೀವ ಚೈತನ್ಯವು ಅಜ್ಞಾನವನ್ನು ನಾಶ ಮಾಡಲು ಸಮರ್ಥವಾಗಿಲ್ಲ ಎಂದು ಸ್ಪಷ್ಟವಾಗಿ ಭಾಗವತದಲ್ಲಿ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ವೈಯರ್ಥ್ಯಮೇವ ವಿಶದಯತಿ ॥ **ಯತಶ್ಚೇತಿ** ॥ ತೇ ಅರ್ಥಸ್ಯ ಐಕ್ಯರೂಪಾರ್ಥಸ್ಯ । ಕಥಂ ಬಾಧಿಕೇತ್ಯತಃ ಪೂರ್ವೋಕ್ತಹೇತುಮೇವ ಸ್ಮಾರಯತಿ–ಯಸ್ಮಾದಿತಿ ॥ ತಸ್ಮಾತ್ತದ್ಧರ್ಮಮುಂಡನಂ ವ್ಯರ್ಥಮಿತಿ ಪೂರ್ವೇಣಾನ್ವಯಃ ॥ ೧೦೭೮ ॥

**ವಿವರಣೆ–** ಧರ್ಮಮುಂಡನವನ್ನು ಮಾಡಿದರೂ ಐಕ್ಯವು ಕೂಡುವುದಿಲ್ಲವೆಂಬುದನ್ನು ಭಾಗವತದ ಆಧಾರದಿಂದ ಇಲ್ಲಿ ಸಮರ್ಥಿಸುತ್ತಾರೆ. 'ಮಾಯಾಂ ವ್ಯುದಸ್ಯ ....' ಎಂಬ ಶ್ಲೋಕದಲ್ಲಿ ಈಶ ಚೈತನ್ಯವು ಅಜ್ಞಾನ ನಿರಸನ ಸಮರ್ಥವಾಗಿದೆ ಎಂದು ಹೇಳಿದ್ದಾರೆ. ಅನಾದಿ ಮಾಯಯಾ ಸುಕ್ತಃ ಎಂಬ ಶ್ಲೋಕದಲ್ಲಿ ಜೀವ ಚೈತನ್ಯವು ಅನಾದಿಯಾದ ಅಜ್ಞಾನದಿಂದ ಆವೃತವಾಗಿ ಅಜ್ಞಾನದಿಂದ ಬಿಡಿಸಿಕೊಳ್ಳಲು ಅಸಮರ್ಥವಾಗಿದೆ ಎಂದು ಹೇಳಿದ್ದಾರೆ. ಆದ್ದರಿಂದ ಆ ಚೈತನ್ಯಗಳ ಸ್ವಭಾವದಲ್ಲಿಯೇ ಭೇದವಿರುವುದರಿಂದ ವಿರುದ್ಧ ಧರ್ಮಗಳನ್ನು ಪರಿತ್ಯಾಗ ಮಾಡಿದರೂ ಉಪಪಾದನೆಯನ್ನು ಮಾಡಲು ಬರುವುದಿಲ್ಲ.

**ಅತೋ ನ ಮುಖ್ಯತಃ ಕಾಚಿಚ್ಛ್ರುತಿರ್ವಕ್ತಿ ಜಗತ್ತ್ರಯೇ ।**
**ತವಾಪೇಕ್ಷಿತಮದ್ವೈತಂ ಯತ್ಸಾ ವಕ್ತಿ ನ ತತ್ತವ ॥ ೧೦೭೯ ॥**

**ಅರ್ಥ–** ಅತಃ = ಆದ್ದರಿಂದ, ಜಗತ್ತ್ರಯೇ ಅಪಿ = ಮೂರು ಲೋಕದಲ್ಲಿಯೂ ಕೂಡ, ಕಾಚಿತ್ = ಯಾವುದೇ, ಶ್ರುತಿಃ = ವೇದವಾಕ್ಯವು, ತವ = ನಿನಗೆ, ಅಪೇಕ್ಷಿತಮ್ = ಅಭಿಪ್ರೇತವಾದ, ಮುಖ್ಯತಃ ಅದ್ವೈತಂ = ಬ್ರಹ್ಮಜೀವರ ಮುಖ್ಯಾಭೇದವನ್ನು, ನ ವಕ್ತಿ = ಹೇಳುವುದಿಲ್ಲ. ಸಾ = ಆ ಶ್ರುತಿಯು, ಯತ್ = ಅದ್ವೈತಂ = ಯಾವ ಅದ್ವೈತವನ್ನು, ವಕ್ತಿ = ಹೇಳುತ್ತದೋ, ತತ್ = ಅದು, ತವ = ನಿನಗೆ, ನ ಅಪೇಕ್ಷಿತಮ್ = ಅಪೇಕ್ಷಿತವಾಗಿಲ್ಲ.

**ಅನುವಾದ–** ಆದ್ದರಿಂದ ಮೂರು ಲೋಕಗಳಲ್ಲಿ ಹುಡುಕಿದರೂ ನಿನಗೆ ಅಭಿಪ್ರೇತವಾದ ಐಕ್ಯವನ್ನು ಹೇಳುವ ಯಾವ ಶ್ರುತಿಯೂ ಇಲ್ಲ. ಶ್ರುತಿಯು ಯಾವ ಐಕ್ಯವನ್ನು ಹೇಳುತ್ತದೆಯೋ ಅದು ನಿನಗೆ ಅಭಿಪ್ರೇತವಲ್ಲ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಐಕ್ಯವಾಕ್ಯಂ ಖಂಡಯತಿ ॥ **ಅತ ಇತಿ** ॥ ಅತಃ ಸಕಲವೇದವಾಕ್ಯಾನಾಂ ವಿಶಿಷ್ಟಾರ್ಥಪರತ್ವಾತ್ ಬ್ರಹ್ಮಚಿದೇವ ಜೀವಚಿದಿತಿ ವಾಕ್ಯಸ್ಯ ಕ್ವಾಪ್ಯಭಾವಾಚ್ಚ । ಮುಖ್ಯತಃ ಅಭಿಧಾವೃತ್ತ್ಯಾ ತವಾಪೇಕ್ಷಿತಮದ್ವೈತಂ ಚಿನ್ಮಾತ್ರಾದ್ವೈತಮ್ । ಸಾ ತತ್ತ್ವಮಸೀತ್ಯಾದಿ ಶ್ರುತಿಃ ॥ ೧೦೭೯ ॥

**ವಿವರಣೆ–** ಅದ್ವೈತಿಗಳಿಗೆ ಚಿನ್ಮಾತ್ರೈಕ್ಯವು ಇಷ್ಟವಾದುದು. ಚಿನ್ಮಾತ್ರೈಕ್ಯವನ್ನು ಹೇಳುವ ಶ್ರುತಿಯು ಎಲ್ಲಿಯೂ ದೊರೆಯುವುದಿಲ್ಲ. ಚಿನ್ಮಾತ್ರದಲ್ಲಿ ಭೇದವೇ ಪ್ರಸಕ್ತವಾಗುವುದಿಲ್ಲವಾದ ಕಾರಣ ಅಲ್ಲಿ ಐಕ್ಯವನ್ನು ಹೇಳಬೇಕಾದ ಅವಶ್ಯಕತೆ ಇಲ್ಲವಾದ್ದರಿಂದ ಅಂತಹ ಶ್ರುತಿಯು ಎಲ್ಲಿಯೂ ಇಲ್ಲ. ತತ್ತ್ವಮಸಿ ಎಂಬ ಶ್ರುತಿ ಇದೆ. ಅದು ವಿಶಿಷ್ಟೈಕ್ಯವನ್ನು ಹೇಳುತ್ತದೆ. ವಿಶಿಷ್ಟೈಕ್ಯವು ನಿನಗೆ ಸಮ್ಮತವಲ್ಲ ಎಂದು ಅಭಿಪ್ರಾಯ.

**ಪದದ್ವಯೇಪಿ ಲಕ್ಷ್ಯಾರ್ಥಸ್ವೀಕಾರಾದೇಕಲಕ್ಷಣಾ ।**
**ಲಘೀಯಸೀ ತತಃ ಸರ್ವಾ ಶ್ರುತಿಃ ಪರಮತಾನುಗಾ ॥ ೧೦೮೦ ॥**

**ಅರ್ಥ–** ಪದದ್ವಯೇಪಿ = ತತ್ ತ್ವಂ ಎಂಬ ಎರಡು ಪದಗಳಲ್ಲಿಯೂ, ಲಕ್ಷ್ಯಾರ್ಥಸ್ವೀಕಾರಾತ್ = ಲಕ್ಷ್ಯಾರ್ಥವನ್ನು ಒಪ್ಪುವುದಕ್ಕಿಂತ, ಏಕ ಲಕ್ಷಣಾ = ಐಕ್ಯ ಎಂಬ ಒಂದೇ ಪದಕ್ಕೆ ಲಕ್ಷಣಾವನ್ನು ಸ್ವೀಕರಿಸುವುದು, ಲಘೀಯಸೀ = ಲಘುವಾದ ಮಾರ್ಗವಾಗಿದೆ. ತತಃ = ಆದ್ದರಿಂದ, ಸರ್ವಾ = ಎಲ್ಲಾ, ಶ್ರುತಿಃ = ವೇದರಾಶಿಯು, ಪರಮತಾನುಗಾ = ಪರ = ಪ್ರತಿವಾದಿಯಾದ ನನ್ನ, (ಪರ = ಶ್ರೇಷ್ಠವಾದ) ಮತಾನುಗ = ಮತವನ್ನು ಅನುಸರಿಸುತ್ತದೆ.

**ಅನುವಾದ– ಎರಡು ಪದಗಳಿಗೆ ಲಕ್ಷಣಾ ಸ್ವೀಕಾರ ಮಾಡುವುದಕ್ಕಿಂತಲೂ ಒಂದು ಲಕ್ಷಣಾವೃತ್ತಿಯನ್ನು ಸ್ವೀಕಾರ ಮಾಡುವುದು ಶ್ರೇಷ್ಠವಾದುದರಿಂದ ಎಲ್ಲ ಶ್ರುತಿಯೂ ಪರಮತವನ್ನೇ ಅನುಸರಿಸಿ ಹೋಗುತ್ತದೆ.**

**ಭಾವವಿಲಾಸಿನೀ–** ಯದ್ ವಿಶಿಷ್ಟೈಕ್ಯಂ ಯಚ್ಚ ವಿಶಿಷ್ಟಪರವಾಕ್ಯಾದೇವ ಜಹದಜಹಲ್ಲಕ್ಷಣಯಾ ಚಿನ್ಮಾತ್ರೈಕ್ಯಮಾಶಾಸ್ಯತೇ ತದಪಿ ತದಾ ಸ್ಯಾತ್ ಯದಿ ಚಿನ್ಮಾತ್ರಯೋಃ ಸ್ಪಷ್ಟಮೈಕ್ಯ ಪ್ರತಿಪಾದಕಂ ವಾಕ್ಯಂ ಕ್ವಾಪಿ ಸ್ಯಾತ್ । ತಸ್ಯೈವಾಭಾವೇ ಅಪ್ರಾಮಾಣಿಕತದರ್ಥಪರತ್ವಕಲ್ಪನಾದಪಿ ಪ್ರಮಾಣಿಕತದಧೀನತ್ವಾರ್ಥಪರತ್ವವರ್ಣನಮೇವ ಜ್ಯಾಯಃ । ಏಕಪದಲಕ್ಷಣಾರೂಪತ್ವೇನ ಲಘುತ್ವಾಚ್ಚೇತಿ ಭಾವಃ ॥ ೧೦೮೦ ॥

**ವಿವರಣೆ–** ತತ್ತ್ವಮಸಿ ಎಂಬ ವಾಕ್ಯವು ವಿಶಿಷ್ಟೈಕ್ಯವನ್ನು ಹೇಳುತ್ತದೆ. ಆದರೆ ವಿಶಿಷ್ಟಗಳಿಗೆ ಐಕ್ಯವು ಕೂಡುವುದಿಲ್ಲ. ಅದಕ್ಕೋಸ್ಕರ ಅಲ್ಪಜ್ಞತ್ವ ಸರ್ವಜ್ಞತ್ವ ರೂಪವಾದ ವಿರುದ್ಧ ಧರ್ಮಗಳನ್ನು ಪರಿತ್ಯಾಗ ಮಾಡುತ್ತೀಯೇ. ಅದರ ಉದ್ದೇಶ ಚಿನ್ಮಾತ್ರಕ್ಕೆ ಐಕ್ಯವನ್ನು ಹೇಳುವುದು. ಆದರೆ ಚಿನ್ಮಾತ್ರೈಕ್ಯವೇ ಅಪ್ರಾಮಾಣಿಕವಾದಾಗ ಅದನ್ನು ಸಂಪಾದಿಸುವ ಸಲುವಾಗಿ ಎರಡು ಪದಗಳಿಗೆ ಏಕೆ ಲಕ್ಷಣಾ ಮಾಡುತ್ತೀಯೇ ಅದರ ಬದಲು ಒಂದು ಪದಕ್ಕೆ ಲಕ್ಷಣಾವೃತ್ತಿಯನ್ನು ಅಂಗೀಕರಿಸಿ ತತ್ ಪದಕ್ಕೆ ತತ್ಸದೃಶ ಎಂದು ಅರ್ಥವನ್ನು ಮಾಡು. ಇದರಲ್ಲಿ ಲಾಘವವಿರುವುದರಿಂದ ಇದೇ ಶ್ರೇಷ್ಠವಾದ ಪಕ್ಷ.

**ಕಿಂಚ ಮುಖ್ಯಾರ್ಥಪರಯೋಃ ಶಬ್ದಯೋರ್ಲಕ್ಷಣಾ ತವ ।**
**ಸಾಮಾನಾಧಿಕರಣ್ಯಾರ್ಥಮಾತ್ರಸ್ಯಾಮುಖ್ಯತಾ ಮಮ ॥ ೧೦೮೧ ॥**

**ಅರ್ಥ–** ಕಿಂಚ = ಅದೂ ಅಲ್ಲದೇ, ತವ = ನಿನ್ನ, ಮತೇ = ಮತದಲ್ಲಿ, ಮುಖ್ಯಾರ್ಥಪರಯೋಃ = ಮುಖ್ಯಾರ್ಥವನ್ನು ಹೇಳುತ್ತಿರುವ, ಶಬ್ದಯೋ = ಎರಡು ಶಬ್ದಗಳಿಗೆ, ಲಕ್ಷಣಾ = ಅಮುಖ್ಯಾರ್ಥವನ್ನು ಹೇಳುವ ಮೂಲಕ ಲಕ್ಷಣಾವು ಇರುತ್ತದೆ. ಮಮ = ನನ್ನ, ಮತೇತು = ಮತದಲ್ಲಿಯಾದರೂ, ಸಾಮಾನಾಧಿಕರಣ್ಯಾರ್ಥಸ್ಯ = ಅಸಿ ಎಂಬ ಪದದಿಂದ ಹೇಳಲ್ಪಟ್ಟಿರುವ ಸಾಮಾನ್ಯಧಿಕರಣ್ಯ ಎಂಬ ಅರ್ಥಕ್ಕೆ ಮಾತ್ರ, ಅಮುಖ್ಯತಾ = ಅಮುಖ್ಯಾರ್ಥವನ್ನು ಸ್ವೀಕಾರ ಮಾಡುವ ಮೂಲಕ ಲಕ್ಷಣಾವೂ ಇರುತ್ತದೆ.

**ಅನುವಾದ– ಅದೂ ಅಲ್ಲದೇ, ನೀನು ಮುಖ್ಯಾರ್ಥ ಪರವಾದ ಎರಡು ಶಬ್ದಗಳಿಗೆ ಲಕ್ಷಣಾವನ್ನು ಮಾಡಬೇಕು. ನಾನಾದರೆ ಸಾಮಾನಾಧಿಕರಣ್ಯವು ಮಾತ್ರ ಅಮುಖ್ಯವೆಂದು ಹೇಳುತ್ತೇನೆ.**

**ವಿವರಣೆ–** ತತ್ತ್ವಮಸಿ ಎಂಬಲ್ಲಿ ತತ್ ಪದಕ್ಕೆ ಸಹಜವಾದ ಅರ್ಥವಾದ ಸರ್ವಜ್ಞತ್ವ ವಿಶಿಷ್ಟ ಚೈತನ್ಯ ಎಂಬುದನ್ನು ಪರಿತ್ಯಾಗ ಮಾಡಿ ಕೇವಲ ಚೈತನ್ಯ ಎಂದು ಲಕ್ಷಣಾ ಮಾಡಬೇಕು. ಹಾಗೆಯೇ ತ್ವಂ ಪದಕ್ಕೆ ಅಲ್ಪಜ್ಞತ್ವ ವಿಶಿಷ್ಟ ಚೈತನ್ಯ ಎಂಬುದನ್ನು ಬಿಟ್ಟು ಕೇವಲ ಚೈತನ್ಯ ಎಂದು ಲಕ್ಷಣಾ ಮಾಡಬೇಕು. ತತ್ ಪದ ಮತ್ತು ತ್ವಂ ಪದಗಳು ಧರ್ಮಿಯನ್ನು ಹೇಳುವ ಪದಗಳು. ಆದ್ದರಿಂದ ಅವು ಪ್ರಧಾನವಾದವು. ನೀನು ಪ್ರಧಾನವಾದ ಎರಡು ಪದಗಳಿಗೆ ಲಕ್ಷಣಾವನ್ನು ಅಂಗೀಕರಿಸುತ್ತೀಯೇ. ನಾನು ಸಾಮಾನಾಧಿಕರಣ್ಯದ ಅರ್ಥವಾದ ಐಕ್ಯವು ಮಾತ್ರ ಅಮುಖ್ಯವೆಂದು ಅಂಗೀಕರಿಸುತ್ತೇನೆ. ಆದ್ದರಿಂದ ನನಗೆ ಸಾಮಾನಾಧಿ ಕರಣ್ಯದಲ್ಲಿ ಮಾತ್ರ ಲಕ್ಷಣ. ಧರ್ಮಿಭೂತವಾದ ಎರಡು ಪದಗಳಿಗೆ ಲಕ್ಷಣ ಮಾಡುವುದಕ್ಕಿಂತಲೂ ಧರ್ಮಭೂತವಾದ ಐಕ್ಯವನ್ನು ಹೇಳುವ ಒಂದು ಸಾಮಾನಾಧಿ ಕರಣ್ಯಕ್ಕೆ ಲಕ್ಷಣಾ ಮಾಡುವುದು ಶ್ರೇಷ್ಠವಾದುದು. ನೀನಾದರೂ ಅದ್ವೈತಪ್ರತಿಪಾದಕವೆಂದು ಪ್ರತೀತವಾದ ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ, ಸೋಹಮಸ್ಮಿ, ಸರ್ವಂ ಖಲ್ವಿದಂ ಬ್ರಹ್ಮ ಮೊದಲಾದ ವಾಕ್ಯಗಳಲ್ಲಿ ಇರುವ ಪದಗಳಿಗೆ ಬಾಧಿತವಾದ ಅಯೋಗ್ಯವಾದ ಐಕ್ಯರೂಪವಾದ ಅನ್ವಯವನ್ನು ಬಿಟ್ಟು ನ್ಯಾಯಪ್ರಾಪ್ತವಾದ ಸಾದೃಶ್ಯರೂಪವಾದ ಅನ್ವಯವನ್ನು ಸ್ವೀಕರಿಸಿ ಯೋಜನೆಯನ್ನು ಮಾಡಬೇಕು. ಏಕೆಂದರೆ ಪದಗಳು ಯೋಗ್ಯೇತರಾನ್ವಿತವಾದ ಸ್ವಾರ್ಥಬೋಧಕಗಳೆಂದು ನೀನೂ ಒಪ್ಪುತ್ತೀಯೆ. ಆದ್ದರಿಂದ ಇಲ್ಲಿ ಅಯೋಗ್ಯವಾದ ಅನ್ವಯದ ಪ್ರಸಕ್ತಿ ಇಲ್ಲ. ಪ್ರತೀತಿವಾದ ಐಕ್ಯವನ್ನು ಬಿಟ್ಟಮೇಲೆ ಅದ್ವೈತದಲ್ಲಿ ಯಾವ ಶ್ರುತಿಯೂ ಇಲ್ಲವೆಂದಾಯಿತು. ಪ್ರತ್ಯಕ್ಷವಂತೂ ಭೇದವನ್ನೇ ಸಮರ್ಥಿಸುತ್ತದೆ. ಶುಷ್ಕ ಅನುಮಾನವು ಅಪ್ರಯೋಜಕವಾದುದು. ಆದ್ದರಿಂದ ನಿನಗೆ ಅಭಿಪ್ರೇತವಾದ ಐಕ್ಯವು ಅಪ್ರಾಮಾಣಿಕವಾದುದು. ಯುಕ್ತವಾದ ಅನ್ವಯವನ್ನು ಸ್ವೀಕಾರ ಮಾಡಬೇಕು. ಅಯುಕ್ತವಾದ ಅನ್ವಯವನ್ನು ಪರಿತ್ಯಾಗ ಮಾಡಬೇಕು ಎಂದು ಅಭಿಪ್ರಾಯ.

**ವಿವರಣೆ–** ಅದ್ವೈತಿಗಳಿಗೆ ಚಿನ್ಮಾತ್ರೈಕ್ಯವು ಇಷ್ಟವಾದುದು. ಚಿನ್ಮಾತ್ರೈಕ್ಯವನ್ನು ಹೇಳುವ ಶ್ರುತಿಯು ಎಲ್ಲಿಯೂ ದೊರೆಯುವುದಿಲ್ಲ. ಚಿನ್ಮಾತ್ರದಲ್ಲಿ ಭೇದವೇ ಪ್ರಸಕ್ತವಾಗುವುದಿಲ್ಲವಾದ ಕಾರಣ ಅಲ್ಲಿ ಐಕ್ಯವನ್ನು ಹೇಳಬೇಕಾದ ಅವಶ್ಯಕತೆ ಇಲ್ಲವಾದ್ದರಿಂದ ಅಂತಹ ಶ್ರುತಿಯು ಎಲ್ಲಿಯೂ ಇಲ್ಲ. ತತ್ತ್ವಮಸಿ ಎಂಬ ಶ್ರುತಿ ಇದೆ. ಅದು ವಿಶಿಷ್ಟೈಕ್ಯವನ್ನು ಹೇಳುತ್ತದೆ. ವಿಶಿಷ್ಟೈಕ್ಯವು ನಿನಗೆ ಸಮ್ಮತವಲ್ಲ ಎಂದು ಅಭಿಪ್ರಾಯ.

**ಪದದ್ವಯೇಪಿ ಲಕ್ಷ್ಯಾರ್ಥಸ್ವೀಕಾರಾದೇಕಲಕ್ಷಣಾ ।**
**ಲಘೀಯಸೀ ತತಃ ಸರ್ವಾ ಶ್ರುತಿಃ ಪರಮತಾನುಗಾ ॥ ೧೦೮೦ ॥**

**ಅರ್ಥ–** ಪದದ್ವಯೇಪಿ = ತತ್ ತ್ವಂ ಎಂಬ ಎರಡು ಪದಗಳಲ್ಲಿಯೂ, ಲಕ್ಷ್ಯಾರ್ಥಸ್ವೀಕಾರಾತ್ = ಲಕ್ಷ್ಯಾರ್ಥವನ್ನು ಒಪ್ಪುವುದಕ್ಕಿಂತ, ಏಕ ಲಕ್ಷಣಾ = ಐಕ್ಯ ಎಂಬ ಒಂದೇ ಪದಕ್ಕೆ ಲಕ್ಷಣಾವನ್ನು ಸ್ವೀಕರಿಸುವುದು, ಲಘೀಯಸೀ = ಲಘುವಾದ ಮಾರ್ಗವಾಗಿದೆ. ತತಃ = ಆದ್ದರಿಂದ, ಸರ್ವಾ = ಎಲ್ಲಾ, ಶ್ರುತಿಃ = ವೇದರಾಶಿಯು, ಪರಮತಾನುಗಾ = ಪರ = ಪ್ರತಿವಾದಿಯಾದ ನನ್ನ, (ಪರ = ಶ್ರೇಷ್ಠವಾದ) ಮತಾನುಗ = ಮತವನ್ನು ಅನುಸರಿಸುತ್ತದೆ.

**ಅನುವಾದ–** ಎರಡು ಪದಗಳಿಗೆ ಲಕ್ಷಣಾ ಸ್ವೀಕಾರ ಮಾಡುವುದಕ್ಕಿಂತಲೂ ಒಂದು ಲಕ್ಷಣಾವೃತ್ತಿಯನ್ನು ಸ್ವೀಕಾರ ಮಾಡುವುದು ಶ್ರೇಷ್ಠವಾದುದರಿಂದ ಎಲ್ಲ ಶ್ರುತಿಯೂ ಪರಮತವನ್ನೇ ಅನುಸರಿಸಿ ಹೋಗುತ್ತದೆ.

**ಭಾವವಿಲಾಸಿನೀ–** ಯದ್ ವಿಶಿಷ್ಟೈಕ್ಯಂ ಯಚ್ಚ ವಿಶಿಷ್ಟಪರವಾಕ್ಯಾದೇವ ಜಹದಜಹಲ್ಲಕ್ಷಣಯಾ ಚಿನ್ಮಾತ್ರೈಕ್ಯಮಾಶಾಸ್ಯತೇ ತದಪಿ ತದಾ ಸ್ಯಾತ್ ಯದಿ ಚಿನ್ಮಾತ್ರಯೋಃ ಸ್ಪಷ್ಟಮೈಕ್ಯ ಪ್ರತಿಪಾದಕಂ ವಾಕ್ಯಂ ಕ್ವಾಪಿ ಸ್ಯಾತ್ । ತಸ್ಯೈವಾಭಾವೇ ಅಪ್ರಾಮಾಣಿಕತದರ್ಥಪರತ್ವಕಲ್ಪನಾದಪಿ ಪ್ರಮಾಣಿಕತದಧೀನತಾತ್ವಾರ್ಥಪರತ್ವವರ್ಣನಮೇವ ಜ್ಯಾಯಃ । ಏಕಪದಲಕ್ಷಣಾರೂಪತ್ವೇನ ಲಘುತ್ವಾಚ್ಚೇತಿ ಭಾವಃ ॥ ೧೦೮೦ ॥

**ವಿವರಣೆ–** ತತ್ತ್ವಮಸಿ ಎಂಬ ವಾಕ್ಯವು ವಿಶಿಷ್ಟೈಕ್ಯವನ್ನು ಹೇಳುತ್ತದೆ. ಆದರೆ ವಿಶಿಷ್ಟಗಳಿಗೆ ಐಕ್ಯವು ಕೂಡುವುದಿಲ್ಲ. ಅದಕ್ಕೋಸ್ಕರ ಅಲ್ಪಜ್ಞತ್ವ ಸರ್ವಜ್ಞತ್ವ ರೂಪವಾದ ವಿರುದ್ಧ ಧರ್ಮಗಳನ್ನು ಪರಿತ್ಯಾಗ ಮಾಡುತ್ತೀಯೇ. ಅದರ ಉದ್ದೇಶ ಚಿನ್ಮಾತ್ರಕ್ಕೆ ಐಕ್ಯವನ್ನು ಹೇಳುವುದು. ಆದರೆ ಚಿನ್ಮಾತ್ರೈಕ್ಯವೇ ಅಪ್ರಾಮಾಣಿಕವಾದಾಗ ಅದನ್ನು ಸಂಪಾದಿಸುವ ಸಲುವಾಗಿ ಎರಡು ಪದಗಳಿಗೆ ಏಕೆ ಲಕ್ಷಣಾ ಮಾಡುತ್ತೀಯೇ ಅದರ ಬದಲು ಒಂದು ಪದಕ್ಕೆ ಲಕ್ಷಣಾವೃತ್ತಿಯನ್ನು ಅಂಗೀಕರಿಸಿ ತತ್ ಪದಕ್ಕೆ ತತ್ಸದೃಶ ಎಂದು ಅರ್ಥವನ್ನು ಮಾಡು. ಇದರಲ್ಲಿ ಲಾಘವವಿರುವುದರಿಂದ ಇದೇ ಶ್ರೇಷ್ಠವಾದ ಪಕ್ಷ.

**ಕಿಂಚ ಮುಖ್ಯಾರ್ಥಪರಯೋಃ ಶಬ್ದಯೋರ್ಲಕ್ಷಣಾ ತವ ।**
**ಸಾಮಾನಾಧಿಕರಣ್ಯಾರ್ಥಮಾತ್ರಸ್ಯಾಮುಖ್ಯತಾ ಮಮ ॥ ೧೦೮೧ ॥**

**ಅರ್ಥ–** ಕಿಂಚ = ಅದೂ ಅಲ್ಲದೇ, ತವ = ನಿನ್ನ, ಮತೇ = ಮತದಲ್ಲಿ, ಮುಖ್ಯಾರ್ಥಪರಯೋಃ = ಮುಖ್ಯಾರ್ಥವನ್ನು ಹೇಳುತ್ತಿರುವ, ಶಬ್ದಯೋ = ಎರಡು ಶಬ್ದಗಳಿಗೆ, ಲಕ್ಷಣಾ = ಅಮುಖ್ಯಾರ್ಥವನ್ನು ಹೇಳುವ ಮೂಲಕ ಲಕ್ಷಣಾವು ಇರುತ್ತದೆ. ಮಮ = ನನ್ನ, ಮತೇತು = ಮತದಲ್ಲಿಯಾದರೂ, ಸಾಮಾನಾಧಿಕರಣ್ಯಾರ್ಥಸ್ಯ = ಅಸಿ ಎಂಬ ಪದದಿಂದ ಹೇಳಲ್ಪಟ್ಟಿರುವ ಸಾಮಾನ್ಯಧಿಕರಣ್ಯ ಎಂಬ ಅರ್ಥಕ್ಕೆ ಮಾತ್ರ, ಅಮುಖ್ಯತಾ = ಅಮುಖ್ಯಾರ್ಥವನ್ನು ಸ್ವೀಕಾರ ಮಾಡುವ ಮೂಲಕ ಲಕ್ಷಣಾವೂ ಇರುತ್ತದೆ.

**ಅನುವಾದ– ಅದೂ ಅಲ್ಲದೇ, ನೀನು ಮುಖ್ಯಾರ್ಥ ಪರವಾದ ಎರಡು ಶಬ್ದಗಳಿಗೆ ಲಕ್ಷಣಾವನ್ನು ಮಾಡಬೇಕು. ನಾನಾದರೆ ಸಾಮಾನಾಧಿಕರಣ್ಯವು ಮಾತ್ರ ಅಮುಖ್ಯವೆಂದು ಹೇಳುತ್ತೇನೆ.**

**ವಿವರಣೆ–** ತತ್ತ್ವಮಸಿ ಎಂಬಲ್ಲಿ ತತ್ ಪದಕ್ಕೆ ಸಹಜವಾದ ಅರ್ಥವಾದ ಸರ್ವಜ್ಞತ್ವ ವಿಶಿಷ್ಟ ಚೈತನ್ಯ ಎಂಬುದನ್ನು ಪರಿತ್ಯಾಗ ಮಾಡಿ ಕೇವಲ ಚೈತನ್ಯ ಎಂದು ಲಕ್ಷಣಾ ಮಾಡಬೇಕು. ಹಾಗೆಯೇ ತ್ವಂ ಪದಕ್ಕೆ ಅಲ್ಪಜ್ಞತ್ವ ವಿಶಿಷ್ಟ ಚೈತನ್ಯ ಎಂಬುದನ್ನು ಬಿಟ್ಟು ಕೇವಲ ಚೈತನ್ಯ ಎಂದು ಲಕ್ಷಣಾ ಮಾಡಬೇಕು. ತತ್ ಪದ ಮತ್ತು ತ್ವಂ ಪದಗಳು ಧರ್ಮಿಯನ್ನು ಹೇಳುವ ಪದಗಳು. ಆದ್ದರಿಂದ ಅವು ಪ್ರಧಾನವಾದವು. ನೀನು ಪ್ರಧಾನವಾದ ಎರಡು ಪದಗಳಿಗೆ ಲಕ್ಷಣಾವನ್ನು ಅಂಗೀಕರಿಸುತ್ತೀಯೇ. ನಾನು ಸಾಮಾನಾಧಿಕರಣ್ಯದ ಅರ್ಥವಾದ ಐಕ್ಯವು ಮಾತ್ರ ಅಮುಖ್ಯವೆಂದು ಅಂಗೀಕರಿಸುತ್ತೇನೆ. ಆದ್ದರಿಂದ ನನಗೆ ಸಾಮಾನಾಧಿಕರಣ್ಯದಲ್ಲಿ ಮಾತ್ರ ಲಕ್ಷಣ. ಧರ್ಮಿಭೂತವಾದ ಎರಡು ಪದಗಳಿಗೆ ಲಕ್ಷಣ ಮಾಡುವುದಕ್ಕಿಂತಲೂ ಧರ್ಮಭೂತವಾದ ಐಕ್ಯವನ್ನು ಹೇಳುವ ಒಂದು ಸಾಮಾನಾಧಿಕರಣ್ಯಕ್ಕೆ ಲಕ್ಷಣಾ ಮಾಡುವುದು ಶ್ರೇಷ್ಠವಾದುದು. ನೀನಾದರೂ ಅದ್ವೈತಪ್ರತಿಪಾದಕವೆಂದು ಪ್ರತೀತವಾದ ತತ್ತ್ವಮಸಿ, ಅಹಂ ಬ್ರಹ್ಮಾಸ್ಮಿ, ಸೋಹಮಸ್ಮಿ, ಸರ್ವಂ ಖಲ್ವಿದಂ ಬ್ರಹ್ಮ ಮೊದಲಾದ ವಾಕ್ಯಗಳಲ್ಲಿ ಇರುವ ಪದಗಳಿಗೆ ಬಾಧಿತವಾದ ಅಯೋಗ್ಯವಾದ ಐಕ್ಯರೂಪವಾದ ಅನ್ವಯವನ್ನು ಬಿಟ್ಟು ನ್ಯಾಯಪ್ರಾಪ್ತವಾದ ಸಾದೃಶ್ಯರೂಪವಾದ ಅನ್ವಯವನ್ನು ಸ್ವೀಕರಿಸಿ ಯೋಜನೆಯನ್ನು ಮಾಡಬೇಕು. ಏಕೆಂದರೆ ಪದಗಳು ಯೋಗ್ಯೇತರಾನ್ವಿತವಾದ ಸ್ವಾರ್ಥಬೋಧಕಗಳೆಂದು ನೀನೂ ಒಪ್ಪುತ್ತೀಯೆ. ಆದ್ದರಿಂದ ಇಲ್ಲಿ ಅಯೋಗ್ಯವಾದ ಅನ್ವಯದ ಪ್ರಸಕ್ತಿ ಇಲ್ಲ. ಪ್ರತೀತಿವಾದ ಐಕ್ಯವನ್ನು ಬಿಟ್ಟಮೇಲೆ ಅದ್ವೈತದಲ್ಲಿ ಯಾವ ಶ್ರುತಿಯೂ ಇಲ್ಲವೆಂದಾಯಿತು. ಪ್ರತ್ಯಕ್ಷವಂತೂ ಭೇದವನ್ನೇ ಸಮರ್ಥಿಸುತ್ತದೆ. ಶುಷ್ಕ ಅನುಮಾನವು ಅಪ್ರಯೋಜಕವಾದುದು. ಆದ್ದರಿಂದ ನಿನಗೆ ಅಭಿಪ್ರೇತವಾದ ಐಕ್ಯವು ಅಪ್ರಾಮಾಣಿಕವಾದುದು. ಯುಕ್ತವಾದ ಅನ್ವಯವನ್ನು ಸ್ವೀಕಾರ ಮಾಡಬೇಕು. ಅಯುಕ್ತವಾದ ಅನ್ವಯವನ್ನು ಪರಿತ್ಯಾಗ ಮಾಡಬೇಕು ಎಂದು ಅಭಿಪ್ರಾಯ.

**ಅತೋ ಗುಣವತೀ ಗೌಣೀ ವೃತ್ತಿರೇತಾದೃಶಸ್ಥಲೇ ।**
**ಆದರಾರ್ಹಾ ಶಿರಶ್ಛೇದಾತ್ ಕರಚ್ಛೇದೋ ಯತೋ ಲಘುಃ ॥ ೧೦೮೨ ॥**

**ಯದನ್ವಿತಾಭಿಧಾಯೀನಿ ಪದಾನ್ಯನ್ವಯಬೋಧನಂ ।**
**ಉಪಸರ್ಜನತಃ ಕುರ್ಯುಸ್ತನ್ಮುಖ್ಯೋಽರ್ಥಃ ಪದೋದಿತಃ ॥ ೧೦೮೩ ॥**

**ಅಯೋಗ್ಯಸ್ತ್ವನ್ವಯೋಽರ್ಥೋ ನ ಮುಖ್ಯಾರ್ಥೋ ನ ತರಾಮಸೌ ।**
**ತದ್ಯುಕ್ತಾಯುಕ್ತವಿನ್ಯಾಸಸಂನ್ಯಾಸೌ ಚ ಗುಣೋಚಿತೌ ॥ ೧೦೮೪ ॥**

**ಅರ್ಥ–** ಅತಃ = ಆದ್ದರಿಂದ, ಯತಃ = ಯಾವಕಾರಣದಿಂದ, ಶಿರಶ್ಛೇದಾತ್ = ತಲೆಯನ್ನು ಕತ್ತರಿಸುವುದಕ್ಕಿಂತ, ಕರಶ್ಛೇದಃ = ಕೈಯನ್ನು ಕತ್ತರಿಸುವುದು, ಲಘುಃ = ಲಘುವಾದ ಮಾರ್ಗವೋ, ಅತಃ = ಆದ್ದರಿಂದ, ಏತಾದೃಶಸ್ಥಲೇ = ಇಂತಹ ಸ್ಥಲಗಳಲ್ಲಿ, ಗೌಣೀವೃತ್ತಿಃ = ಗೌಣೀವೃತ್ತಿಯು (ಗೌಣೀವೃತ್ತಿಯನ್ನು ಅಂಗೀಕರಿಸುವುದು), ಗುಣವತೀ = ಶ್ರೇಷ್ಠವಾದದ್ದು. ಯತ್ = ಯಾವ ಕಾರಣದಿಂದ, ಅನ್ವಿತಾಭಿಧಾಯೀನಿ ಪದಾನಿ= ಅನ್ವಿತಾರ್ಥಾಭಿಧಾಯಕವಾದ ಪದಗಳು, ಅನ್ವಯಬೋಧನಂ= ಅನ್ವಯಬೋಧವನ್ನು, ಉಪಸರ್ಜನತಃ= ವಿಶೇಷಣತಯಾ, ಕುರ್ಯುಃ= ಮಾಡುತ್ತವೆಯೋ, ತತ್= ಆದ್ದರಿಂದ, ಪದೋದಿತಃ= ಪದದಿಂದ ವಿಶೇಷ್ಯತಯಾ ಹೇಳಲ್ಪಟ್ಟ, ಅರ್ಥಃ= ಅರ್ಥವು, ಮುಖ್ಯಃ= ಮುಖ್ಯವಾದುದು. ಅಯೋಗ್ಯಃ = ಅಯುಕ್ತವಾದ, ಅನ್ವಯಃ ತು = ಸಂಬಂಧವಾದರೂ, ಅರ್ಥ ನ = ಪದಗಳಿಂದ ಹೇಳಲ್ಪಟ್ಟ ಅರ್ಥವಲ್ಲ, ಅಸೌ = ಈ ಪ್ರಯುಕ್ತಾರ್ಥವು, ಮುಖ್ಯಾರ್ಥಃ ತು = ಪದಗಳ ಮುಖ್ಯಾರ್ಥವಂತೂ, ನ ಭವತೀ ತರಾಂ = ಆಗುವುದೇ ಇಲ್ಲ. ಯತ್ = ಯಾವ ಕಾರಣದಿಂದ, ಯುಕ್ತಾಯುಕ್ತ ವಿನ್ಯಾಸ ಸನ್ನ್ಯಾಸೌ ಚ = ಯುಕ್ತವಾದ ಅರ್ಥವನ್ನು ವಿನ್ಯಾಸ = ಸ್ವೀಕರಿಸುವುದು ಅಯುಕ್ತವಾದ ಅರ್ಥವನ್ನು ಸಂನ್ಯಾಸ ಬಿಡುವುದು ಇವುಗಳಾದರೂ, ಗುಣೋಚಿತೌ = ಉಚಿತವಾಗಿವೆಯೋ, ತತ್ = ಆದ್ದರಿಂದ ಅತ್ರ = ಇಲ್ಲಿ, ಅಮುಖ್ಯಂ = ಅಮುಖ್ಯವಾದ, ಐಕ್ಯಂ = ಐಕ್ಯವೆಂಬ ಅರ್ಥವು, ಸ್ವೀಕಾರ್ಯಂ = ಸ್ವೀಕರಿಸಲ್ಪಡಬೇಕು.

**ಅನುವಾದ– ಆದ್ದರಿಂದ ಇಂತಹ ಸ್ಥಳದಲ್ಲಿ ಗೌಣೀವೃತ್ತಿಯನ್ನು ಅಂಗೀಕರಿಸುವುದು ಶ್ರೇಷ್ಠವಾದುದು. ಶಿರಚ್ಛೇದಕ್ಕಿಂತಲೂ ಕರಚ್ಛೇದವು ಶ್ರೇಷ್ಠವಾದುದಷ್ಟೇ. ಪದಗಳು ಅನ್ವಯವನ್ನು ವಿಶೇಷಣತಯಾ ತಿಳಿಸುವುದರಿಂದ ಪದಗಳ ಅರ್ಥವು ಮುಖ್ಯವಾದುದು. ಅನ್ವಯವು ಅಮುಖ್ಯವಾದುದು ಅಯೋಗ್ಯವಾದ ಅನ್ವಯವು ಅರ್ಥವೇ ಅಲ್ಲ. ಆದ್ದರಿಂದ ಅದು ಮುಖ್ಯಾರ್ಥವಂತೂ ಖಂಡಿತವಾಗಿಯೂ ಅಲ್ಲ. ಆದ್ದರಿಂದ ಯುಕ್ತವಾದ ಅನ್ವಯವನ್ನು ತೆಗೆದುಕೊಂಡು ಅಯುಕ್ತವಾದ ಅನ್ವಯವನ್ನು ಪರಿತ್ಯಾಗ ಮಾಡಬೇಕು.**

**ಭಾವವಿಲಾಸಿನೀ–** ಅಪಿಚ ಧರ್ಮಿಭೂತಪದಾರ್ಥದ್ವಯಪ್ರತಿಪಾದಕಪದದ್ವಯ-ಲಕ್ಷಣಾತೋಽಪಿ ತದ್ಧರ್ಮಭೂತೈಕ್ಯಾರ್ಥಕವಿಭಕ್ತೇರ್ಲಕ್ಷಣಾಯಾ ಸಾದೃಶ್ಯಪರತ್ವಕಲ್ಪನಾರೂಪಾ ಗೌಣೀವೃತ್ತಿ- ರೇವಾತ್ರ ನ್ಯಾಯ್ಯಾ । ಯೋಗ್ಯೇತರಾನ್ವಿತಸ್ವಾರ್ಥಾಭಿಧಾಯಕಾನಿ ಪದಾನೀತಿ ವದತಾ ತ್ವಯಾಪಿ ಆಪಾತತೋಽದ್ವೈತ ಪ್ರತಿಪಾದಕತಯಾ ಪ್ರತೀಯಮಾನೇಷು ತತ್ತ್ವಮಸಿ ಅಹಂ ಬ್ರಹ್ಮಾಸ್ಮಿ ಸರ್ವಂ ಖಲ್ವಿದಂ ಬ್ರಹ್ಮೇತ್ಯಾದಿ ವಾಕ್ಯೇಷು ಸ್ಥಿತಾನಾಂ ತತ್ತ್ವಮಾದಿಪದಾನಾಂ ಬಾಧಿತತ್ವೇನಾಯೋಗ್ಯಮೈಕ್ಯರೂಪಮನ್ವಯಂ ವಿಹಾಯ ನ್ಯಾಯಪ್ರಾಪ್ತತಯಾ ಯೋಗ್ಯಂ ಸಾದೃಶ್ಯ- ರೂಪಮನ್ವಯಮಾದಾಯೈವ ಯೋಜನಾ ಕರ್ತವ್ಯಾ। ಅತಃ ಶ್ರುತಿಃ ಕಾಪ್ಯದ್ವೈತೇ ನ ವರ್ತತೇ । ಅಕ್ಷಂತು ಭೇದಪಕ್ಷಪಾತಿ । ಶುಷ್ಕಾನುಮಾ ತು ವ್ಯರ್ಥಾ । ಏವಂ ಚಾಪ್ರಾಮಾಣಿಕ-ಮೇವ ಚೈಕ್ಯಮಾಸೀದಿತ್ಯಾಹ – **ಕಿಂಚೇತ್ಯಾದಿನಾ ॥ ಯತ್ ಯಸ್ಮಾತ್ ॥ ತತ್ ತಸ್ಮಾತ್ ।** ಯುಕ್ತಾಯುಕ್ತಯೋರನ್ವಯಯೋರ್ವಿನ್ಯಾಸಸಂನ್ಯಾಸಾವಿತ್ಯರ್ಥಃ ॥ ೧೦೮೧-೧೦೮೪ ॥

**ವಿವರಣೆ–** ತತ್ ತ್ವಂ ಪದಗಳ ಅರ್ಥವಾದ ಜೀವ ಮತ್ತು ಬ್ರಹ್ಮರು ಮುಖ್ಯವಾದ ಅರ್ಥ. ಅದನ್ನು ಉಳಿಸಿಕೊಂಡು ಯೋಗ್ಯವಾದ ಅನ್ವಯವನ್ನು ಹೇಳಬೇಕು. ಪ್ರತೀತವಾಗುವ ಅಭೇದರೂಪವಾದ ಅನ್ವಯವು ಅಯೋಗ್ಯವಾದುದರಿಂದ ಅದು ಅರ್ಥವೇ ಅಲ್ಲ. ಮುಖ್ಯಾರ್ಥವು ಮೊದಲೇ ಅಲ್ಲ. ನೀನಾದರೂ ಪದಗಳು ಯೋಗ್ಯೇತರಾನ್ವಿತವಾದ ಸ್ವಾರ್ಥವನ್ನು ಹೇಳುತ್ತದೆಂದು ಒಪ್ಪುತ್ತೀಯೆ. ಆದ್ದರಿಂದ ಅಯೋಗ್ಯವಾದ ಐಕ್ಯರೂಪವಾದ ಅನ್ವಯವನ್ನು ಬಿಟ್ಟು ಎರಡು ಪದಗಳಿಗೂ ಮುಖ್ಯಾರ್ಥವನ್ನೇ ಇಟ್ಟುಕೊಂಡು ಸಾದೃಶ್ಯರೂಪವಾದ ಅಮುಖ್ಯವಾದ ಐಕ್ಯರೂಪವಾದ ಅನ್ವಯವನ್ನು ಸ್ವೀಕಾರ ಮಾಡಿ ಯೋಜನೆ ಮಾಡುವುದು ಶ್ರೇಷ್ಠವಾದುದು ಎಂದು ಅಭಿಪ್ರಾಯ.

**ಯೋಗ್ಯಾನ್ವಯಂ ಸಮಾದಾಯ ಜಹತೀ ಬಾಧಿತಂ ಚ ತಮ್ ।**
**ಮುಖ್ಯಾರ್ಥಾವಭಿರಕ್ಷಂತೀ ವೃತ್ತಿಃ ಸಾಽತಿಬಲೀಯಸೀ ॥ ೧೦೮೫ ॥**

**ಅರ್ಥ–** ಯೋಗ್ಯಾನ್ವಯಂ= ಯುಕ್ತವಾದ ಅನ್ವಯವನ್ನು, ಸಮಾದಾಯ= ಸ್ವೀಕರಿಸಿ, ಬಾಧಿತಂ= ಅಯುಕ್ತವಾದ, ತಂ ಚ= ಆ ಅನ್ವಯವನ್ನು ಆದರೂ, ಜಹತೀ= ಪರಿತ್ಯಾಗ ಮಾಡುತ್ತಾ, ಮುಖ್ಯಾರ್ಥೌ= ಪದಗಳ ಮುಖ್ಯಾರ್ಥಗಳನ್ನು, ಅಭಿರಕ್ಷಂತೀ= ಸಂರಕ್ಷಣಾ ಮಾಡುತ್ತಾ, ಯಾ= ಯಾವ, ವೃತ್ತಿಃ= ವೃತ್ತಿಯು, ಅಸ್ತಿ= ಇದೆಯೋ, ಸ್ವಾ= ಅದು, ಅತಿಬಲೀಯಸೀ= ಅತ್ಯಂತ ಪ್ರಬಲವಾದದ್ದು.

**ಅನುವಾದ–** ಯಾವ ವೃತ್ತಿಯಲ್ಲಿ ಯೋಗ್ಯವಾದ ಅನ್ವಯವನ್ನು ಸ್ವೀಕಾರ ಮಾಡಿ ಬಾಧಿತವಾದ ಅನ್ವಯವನ್ನು ಪರಿತ್ಯಾಗ ಮಾಡಿ ಎರಡು ಪದಗಳಿಗೂ ಮುಖ್ಯಾರ್ಥವನ್ನೇ ರಕ್ಷಣೆ ಮಾಡುತ್ತೇವೆಯೋ ಆ ವೃತ್ತಿಯು ಲಕ್ಷಣಾವೃತ್ತಿಗಿಂತಲೂ ಪ್ರಬಲವಾದುದು.

**ಭಾವವಿಲಾಸಿನೀ–** ಗೌಣೀಲಕ್ಷಣಾಭೇದಂ ಸ್ಪಷ್ಟಯಿತುಂ ತಯೋರಾಕಾರಂ ದರ್ಶಯತಿ – **ಯೋಗ್ಯೇತ್ಯಾದಿನಾ** ॥ ಸಾ ಗೌಣೀ ॥ ೧೦೮೫ ॥

**ವಿವರಣೆ–** ಇಲ್ಲಿ ಗೌಣೀವೃತ್ತಿಯು ಲಕ್ಷಣಾವೃತ್ತಿಗಿಂತ ಪ್ರಬಲವಾದುದೆಂದು ಸಮರ್ಥನೆ ಮಾಡುತ್ತಾರೆ. ಗೌಣೀವೃತ್ತಿಯಲ್ಲಿ ಎರಡು ಪದಗಳಿಗೂ ಮುಖ್ಯಾರ್ಥವನ್ನು ಇಟ್ಟುಕೊಂಡು ಮುಖ್ಯವಾದ ಅನ್ವಯವನ್ನು ಬಿಟ್ಟು ಅಮುಖ್ಯವಾದ ಅನ್ವಯವನ್ನು ಸ್ವೀಕಾರ ಮಾಡುತ್ತೇವೆ. ಆದ್ದರಿಂದ ಇದು ಲಕ್ಷಣಾವೃತ್ತಿಗಿಂತ ಪ್ರಬಲವಾದ ವೃತ್ತಿ ಎಂದು ಅಭಿಪ್ರಾಯ.

**ಯಸ್ಯಾಂ ಲಕ್ಷ್ಯಾರ್ಥನಿರ್ದಿಷ್ಟೇ ನಾಸ್ತಿ ತದ್ವಾಚಕಂ ಪದಮ್ ।**
**ಲಕ್ಷಕೇಣೈವ ಬೋಧ್ಯೋಽಸೌ ಯುಕ್ತೋಽನ್ಯೋಽಪ್ಯನ್ವಯೋಽಸ್ತಿ ನ ।**
**ಅಗತ್ಯಾ ಜಹತೀ ಮುಖ್ಯಂ ವೃತ್ತಿಃ ಸಾಽತಿಲಘೀಯಸೀ ॥ ೧೦೮೬ ॥**

**ಅರ್ಥ–** ಯಸ್ಯಾಂ = ಯಾವ ಲಕ್ಷಣಾದಲ್ಲಿ, ಲಕ್ಷ್ಯಾರ್ಥನಿರ್ದಿಷ್ಟೇ = ಲಕ್ಷ್ಯಾರ್ಥ ಎಂಬುದಾಗಿ ನಿರ್ಣೀತವಾದ, ಅರ್ಥೇ = ಅರ್ಥದಲ್ಲಿ, ತದ್ವಾಚಕಂ = ಅದನ್ನು ಶಕ್ತಿವೃತ್ತಿಯಿಂದ ಹೇಳುವ, ಪದಂ = ಪದವು, ನಾಸ್ತಿ = ಇಲ್ಲವೋ, ಅಸೌ = ಈ ಲಕ್ಷ್ಯಾರ್ಥವು, ಲಕ್ಷಕೇಣ = ಲಕ್ಷಕವಾದ, ಪದೇನ ಏವ = ಪದದಿಂದಲೇ, ಬೋಧ್ಯಃ ಅಸ್ತಿ = ತಿಳಿಯಲ್ಪಡುತ್ತದೋ, ಯುಕ್ತಃ = ಅಬಾಧಿತವಾದ, ಅನ್ಯ = ಬೇರೆಯ, ಅನ್ವಯ ಅಪಿ = ಸಂಬಂಧವೂ ಕೂಡ, ನಾಸ್ತಿ = ಇರುವುದಿಲ್ಲವೋ, ಅಗತ್ಯಾ = ಬೇರೆ ವಿಧಿಯಿಲ್ಲದೇ, ಸ್ವಾರ್ಥಂ = ತನ್ನ ಮುಖ್ಯಾರ್ಥವನ್ನು, ಜಹತೀ = ಪರಿತ್ಯಾಗ ಮಾಡುತ್ತಿರುವ, ಸಾ = ಆ ಲಕ್ಷಣಾವು, ಅತಿಲಘೀಯಸೀ = ಅತ್ಯಂತ ದುರ್ಬಲವಾದ, ವೃತ್ತಿಃ = ವೃತ್ತಿಯು ಆಗಿವೆ.

**ಅನುವಾದ–** ಎಲ್ಲಿ ಲಕ್ಷ್ಯಾರ್ಥವನ್ನು ಸಾಕ್ಷಾತ್ತಾಗಿ ಹೇಳುವ ಪದವೇ ಇಲ್ಲವೋ ಮತ್ತು ವಾಕ್ಯದಲ್ಲಿರುವ ಎರಡು ಪದಗಳಿಗೆ ಯೋಗ್ಯವಾದ ಬೇರೆ ಅನ್ವಯವೂ ಇಲ್ಲವೋ, ಅಲ್ಲಿ ಅನಿವಾರ್ಯವಾಗಿ ಒಂದು ಪದಕ್ಕೆ ಅದರ ಸ್ವಾಭಾವಿಕವಾದ ಅರ್ಥವನ್ನು ಪರಿತ್ಯಾಗ ಮಾಡಿ ಅನ್ವಯವನ್ನು ಹೇಳಬೇಕು. ಈ ವೃತ್ತಿಯು ದುರ್ಬಲವಾದುದು.

**ವಿವರಣೆ–** ಇಲ್ಲಿ ಲಕ್ಷಣಾವೃತ್ತಿಯನ್ನು ನಿರೂಪಿಸಿ ಅದು ಗೌಣೀವೃತ್ತಿಗಿಂತಲೂ ದುರ್ಬಲವೆಂದು ಸಮರ್ಥಿಸುತ್ತಾರೆ. ಗಂಗಾಯಾಂ ಘೋಷಃ ಎಂಬುದು ಉದಾಹರಣೆ. ಅಲ್ಲಿ ತೀರವನ್ನು ಹೇಳುವ ಯಾವ ಪದವೂ ಇಲ್ಲ. ಆದ್ದರಿಂದ ಪ್ರವಾಹವನ್ನು ಹೇಳುವ ಗಂಗಾ ಪದದಿಂದಲೇ ತೀರದ ಉಪಸ್ಥಿತಿಯನ್ನು ಮಾಡಬೇಕು. ಗಂಗಾ ಮತ್ತು ಘೋಷಗಳಿಗೆ ಯೋಗ್ಯವಾದ ಯಾವ ಅನ್ವಯವೂ ಇಲ್ಲ. ಆದ್ದರಿಂದ ಘೋಷಾಧಾರತ್ವವನ್ನು ಉಪಪಾದನೆ ಮಾಡಲು ಗಂಗಾಪದಕ್ಕೆ ತೀರದಲ್ಲೇ ಲಕ್ಷಣಾ ಮಾಡಬೇಕು. ಈ ಲಕ್ಷಣಾವೃತ್ತಿಯಲ್ಲಿ ಒಂದು ಪದದ ಮುಖ್ಯಾರ್ಥವನ್ನು ಪರಿತ್ಯಾಗ ಮಾಡುವುದರಿಂದ ಯಾವ

ಪದದ ಮುಖ್ಯಾರ್ಥವನ್ನು ಪರಿತ್ಯಾಗ ಮಾಡದಿರುವ ಗೌಣೀವೃತ್ತಿಗಿಂತಲೂ ಇದು ದುರ್ಬಲವಾಗುತ್ತದೆ ಎಂದು ಅಭಿಪ್ರಾಯ.

**ಅದ್ಯಾ ಗೌಣೀತಿ ನಿರ್ದಿಷ್ಟಾ ದ್ವಿತೀಯಾ ಲಕ್ಷಣಾ ಕಿಲ ।**
**ವಿರುದ್ಧಾಕಾರಸಂಪತ್ತೀ ವೃತ್ತೀ ದ್ವೇ ನಾತ್ರ ಸಂಶಯಃ ॥ ೧೦೮೭ ॥**

**ಅರ್ಥ–** ಆದ್ಯಾ = ಹಿಂದಿನ ಎರಡು ಶ್ಲೋಕಗಳಲ್ಲಿ ಮೊದಲನೇ ಶ್ಲೋಕದಲ್ಲಿ ಹೇಳಲ್ಪಟ್ಟ ವೃತ್ತಿಯು, ಗೌಣೀತಿ = ಗೌಣಿಯೆಂಬುದಾಗಿ, ನಿರ್ದಿಷ್ಟಾ = ಹೇಳಲ್ಪಟ್ಟಿದೆ. ದ್ವಿತೀಯಾ = ಎರಡನೆಯ ಶ್ಲೋಕದಲ್ಲಿ ಹೇಳಲ್ಪಟ್ಟ ವೃತ್ತಿಯು, ಲಕ್ಷಣಾ ಕಿಲ = ಲಕ್ಷಣ ಆಗಿವೆಯಷ್ಟೇ, ಈತೇ = ಈ, ದ್ವೇ = ಎರಡು, ವೃತ್ತೀ = ವೃತ್ತಿಗಳು, ವಿರುದ್ಧಾಕಾರಸಂಪತ್ತೀ = ವಿರುದ್ಧವಾದ ಸ್ವರೂಪಗಳುಳ್ಳವು, ಸ್ತಃ = ಆಗಿವೆ, ಅತ್ರ = ಈ ವಿಷಯದಲ್ಲಿ, ಸಂಶಯಃ ನ = ಸಂಶಯವಿಲ್ಲ.

**ಅನುವಾದ–** ಇದರಲ್ಲಿ ಹಿಂದಿನ ಎರಡು ಶ್ಲೋಕಗಳಲ್ಲಿ ಮೊದಲನೆಯ ಶ್ಲೋಕದಲ್ಲಿ ಹೇಳಿದ ವೃತ್ತಿಗೆ ಗೌಣೀ ಎಂದು ಎರಡನೆಯ ಶ್ಲೋಕದಲ್ಲಿ ಹೇಳಿದ ವೃತ್ತಿಗೆ ಲಕ್ಷಣಾ ಎಂದು ಹೆಸರು. ಅವೆರಡೂ ಪರಸ್ಪರ ವಿರುದ್ಧವಾದ ಸ್ವರೂಪವನ್ನು ಹೊಂದಿರುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ– ಯಸ್ಯಾಂ ಲಕ್ಷಣಾಯಾಮ್ । ಅಗತ್ಯಾ ಗೌಣೀವದ್ಯೋಗ್ಯಾನ್ವಯಾಂತರಾಭಾವೇನ । ಮುಖ್ಯಮರ್ಥಮ್ (ಜಹತೀ) । ಸಾ ಲಕ್ಷಣಾ ॥ ೧೦೮೬-೧೦೮೭ ॥**

**ಜಹತ್ಸ್ವಾರ್ಥಾಽಜಹತ್ಸ್ವಾರ್ಥೇತ್ಯಾಹುರ್ಯಲ್ಲಕ್ಷಣಾದ್ವಯಂ ।**
**ತದಾದ್ಯಾಯಾಂ ಮುಖ್ಯಯೋಗೋಽಪ್ಯಾರ್ಥಿಕೋ ನ ತು ಶಾಬ್ದಿಕಃ ।**
**ವಾಕ್ಯಾರ್ಥೋಽಪ್ಯನ್ವಯಸ್ತೀರಘೋಷಯೋರೇವ ನ ತ್ವಯಂ ॥ ೧೦೮೮ ॥**

**ಅರ್ಥ–** ಅಪಿ = ಮತ್ತು, ಆದ್ಯಾಯಾಂ = ಮೊದಲನೆಯದಾದ ಜಹತ್‌ಸ್ವಾರ್ಥ-ಲಕ್ಷಣಾದಲ್ಲಿ, ಮುಖ್ಯಯೋಗಃ ತು = ಮುಖ್ಯಾರ್ಥಕ್ಕೆ ಲಕ್ಷ್ಯಾರ್ಥದೊಂದಿಗಿನ ಸಂಬಂಧವಾದರೂ, ಆರ್ಥಿಕಃ = ಅರ್ಥದಿಂದ ಲಭ್ಯವಾದದ್ದು, ನ ಶಾಬ್ದಿಕಃ = ಶಬ್ದಗಳಿಂದ ಲಬ್ಧವಾದುದಲ್ಲ, ಅಪಿ = ಮತ್ತು, ತೀರಘೋಷಯೋಃ = ತೀರ ಮತ್ತು ಹಳ್ಳಿಗಳ, ಅನ್ವಯ ಏವ = ಸಂಬಂಧವೇ, ವಾಕ್ಯಾರ್ಥಃ = ವಾಕ್ಯಾರ್ಥವಾಗಿದೆ, ನ ತ್ವಯಂ = ಮುಖ್ಯಾರ್ಥ ಮತ್ತು ಲಕ್ಷ್ಯಾರ್ಥಗಳ ಸಂಬಂಧವು ವಾಕ್ಯಾರ್ಥವಲ್ಲ.

**ಅನುವಾದ–** ಜಹತ್ಸ್ವಾರ್ಥ ಮತ್ತು ಅಜಹತ್ಸ್ವಾರ್ಥ ಎಂದು ಎರಡು ಲಕ್ಷಣಾ ಸ್ವರೂಪವನ್ನು ಒಪ್ಪುತ್ತಾರೆ. ಜಹತ್ಸ್ವಾರ್ಥ ಲಕ್ಷಣಾ ಸ್ಥಳದಲ್ಲಿ ಮುಖ್ಯಾರ್ಥ ಮತ್ತು

**ಲಕ್ಷಣಾರ್ಥ ಸಂಬಂಧವು ಆರ್ಥಿಕವಾದುದು ಹೊರತು ಶಬ್ದದಿಂದ ಲಭಿಸುವುದಿಲ್ಲ. ತೀರ ಮತ್ತು ಘೋಷಗಳ ಅನ್ವಯವು ವಾಕ್ಯಾರ್ಥರೂಪವಾದುದು. ಮುಖ್ಯಾರ್ಥ ಮತ್ತು ಲಕ್ಷ್ಯಾರ್ಥಗಳ ಸಂಬಂಧವು ವಾಕ್ಯಾರ್ಥವಲ್ಲ.**

**ಭಾವವಿಲಾಸಿನೀ– ಯತ್ ಯಸ್ಮಾತ್ । ತತ್ ತಸ್ಮಾತ್ । ಅಯಂ ಮುಖ್ಯಲಕ್ಷ್ಯಾರ್ಥ-ಸಂಬಂಧಃ ॥ ೧೦೮೮ ॥**

**ವಿವರಣೆ–** 'ಗಂಗಾಯಾಂ ಘೋಷಃ' ಎನ್ನುವುದು ಜಹತ್ಸ್ವಾರ್ಥ ಲಕ್ಷಣಾ ಸ್ಥಳಕ್ಕೆ ಒಂದು ಉದಾಹರಣೆ. ಇಲ್ಲಿ ಗಂಗಾ ಪದ ಮುಖ್ಯಾರ್ಥವಾದ ಪ್ರವಾಹಕ್ಕೂ ಮತ್ತು ತೀರಕ್ಕೂ ಇರುವ ಸಂಬಂಧವು ಶಬ್ದಶಕ್ತಿಯಿಂದ ಗೊತ್ತಾಗುವುದಿಲ್ಲ. ಆರ್ಥಿಕವಾಗಿ ತಿಳಿಯಲ್ಪಡುತ್ತದೆ. ವಾಕ್ಯಾರ್ಥವಾದರೂ ತೀರ ಮತ್ತು ಘೋಷಗಳ ಸಂಬಂಧವೇ ಆಗಿದೆ ಹೊರತು ಮುಖ್ಯಾರ್ಥ ಮತ್ತು ಲಕ್ಷ್ಯಾರ್ಥಗಳ ಸಂಬಂಧವು ವಾಕ್ಯಾರ್ಥವಲ್ಲ.

**ಲಕ್ಷ್ಯಾರ್ಥೇ ನಿರ್ವಿಕಲ್ಪಾ ಧೀರ್ಯಸ್ಯ ತಸ್ಯ ಮತೇ ಪದಂ ।**
**ಮುಖ್ಯಾರ್ಥಯೋಗಂ ಮುಖ್ಯಂ ಚ ನ ವದೇನ್ನಾಪಿ ಲಕ್ಷಯೇತ್ ॥೧೦೮೯॥**

**ಅರ್ಥ–** ಯಸ್ಯ = ಯಾವ ತಾರ್ಕಿಕನ, ಮತೇ = ಮತದಲ್ಲಿ, ಲಕ್ಷ್ಯಾರ್ಥೇ = ಲಕ್ಷ್ಯಾರ್ಥದಲ್ಲಿ ನಿರ್ವಿಕಲ್ಪಾಧೀಃ = ನಿರ್ವಿಕಲ್ಪಕ ಜ್ಞಾನವು ಇರುತ್ತದೋ, ತಸ್ಯ = ಅವನ, ಮತೇ = ಮತದಲ್ಲಿ, ಪದಂ = ಲಾಕ್ಷಣಿಕ ಪದವು, ಮುಖ್ಯಾರ್ಥಯೋಗಂ = ಮುಖ್ಯಾರ್ಥದ ಸಂಬಂಧವನ್ನಾಗಿ, ಮುಖ್ಯಂ ಚ = ಮುಖ್ಯವಾದ ಅರ್ಥವನ್ನಾಗಲೀ, ನ ವದೇತ್ = ಶಕ್ತಿಯಿಂದ ಹೇಳುವುದಿಲ್ಲ. ನ ಲಕ್ಷಯೇತ್ ಅಪಿ = ಲಕ್ಷಣಾದಿಂದ ಕೂಡ ಹೇಳುವುದಿಲ್ಲ.

**ಅನುವಾದ– ಯಾವ ತಾರ್ಕಿಕರ ಮತದಲ್ಲಿ ಇಂತಹ ಲಕ್ಷಣಾ ಸ್ಥಳದಲ್ಲಿ ಲಕ್ಷ್ಯಾರ್ಥದ ನಿರ್ವಿಕಲ್ಪಕ ಜ್ಞಾನವನ್ನು ಅಂಗೀಕಾರ ಮಾಡುತ್ತಾರೆಯೋ ಅವರಿಗೆ ಮುಖ್ಯಾರ್ಥ ಸಂಬಂಧವಾಗಲೀ, ಮುಖ್ಯವಾದ ಅನ್ವಯವಾಗಲೀ ಶಬ್ದ ಶಕ್ತಿಯಿಂದಲಾಗಲೀ ಅಥವಾ ಲಕ್ಷಣಾದಿಂದಲಾಗಲೀ ಲಬ್ಧವಾಗುವುದಿಲ್ಲ.**

**ಭಾವವಿಲಾಸಿನೀ– ತಸ್ಯ ತಾರ್ಕಿಕಸ್ಯ ॥ ೧೦೮೯ ॥**

**ವಿವರಣೆ–** ತಾರ್ಕಿಕರು 'ಗಂಗಾಯಂ ಘೋಷಃ' ಎಂಬಲ್ಲಿ ತೀರದ ನಿರ್ವಿಕಲ್ಪಕ ಜ್ಞಾನವನ್ನು ಅಂಗೀಕಾರ ಮಾಡುತ್ತಾರೆ. ನಿರ್ವಿಕಲ್ಪಕ ಜ್ಞಾನವಾದ್ದರಿಂದಲೇ ಅದರಲ್ಲಿ ಮುಖ್ಯಾರ್ಥ ಸಂಬಂಧವಾಗಲೀ ಅಥವಾ ಬೇರೆ ಅನ್ವಯವಾಗಲೀ ತೋರುವುದಿಲ್ಲ. ಇದು ಲಕ್ಷಣಾ ಸ್ಥಳದಲ್ಲಿ ಅವರು ಮಾಡುವ ನಿರ್ವಾಹ.

**ಪೌನರುಕ್ತ್ಯಾ ಸಿಂಹಪದಂ ದೇವದತ್ತಂ ನ ಲಕ್ಷಯೇತ್ ।**
**ಕಿಂತು ಸಿಂಹಾತ್ಮತಾಂ ಸಿಂಹಸಾದೃಶ್ಯಂ ವಾಸ್ಯ ಶಂಸತಿ ॥ ೧೮೯೦ ॥**

**ಅರ್ಥ–** (ಸಿಂಹೋ ದೇವದತ್ತಃ ಎಂಬ ಸ್ಥಳದಲ್ಲಿ) ಪೌನರುಕ್ತ್ಯಾತ್ = ಪುನರುಕ್ತಿದೋಷವು ಬರುವ ಕಾರಣದಿಂದ, ಸಿಂಹಪದಂ = ಸಿಂಹ ಎಂಬ ಪದವು, ದೇವದತ್ತಂ = ದೇವದತ್ತನನ್ನು, ನ ಲಕ್ಷಯೇತ್ = ಲಕ್ಷಣಾದಿಂದ ಹೇಳುವುದಿಲ್ಲ. ಕಿಂತು = ಹೊರತಾಗಿ, ಅಸ್ಯ = ಅದೇ ದೇವದತ್ತನಿಗೆ, ಸಿಂಹಾತ್ಮತಾಂ = ಸಿಂಹದ ಅಭೇದವನ್ನಾಗಲೀ, ಸಿಂಹಸಾದೃಶ್ಯಂ ವಾ = ಸಿಂಹದ ಹೋಲಿಕೆಯನ್ನಾಗಲೀ, ಶಂಸತಿ = ಹೇಳುತ್ತದೆ.

**ಅನುವಾದ–** 'ಸಿಂಹೋದೇವದತ್ತಃ' ಎಂಬ ಸ್ಥಳದಲ್ಲಿ ಪೌನರುಕ್ತಿಯು ಬರುವ ಕಾರಣದಿಂದ ಸಿಂಹ ಪದವು ದೇವದತ್ತನಿಗೆ ಲಕ್ಷಕವಾಗುವುದಿಲ್ಲ. ಆದರೆ ಸಿಂಹಾಭೇದವನ್ನಾಗಲೀ ಅಥವಾ ಸಿಂಹಸಾದೃಶ್ಯವನ್ನಾಗಲೀ ಹೇಳುತ್ತದೆ.

**ಭಾವವಿಲಾಸಿನೀ–** ನನು ಗಂಗಾಪದೇನ ತೀರವತ್ಸಿಂಹಪದೇನಾಪಿ ದೇವದತ್ತಸ್ಯೈವ ಲಕ್ಷಣಯಾ ನಿರೂಪಣೇ ಕಥಂ ಗೌಣೀ ಲಕ್ಷಣಯೋರ್ಭೇದ ಇತ್ಯತ ಆಹ – **ಪೌನರುಕ್ತ್ಯಾದಿತಿ** ॥ ಸಿಂಹೋ ದೇವದತ್ತ ಇತಿ ವಾಕ್ಯೇ ದೇವದತ್ತಪದೇನೈವ ದೇವದತ್ತಸ್ಯ ನಿರೂಪಿತತ್ವೇನ ಪುನಃ ಸಿಂಹಪದೇನಾಪಿ ತಸ್ಯೈವ ನಿರೂಪಣೇ ಪುನರುಕ್ತತ್ವಾದಿತ್ಯರ್ಥಃ । ಏವಂಚ ಪದದ್ವಯಮುಖ್ಯಾರ್ಥೌ ಸಿಂಹದೇವ-ದತ್ತೌ ತಾಭ್ಯಾಂ ಪದಾಭ್ಯಾಮಭಿಧಾಯ ಮುಖ್ಯಾನ್ವಯಮಾತ್ರಸ್ಯ ಪರಿತ್ಯಾಗೇ ಗೌಣೀ । ವಾಕ್ಯಾರ್ಥಭೂತಮುಖ್ಯಾನ್ವಯಮಂಗೀಕೃತ್ಯ ಏಕಪದಮುಖ್ಯಾರ್ಥಸ್ಯೈವ ತ್ಯಾಗೇನ ಅಮುಖ್ಯಾ-ರ್ಥಾಂತರನಿರೂಪಣೇ ಲಕ್ಷಣೇತಿ ಕಥಂ ನ ಭೇದಃ । ಕಥಂ ವಾ ಲಕ್ಷಣಾತೋ ನ ಗೌಣೀ ಗುಣವತೀತಿ ಭಾವಃ ॥ ೧೮೯೦ ॥

**ವಿವರಣೆ–** ಗಂಗಾ ಪದಕ್ಕೆ ತೀರದಲ್ಲಿ ಲಕ್ಷಣಾ ಮಾಡಿದಂತೆ ಸಿಂಹ ಪದಕ್ಕೂ ದೇವದತ್ತನಲ್ಲಿ ಲಕ್ಷಣಾ ಮಾಡಿದರೆ ಆಗ ಗೌಣೀ ಮತ್ತು ಲಕ್ಷಣಾವೃತ್ತಿಗಳಿಗೆ ಭೇದವೇ ಸಿದ್ಧವಾಗುವುದಿಲ್ಲ ಎಂದು ಶಂಕೆಯನ್ನು ಮಾಡಿದರೆ ಇಲ್ಲಿ ಅದಕ್ಕೆ ಉತ್ತರವನ್ನು ಹೇಳುತ್ತಾರೆ. ಸಿಂಹೋ ದೇವದತ್ತಃ ಎಂಬಲ್ಲಿ ಸಿಂಹಪದಕ್ಕೆ ದೇವದತ್ತನಲ್ಲಿ ಲಕ್ಷಣಾ ಮಾಡಲು ಸಾಧ್ಯವಿಲ್ಲ. ಏಕೆಂದರೆ ದೇವದತ್ತ ಪದದಿಂದಲೇ ದೇವದತ್ತನ ಉಪಸ್ಥಿತಿ ಇರುವಾಗ ಸಿಂಹ ಪದದಿಂದಲೂ ದೇವದತ್ತನ ಉಪಸ್ಥಿತಿಯನ್ನು ಹೇಳಿದರೆ ಪುನರುಕ್ತವಾಗುತ್ತದೆ. ಆದ್ದರಿಂದ ಎರಡು ಪದಗಳ ಮುಖ್ಯಾರ್ಥವಾದ ಸಿಂಹ ಮತ್ತು ದೇವದತ್ತರನ್ನೇ ಆ ಪದದಿಂದ ಅರ್ಥವನ್ನಾಗಿ ತೆಗೆದುಕೊಂಡು ಮುಖ್ಯಾನ್ವಯವಾದ ಅಭೇದವನ್ನು ಮಾತ್ರ ಪರಿತ್ಯಾಗ ಮಾಡಿ ವಾಕ್ಯಾರ್ಥಭೂತವಾದ ಸಾದೃಶ್ಯರೂಪವಾದ ಅಮುಖ್ಯವಾದ ಅಭೇದವನ್ನು ಸ್ವೀಕಾರ ಮಾಡುವುದರಿಂದ ಇದು ಲಕ್ಷಣಾವೃತ್ತಿಗಿಂತಲೂ ಪ್ರಬಲವಾಗುತ್ತದೆ.

**ಅಕ್ಷಸ್ಯ ಪಕ್ಷಪಾತಸ್ತು ಸಾಕ್ಷಾದ್ ಭೇದೇ ಪ್ರದೃಶ್ಯತೇ ।**
**ಕಾಮಾಚ್ಚ ನಾನುಮಾಪೇಕ್ಷೇತ್ಯುಕ್ತೇಃ ಶುಷ್ಕಾನುಮಾऽಫಲಾ ॥ ೧೯೧ ॥**

**ಅರ್ಥ–** ಅಕ್ಷಸ್ಯ = ಪ್ರತ್ಯಕ್ಷದ, ಪಕ್ಷಪಾತ= ಪಕ್ಷಪಾತವಾದರೂ, ಭೇದೇ= ಜೀವೇಶ್ವರ ಭೇದದಲ್ಲಿಯೇ, ಸಾಕ್ಷಾತ್ = ಸ್ಪಷ್ಟವಾಗಿ, ಪ್ರದೃಶ್ಯತೇ = ತೋರುತ್ತದೆ. ಕಾಮಾಚ್ಚ ನಾನುಮಾಪೇಕ್ಷೇತ್ಯುಕ್ತೇಃ = ಕಾಮಾಚ್ಚ ನಾನುಮಾನಾಪೇಕ್ಷಾ ಎಂಬ ಬ್ರಹ್ಮಸೂತ್ರದಿಂದ, ಶುಷ್ಕ = ಪ್ರತ್ಯಕ್ಷ ಅಥವಾ ಆಗಮಗಳ ಬೆಂಬಲವು ಇಲ್ಲದಿರುವ, ಅನುಮಾ = ಅನುಮಾನ ಪ್ರಮಾಣವು, ಅಫಲಾ = ವ್ಯರ್ಥವಾದದ್ದು.

**ಅನುವಾದ–** ಪ್ರತ್ಯಕ್ಷವಾದರೂ ಸಾಕ್ಷಾತ್ ಭೇದವನ್ನೇ ಪ್ರತಿಪಾದನೆ ಮಾಡುತ್ತದೆ ಎಂಬುದು ಸ್ಪಷ್ಟವಾಗಿದೆ. ಕಾಮಾಚ್ಚ ನಾನುಮಾಪೇಕ್ಷಾ ಎಂಬ ಬ್ರಹ್ಮಸೂತ್ರವು ಶುಷ್ಕ ತರ್ಕವನ್ನು ನಿರಾಕರಣೆ ಮಾಡುತ್ತದೆ.

**ವಿವರಣೆ–** ಜೀವಬ್ರಹ್ಮ ಅಭೇದವಿಷಯದಲ್ಲಿ ಪ್ರತ್ಯಕ್ಷವು ವಿರುದ್ಧವಾಗಿಯೇ ಇದೆ. ನಾಹಂ ಸರ್ವಜ್ಞಃ 'ನಾಹಂ ಸರ್ವಕರ್ತಾ' ಎಂಬ ಪ್ರತ್ಯಕ್ಷವು ಈಶ್ವರನ ಭೇದವನ್ನೇ ವಿಷಯೀಕರಿಸುತ್ತದೆ. ಇನ್ನು ಕೇವಲ ಅನುಮಾನದಿಂದಲೂ ಅಭೇದವನ್ನು ಸಾಧಿಸಲು ಸಾಧ್ಯವಿಲ್ಲ. ಶ್ರುತಿ ಮತ್ತು ಪ್ರತ್ಯಕ್ಷಗಳ ಬಲವಿಲ್ಲದ ಅನುಮಾನವು ಯಾವ ಸಾಧ್ಯವನ್ನೂ ಸಾಧಿಸಿಕೊಡಲಾರದಷ್ಟೇ? ಆದ್ದರಿಂದ ಜೀವಬ್ರಹ್ಮಾಭೇದ ವಿಷಯದಲ್ಲಿ ಯಾವ ಶ್ರುತಿಯಾಗಲೀ, ಪ್ರತ್ಯಕ್ಷವಾಗಲೀ, ಅನುಮಾನವಾಗಲೀ ಇಲ್ಲವೆಂದು ಸಿದ್ಧವಾಗುತ್ತದೆ.

**ತಸ್ಮಾತ್ ತ್ವದೈಕ್ಯಗಾಥಾಯಾ ಮಾನಂ ಮೂಲಂ ನ ದೃಶ್ಯತೇ ।**
**ಕೃಷ್ಣಸ್ನೇಹವಿನಾಶಾಯ ಸಾ ನಿರ್ಮೂಲಾ ಲತೈವ ತೇ ॥ ೧೯೨ ॥**

**ಅರ್ಥ–** ತಸ್ಮಾತ್ = ಆದ್ದರಿಂದ, ತ್ವದೈಕ್ಯಗಾಥಾಯಾ = ನಿನ್ನ ಜೀವಬ್ರಹ್ಮೈಕ್ಯವೆಂಬ ಕಥೆಗೆ, ಮೂಲಂ = ಆಧಾರವಾದ, ಮಾನಂ = ಸಮಾನವು, ನ ದೃಶ್ಯತೇ = ಎಲ್ಲಿಯೂ ಕಾಣುವುದಿಲ್ಲ. ತೇ = ನಿನ್ನ ಸಾ = ಆ ಐಕ್ಯವೆಂಬ ಕಥೆಯು, ಕೃಷ್ಣಸ್ನೇಹವಿನಾಶಾಯ = ಕೃಷ್ಣ= ಭಗವಂತನಲ್ಲಿಇರುವ, ಸ್ನೇಹ = ಭಕ್ತಿಯ (ಮೈಗೆ ಹಚ್ಚಿಕೊಂಡ ಎಣ್ಣೆಯ), ವಿನಾಶಾಯ = ನಾಶಮಾಡುವುದಕ್ಕಾಗಿ (ನಾಶಮಾಡುವುದಕ್ಕಾಗಿ ಹೊರಟ) ನಿರ್ಮೂಲಾ ಲತ ಏವ = ನಿರ್ಮೂಲ ಎಂಬ ಬಳ್ಳಿಯಂತೆ ಇದೆ.

**ಅನುವಾದ–** ಆದ್ದರಿಂದ ನಿನ್ನ ಐಕ್ಯ ಕಥೆಗೆ ಮೂಲವೇ ಇಲ್ಲವೆಂದು ತೋರುತ್ತದೆ. ಅದು ಕೃಷ್ಣ ಸ್ನೇಹವನ್ನು ವಿನಾಶ ಮಾಡಲು ಹೊರಟ ನಿರ್ಮೂಲ ಲತೆಯೇ ಸರಿ.

**ಭಾವವಿಲಾಸಿನೀ–** ತೇ ತವ । ಕೃಷ್ಣಸ್ನೇಹವಿನಾಶಾಯ ಭಕ್ತಿವಿನಾಶಾಯ । ತೈಲನಾಶಾಯೇತಿ ಧ್ವನಿಃ । ಸಾ ಐಕ್ಯಗಾಥಾ । ನಿರ್ಮೂಲಲತೇತಿ ಸಂಬಂಧಃ । ಮೂಲರಹಿತಾ ಕಾಚನಲತಾ ಗುಲ್ಮಾ-

ದಿಷು ತಿಷ್ಠತಿ । ತದ್ರಸೇನ ಅಂಗಾಭ್ಯಕ್ತತೈಲನಾಶೋ ಭವತೀತಿ ಲೋಕಪ್ರಸಿದ್ಧಿಃ । ತದ್ವದಿಯಮಪಿ ತವ ಕೃಷ್ಣಸ್ನೇಹವಿನಾಶಾಯ ನಿರ್ಮೂಲಲತೈವೇತಿ ಭಾವಃ ॥ ೧೯೧-೧೯೨ ॥

**ವಿವರಣೆ–** ಐಕ್ಯ ಕಥೆಯು ಮೇಲೆ ಹೇಳಿದಂತೆ ನಿರ್ಮೂಲವಾಗಿದೆ. ನಿರ್ಮೂಲ ಲತೆ ಎಂಬ ಒಂದು ಬಳ್ಳಿಯಿದೆ. ಅದು ಭೂಮಿಯನ್ನು ಸ್ಪರ್ಶ ಮಾಡದೆ ಉಳಿದ ಗಿಡಗಳ ಮೇಲೆ ಬೆಳೆದುಕೊಂಡಿರುತ್ತದೆ. ಅದರ ರಸವನ್ನು ಮೈಗೆ ಉಚ್ಚಿದರೆ ತೈಲವು ನಾಶವಾಗುತ್ತದೆ ಎಂಬ ಪ್ರತೀತಿ ಇದೆ. ಹಾಗೆ ಐಕ್ಯ ಕಥೆಯು ನಿರ್ಮೂಲ ಲತೆ ಇದ್ದಂತೆ. ಅದನ್ನು ಅವಲಂಬಿಸಿದರೆ ಭಗವದ್ಭಕ್ತಿಯೇ ನಾಶವಾಗುತ್ತದೆ. ಭಕ್ತಿಯೂ ಸ್ನೇಹರೂಪವಷ್ಟೇ? ಐಕ್ಯವನ್ನು ಅಂಗೀಕಾರ ಮಾಡಿದರೆ ದೇವರಲ್ಲಿ ಭಕ್ತಿಯನ್ನು ಮಾಡಬೇಕಾದ ಯಾವ ಗುಣವೂ ಇಲ್ಲವಾದ್ದರಿಂದ ಅವನಲ್ಲಿ ಭಕ್ತಿ ಉಂಟಾಗುವುದಿಲ್ಲ. ಆದ್ದರಿಂದ ನಿನ್ನ ಐಕ್ಯ ಕಥೆಯು ಕೃಷ್ಣಭಕ್ತಿಯನ್ನು ನಾಶ ಮಾಡುವ ಒಂದು ನಿರ್ಮೂಲಲತೆಯಿದ್ದಂತೆ.

ಪದದ್ವಯೋಕ್ತಯೋರೈಕ್ಯೇ ವಿರೋಧಾನ್ನಾಸ್ತಿ ತೇ ಶ್ರುತಿಃ ।
ಐಕ್ಯಂ ನ ಮುಖ್ಯತೋಽರ್ಥಃ ಸ್ಯಾಲ್ಲಕ್ಷ್ಯತ್ವೇ ಪದಯೋರ್ದ್ವಯೋಃ ॥೧೯೩॥

**ಅರ್ಥ–** ಪದದ್ವಯೋಕ್ತಯೋಃ= ತತ್ ಮತ್ತು ತ್ವಂ ಎಂಬ ಎರಡು ಪದಗಳಿಂದ ಹೇಳಲ್ಪಟ್ಟ ಬ್ರಹ್ಮ ಮತ್ತು ಜೀವರಿಗೆ, ಐಕ್ಯೇ = ಅಭೇದವನ್ನು ಒಪ್ಪಿದರೆ, ವಿರೋಧಾತ್ = ಪ್ರತ್ಯಕ್ಷ ಮತ್ತು ಆಗಮಗಳ ವಿರೋಧ ಬರುವುದರಿಂದ, ತೇ = ನಿನಗೆ (ನಿನ್ನ ಅದ್ವೈತವನ್ನು ಸಮರ್ಥಿಸಲು) ಶ್ರುತಿಃ = ಯಾವುದೇ ವೇದವಾಕ್ಯವು, ನ ಅಸ್ತಿ = ಇಲ್ಲ. ದ್ವಯೋಃ ಪದಯೋಃ = ಆ ಎರಡು ಪದಗಳಿಗೆ, ಲಕ್ಷ್ಯತ್ವೇ = (ಐಕ್ಯವು) ಲಕ್ಷ್ಯಾರ್ಥವಾದ, ಐಕ್ಯಂ= ಚೈತನ್ಯೈಕ್ಯವು, ಮುಖ್ಯತಃ ಅರ್ಥಃ = ಮುಖ್ಯಾರ್ಥವು, ಸ್ಯಾತ್ = ಆಗಬಾರದು. (ಲಕ್ಷ್ಯಾರ್ಥವೇ ಆದೀತು).

**ಅನುವಾದ–** ತತ್ ತ್ವಂ ಪದಗಳಿಂದ ಹೇಳಲ್ಪಟ್ಟ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳಿದರೆ ವಿರೋಧವು ಬರುವುದರಿಂದ ಅಂತಹ ಐಕ್ಯವನ್ನು ಹೇಳಲು ನಿನಗೆ ಯಾವ ಶ್ರುತಿಯೂ ಇಲ್ಲ. ತತ್ ತ್ವಂ ಈ ಎರಡು ಪದಗಳಿಗೂ ಲಕ್ಷಣಾವನ್ನು ಮಾಡಿ ಐಕ್ಯವನ್ನು ಹೇಳಿದರೆ ಆ ಐಕ್ಯವು ಮುಖ್ಯಾರ್ಥವಲ್ಲ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯೈಕ್ಯಶ್ರುತೇರ್ದೌರ್ಬಲ್ಯಮುಪಪಾದಯತಿ ॥ **ಪದದ್ವಯೇತಿ** ॥ ೧೯೩ ॥

ಅಮುಖ್ಯಾರ್ಥಂ ಚ ಮುಖ್ಯಾರ್ಥಭೇದಶ್ರುತಿಶತಾರ್ದಿತಾ ।
ಕಥಂ ವಕ್ತಿ ಶ್ರುತಿರ್ಮುಖ್ಯಾಮುಖ್ಯಯೋರ್ಮುಖ್ಯತಃ ಫಲಮ್॥ ೧೯೪ ॥

**ನಾಮುಖ್ಯಾನ್ನ ಹಿ ಹರ್ಯಕ್ಷಸ್ಯಾಗ್ರೇ ಹರಿಣಗರ್ಜಿತಮ್ ।**
**ಚಿನ್ಮಾತ್ರೈಕ್ಯೇ ನ ಕಾಪ್ಯಸ್ತಿ ಶ್ರುತಿರಿತ್ಯಶ್ರುತಂ ಹಿ ತತ್ ॥ ೧೯೫ ॥**

**ಅರ್ಥ–** ಮುಖ್ಯಾರ್ಥಭೇದಶ್ರುತಿ ಶತಾರ್ದಿತಾ = ಮುಖ್ಯಾರ್ಥವಾದ ಭೇದವನ್ನು ಹೇಳುವ, ಶ್ರುತಿಶತ= ನೂರಾರು ವಾಕ್ಯಗಳಿಂದ, ಅರ್ದಿತಾ = ಪೀಡಿಸಲ್ಪಟ್ಟ, ಶ್ರುತಿಃ = (ಮೇಲ್ನೋಟಕ್ಕೆ ಐಕ್ಯವನ್ನು ಪ್ರತಿಪಾದನೆ ಮಾಡುವಂತೆ ಕಾಣುವ) ತತ್ವಮಸಿ ಎಂಬ ಶ್ರುತಿಯು, ಅಮುಖ್ಯಾರ್ಥಂ ಚ = ಲಕ್ಷ್ಯಾರ್ಥವಾದ ಜೀವಬ್ರಹ್ಮೈಕ್ಯವನ್ನಾದರೂ, ಕಥಂ = ಹೇಗೆ, ವಕ್ತಿ = ಹೇಳುತ್ತದೆ. ಮುಖ್ಯಾಮುಖಯೋಃ = ಮುಖ್ಯ ಮತ್ತು ಅಮುಖ್ಯ ಸಂಗತಿಗಳಲ್ಲಿ, ಮುಖ್ಯತಃ = ಮುಖ್ಯವಾದ ಸಂಗತಿಯಿಂದಲೇ, ಫಲಂ = ಪ್ರಯೋಜನವು, ಅಸ್ತಿ = ಇದೆ. ಅಮುಖ್ಯಾತ್ = ಅಮುಖ್ಯವಸ್ತುವಿನಿಂದ, ಫಲಂ = ಫಲವು, ನಹಿ = ಇಲ್ಲವಷ್ಟೇ. ಹರ್ಯಕ್ಷಸ್ಯ = ಸಿಂಹದ, ಅಗ್ರೇ = ಎದುರಿನಲ್ಲಿ, ಹರಿಣಗರ್ಜಿತಂ = ಜಿಂಕೆಯ ಆಕ್ರೋಶವು, ನ= ಪ್ರಯೋಜನಕಾರಿ ಆಗುವುದಿಲ್ಲ, ಚಿನ್ಮಾತ್ರಗಳ ಐಕ್ಯದ ವಿಷಯದಲ್ಲಿ ಕಾಪಿ = ಯಾವುದೇ, ಶ್ರುತಿಃ = ವೇದವಾಕ್ಯವು, ನ ಅಸ್ತಿ = ಇಲ್ಲ. ಇತಿ = ಈ ಕಾರಣದಿಂದ, ತತ್ = ಆ ಅದ್ವೈತವು, ಅಶ್ರುತಂ ಹಿ = ವೇದವಿರುದ್ಧವಾದದ್ದೂ ಆಗಿದೆಯಷ್ಟೇ.

**ಅನುವಾದ– ಅಮುಖ್ಯಾರ್ಥವಾದ ಐಕ್ಯವು ಮುಖ್ಯಾರ್ಥಪರವಾದ ನೂರಾರು ಭೇದ ಶ್ರುತಿಗಳಿಂದ ಪೀಠಿತವಾಗುವುದರಿಂದ ಶ್ರುತಿಯು ಹೇಗೆ ಅಮುಖ್ಯಾರ್ಥವನ್ನು ಹೇಳುತ್ತದೆ? ಮುಖ್ಯ ಮತ್ತು ಅಮುಖ್ಯಗಳ ಮಧ್ಯೆ ಮುಖ್ಯದಿಂದ ಫಲವಾಗುತ್ತದೆಯೇ ಹೊರತು ಅಮುಖ್ಯದಿಂದ ಫಲವಾಗುವುದಿಲ್ಲ. ಸಿಂಹ ಮತ್ತು ಜಿಂಕೆಗಳು ಜೊತೆಯಲ್ಲಿದ್ದರೆ ಸಿಂಹದ ಕಾರ್ಯವೇ ನಡೆಯುತ್ತದೆಯೇ ಹೊರತು ಜಿಂಕೆಯ ಕಾರ್ಯವು ನಡೆಯುವುದಿಲ್ಲ. ಕೇವಲ ಚಿನ್ಮಾತ್ರಕ್ಕೆ ಐಕ್ಯವನ್ನು ಹೇಳುವ ಯಾವ ಶ್ರುತಿಯೂ ಇಲ್ಲವೇ ಇಲ್ಲ. ಆದ್ದರಿಂದ ಚಿನ್ಮಾತ್ರೈಕ್ಯವು ಶ್ರುತಿ ಸಮ್ಮತಿ ಇಲ್ಲದುದು.**

**ಭಾವವಿಲಾಸಿನೀ–** ಅಮುಖ್ಯಾರ್ಥಂ ಅಮುಖ್ಯಯಾ ವೃತ್ತ್ಯಾಽರ್ಥರೂಪಮೈಕ್ಯಮ್ । ಪ್ರಾಕ್‌ಪದದ್ವಯೋದಿತವಿಶಿಷ್ಟೈಕ್ಯಾದರ್ಧಾಂಶತ್ಯಾಗೇನೈಕ್ಯಮಪಿ ಭಾಕ್ತಮಿತಿ ಭಾವಃ । ಶ್ರುತಿಃ ತತ್ತ್ವಮಸೀತ್ಯಾದಿ ಶ್ರುತಿಃ । ಮುಖ್ಯಾಮುಖ್ಯಯೋರ್ಮಧ್ಯೇ ಮುಖ್ಯೇ ಸಂಪ್ರತ್ಯಯ ಇತಿ ವಚನಾತ್ । ಮುಖ್ಯಾರ್ಥತ್ವೇನ ನಿರವಕಾಶತ್ವೇನ ಬಹುತ್ವೇನ ಚ ಪ್ರಬಲಾ ಭೇದಶ್ರುತಿಃ ಅಮುಖ್ಯಾರ್ಥತ್ವೇನ ದುರ್ಬಲಾಮೈಕ್ಯಶ್ರುತಿಮಾಭಾಸೀಕರೋತಿ । ಬ್ರಹ್ಮಚಿತ್ ಜೀವಚಿದಭಿನ್ನೇತಿ ಮುಖ್ಯಯಾ ವೃತ್ತ್ಯಾ ಚಿತೋರೇವಾಭೇದಪ್ರತಿಪಾದಿಕಾ ಶ್ರುತಿಸ್ತ್ರಿಲೋಕ್ಯೇಽಪಿ ನಾಸ್ತಿ । ಅತೋಽಪಿ ಗತಮದ್ವೈತಮತಮಿತಿ ಭಾವಃ ॥ ೧೯೪-೧೯೫ ॥

**ವಿವರಣೆ–** ಪದದ್ವಯಗಳಿಂದ ಶಬ್ದಶಕ್ತಿಯಿಂದ ವಿಶಿಷ್ಟೈಕ್ಯವು ಲಭ್ಯವಾದರೂ ಅದರ ಅರ್ಧಭಾಗವನ್ನು ತ್ಯಜಿಸಿ ಅಮುಖ್ಯವಾದ ಐಕ್ಯವನ್ನು ಹೇಳುತ್ತೇವೆಂದು ಹೇಳಿದರೆ ಆ ಐಕ್ಯವು

ಅಮುಖ್ಯವೇ ಆಗುತ್ತದೆ. ಮುಖ್ಯಾಮುಖ್ಯಯೋರ್ಮಧ್ಯೇ ಮುಖ್ಯೇ ಕಾರ್ಯಸಂಪ್ರತ್ಯಯಃ ಎಂಬ ನ್ಯಾಯವಿದೆ. ಮುಖ್ಯಾಮುಖ್ಯಗಳ ಮಧ್ಯದಲ್ಲಿ ಮುಖ್ಯದ ಕಾರ್ಯವೇ ನಿಷ್ಪನ್ನವಾಗುತ್ತದೆ ಎಂದು ಅರ್ಥ. ಭೇದ ಶ್ರುತಿಯು ಮುಖ್ಯಾರ್ಥವು ನಿರವಕಾಶವು ಮತ್ತು ಬಹುತ್ವವುಳ್ಳದ್ದು ಆಗಿರುವುದರಿಂದ ಪ್ರಬಲವಾಗಿದೆ. ಅದು ದುರ್ಬಲವಾದ ಐಕ್ಯಶ್ರುತಿಯನ್ನು ಅಭಾಸೀಕರಿಸುತ್ತದೆ. ಬ್ರಹ್ಮಚೈತನ್ಯವು ಜೀವಚೈತನ್ಯದಿಂದ ಅಭಿನ್ನವಾಗಿದೆ ಎಂದು ಹೇಳುವ ಶ್ರುತಿಯು ಮೂರು ಲೋಕಗಳಲ್ಲಿಯೂ ದೊರೆಯುವುದಿಲ್ಲ. ಆದ್ದರಿಂದ ನಿನಗೆ ಅಭಿಪ್ರೇತವಾದ ಅದ್ವೈತವು ಹೊರಟು ಹೋಗುತ್ತದೆ ಎಂದು ಅಭಿಪ್ರಾಯ.

**ಪ್ರವವ್ರಾಜ ತದದ್ವೈತಂ ತ್ವಮಿವಾಮ್ನಾಯಮಂದಿರಾತ್ ।**
**ಶಿರೋಮುಂಡಿತಮಸ್ಮಾಭಿರ್ಬಾಹ್ಯೇಭ್ಯೋ ಭೈಕ್ಷಮಾದದೇ ॥ ೧೮೬ ॥**

**ಅರ್ಥ–** ತತ್ = ಆ, ಅದ್ವೈತಂ = ಅದ್ವೈತವು (ಅದ್ವೈತವೆಂಬ ಪುರುಷನು) ತ್ವಂ ಇವ = ನಿನ್ನಂತೇ, ಆಮ್ನಾಯಮಂದಿರಾತ್ = ವೇದಮಂದಿರದಿಂದ, ಪ್ರವವ್ರಾಜ = ಹೊರಗೆ ಹೊರಟಿತು (ಸನ್ಯಾಸವನ್ನು ಸ್ವೀಕಾರ ಮಾಡಿತು), ಅಸ್ಮಾಭಿಃ = ದ್ವೈತಿಗಳಾದ ನಮ್ಮಿಂದ, ತಸ್ಯ = ಆ ಅದ್ವೈತವೆಂಬ ಪುರುಷನ, ಶಿರಃ = ತಲೆಯು, ಮುಂಡಿತಂ= ಬೋಳಿಸಲ್ಪಟ್ಟಿತು (ನಮ್ಮಿಂದ ಅದ್ವೈತವು ಖಂಡಿಸಲ್ಪಟ್ಟಿತು), ಅನಂತರಂ = ಆ ಬಳಿಕ, ತತ್ = ಆ ಅದ್ವೈತವೆಂಬ ಪುರುಷನು, ಬಾಹ್ಯೇಭ್ಯಃ = ವೇದಬಾಹ್ಯರಾದ ಬೌದ್ಧರಿಂದ, ಭೈಕ್ಷಮ್ = ಭಿಕ್ಷೆಯನ್ನು (ಬೌದ್ಧರ ಶೂನ್ಯತತ್ವದ ಎರವಲನ್ನು) ಆದದೇ = ಸ್ವೀಕರಿಸಿದನು.

**ಅನುವಾದ–** ಆ ಅದ್ವೈತವು ನಿನ್ನಂತೆ ವೇದಮಂದಿರದಿಂದ ಹೊರಗೆ ಹೊರಟು ಹೋಯಿತು. ನಮ್ಮಿಂದ ಅದು ಶಿರೋಮುಂಡನೆವನ್ನು ಹೊಂದಿ ವೇದಬಾಹ್ಯರಿಂದ ಭಿಕ್ಷೆಯನ್ನು ಸ್ವೀಕರಿಸಬೇಕಾಯಿತು.

**ಭಾವವಿಲಾಸಿನೀ–** ಸಾಹಿತ್ಯಮುದ್ರಯಾ ಪರಮುಪಹಸತಿ ॥ **ಪ್ರವವ್ರಾಜೇತಿ** ॥ ಆಮ್ನಾಯಾಖ್ಯಮಂದಿರಾತ್ । ಶಿರಃ ಶ್ರುತಿಶಿರೋರೂಪಂ ಐಕ್ಯಪ್ರತಿಪಾದಕತಯಾಽಭಿಮತಂ ವೇದಾಂತವಾಕ್ಯಮ್ । ಮುಂಡಿತಂ ಐಕ್ಯಮಸ್ತಕಾದುಚ್ಚಿದ್ಯಾನ್ಯತ್ರ ಸ್ಥಾಪಿತಮ್ । ಬಾಹ್ಯೇಭ್ಯಃ ವೇದಬಾಹ್ಯೇಭ್ಯಃ ಶೂನ್ಯವಾದಿಭ್ಯಃ ಸ್ವಪೋಷಕವೇದಾಂತವಾಕ್ಯಾಭಾವಾತ್ ಶೂನ್ಯವಾದಿ-ವಚನಾನ್ಯೇವ ಗತಿರಿತಿ ತತ್ರೈವ ಸ್ಥಿರಮಭೂದಿತಿ ಭಾವಃ ॥ ೧೮೬ ॥

**ವಿವರಣೆ–** ವೇದದಲ್ಲಿ ಎಲ್ಲಿಯೂ ಐಕ್ಯದ ಪ್ರಸಕ್ತಿ ಇಲ್ಲವಾದ್ದರಿಂದ ಐಕ್ಯವು ವೇದಬಾಹ್ಯವಾಗಿದೆ. ನೀನು ಐಕ್ಯಪರವೆಂದು ಹೇಳುವ ತತ್ತ್ವಮಸ್ಯಾದಿ ವಾಕ್ಯಗಳು ನಿನ್ನ ಪ್ರಕ್ರಿಯಾ ಶಿರೋರೂಪವಾಗಿದೆ. ನಾವು ಅದನ್ನು ನಿರಾಕರಣೆ ಮಾಡಿದುದರಿಂದ ಅದು ಮುಂಡಿತವಾದಂತೆ ಆಯಿತು. ಆದ್ದರಿಂದ ಬದುಕಲು ವೇದಬಾಹ್ಯರಿಂದ ಭಿಕ್ಷೆಯನ್ನು

ಸ್ವೀಕಾರ ಮಾಡಬೇಕಾಯಿತು. ಆದ್ದರಿಂದ ಸ್ಥಂಭಾದಿ ಪ್ರತ್ಯಯವು ಮಿಥ್ಯಾ ಪ್ರತ್ಯಯತ್ವಾತ್ ಶುಕ್ತಿರಜತಪ್ರತ್ಯಯವತ್ ಎಂಬ ಬೌದ್ಧರ ಉಕ್ತಿಯನ್ನು ಭಿಕ್ಷಾರೂಪವಾಗಿ ಸ್ವೀಕರಿಸಿ ಬದುಕಬೇಕಾದ ಪ್ರಸಂಗ ಉಂಟಾಯಿತು ಎಂದು ಇಲ್ಲಿ ಪರಿಹಾಸ ಮಾಡುತ್ತಾರೆ.

**ಸ್ವಶಿರಃಪಾತಿವೃಕ್ಷಸ್ಯ ಚ್ಛೇದೇನಾಧೋ ಮರಿಷ್ಯತಿ ।**
**ಭೇದೇ ಭಿನ್ನಾದಿಕಲ್ಪೋಕ್ತದೋಷೇಣ ಸ್ವೈಕ್ಯದೋಷವತ್ ॥ ೧೦೯೭ ॥**

**ಅರ್ಥ–** ಯಥಾ= ಹೇಗೆ, ಸ್ವಶಿರಃಪಾತಿವೃಕ್ಷಸ್ಯ = ತನ್ನ ತಲೆಯ ಮೇಲೆ ಬೀಳುವ ವೃಕ್ಷದ, ಚ್ಛೇದೇನ = ಕತ್ತರಿಸುವಿಕೆಯಿಂದ, ಅಧಃ = ಕೆಳಗೆ ನಿಂತಿರುವ, ಪುರುಷಃ = ಪುರುಷನು, ಮರಿಷ್ಯತಿ = ಸಾಯುತ್ತಾನೋ, ತಥಾ= ಅದೇ ರೀತಿಯಾಗಿ, ಸ್ವೈಕ್ಯದೋಷವತ್ = ತನ್ನ ಐಕ್ಯಕ್ಕೂ ಕೂಡ ಬೇರೆಯ ಅನವಸ್ಥಾದಿ ದೋಷಗಳಂತೇ, ಭೇದೇ = ಭೇದದ ವಿಷಯದಲ್ಲಿ, ಭಿನ್ನಾದಿಕಲ್ಪೋಕ್ತದೋಷೇಣ = ಭಿನ್ನ ಅಭಿನ್ನ ಇತ್ಯಾದಿ, ಕಲ್ಪ = ವಿಕಲ್ಪಪೂರ್ವಕವಾಗಿ, ಉಕ್ತ= ಹೇಳಲ್ಪಟ್ಟ, ದೋಷೇಣ = ಅನವಸ್ಥಾ (ಇತ್ಯಾದಿ) ದೋಷದಿಂದ, (ಅದ್ವೈತೀ = ಅದ್ವೈತಿಯು), ಮರಿಷ್ಯತಿ = ನಾಶಹೊಂದುತ್ತಾನೆ.

**ಅನುವಾದ–** ತನ್ನ ತಲೆಯ ಮೇಲೆ ಬೀಳುವ ವೃಕ್ಷವನ್ನು ಕಡಿಯುವ ಮನುಷ್ಯನು ವೃಕ್ಷದ ಕೆಳಗೆ ಮರಣ ಹೊಂದುತ್ತಾನೆ. ಭೇದವು ಭೇದಿಗಳಿಗಿಂತ ಭಿನ್ನವೋ, ಅಭಿನ್ನವೋ ಅಥವಾ ಭಿನ್ನಾಭಿನ್ನವೋ ಎಂದು ವಿಕಲ್ಪ ಮಾಡಿ ಹೇಳುವ ದೋಷಗಳೆಲ್ಲವೂ ನಿನ್ನ ಐಕ್ಯಕ್ಕೂ ಬರುತ್ತವೆ.

**ಭಾವವಿಲಾಸಿನೀ–** ಭೇದೋ ಭೇದಿಭ್ಯಾಂ ಭಿನ್ನೋ ವಾಽಭಿನ್ನೋ ವಾ ಭಿನ್ನಾಭಿನ್ನೋ ವೇತಿ ವಿಕಲ್ಪ್ಯ ಅನವಸ್ಥಾನ್ಯತರಮಾತ್ರಪರಿಶೇಷವಿರೋಧಾಖ್ಯದೂಷಣಮುಕ್ತ್ವಾ ಯತ್ ಖಂಡನಕಾರೇಣ ಭೇದದೂಷಣಂ ಕೃತಮ್ ತತ್ ಐಕ್ಯಂ ಬ್ರಹ್ಮಣೋ ಭಿನ್ನಮಭಿನ್ನಂ ಭಿನ್ನಾಭಿನ್ನಂ ವೇತಿ ವಿಕಲ್ಪ್ಯ ದೂಷಣಸ್ಯ ಚೈಕ್ಯೇಽಪಿ ಸಮತ್ವಾತ್ ದುರ್ನಿತಿರಿತ್ಯಾಹ – **ಸ್ವಶಿರ ಇತಿ** ॥ ಸ್ವಯಮೇವಾಧೋ-ಮರಿಷ್ಯತೀತ್ಯರ್ಥಃ । ಅಸ್ಯಾರ್ಥಸ್ಯ ಖಂಡನಕಾರ ಏವ ನಿದರ್ಶನಮಿತಿ ಭಾವೇನೋಕ್ತಮ್ ॥ **ಭೇದ ಇತಿ** ॥ ಆದಿಪದೇನಾಭಿನ್ನಭಿನ್ನಾಭಿನ್ನಯೋರ್ಗ್ರಹಣಮ್ । ಕಲ್ಪೋ ವಿಕಲ್ಪಃ ॥ ೧೦೯೭ ॥

**ವಿವರಣೆ–** ಖಂಡನಕಾರನು ಹೀಗೆ ವಿಕಲ್ಪವನ್ನು ಮಾಡಿ ಭೇದವನ್ನು ಖಂಡಿಸುತ್ತಾನೆ. ಭೇದವು ಭೇದಿಗಳಿಗಿಂತ ಭಿನ್ನವೋ, ಅಭಿನ್ನವೋ ಅಥವಾ ಭಿನ್ನಾಭಿನ್ನವೋ ಎಂದು. ಭೇದವು ಭೇದಗಳಿಗಿಂತ ಭಿನ್ನವಾದರೆ ಆ ಎರಡನೇ ಭೇದಕ್ಕೂ, ಭೇದಿಗಳಿಂದ ಭೇದವನ್ನು ಕಲ್ಪನೆ ಮಾಡಬೇಕಾಗುವುದರಿಂದ ಭೇದ ಪರಂಪರೆಯನ್ನು ಕಲ್ಪನೆ ಮಾಡುವುದರಿಂದ ಅನವಸ್ಥಾ ದೋಷವು ಬರುತ್ತದೆ. ಭೇದವು ಭೇದಿಗಳಿಗಿಂತ ಅಭಿನ್ನವಾದರೆ ಭೇದ ಮಾತ್ರ ಇರಲಿ ಅಥವಾ ಭೇದಿ ಮಾತ್ರ ಇರಲಿ ಎಂಬ ಪ್ರಸಂಗ ಬರುತ್ತದೆ. ಭೇದಾಭೇದವನ್ನು ಒಪ್ಪಿದರೆ ವಿರೋಧವು ಬರುತ್ತದೆ ಎಂದು ವಿಕಲ್ಪವನ್ನು ಮಾಡಿ ಭೇದವನ್ನು ಖಂಡಿಸಿದ್ದಾನೆ. ಆದರೆ

ಇದೇ ವಿಕಲ್ಪಗಳು ಅವನು ಅಂಗೀಕರಿಸುವ ಐಕ್ಯದ ವಿಷಯದಲ್ಲಿಯೂ ಉಂಟಾಗುತ್ತವೆ. ಅಭೇದವು ಅಭೇದಿಗಳಿಗಿಂತ ಭಿನ್ನವೋ, ಅಭಿನ್ನವೋ ಅಥವಾ ಅಭಿನ್ನಾಭಿನ್ನವೋ ಎಂದು ವಿಕಲ್ಪ. ಅಭೇದಿಗಳಿಗಿಂತ ಭಿನ್ನವಾದರೆ ಆ ಭೇದಕ್ಕೂ ಅಭೇದಿಗಳಿಗೂ ಏನು ಸಂಬಂಧ ಎಂದು ಕೇಳಿ ಅಲ್ಲಿಯೂ ಅನವಸ್ಥಾ ದೋಷವನ್ನು ಹೇಳಲು ಬರುತ್ತದೆ. ಅಭೇದವು ಅಭೇದಿಗಳಿಂದ ಅಭಿನ್ನವಾದರೆ ಅನ್ಯತರ ಪರಿಶೇಷ ರೂಪವಾದ ದೋಷವು ಇದೆ. ಅಭೇದಕ್ಕೂ ಮತ್ತು ಅಭೇದಿಗಳಿಗೂ ಭೇದಾಭೇದವನ್ನು ಅಂಗೀಕಾರ ಮಾಡಿದರೆ ನಮಗೆ ಹೇಳಿದ ವಿರೋಧವು ಅವರಿಗೂ ಬರುತ್ತದೆ. ಆದ್ದರಿಂದ ಹೀಗೆ ವಿಕಲ್ಪವನ್ನು ಮಾಡಿ ಭೇದವನ್ನು ಖಂಡಿಸುವುದು, ಬುಡದಲ್ಲಿ ನಿಂತು ತನ್ನ ತಲೆಯ ಮೇಲೆ ಬೀಳುವ ಮರವನ್ನು ಕಡಿದಂತೆ, ಅದರಿಂದ ತಾನೇ ನಾಶವನ್ನು ಹೊಂದುತ್ತಾನೆ. ಖಂಡನಕಾರನ ವಾದ ಈ ರೀತಿಯದು ಎಂದು ಅಭಿಪ್ರಾಯ.

**ಶಿಶೋರ್ಜಾತಸ್ಯ ಯಾ ರಕ್ಷಾಂ ಕುರುತೇ ಜನನೀ ಹಿ ಸಾ ।**
**ಸರ್ವಖಂಡನಕಾರಸ್ತು ಪೂತನಾಯಾಃ ಕುಮಾರಕಃ ॥ ೧೯೮ ॥**

**ಅರ್ಥ–** ಜಾತಸ್ಯ = ತನಗೆ ಹುಟ್ಟಿದ, ಶಿಶೋ = ಶಿಶುವಿನ, ರಕ್ಷಾಂ = ರಕ್ಷಣವನ್ನು, ಯಾ = ಯಾವ ಸ್ತ್ರೀಯು, ಕುರುತೇ = ಮಾಡುತ್ತಾಳೋ, ಸಾ ಏವ = ಅವಳೇ, ಜನನೀ ಹಿ = ನಿಜವಾದ ತಾಯಿಯಷ್ಟೇ, ಸರ್ವಖಂಡನಕಾರಸ್ತು = ಎಲ್ಲರನ್ನು ಖಂಡನೆ ಮಾಡಲು ಹೊರಟ ಈ ಅದ್ವೈತಿಯಾದರೂ (ಎಲ್ಲರನ್ನೂ ಖಂಡನೆ ಮಾಡಲು ಹೊರಟು ತನ್ನ ಶಿಶುವಿಗೆ ಸಮಾನವಾದ ತನ್ನ ಸಿದ್ಧಾಂತವನ್ನೇ ಖಂಡನೆಗೆ ಈಡು ಮಾಡಿಕೊಂಡ ಈ ಅದ್ವೈತಿಯಾದರೋ) ಪೂತನಾಯಾಃ = ತನ್ನ ಶಿಶುವನ್ನೇ ಹತ್ಯೆಮಾಡಲು ಹೊರಟ ಪೂತನೆಯ, ಕುಮಾರಕಃ = ಮಗನು ಆಗಿದ್ದಾನೆ.

**ಅನುವಾದ–** ಹುಟ್ಟಿದ ಮಗುವನ್ನು ಯಾವಳು ರಕ್ಷಣೆ ಮಾಡುತ್ತಾಳೆಯೋ ಅವಳು ಜನನಿ ಎನಿಸಿಕೊಳ್ಳುತ್ತಾಳೆ. ಎಲ್ಲವನ್ನೂ ಖಂಡನೆ ಮಾಡಲು ಹೊರಟವನು ಪೂತನಿಯ ಕುಮಾರನೇ ಸರಿ.

**ಭಾವವಿಲಾಸಿನೀ–** ಪುನಶ್ಚ ಖಂಡನಕಾರಮುಪಹಸತಿ – **ಶಿಶೋರಿತಿ** ॥ ೧೯೮ ॥

**ವಿವರಣೆ–** ತನ್ನ ಸಿದ್ಧಾಂತ ತನ್ನ ಮಗುವಿದ್ದಂತೆ. ಅದನ್ನಾದರೂ ತಾನು ರಕ್ಷಣೆ ಮಾಡಬೇಕು. ಸರ್ವವನ್ನೂ ಖಂಡನೆ ಮಾಡಲು ಹೊರಟವನು ಅದನ್ನೂ ಖಂಡನೆ ಮಾಡಿದರೆ ಅವನು ಪೂತನಿಯ ಕುಮಾರನೇ ಸರಿ.

**ಸರ್ವಂ ಖಂಡಯತೋಽಪ್ಯಸ್ಯ ಖಂಡನಂ ರಕ್ಷ್ಯಮೇವ ಹಿ ।**
**ಆತ್ಮಾ ಚ ರಕ್ಷ್ಯಸ್ತತ್ಕಾಲೇ ಭಿಕ್ಷಾಪಾತ್ರಂ ಕರೇ ಭವೇತ್ ॥ ೧೯೯ ॥**

**ಅರ್ಥ–** ಸರ್ವಂ = ಎಲ್ಲವನ್ನು, ಖಂಡಯತಃ = ಖಂಡನೆ ಮಾಡಲು ಹೊರಟ, ಅಸ್ಯ ಖಂಡನಂ ಅಪಿ = ಈ ಅದ್ವೈತಿಯು ಮಾಡಿದ ಬೇರೆಯ ಸಿದ್ಧಾಂತಗಳ ಖಂಡನವೂ ಕೂಡ, ರಕ್ಷ್ಯಂ ಏವ = ರಕ್ಷಿಸಲ್ಪಡಬೇಕಾದದ್ದೇ ಆಗಿದೆ. ಆತ್ಮಾ ಚ = ಅದ್ವೈತಿಯಾದ ತಾನೂ ಕೂಡ, ರಕ್ಷ್ಯಃ ಹಿ = ರಕ್ಷಿಸಲ್ಪಡಬೇಕಾಗಿದ್ದಾನಷ್ಟೇ. ತತ್ಕಾಲೇ = ಈ ಎರಡು ರಕ್ಷಣಗಳನ್ನು ಮಾಡುವ ಪ್ರಯತ್ನಿಸುವ ಕಾಲದಲ್ಲಿ, ಅಸ್ಯ = ಈ ಅದ್ವೈತಿಯ, ಕರೇ = ಕೈಯಲ್ಲಿ, ಭಿಕ್ಷಾಪಾತ್ರಂ = ಭಿಕ್ಷಾಪಾತ್ರವು ಭವೇತ್ = ಇರುತ್ತವೆ.

**ಅನುವಾದ–** ಎಲ್ಲವನ್ನೂ ಖಂಡನೆ ಮಾಡಲು ಹೊರಟವನು ತಾನು ಮಾಡಿದ ಖಂಡನೆಯನ್ನಾದರೂ ರಕ್ಷಣೆ ಮಾಡಬೇಕು ಮತ್ತು ತನ್ನನ್ನೂ ರಕ್ಷಣೆ ಮಾಡಿಕೊಳ್ಳಬೇಕು. ತನ್ನ ಖಂಡನೆಯನ್ನು ಮತ್ತು ತನ್ನನ್ನು ರಕ್ಷಣೆ ಮಾಡಿಕೊಳ್ಳುವ ಕಾಲದಲ್ಲಿ ಅವನಿಗೆ ಭಿಕ್ಷಾಪಾತ್ರೆಯೇ ಗತಿಯಾಗುತ್ತದೆ.

**ಭಾವವಿಲಾಸಿನೀ–** ಯುಕ್ತ್ಯಂತರಂ ಚಾಹ – **ಸರ್ವಮಿತಿ** ॥ ಖಂಡನಂ ಸರ್ವಖಂಡನಮ್ । ಏವಕಾರೇಣ ಖಂಡನರಕ್ಷಣಾಭಾವೇ ಸರ್ವಸ್ಯೋತ್ಥಾನಂ ಭವತೀತಿ ಸೂಚಯತಿ । ತತ್ಕಾಲೇ ಸರ್ವಖಂಡನಸ್ಯ ಆತ್ಮನಶ್ಚ ಪ್ರಮಾಣಾದಿನಾ ರಕ್ಷಣಕಾಲೇ ॥ ೧೦೯೯ ॥

**ವಿವರಣೆ–** ಎಲ್ಲವನ್ನೂ ಖಂಡನೆ ಮಾಡಲು ಹೊರಟವನು ತನ್ನ ಖಂಡನೆಯನ್ನು ರಕ್ಷಣೆ ಮಾಡದಿದ್ದರೆ ಅವನು ಖಂಡನೆ ಮಾಡಿದ ಮತಗಳೆಲ್ಲವೂ ಮೇಲೇಳುತ್ತದೆ. ಆದ್ದರಿಂದ ತನ್ನ ಖಂಡನೆಯನ್ನು ರಕ್ಷಣೆ ಮಾಡಿಕೊಳ್ಳಬೇಕು. ಅದಕ್ಕಾಗಿ ತನ್ನನ್ನೂ ರಕ್ಷಣೆ ಮಾಡಿಕೊಳ್ಳಬೇಕು. ಅವನು ಎಲ್ಲಾ ಪ್ರಮಾಣಗಳನ್ನೂ ನಿರಾಕರಿಸಿದ ಮೇಲೆ ತನ್ನ ಖಂಡನೆಯ ರಕ್ಷಣೆಯನ್ನೂ, ತನ್ನ ರಕ್ಷಣೆಯನ್ನೂ ಪ್ರಮಾಣಗಳಿಂದಲೇ ಮಾಡಿಕೊಳ್ಳಬೇಕು. ಆದರೆ ಎಲ್ಲಾ ಪ್ರಮಾಣಗಳನ್ನೂ ನಿರಾಕರಿಸುವುದರಿಂದ ಬೇರೆಯವರ ಪ್ರಮಾಣವನ್ನು ಭಿಕ್ಷೆಯಾಗಿ ತಂದು ಅದರಿಂದ ತನ್ನ ರಕ್ಷಣೆಯನ್ನು ಮಾಡಿಕೊಳ್ಳಬೇಕಾಗುತ್ತದೆ ಎಂದು ಇಲ್ಲಿ ಅಪಹಾಸವನ್ನು ಮಾಡುತ್ತಾರೆ.

**ಪರನ್ಯಾಯೈಃ ಪರೋ ದೂಷ್ಯಃ ಸ್ವಾರ್ಥಃ ಸಾಧ್ಯೋ ಮತೋ ಯದಿ ।**
**ಯಾಚಿತಾ ಅಪಿ ತೇ ನ್ಯಾಯಾಃ ಸನ್ನ್ಯಾಯಾ ವಾ ನ ವಾ ವದ ॥ ೧೧೦೦ ॥**

**ಅರ್ಥ–** ಪರನ್ಯಾಯೈಃ = ಬೇರೆಯವರು ಒಪ್ಪಿದ ನ್ಯಾಯಗಳಿಂದ, ಪರಃ = ಪ್ರತಿಪಕ್ಷಿಯು, ದೂಷ್ಯಃ = ಖಂಡಿಸಲ್ಪಡಬೇಕು, ಚ = ಮತ್ತು, ಸ್ವಾರ್ಥಃ = ತನ್ನ ಸಿದ್ಧಾಂತವು, ಸಾಧ್ಯಃ = ಸಮರ್ಥಿಸಲ್ಪಡಬೇಕು, ಇತಿ = ಎಂಬುದಾಗಿ, ಯದಿ = ಒಂದು ಪಕ್ಷದಲ್ಲಿ, ತೇ = ನಿನಗೆ, ಮತಃ = ಅಭಿಪ್ರೇತವಾಗಿದ್ದರೆ, ಯಾಚಿತಾ ಅಪಿ = ಬೇರೆಯವರಿಂದ ಬೇಡಲ್ಪಟ್ಟ, ತೇ = ನಿನ್ನ, ನ್ಯಾಯಾ ಅಪಿ = ನ್ಯಾಯಗಳಾದರೂ, ಸನ್ನ್ಯಾಯಾ ವಾ = ನಿರ್ದುಷ್ಟನ್ಯಾಯಗಳಾಗಿವೆಯೇ,

ವಾ = ಅಥವಾ, ನ = ನಿರ್ದುಷ್ಟ ನ್ಯಾಯಗಳಾಗಿಲ್ಲವೋ, ಇತಿ = ಎಂಬುದಾಗಿ, ವದ = ಹೇಳು.

**ಅನುವಾದ–** ಪರನ್ಯಾಯಗಳಿಂದಲೇ ಪರರ ದೂಷಣವನ್ನು ಮಾಡಬೇಕು, ನಮ್ಮ ಮತದ ರಕ್ಷಣೆಯನ್ನೂ ಮಾಡಿಕೊಳ್ಳಬೇಕು ಎಂಬ ಅಭಿಪ್ರಾಯವಿರುವುದಾದರೆ ಪರರಿಂದ ಬೇಡಿ ತಂದ ಆ ನ್ಯಾಯಗಳು ನಿರ್ದುಷ್ಟವಾದ ನ್ಯಾಯಗಳೇ ಅಥವಾ ದುಷ್ಟವಾದ ನ್ಯಾಯಗಳೇ ಎಂದು ಹೇಳು.

**ಭಾವವಿಲಾಸಿನೀ–** ಪರನ್ಯಾಯೈಃ ಪರೋ ದೂಷ್ಯತೇ ಸ್ವಾರ್ಥಶ್ಚ ಸಾಧ್ಯತ ಇತಿ ಖಂಡನಕಾರಸ್ಯಾಭಿಮಾನಂ ಖಂಡಯತಿ ॥ **ಪರನ್ಯಾಯೈರಿತಿ** ॥ ತೇ ನ್ಯಾಯಾಃ ಪರನ್ಯಾಯಾಃ ॥ ೧೧೦೦ ॥

**ವಿವರಣೆ–** ಪರನ್ಯಾಯಗಳಿಂದಲೇ ಪರರ ಖಂಡನೆಯನ್ನು, ತನ್ನ ಮತದ ಸ್ಥಾಪನೆಯನ್ನು ಮಾಡಿಕೊಳ್ಳುತ್ತೇನೆ ಎಂದು ಖಂಡನಕಾರನ ಅಭಿಪ್ರಾಯವಿದೆ. ಅದನ್ನು ಇಲ್ಲಿ ಖಂಡಿಸುತ್ತಾರೆ.

**ಸನ್ನ್ಯಾಯಾಶ್ಚೇಜ್ಜಿತಂ ತೇನ ದುರ್ನ್ಯಾಯಾ ಅಪಿ ಚೇಜ್ಜಿತಮ್ ।**
**ಸ್ವೇಷ್ಟಾಪುಷ್ಟೇಃ ಕಿಮು ವ್ಯೋಮನೀಲಿಮ್ನಾ ಸೋಮನೀಲಿಮಾ ॥ ೧೧೦೧ ॥**

**ಅರ್ಥ–** ಯಾಚಿತಾ = ತರಲ್ಪಟ್ಟ, ತೇ = ಆ ನ್ಯಾಯಗಳು, ಸನ್ನ್ಯಾಯಾಃ ಚೇತ್ = ನಿರ್ದುಷ್ಟನ್ಯಾಯಗಳಾದರೇ, ತೇ = ಅವುಗಳು, ದುರ್ನ್ಯಾಯಾ ಚೇತ್ ಅಪಿ = ದುಷ್ಟ ನ್ಯಾಯಗಳಾದರೂ ಕೂಡ, ಸ್ವೇಷ್ಟಾಪುಷ್ಟೇಃ = ಸ್ವ = ಅದ್ವೈತಿಯಾದ ತನ್ನ, ಇಷ್ಟಾ = ಇಷ್ಟವಾದ ಸಿದ್ಧಾಂತದ, ಅಪುಷ್ಟೇಃ = ಸಮರ್ಥನವು ಆಗಲ್ಲಿಲ್ಲವಾದ್ದರಿಂದ, ತೇನ = ಆ ಪ್ರತಿಪಕ್ಷಿಯಿಂದ, ಜಿತಂ = ಗೆಲ್ಲಲ್ಪಟ್ಟಿತು. ವ್ಯೋಮನೀಲಿಮ್ನಾ = ಕೇವಲ ತೋರಿಕೆಯಾದ, ವ್ಯೋಮಾ = ಆಕಾಶದ, ನೀಲಿಮ್ನಾ = ನೀಲಬಣ್ಣದಿಂದ, ಸೋಮನೀಲಿಮಾ = ಸೋಮ–ಚಂದ್ರನ, ನೀಲಿಮಾ– ನೀಲಬಣ್ಣವು, ಕಿಮು = ಉಂಟಾಗುತ್ತದೆಯೇ?

**ಅನುವಾದ–** ಪರನ್ಯಾಯಗಳು ನಿರ್ದುಷ್ಟವಾದ ನ್ಯಾಯಗಳಾದರೆ ನಿನ್ನ ಮತಕ್ಕೆ ಆ ನ್ಯಾಯ ವಿರೋಧವಿರುವುದರಿಂದ ನಿನ್ನ ಮತವು ಬಿದ್ದುಹೋಯಿತು. ಪರನ್ಯಾಯಗಳು ದುರ್ನ್ಯಾಯಗಳಾದರೆ, ಅದರಿಂದ ಯಾವ ಅರ್ಥವನ್ನೂ ಸಾಧಿಸಲು ಸಾಧ್ಯವಿಲ್ಲವಾದ ಕಾರಣ ನಿನ್ನ ಮತವನ್ನೂ ಸಮರ್ಥನೆ ಮಾಡಲು ಆಗುವುದಿಲ್ಲ. ಆಭಾಸವಾದ ಗಗನದ ನೀಲಿ ಬಣ್ಣವು ಚಂದ್ರನಲ್ಲಿ ನೀಲಿ ಬಣ್ಣವನ್ನು ಉಂಟುಮಾಡುವುದೇ?

**ಭಾವವಿಲಾಸಿನೀ–** ತೇನ ಪ್ರಮಾಣಾದಿವ್ಯವಸ್ಥಾಮಂಗೀಕುರ್ವತಾ । ಜಿತಂ ತೇನೈವ ಜಿತಮ್ । ಕಥಮಿತ್ಯತ ಉಕ್ತಮ್ ॥ **ಸ್ವೇಷ್ಟಾಪುಷ್ಟೇರಿತಿ** ॥ ಸ್ವೇಷ್ಟಸ್ಯ ಸ್ವಾಭಿಮತಸ್ಯ ಸರ್ವಖಂಡನಸ್ಯ ಆತ್ಮನಶ್ಚ

ಅಪುಷ್ಟೇಃ ಅಸಿದ್ಧೇರಿತ್ಯರ್ಥಃ । ದುರ್ನ್ಯಾಯಸ್ಯ ಸಾಧಕತ್ವಾಯೋಗಾತ್ । ಸಾಧಕತ್ವೇ ಚ ಸ್ವಾಭೀಷ್ಟವತ್ ಪರಾಭಿಮತಪ್ರಮೇಯಸ್ಯಾಪಿ ಸಿದ್ಧಿಪ್ರಸಂಗಾದಿತಿ ಭಾವಃ । ದುರ್ನ್ಯಾಯಸ್ಯಾಸಾಧಕತ್ವೇ ದೃಷ್ಟಾಂತಮಾಹ – ಕಿಮು ಇತಿ ॥ ಗಗನನೈಲ್ಯಸ್ಯೈವಾಭಾಸತ್ವಾತ್ ಯಥಾ ತೇನ ಸೋಮನೀಲಿಮಾ ನ ಭವತಿ । ತಥಾ ದುರ್ನ್ಯಾಯಾ ಅಪಿ ಸಾಧಕಾ ನ ಭವಂತೀತ್ಯರ್ಥಃ ॥ ೧೧೦೧ ॥

ವಿವರಣೆ– ಪರರಿಂದ ಬೇಡಿ ತಂದ ನ್ಯಾಯಗಳು ಸಮೀಚೀನವಾದರೂ ಅಥವಾ ದುಷ್ಟವಾದರೂ ಅದರಿಂದ ತನ್ನ ಮತವು ಉಳಿಯುವುದಿಲ್ಲ. ಸ್ವಯಂ ಆಭಾಸರೂಪವಾದ ನ್ಯಾಯಗಳು ಏನನ್ನೂ ಸಾಧಿಸುವುದಿಲ್ಲ. ಆಕಾಶದ ನೀಲಿ ವರ್ಣವೇ ಆಭಾಸವಾದುದು. ಅದು ಚಂದ್ರನಲ್ಲಿ ನೀಲಿ ಬಣ್ಣವನ್ನು ಉಂಟುಮಾಡಲಾರದು ಹೇಗೋ ಹಾಗೇ ತಾನೇ ಆಭಾಸವಾದ ನ್ಯಾಯವು ಏನನ್ನೂ ಸಮರ್ಥಿಸಲಾರದು. ಆ ನ್ಯಾಯಗಳು ಸಮೀಚೀನವಾದ ನ್ಯಾಯಗಳಾದರಂತೂ ನಿನ್ನ ಮತಕ್ಕೆ ಆ ನ್ಯಾಯಗಳ ವಿರೋಧವಿರುವುದರಿಂದ ನಿನ್ನ ಮತವು ಎಂದೂ ಸಿದ್ಧವಾಗುವುದಿಲ್ಲ. ಹೀಗೆ ಎರಡು ಪಕ್ಷಗಳಲ್ಲೂ ನಿನ್ನ ಮತವು ಬಿದ್ದು ಹೋಗುತ್ತದೆ ಎಂದು ಉಪಪಾದನೆ ಮಾಡುತ್ತಾರೆ.

**ಉಷ್ಟ್ರಃ ಕಂಟಕಮೇವಾತ್ತಿ ತೃಣಂ ಗೌರ್ದರ್ದುರೋ ಮೃದಂ ।**
**ಶಿಲಾಕಣಾನ್ ಕಪೋತೋಽತ್ತಿ ಸ್ವಯಂ ಶಾಲ್ಯೋದನಪ್ರಿಯಃ ॥ ೧೧೦೨ ॥**

**ಅರ್ಥ–** ಉಷ್ಟ್ರಃ = ಒಂಟೆಯು, ಕಂಟಕಂ ಏವ = ಮುಳ್ಳನ್ನೇ, ಅತ್ತಿ = ತಿನ್ನುತ್ತದೆ, ಗೌಃ = ಹಸುವು, ತೃಣಂ ಏವ = ಹುಲ್ಲನ್ನೇ, ಅತ್ತಿ = ತಿನ್ನುತ್ತದೆ, ದರ್ದುರಃ = ಕಪ್ಪೆಯು, ಮೃದಂ ಏವ = ಮಣ್ಣನ್ನೇ, ಅತ್ತಿ = ತಿನ್ನುತ್ತದೆ. ಕಪೋತಃ = ಪಾರಿವಾಳವು, ಶಿಲಾಕಣಾನ್ ಏವ = ಕಲ್ಲಿನ ತುಣುಕುಗಳನ್ನೇ, ಅತ್ತಿ = ತಿನ್ನುತ್ತದೆ, ತ್ವಂ ಸ್ವಯಂ = ಅದ್ವೈತಿಯಾದ ನೀನು ಮಾತ್ರ, ಶಾಲ್ಯೋದನಪ್ರಿಯಃ = ಶಾಲ್ಯನ್ನವನ್ನು ಭೋಜನ ಮಾಡುವ ಆಸಕ್ತಿಯುಳ್ಳವನು ಆಗಿರುವಿ.

**ಅನುವಾದ– ಒಂಟೆಯು ಮುಳ್ಳುಗಳನ್ನೇ ತಿನ್ನುತ್ತದೆ, ಗೋವು ಹುಲ್ಲನ್ನು ತಿನ್ನುತ್ತದೆ, ಕಪ್ಪೆಯು ಮಣ್ಣನ್ನು ತಿನ್ನುತ್ತದೆ, ಕಪೋತವು ಕಲ್ಲಿನ ಚೂರುಗಳನ್ನು ತಿನ್ನುತ್ತದೆ, ನೀನು ಮಾತ್ರ ಶಾಲ್ಯೋದನವನ್ನು ಊಟಮಾಡುತ್ತೀಯೆ.**

**ಭಾವವಿಲಾಸಿನೀ–** ಕಿಂಚ ಪರನ್ಯಾಯೈಃ ಸ್ವಾರ್ಥಂ ಸಾಧಯಾಮೀತ್ಯಾಶಾಮಾತ್ರಂ ವಸ್ತುತಸ್ತನ್ನ ಘಟತ ಇತ್ಯಾಹ – **ಉಷ್ಟ್ರ ಇತ್ಯಾದಿನಾ** ॥ ಸ್ವಯಂ ಖಂಡನಕಾರಃ । ಪರನ್ಯಾಯೇನ ಸ್ವಾರ್ಥಂ ಸಾಧಯತಿ ಚೇತ್ ಉಷ್ಟ್ರಾದಿವತ್ ಕಂಟಕಾದಿಭಕ್ಷಣೇನೈವ ಸ್ವೋದರಂ ಪೂರಯೇದಿತಿ ಭಾವಃ ॥ ೧೧೦೨ ॥

**ವಿವರಣೆ–** ಪರನ್ಯಾಯದಿಂದ ಸ್ವಾರ್ಥವನ್ನು ಸಾಧಿಸುತ್ತೇನೆ ಎಂದು ಹೇಳುವ ಖಂಡನಕಾರನನ್ನು ಇಲ್ಲಿ ಅಪಹಾಸ ಮಾಡುತ್ತಾರೆ. ಬೇರೆ ಬೇರೆ ಪ್ರಾಣಿಗಳು ಬೇರೆ ಬೇರೆ

ಆಹಾರಗಳನ್ನು ಸೇವಿಸುತ್ತದೆ. ನೀನು ಪರ ರೀತಿಯನ್ನು ಅನುಸರಿಸುವುದಾದರೆ ಒಂಟೆಯಂತೆ ನೀನು ಮುಳ್ಳುಗಳನ್ನು ತಿಂದು ಹೊಟ್ಟೆಯನ್ನು ತುಂಬಿಕೊಳ್ಳಬೇಕಾದ ಪ್ರಸಂಗವು ಬರುತ್ತದೆ ಎಂದು ಅಪಹಾಸ ಮಾಡುತ್ತಾರೆ.

**ಗೋಪುಚ್ಛಗ್ರಹಣೇನಾಪಿ ಗೋಷ್ಠಪ್ರಾಪ್ತಿರ್ಭವೇತ್ ತವ ।**
**ಗೋಷ್ಠಾತ್ತು ಸ್ವಗೃಹಪ್ರಾಪ್ತ್ಯೈ ಸ್ವಯಮೇವ ಯತೇತ ಹಿ ॥ ೧೧೦೩ ॥**

**ಅರ್ಥ–** ಗೋಪುಚ್ಛಗ್ರಹಣೇನ ಅಪಿ = ಗೋವಿನ ಬಾಲವನ್ನು ಹಿಡಿದರೂ ಕೂಡ, ತವ = ನಿನಗೆ, ಗೋಷ್ಠಪ್ರಾಪ್ತಿಃ= ದನಗಳ ಕೊಟ್ಟಿಗೆಯ ತಲುಪುವಿಕೆಯು, ಭವೇತ್ = ಆದೀತು. ಗೋಷ್ಠಾತ್ = ದನಗಳ ಕೊಟ್ಟಿಗೆಯಿಂದ, ಸ್ವಗೃಹಪ್ರಾಪ್ತ್ಯೈ ತು = ತನ್ನ ಮನೆಗೆ ಹೋಗಲಿಕ್ಕಾದರೂ, ಸ್ವಯಮೇವ = ತಾನೇ, ಯತೇತ ಹಿ = ಪ್ರಯತ್ನ ಪಡಬೇಕಷ್ಟೇ.

**ಅನುವಾದ– ಗೋವಿನ ಪುಚ್ಛವನ್ನು ಹಿಡಿದುಕೊಂಡರೆ ನಿನಗೆ ಗೋಷ್ಠದ ಪ್ರಾಪ್ತಿಯಾಗಬಹುದು. ಆದರೆ ಗೋಷ್ಠದಿಂದ ನಿನ್ನ ಮನೆಗೆ ಹೋಗುವುದಕ್ಕೆ ನೀನೇ ಪ್ರಯತ್ನ ಮಾಡಬೇಕಾಗುತ್ತದೆಯಷ್ಟೇ?**

**ಭಾವವಿಲಾಸಿನೀ– ಕಿಂಚ ಪ್ರಮಾಣಾದಿಲಕ್ಷಣವ್ಯವಸ್ಥಾಮಾತ್ರಸ್ಯ ಪರಕೀಯಗ್ರಂಥಚ್ಛಾಯಯಾ ಕರ್ತುಂ ಶಕ್ಯತ್ವೇಽಪಿ ಸ್ವಾಭಿಮತಪ್ರಮೇಯಸಿದ್ಧೌ ಪರೈಃ ಪ್ರಮಾಣಸ್ಯಾನುದಿತತ್ವಾತ್ ತದರ್ಥಂ ಸ್ವೇನೈವ ಪ್ರಯತಿತವ್ಯಮಿತ್ಯತ್ರ ದೃಷ್ಟಾಂತಮಾಹ – ಗೋಪುಚ್ಛೇತಿ ॥ ೧೧೦೩ ॥**

**ವಿವರಣೆ–** ಪ್ರಮಾಣ ಲಕ್ಷಣ ವ್ಯವಸ್ಥೆಯನ್ನು ಪರಕೀಯ ಗ್ರಂಥದಂತೆ ಮಾಡಲು ಸಾಧ್ಯವಿದ್ದರೂ ನಿನ್ನ ಪ್ರಮೇಯಗಳನ್ನು ಸಾಧಿಸಲು ಪರರು ಪ್ರಮಾಣವನ್ನು ಉಪನ್ಯಾಸ ಮಾಡದೇ ಇರುವುದರಿಂದ ಆದಕ್ಕಾಗಿ ನೀನೇ ಪ್ರಯತ್ನ ಪಡಬೇಕಾಗುತ್ತದೆ ಎಂದು ದೃಷ್ಟಾಂತ ಪೂರ್ವಕವಾಗಿ ಹೇಳಿದ್ದಾರೆ. ಗೋಪುಚ್ಛವನ್ನು ಹಿಡಿದುಕೊಂಡು ಹೊರಟರೆ ಗೋವಿನ ಮನೆಗೆ ತಲುಪಬಹುದು. ಹಾಗೇ ಪರಕೀಯ ಪ್ರಮಾಣ ವ್ಯವಸ್ಥೆಯನ್ನು ಅನುಸರಿಸಿ ಹೊರಟರೆ ಪರಕೀಯ ಪ್ರಮೇಯವನ್ನು ತಲುಪಬಹುದು. ಆದರೆ ನಿನ್ನ ಮನೆಯನ್ನು ತಲುಪಲು ನೀನೇ ಪ್ರಯತ್ನ ಪಡಬೇಕಾಗುವಂತೆ ನಿನ್ನ ಸಿದ್ಧಾಂತವನ್ನು ಸ್ಥಾಪಿಸಲು ನೀನೇ ಪ್ರಮಾಣವನ್ನು ಉದಾಹರಿಸಬೇಕು ಎಂದು ತಾತ್ಪರ್ಯ.

**ಅಭೇದಾರ್ಥೇ ಬಾಧಿತೇ ತು ಶ್ರುತೇರನ್ಯಾರ್ಥತಾಂ ಪರಃ ।**
**ಬ್ರೂತೇ ಪರಸ್ಯ ನ್ಯಾಯೇಽಸ್ಮಿಂಸ್ತ್ವಂ ಕಸ್ಮಾನ್ನ ಪ್ರವರ್ತಸೇ ॥ ೧೧೦೪ ॥**

**ಅರ್ಥ–** ಶ್ರುತೇಃ = ವೇದಕ್ಕೆ, ಅಭೇದಾರ್ಥೇ = ಅಭೇದವೆಂಬ ಅರ್ಥವು, ಬಾಧಿತೇ = ಬಾಧಿತವಾದಾಗ, ಪರಸ್ತು = ಪ್ರತಿವಾದಿಯಾದರೂ, ಶ್ರುತೇಃ = ವೇದಕ್ಕೆ, ಅನ್ಯಾರ್ಥತಾಂ = ಬೇರೊಂದು ಅರ್ಥವನ್ನು ಬ್ರೂತೇ = ಹೇಳುತ್ತಾನೆ, ತ್ವಂ =

ಪರನ್ಯಾಯದಿಂದಲೇ ಪರರನ್ನು ಖಂಡನೆ ಮಾಡಬೇಕೆನ್ನುವ ನೀನು, ಅಸ್ಮಿನ್ = ಈ ವೇದಾರ್ಥ ವಿಚಾರದಲ್ಲಿ, ಪರಸ್ಯ = ಪ್ರತಿವಾದಿಯ, ನ್ಯಾಯೇ = ನ್ಯಾಯದಲ್ಲಿ, ಕಸ್ಮಾತ್ = ಯಾವ ಕಾರಣದಿಂದ, ನ ಪ್ರವರ್ತಸೇ = ಪ್ರವೃತ್ತಿ ಮಾಡುವುದಿಲ್ಲ.

**ಅನುವಾದ–** ಶ್ರುತಿಗೆ ಅಭೇದರೂಪವಾದ ಅರ್ಥವು ಬಾಧಿತವಾದಾಗ ಪರನು ಅನ್ಯಾರ್ಥವನ್ನು ಹೇಳುತ್ತಾನೆ. ಪರನ್ಯಾಯವನ್ನು ಸ್ವೀಕರಿಸುವ ನೀನು ಈ ನ್ಯಾಯವನ್ನು ಏಕೆ ಸ್ವೀಕರಿಸುವುದಿಲ್ಲ?

**ಭಾವವಿಲಾಸಿನೀ–** ಸ್ವಯಂ ಶಾಲ್ಯೋದನಪ್ರಿಯ ಇತ್ಯುಕ್ತನ್ಯಾಯಂ ತದೀಯಶಾಸ್ತ್ರಾರ್ಥೇಽಪಿ ದರ್ಶಯತಿ– ಅಭೇದಾರ್ಥ ಇತ್ಯಾದಿನಾ ॥ ಅಸ್ಮಿನ್ ಬಾಧಿತಾರ್ಥಪರಿತ್ಯಾಗರೂಪೇ ॥೧೧೦೪॥

**ವಿವರಣೆ–** ಹಿಂದೆ ಸ್ವಯಂ ಶಾಲ್ಯೋದನ ಪ್ರಿಯಃ ಎಂಬಲ್ಲಿ ಹೇಳಿದ ನ್ಯಾಯವನ್ನು ಇಲ್ಲಿ ಅವರ ಶಾಸ್ತ್ರದಲ್ಲಿಯೂ ಅತಿದೇಶ ಮಾಡಿತೋರಿಸುತ್ತಾರೆ. ಅಭೇದಾರ್ಥವು ಬಾಧಿತವಾದಾಗ ಅದನ್ನು ಅದ್ವೈತಿಗಳನ್ನು ಬಿಟ್ಟು ಬೇರೆ ಯಾರೂ ಅಂಗೀಕರಿಸುವುದಿಲ್ಲ. ಹೀಗಿರುವಾಗ ಪರನ್ಯಾಯವನ್ನು ಸ್ವೀಕಾರ ಮಾಡುತ್ತೇವೆ ಎನ್ನುವುದಕ್ಕೆ ಏನು ಅರ್ಥ?

ವಿಚ್ಛಿದ್ಯ ಸಿಂಹಪುಚ್ಛಾದಿ ಪುರುಷಸ್ಯ ಕರಾದಿ ಚ ।
ತಯೋರೈಕ್ಯಂ ವದಂತಃ ಕೇ ಪರೇ ಯದ್ಯಾಚಕೋ ಭವಾನ್ ॥ ೧೧೦೫ ॥

**ಅರ್ಥ–** ಭವಾನ್ = ನೀನು, ಯದ್ಯಾಚಕಃ = ಯಾವ ಪರಮತದ ನ್ಯಾಯಗಳನ್ನು ಯಾಚನ ಮಾಡಿ ತಂದವನಾಗಿರುವಿಯೋ, ಸಿಂಹಪುಚ್ಛಾದಿ = ಸಿಂಹದ ಬಾಲ ಮೊದಲಾದವುಗಳನ್ನು, ವಿಚ್ಛಿದ್ಯ = ಕತ್ತರಿಸಿ, ಪುರುಷಸ್ಯ = ಮನುಷ್ಯನ, ಕರಾದಿ = ಕೈ-ಕಾಲು ಮೊದಲಾದವುಗಳನ್ನು, ಚ = ಕೂಡ, ವಿಚ್ಛಿದ್ಯ = ಕತ್ತರಿಸಿ, ತಯೋಃ= ಸಿಂಹ ಮತ್ತು ಮನುಷ್ಯರಿಗೆ, ಐಕ್ಯಂ = ಐಕ್ಯವನ್ನು, ವದಂತಃ = ಹೇಳುವ, ಕೇ = ಆ, ಪರೇ = ಪಶುಪಕ್ಷಿಗಳು, ಕೇ = ಯಾರು?

**ಅನುವಾದ–** ಸಿಂಹದ ಬಾಲ, ಪಾದಗಳನ್ನು ಕತ್ತರಿಸಿ ಹಾಗೆಯೇ ಪುರುಷನ ಕರಚರಣಾದಿಗಳನ್ನು ಕತ್ತರಿಸಿ ನೀನು ಹೇಳುವಂತೆ ಯಾರು ಐಕ್ಯವನ್ನು ಹೇಳುತ್ತಾರೆ? ಅವರಿಂದ ಯಾಚಿಸಿ ತೆಗೆದುಕೊಳ್ಳುತ್ತೇನೆ ಎಂದು ನೀನು ಹೇಳುವುದು ಹೇಗೆ?

**ಭಾವವಿಲಾಸಿನೀ–** ತಯೋರ್ಮುಂಡಿತಸಿಂಹಪುರುಷವ್ಯಕ್ತ್ಯೋಃ । ಯದ್ಯಾಚಕಃ ಯೇಷಾಂ ಪರೇಷಾಂ ಯಾಚಕಃ । ತೇ ಪರೇ ಕ ಇತಿ ಪೂರ್ವೇಣಾನ್ವಯಃ ॥ ೧೧೦೫ ॥

**ವಿವರಣೆ–** ಮುಂಡಿತವಾದ ಚೈತನ್ಯಗಳಿಗೆ ಐಕ್ಯವನ್ನು ನೀನು ಹೇಳುವಂತೆ ಬೇರೆ ಯಾರೂ ಹೇಳುವುದಿಲ್ಲ. ಹಾಗಿದ್ದರೆ ಸಿಂಹ ಪುರುಷಗಳನ್ನು ಮುಂಡನೆ ಮಾಡಿ ಅಲ್ಲಿಯೂ ಐಕ್ಯವನ್ನು ಹೇಳಬೇಕಾದ ಪ್ರಸಂಗವು ಬರುತ್ತದೆ.

**ಪರನ್ಯಾಯೈಃ ಪರೋ ಬೋಧ್ಯ ಇತಿ ವಾಙ್ಮಾತ್ರಮೇವ ತೇ ।**
**ಮಿಥ್ಯಾಭೂತಪ್ರಮಾಣೇನ ಕೋऽರ್ಥಸಿದ್ಧಿಂ ಪರೋ ವದೇತ್॥ ೧೧೦೬ ॥**

**ಐಕ್ಯವೇದಕವಾಕ್ಯಾನಾಂ ಮಾನತ್ವಂ ಕಃ ಪರೋ ವದೇತ್ ।**
**ಅನ್ಯೇಷಾಂ ವೇದಭಾಗಾನಾಮಮಾನತ್ವಂ ಚ ಕೋ ವದೇತ್ ।**
**ಶಬ್ದಾದೇವಾಪರೋಕ್ಷಂ ಚ ಕಃ ಪರೋ ವಕ್ತಿ ಭೂತಲೇ ॥ ೧೧೦೭ ॥**

**ಅರ್ಥ–** ಪರನ್ಯಾಯೈಃ = ಪರರ ನ್ಯಾಯಗಳಿಂದಲೇ, ಪರಃ = ಪ್ರತಿವಾದಿಯು, ಬೋಧ್ಯ = ತಿಳಿಸಲ್ಪಡಬೇಕು, ಇತಿ = ಎಂಬ ಸಂಗತಿಯು, ತೇ = ನಿನ್ನ, ವಾಂಙ್ಮಾತ್ರಂ ಏವ = ಬರಿಯ ಮಾತು ಆಗಿದೆ, ಮಿಥ್ಯಾಭೂತ ಪ್ರಮಾಣೇನ = ಮಿಥ್ಯಾಭೂತವಾದ ಪ್ರಮಾಣದಿಂದ, ಅರ್ಥಸಿದ್ಧ್ಯಂ = ಪ್ರಮೇಯದ ಸಿದ್ಧಿಯನ್ನು, ಕಃ ಪರಃ = ಯಾವ ಪರವಾದಿಯು, ವದೇತ್ = ಹೇಳುತ್ತಾನೆ. ಐಕ್ಯವೇದಕವಾಕ್ಯಾನಾಂ = ಐಕ್ಯವನ್ನು ತಿಳಿಸುವ ವೇದವಾಕ್ಯಗಳಿಗೆ, ಮಾನತ್ವಂ = ಸಮಾನತ್ವವನ್ನು, ಕಃ ಪರಃ = ಯಾವ ಪ್ರತಿವಾದಿಯು, ವದೇತ್ = ಹೇಳುತ್ತಾನೆ. ಅನ್ಯೇಷಾಂ = ಐಕ್ಯಪರವಲ್ಲದ ಬೇರೆಯ ವೇದಭಾಗಾನಾಂ = ವೇದವಾಕ್ಯಗಳಿಗೆ, ಅಮಾನತ್ವಂ ಚ = ಅಪ್ರಮಾಣತ್ವವನ್ನೂ ಕೂಡ, ಕಃ = ಯಾವ, ಪರಃ = ಪ್ರತಿವಾದಿಯು, ವದೇತ್ = ಹೇಳುತ್ತಾನೆ. ಕಶ್ಚ = ಮತ್ತು, ಶಬ್ದಾದೇವ = ಕೇವಲ ಶಬ್ದಪ್ರಮಾಣದಿಂದಲೇ, ಅಪರೋಕ್ಷಮ್ = ಅಪರೋಕ್ಷ ಜ್ಞಾನವನ್ನು, ಭೂತಲೇ = ಈ ಜಗತ್ತಿನಲ್ಲಿ ಕಃ ಪರಃ = ಯಾವ ಪ್ರತಿವಾದಿಯು, ವಕ್ತಿ = ಹೇಳುತ್ತಾನೆ.

**ಅನುವಾದ–** ಪರನ್ಯಾಯದಿಂದಲೇ ಪರನಿಗೆ ಪ್ರಮೇಯವನ್ನು ಸಮರ್ಥಿಸುತ್ತೇನೆ ಎಂಬ ನಿನ್ನ ಮಾತು ಕೇವಲ ಮಾತು ಮಾತ್ರ ಅಷ್ಟೇ. ಏಕೆಂದರೆ ನೀನು ಮಿಥ್ಯಾಭೂತವಾದ ಪ್ರಮಾಣದಿಂದ ಅರ್ಥವನ್ನು ಸಾಧಿಸುತ್ತೀಯೆ. ನಿನ್ನನ್ನು ಬಿಟ್ಟು ಬೇರೆ ಯಾರೂ ಪ್ರಮಾಣಗಳಿಗೆ ಮಿಥ್ಯಾತ್ವವನ್ನು ಸ್ವೀಕರಿಸುವುದಿಲ್ಲ. ಆದ್ದರಿಂದ ನಿನ್ನ ನ್ಯಾಯವು ಯಾವ ಪರನ್ಯಾಯ? ಐಕ್ಯವನ್ನು ಹೇಳುವ ವಾಕ್ಯಗಳಿಗೆ ಯಾವ ಪರನು ಪ್ರಾಮಾಣ್ಯವನ್ನು ಹೇಳುತ್ತಾನೆ? ಅದನ್ನು ಬಿಟ್ಟು ಉಳಿದ ವೇದಭಾಗಗಳಿಗೆ ಯಾವನು ಅಪ್ರಾಮಾಣ್ಯವನ್ನು ಹೇಳುತ್ತಾನೆ? ಶಬ್ದದಿಂದಲೇ ಅಪರೋಕ್ಷ ಜ್ಞಾನವನ್ನು ಭೂತಳದಲ್ಲಿ ಯಾವನು ಅಂಗೀಕರಿಸುತ್ತಾನೆ?

**ಭಾವವಿಲಾಸಿನೀ–** ಪ್ರಮೇಯಾಂತರೇಷ್ವಪಿ ದರ್ಶಯತಿ–ಮಿಥ್ಯಾಭೂತೇತ್ಯಾದಿನಾ ॥೧೧೦೭॥

**ವಿವರಣೆ–** ಮಿಥ್ಯಾಭೂತ ಪ್ರಮಾಣಕ್ಕೆ ಸಾಧಕತ್ವ, ಐಕ್ಯವಾಕ್ಯಗಳಿಗೆ ಪ್ರಾಮಾಣ್ಯ, ಉಳಿದ ವೇದಭಾಗಕ್ಕೆ ಅಪ್ರಾಮಾಣ್ಯ, ಶಬ್ದದಿಂದ ಅಪರೋಕ್ಷ ಜ್ಞಾನ ಇವೆಲ್ಲವೂ ಅದ್ವೈತಿಗಳು ಮಾತ್ರ ಒಪ್ಪುವ ವಿಷಯಗಳು. ಅವರನ್ನು ಬಿಟ್ಟು ಬೇರೆ ಯಾವ ವಾದಿಯೂ

ಇವುಗಳನ್ನು ಅಂಗೀಕರಿಸುವುದಿಲ್ಲ. ಆದ್ದರಿಂದ ಪರನ್ಯಾಯದಿಂದ ಪರರಿಗೆ ನನ್ನ ಪ್ರಮೇಯವನ್ನು ಸಮರ್ಥಿಸುತ್ತೇನೆ ಎಂಬ ನಿನ್ನ ಮಾತು ರಿಕ್ತವಾದುದು.

ಇತ್ಥಂ ನ್ಯಾಯಸ್ಯೈವ ಭೇದಾನ್ನಾನ್ಯಸ್ಯ ನ್ಯಾಯತಸ್ತವ ।
ಅರ್ಥಸಿದ್ಧಿರ್ಭವೇನ್ಮಂದ ಸ್ವನ್ಯಾಯಾನುಸೃತೌ ಚ ತೇ ।
ವಾಚ್ಯಾ ಸರ್ವಾ ವ್ಯವಸ್ಥಾಪಿ ತೇನಾಸ್ಥಾಪಿ ಮತಂ ಪರೈಃ ॥ ೧೧೦೮ ॥

**ಅರ್ಥ–** ಇತ್ಥಂ = ಈ ರೀತಿಯಾಗಿ, ನ್ಯಾಯಸ್ಯೈವ = ನ್ಯಾಯದ, ಭೇದಾತ್ = ಭಿನ್ನ-ಭಿನ್ನ ಮತಗಳಲ್ಲಿ ಭಿನ್ನ-ಭಿನ್ನ ವ್ಯವಸ್ಥೆಯು ಇರುವುದರಿಂದ, ಅನ್ಯಸ್ಯ = ಮತ್ತೊಬ್ಬನ, ನ್ಯಾಯತಃ = ನ್ಯಾಯದಿಂದ, ತವ = ನಿನ್ನ, ಅರ್ಥಸಿದ್ಧಿಃ = ಸಿದ್ಧಾಂತದ ಸಮರ್ಥನವು, ನ ಭವೇತ್ = ಆಗುವುದಿಲ್ಲ. ಮಂದ = ಮೂರ್ಖನೇ, ಸ್ವನ್ಯಾಯಾನುಸೃತೌ = ನಿನ್ನ ನ್ಯಾಯದ ಅನುಸರಣವೇ (ಅನ್ಯಾಯವಾಗಿರಲು), ತೇ = ನಿನ್ನ, ಸರ್ವಾ = ಎಲ್ಲಾ, ವ್ಯವಸ್ಥ ಅಪಿ = ಪ್ರಮಾಣ ವ್ಯವಸ್ಥೆಯೂ ಕೂಡ, ತ್ವಯಾ ಏವ = ನಿನ್ನಿಂದಲೇ, ವಾಚ್ಯಾ = ಹೇಳಲ್ಪಡಬೇಕು. ತೇ = ನಿನ್ನ ಮತಂ = ಸಿದ್ಧಾಂತವು, ಪರೈಃ = ಮತ್ತೊಬ್ಬರಿಂದ, ನ ಅಸ್ಥಾಪಿ = ಸ್ಥಾಪಿಸಲ್ಪಡಲಿಲ್ಲ.

**ಅನುವಾದ–** ಹೀಗೆ, ಆಯಾ ಮತಗಳ ನ್ಯಾಯವೇ ಭಿನ್ನವಾಗಿರುವುದರಿಂದ ಬೇರೆ ಮತದ ನ್ಯಾಯದಿಂದ ನಿನಗೆ ಅರ್ಥಸಿದ್ಧಿ ಉಂಟಾಗುವುದಿಲ್ಲ. ಎಲೈ ಮಂದನೇ! ಆದ್ದರಿಂದ ನೀನು ನಿನ್ನದೇ ನ್ಯಾಯವನ್ನು ಅನುಸರಿಸಬೇಕಾಗುತ್ತದೆ. ಆಗ ಎಲ್ಲಾ ವ್ಯವಸ್ಥೆಯನ್ನೂ ನೀನೇ ಹೇಳಬೇಕಾಗುತ್ತದೆ. ಏಕೆಂದರೆ ನಿನ್ನ ಪ್ರಮಾಣ ಪ್ರಮೇಯ ವ್ಯವಸ್ಥೆಯನ್ನು ಪರರು ಸ್ಥಾಪಿಸಿಲ್ಲ.

**ಭಾವವಿಲಾಸಿನೀ–** ಇತ್ಥಂ ಪೂರ್ವೋಕ್ತಪ್ರಕಾರೇಣ। ನ್ಯಾಯಸ್ಯ ಸ್ವನ್ಯಾಯಸ್ಯ। ಜಾತ್ಯೇಕವಚನಮ್। ಸ್ವನ್ಯಾಯಾನಾಮಿತ್ಯರ್ಥಃ । ಸ್ವನ್ಯಾಯಾನುಸೃತೌ ಸ್ವನ್ಯಾಯಾನಾಂ ಸ್ವಕಪೋಲಕಲ್ಪಿತಸಾಧಕ-ಪ್ರಮಾಣಾದ್ಯನುಸೃತೌ । ವ್ಯವಸ್ಥಾ ಪ್ರಮಾಣಲಕ್ಷಣಾದಿವ್ಯವಸ್ಥಾ । ಪರೇಣ ಹಿ ತತ್ತ್ವಾವೇದಕತ್ವಂ ಪ್ರಮಾಣಲಕ್ಷಣಮುದಿತಂ । ಶಬ್ದರೂಪಪ್ರಮಾಣಸ್ಯ ಚ ಶಾಬ್ದಪ್ರಮಾಣಜನಕತ್ವಮೇವ ಲಕ್ಷಣ-ಮುದಿತಮ್ । ಅತತ್ತ್ವಾವೇದಕಪ್ರಮಾಣಂ ಶಬ್ದಾದೇವಾಪರೋಕ್ಷಜ್ಞಾನಂ ಶಬ್ದಾದೇವ ನಿರ್ವಿಕಲ್ಪಕಂ ಚ ವದತಸ್ತವ ತಾನಿ ಲಕ್ಷಣಾನಿ ಮಾ ಭೂವನ್ । ಅತಸ್ತ್ವಯಾಪಿ ಪ್ರಮಾಣ-ಲಕ್ಷಣಾದಿಕಂ ಸ್ವಾಭೀಷ್ಟಸಾಧಕಪ್ರಮಾಣಾನಿ ಚ ಪೃಥಗೇವ ವಕ್ತವ್ಯಾನೀತಿ ಭಾವಃ । ತೇನ ಪರೇಣಾಪಿ ಪ್ರಮಾಣಾದಿವ್ಯವಸ್ಥಾಂಗೀಕಾರೇಣ । ಮತಂ ಪ್ರಮಾಣಾದಿವ್ಯವಸ್ಥಾಯಾಃ ಪ್ರಾಮಾಣಿಕತ್ವಮತಮ್ ॥ ೧೧೦೮ ॥

**ವಿವರಣೆ–** ನಿನ್ನ ಎಲ್ಲ ನ್ಯಾಯಗಳನ್ನೂ ನೀನೇ ಕಲ್ಪನೆ ಮಾಡಬೇಕಾಗುತ್ತದೆ. ಪರರು ತತ್ತ್ವಾವೇದಕತ್ವವು ಪ್ರಮಾಣ ಲಕ್ಷಣವೆಂದು, ಶಬ್ದವು ಕೇವಲ ಶಾಬ್ದಬೋಧ ಜನಕವೆಂದೂ, ಅತತ್ತ್ವಾವೇದಕವಾದುದು ಅಪ್ರಮಾಣವೆಂದೂ ಹೇಳಿದ್ದಾರೆ. ಇದೆಲ್ಲಾ ನಿನ್ನ ಅಭಿಮತ

ಪ್ರಮೇಯಗಳಿಗೆ ವಿರುದ್ಧವಾದವು. ಆದ್ದರಿಂದ ನಿನ್ನ ಅಭೀಷ್ಟ ಸಿದ್ಧಿಗಾಗಿ ನೀನೇ ಪ್ರಮಾಣ ವ್ಯವಸ್ಥೆಯನ್ನು ಹೇಳಬೇಕಾದ ಅವಶ್ಯಕತೆ ಇದೆ. ಇಲ್ಲಿ ಮೂಲಶ್ಲೋಕದಲ್ಲಿ 'ತೇನಾ ಸ್ಥಾಪಿ ಮತಂ ಪರೈಃ' ಎಂಬಲ್ಲಿ ತೇ, ಮತಂ, ಪರೈಃ ನ ಅಸ್ಥಾಪಿ ಎಂದು ಪದಚ್ಛೇದವನ್ನು ಮಾಡಿ ಅನ್ವಯವನ್ನು ಮಾಡಬೇಕು.

**ಸೋಯಮಿತ್ಯಾದಿ ವಾಕ್ಯೇಪಿ ನ ತ್ಯಾಗೋಸ್ತಿ ಪದಾರ್ಥಯೋಃ॥ ೧೧೦೯ ॥**

**ಅರ್ಥ–** ಸೋಯಂ ಇತ್ಯಾದಿ ವಾಕ್ಯೇ ಅಪಿ = ಸೋಯಂ ದೇವದತ್ತಃ ಇದೇ ಮೊದಲಾದ ವಾಕ್ಯದಲ್ಲಿಯೂ ಕೂಡ, ಪದಾರ್ಥಯೋಃ = ತತ್ ಮತ್ತು ಇದಂ ಪದಗಳ ಅರ್ಥಗಳ, ತ್ಯಾಗಃ = ಪರಿತ್ಯಾಗವು, ನ ಅಸ್ತಿ = ಇಲ್ಲ.

**ಅನುವಾದ– ಸೋಯಂ ದೇವದತ್ತಃ ಎಂಬ ವಾಕ್ಯದಲ್ಲಿಯೂ ಎರಡು ಪದಗಳ ಅರ್ಥಗಳ ತ್ಯಾಗವೂ ಇಲ್ಲ.**

**ವಿವರಣೆ–** ತತ್ ಪದ ಮತ್ತು ಏತತ್ ಪದ ಇವೆರಡಕ್ಕೂ ಸ್ವರೂಪ ಮಾತ್ರದಲ್ಲಿ ಲಕ್ಷಣಾ ಎಂದು ಅದ್ವೈತಿಗಳು ಹೇಳುತ್ತಾರೆ. ಅದೂ ಸರಿಯಲ್ಲವೆಂದು ಈ ಪ್ರಕರಣದಲ್ಲಿ ಗ್ರಂಥಕಾರರು ಸ್ಥಾಪಿಸುತ್ತಾರೆ. ತತ್ ಪದದ ಅರ್ಥ ತದ್ದೇಶಕಾಲ ಸಂಬಂಧ ಎಂದು ಇಟ್ಟುಕೊಂಡರೆ, ತದ್ದೇಶಕಾಲ ಸಂಬಂಧವು ಈಗ ಇಲ್ಲಿ ಇಲ್ಲದೇ ಇರುವುದರಿಂದ ತತ್ ಪದಕ್ಕೆ ಲಕ್ಷಣಾ ವನ್ನು ಸ್ವೀಕಾರ ಮಾಡಿದರೂ ಏತತ್ಪದಾರ್ಥವಾದ ಏತದ್ದೇಶಕಾಲ ಸಂಬಂಧವು ಪ್ರಯೋಗ ಕಾಲದಲ್ಲಿ ವಿಶೇಷ್ಯದಲ್ಲಿ ಇರುವುದರಿಂದ ಪರರೀತಿಯಿಂದಲೂ ಇಲ್ಲಿ ಲಕ್ಷಣಾ ಮಾಡಬೇಕಾದ ಅಗತ್ಯವಿಲ್ಲ.

**ಪ್ರಾಗ್ದೇಶಕಾಲಯೋಗಸ್ಯಾತೀತತ್ವಂ ವಕ್ತಿ ತತ್ಪದಂ ।**
**ಇದಂ ಪದಂ ತು ವಕ್ತ್ಯೇತದ್ದೇಶಕಾಲಾನುಬಂಧಿತಾಂ ॥ ೧೧೧೦ ॥**

**ಅರ್ಥ–** ತತ್ಪದಂ = ಸಃ ಎಂಬ ಪದವು, ಪ್ರಾಗ್ದೇಶಕಾಲಯೋಗಸ್ಯ = ಹಿಂದಿನ ದೇಶ ಮತ್ತು ಕಾಲಗಳ ಸಂಬಂಧದ, ಅತೀತತ್ವಂ = ಅತೀತತ್ವವನ್ನು, ವಕ್ತಿ = ಹೇಳುತ್ತವೆ, ಇದಂ ಪದಂ ತು = ಅಯಂ ಎಂಬ ಪದವಾದರೂ, ಏತದ್ದೇಶಕಾಲ ಅನುಬಂಧಿತಾಂ = ಈ ದೇಶ, ಈ ಕಾಲಗಳ ಸಂಬಂಧವನ್ನು, ವಕ್ತಿ = ಹೇಳುತ್ತದೆ.

**ಅನುವಾದ– ತತ್ಪದವು ಹಿಂದಿನ ದೇಶಕಾಲ ಸಂಬಂಧಕ್ಕೆ ಅತೀತತ್ವವನ್ನು ಹೇಳುತ್ತದೆ. ಇದಂ ಪದವು ಈ ದೇಶಕಾಲಗಳ ಸಂಬಂಧವನ್ನು ಹೇಳುತ್ತದೆ.**

**ಭಾವವಿಲಾಸಿನೀ–** ಸೋಽಯಂ ದೇವದತ್ತ ಇತ್ಯತ್ರ ಪದದ್ವಯಸ್ಯ ಸ್ವರೂಪಮಾತ್ರೇ ಲಕ್ಷಣೇತಿ ಪರಸ್ಯ ಪಕ್ಷಃ । ಸೋಪಿ ನ । ತದ್ದೇಶಕಾಲಾದೀನಾಮಿದಾನೀಮಭಾವೇನ ತತ್‌ಪದಮಾತ್ರೇ

ಲಕ್ಷಣಾಯಾಃ ಕಥಂಚಿದ್ವಕ್ತುಂ ಶಕ್ಯತ್ವೇಽಪಿ ಏತತ್ಪದಾರ್ಥಭೂತೈತದ್ದೇಶಕಾಲಸಂಯೋಗಸ್ಯ ವಾಕ್ಯಪ್ರಯೋಗಕಾಲೇಽಪಿ ವಿದ್ಯಮಾನತ್ವೇನ ಪರರೀತ್ಯಾಪ್ಯೇತತ್ಪದಲಕ್ಷಣಾಯಾಂ ಕಾರಣಾಭಾವಾತ್ । ವಿಚಾರ್ಯಮಾಣೇ ತು ಪದದ್ವಯೇಽಪಿ ನ ಲಕ್ಷಣೇತ್ಯಾಹ – ಸೋಽಯಮಿತಿ ॥ ೧೧೦೯-೧೧೧೦ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ತತ್ಪದಕ್ಕೆ ಲಕ್ಷಣಾ ಮಾಡಬೇಕಾಗುತ್ತದೆ ಎಂದು ಹೇಳಿದುದು ಕೇವಲ ಅಂಗೀಕಾರವಾದ. ವಸ್ತುತಃ ತತ್ಪದಕ್ಕೂ ಲಕ್ಷಣ ಮಾಡಬೇಕಾಗಿಲ್ಲ. ತತ್ಪದದ ಅರ್ಥ ಅತೀತ ದೇಶಕಾಲ ಸಂಬಂಧವಲ್ಲ. ಆ ದೇಶಕಾಲಗಳ ಸಂಬಂಧದ ಧ್ವಂಸವು ತತ್ಪದದ ಅರ್ಥ. ಆ ಧ್ವಂಸವು ಪೂರ್ವವೃತ್ತಿಯಾದ ದೇವದತ್ತನಲ್ಲಿ ಈಗಲೂ ಇರುವುದರಿಂದ ತತ್ಪದಕ್ಕೂ ಲಕ್ಷಣಾ ಮಾಡಬೇಕಾದ ಅಗತ್ಯವಿಲ್ಲ.

**ತದ್ದೇಶಕಾಲಯೋಗಸ್ಯ ಹ್ಯತ್ಯಯಂ ತತ್ಪದೋದಿತಂ ।**
**ಕಸ್ತ್ಯಜೇದನ್ಯದಸ್ತ್ಯೇವ ವಿಶೇಷಣಪದೋದಿತಂ ॥ ೧೧೧೧ ॥**

**ಅರ್ಥ–** ತದ್ದೇಶಕಾಲಯೋಗಸ್ಯ = ಆ ದೇಶ ಮತ್ತು ಕಾಲಗಳ, ಸಂಬಂಧಗಳ, ತತ್ಪದೋದಿತಂ = ಸಃ ಎಂಬ ಪದದಿಂದ ಹೇಳಲ್ಪಟ್ಟ, ಹ್ಯತ್ಯಯಂ = ಧ್ವಂಸವನ್ನು, ಕಃ = ಯಾರು, ತ್ಯಜೇತ್ ಹಿ = ಪರಿತ್ಯಾಗ ಮಾಡಿಯಾನು, ವಿಶೇಷಣಪದೋದಿತಂ = ಅಯಂ ಎಂಬ ವಿಶೇಷಣಪದದಿಂದ, ಉದಿತಂ = ಹೇಳಲ್ಪಟ್ಟ, ಅನ್ಯತ್ ಚ = ಏತದ್ದೇಶಕಾಲ ಸಂಬಂಧವೂ ಕೂಡ, ದೇವದತ್ತೇ = ದೇವದತ್ತನಲ್ಲಿ, ಅಸ್ತಿ ಏವ = ಇದ್ದೇ ಇದೆ.

**ಅನುವಾದ–** ತದ್ದೇಶಕಾಲ ಸಂಬಂಧ ಧ್ವಂಸವು ತತ್ಪದದ ಅರ್ಥ. ಇದನ್ನು ಯಾರು ತ್ಯಜಿಸುತ್ತಾರೆ? ಅಯಂ ಎಂಬ ಪದವು ಹೇಳುವ ಏತದ್ದೇಶಕಾಲ-ಸಂಬಂಧರೂಪವಾದ ವಿಶೇಷಣವು ದೇವದತ್ತನಲ್ಲಿ ಇದ್ದೇ ಇದೆ.

**ಭಾವವಿಲಾಸಿನೀ–** ತತ್ಪದಂ ತದಿತಿ ಪದಮ್ । ಅನ್ಯತ್ ಏತದ್ದೇಶಕಾಲಸಂಬಂಧಿತ್ವಮ್ । ಇದಾನೀಮತೀತೋ ಯಃ ಕಾಶೀದೇಶಕಾಲಸಂಬಂಧಃ ಸ ಏವ ತತ್ಪದಾರ್ಥಃ । ತಥಾ ಚ ಸೋಽಯಮಿತ್ಯತ್ರ ಸ ಇತ್ಯುಕ್ತ ಪ್ರಾಗಾಜ್ಞಾತಕಾಶೀದೇಶಕಾಲಸಂಬಂಧ ಧ್ವಂಸವಾನೇವಾಯಂ ನ ತ್ವನ್ಯ ಇತಿ ವಾಕ್ಯಾರ್ಥಪರ್ಯವಸಾನಂ ಸ್ಯಾತ್ । ಅನ್ಯಥಾ ಕಾಶೀಸ್ಥಸ್ಯ ಚಾಸ್ಯ ಚೈಕ್ಯಾಸಿದ್ಧಿಃ । ದೇವದತ್ತಸ್ವರೂಪಮಾತ್ರಸ್ಯ ಚ ಅಯಮಿತಿ ಪದೇನೈವ ಬೋಧಯಿತುಂ ಶಕ್ಯತ್ವಾತ್ ಪದಾಂತರವೈಯರ್ಥ್ಯಂ ಚ ಸ್ಯಾದಿತಿ ಭಾವಃ ॥ ೧೧೧೧ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದುದನ್ನೇ ಈ ಶ್ಲೋಕದಲ್ಲಿ ವಿವರಿಸುತ್ತಾರೆ. ತತ್ಪದಕ್ಕೆ ಕಾಶಿ ದೇಶಕಾಲ ಸಂಬಂಧ ಧ್ವಂಸವು ಅರ್ಥವೆಂದು ಇಟ್ಟುಕೊಳ್ಳೋಣ. ಆಗ 'ಕಾಶೀದೇಶಕಾಲ ಸಂಬಂಧ ಧ್ವಂಸವಾನ್ ಅಯಂ ದೇವದತ್ತಃ' ಎಂದು ವಾಕ್ಯಾರ್ಥವು

ಪರ್ಯವಸಾನವನ್ನು ಹೊಂದುತ್ತದೆ. ಪ್ರತ್ಯಭಿಜ್ಞೆಯು ಯಾವಾಗಲೂ ಅಭೇದವನ್ನು ಹೇಳುವುದರಿಂದ ಕಾಶೀ ದೇಶಕಾಲ ಸಂಬಂಧ ಧ್ವಂಸವಾನೇವಾಯಂ ನ ತ್ವನ್ಯಃ' ಎಂದು ಸಿದ್ಧವಾಗುವುದರಿಂದ ಐಕ್ಯವು ಸಿದ್ಧವಾಗುತ್ತದೆ. ಎರಡು ಪದಕ್ಕೂ ಲಕ್ಷಣಾವನ್ನು ಸ್ವೀಕರಿಸಿ ದೇವದತ್ತ ಸ್ವರೂಪವನ್ನು ಮಾತ್ರ ಹೇಳುವುದಾದರೆ ಒಂದೇ ಪದದಿಂದಲೇ ದೇವದತ್ತ ಸ್ವರೂಪವು ಜ್ಞಾತವಾದಾಗ ಇನ್ನೊಂದು ಪದವೇ ವ್ಯರ್ಥವಾಗುತ್ತದೆ.

ವಿಶೇಷ್ಯಪದವಾಚ್ಯಸ್ಯ ತ್ವೀಷತ್ತ್ಯಾಗೋಪಿ ನೇಷ್ಯತೇ ।
ವಾಕ್ಯೇಽಸ್ಮಿನ್ನನ್ಯವಾಕ್ಯೇ ತು ಮೃದ್ಘಟಃ ಸ್ವರ್ಣಮೇವ ಹಿ ।
ಕರ್ಣಭೂಷಣಮಿತ್ಯಾದ್ಯೇ ನೈಕತ್ಯಾಗೋಽಪಿ ವಿದ್ಯತೇ ॥ ೧೧೧೨ ॥

**ಅರ್ಥ–** ಅಸ್ಮಿನ್ = ಈ, ವಾಕ್ಯೇ = ಸೋಯಂ ದೇವದತ್ತಃ ಎಂಬ ವಾಕ್ಯದಲ್ಲಿ, ವಿಶೇಷ್ಯಪದವಾಚ್ಯಸ್ಯ ತು = ವಿಶೇಷ್ಯ ಪದ = ದೇವದತ್ತ ಎಂಬ ಪದದಿಂದ, ವಾಚ್ಯಸ್ಯ = ವಾಚ್ಯನಾದ ದೇವದತ್ತನೆಂಬ ಅರ್ಥದ, ಇಷತ್ ಅಪಿ = ಸ್ವಲ್ಪವೂ ಕೂಡ, ತ್ಯಾಗಃ = ತ್ಯಾಗವು, ನ ಇಷ್ಯತೇ = ಅಭಿಪ್ರೇತವಾಗಿಲ್ಲ ಚ = ಮತ್ತು, ಮೃತ್ ಏವ ಘಟಃ = ಸ್ವರ್ಣಮ್ ಏವ ಕರ್ಣಭೂಷಣಂ, ಇತ್ಯಾದ್ಯೇ = ಇವೇ ಮೊದಲಾದ, ಅನ್ಯವಾಕ್ಯೇ ತು = ಅಭೇದ-ವಾಕ್ಯದಲ್ಲಿಯಾದರೂ, ಏಕತ್ಯಾಗಃ ಅಪಿ = ಒಂದು ಅರ್ಥದ ತ್ಯಾಗವೂ ಕೂಡ, ನ ವಿದ್ಯತೇ= ಇರುವುದಿಲ್ಲ.

**ಅನುವಾದ–** ಈ ವಾಕ್ಯದಲ್ಲಿ ವಿಶೇಷ್ಯ ಪದವಾಚ್ಯವಾದ ಅರ್ಥದಲ್ಲಿ ಯಾವ ಅಂಶದ ತ್ಯಾಗವನ್ನೂ ಸ್ವೀಕರಿಸುವುದಿಲ್ಲ. ಮೃದ್ಘಟಃ ಸ್ವರ್ಣಮೇವ ಕರ್ಣ ಭೂಷಣಂ ಇತ್ಯಾದಿ ವಾಕ್ಯಗಳಲ್ಲಿ ಯಾವ ಅಂಶವನ್ನೂ ತ್ಯಾಗ ಮಾಡುವುದಿಲ್ಲ.

**ಭಾವವಿಲಾಸಿನೀ–** ವಿಶೇಷ್ಯಪದವಾಚ್ಯಸ್ಯ ದೇವದತ್ತಪದವಾಚ್ಯಸ್ಯೇತ್ಯರ್ಥಃ । ಮಾಯಿನಸ್ತು ತದ್‌ಬ್ರಹ್ಮ ತ್ವಮಸೀತ್ಯತ್ರ ವಿಶೇಷ್ಯಪದವಾಚ್ಯಬ್ರಹ್ಮತ್ವಸ್ಯಾಪಿ ತ್ಯಾಗೋಽಸ್ತಿ । ಅತೋಽಪಿ ನೇದಂ ತಸ್ಯೋದಾಹರಣಮಿತಿ ಭಾವಃ । ಅಸ್ಮಿನ್‌ವಾಕ್ಯೇ ಸೋಽಯಂ ದೇವದತ್ತ ಇತಿ ವಾಕ್ಯೇ । ಇತ್ಯಾದ್ಯೇ ಅನ್ಯವಾಕ್ಯೇ ಇತಿ ಸಂಬಂಧಃ । ಅನ್ಯವಾಕ್ಯೇ ಐಕ್ಯಪ್ರತಿಪಾದಕವಾಕ್ಯಾಂತರೇ । ಏಕ-ತ್ಯಾಗೋಽಪಿ ಏಕಪದವಾಚ್ಯಸ್ಯಾಪಿ ತ್ಯಾಗ ಇತ್ಯರ್ಥಃ । ಮೃತ್ತ್ವಘಟತ್ವಾದಿವಿಶಿಷ್ಟಯೋರೈಕ್ಯಮ್ । ನ ತ್ವೇಕಸ್ಯಾಪಿ ಪದವಾಚ್ಯಸ್ಯ ತ್ಯಾಗೋಽಸ್ತಿ । ಇದಮೇವ ಚ ತವೋದಾಹರಣಮ್ । ನತು ತತ್ । ತತ್ರ ಹಿ ತತ್‌ಪದವಾಚ್ಯಾತೀತ- ದೇಶಕಾಲಯೋರಿದಾನೀಮಭಾವೇನಾಗತ್ಯಾ ತವಾಪಿ ಮತೇ ಸ್ವರೂಪಮಾತ್ರಲಕ್ಷಣಾ । ತತ್ತ್ವಮಸೀತಿ ವಾಕ್ಯೇ ತು ತತ್‌ಪದಂ ನ ದೇಶಕಾಲಪರಂ ಕಿಂತು ಪೂರ್ವೋಕ್ತಸತ್ಯತ್ವ ಆತ್ಮತ್ವಾದಿ ಗುಣಪರಾಮರ್ಶಿ । ತೇಷಾಂ ಚ ಐಕ್ಯೋಕ್ತಿದಶಾಯಾಮಪಿ ಸತ್ತ್ವೇನ ಅನುಪಪತ್ತೇರಭಾವಾತ್ ಕಿಮರ್ಥಂ ಲಕ್ಷಣಾ । ವಿರುದ್ಧಧರ್ಮವಿಶಿಷ್ಟಯೋ-ರೈಕ್ಯಾನುಪಪತ್ತ್ಯಾ ಲಕ್ಷಣಾ ಚೇತ್ । ಕುತ್ರೇದಂ ದೃಷ್ಟಮ್ । ಮೃದ್ಘಟಾದ್ಯೈಕ್ಯವಾಕ್ಯೇ ಲಕ್ಷಣಾಯಾ

ಏವಾಭಾವಾತ್ । ಸೋಽಯಮಿತಿ ವಾಕ್ಯೇ ಚ ನಿಮಿತ್ತಾಂತರೇಣೈವ ಲಕ್ಷಣಾ ನತು ವಿಶೇಷಣಯೋಃ ಪರಸ್ಪರವಿರೋಧಾತ್ । ಏಕಸ್ಯೈವ ಗಗನಸ್ಯ ದ್ವಿದೇಶಕಾಲವರ್ತಿತ್ವದರ್ಶನಾತ್ । ಅತಸ್ತ್ವೈಕ್ಯವಾಕ್ಯಸ್ಯ ಬ್ರಹ್ಮಸದೃಶತ್ವಾರ್ಥಕತ್ವೇ ಸಿಂಹೋ ದೇವದತ್ತ ಇತ್ಯೈಕ್ಯವಾಕ್ಯಮೇವೋದಾಹರಣಂ ಸ್ಯಾತ್ । ಪದದ್ವಯೋಕ್ತಸಿಂಹತ್ವದೇವದತ್ತತ್ವಯೋಸ್ತತ್ರೈವ ವಿರೋಧಾತ್ । ವಿರುದ್ಧಗುಣತ್ಯಾಗೇನ ಮುಂಡಿತವ್ಯಕ್ತಯೋರೈಕ್ಯಕಥನೇ ತು ಅದೃಷ್ಟಕಲ್ಪನಾಖ್ಯರೋಗಸ್ಯ ನ ಕಿಂಚಿದೌಷಧಮಿತಿ ಭಾವಃ ॥ ೧೧೧೨ ॥

**ವಿವರಣೆ–** ಅದ್ವೈತಿಗಳು ತತ್ತ್ವಮಸಿ ಎಂಬಲ್ಲಿ ತತ್ ಬ್ರಹ್ಮತ್ವಮಸಿ ಎಂದು ಅರ್ಥಮಾಡಿ ವಿಶೇಷ್ಯಪದವಾದ ಬ್ರಹ್ಮಪದದ ಅರ್ಥವಾದ ಬ್ರಹತ್ತ್ವವನ್ನು ತ್ಯಾಗಮಾಡುತ್ತಾರೆ. ಆದ್ದರಿಂದ ಸೋಽಯಂ ದೇವದತ್ತಃ ಎಂಬುದು ಅವರಿಗೆ ಅನುಕೂಲವಾದ ಉದಾಹರಣೆಯಲ್ಲ. ಏಕೆಂದರೆ ಇಲ್ಲಿ ವಿಶೇಷ್ಯವಾದ ದೇವದತ್ತನಲ್ಲಿ ಯಾವ ಅಂಶದ ತ್ಯಾಗವೂ ಅವರಂತೆಯೂ ಇಲ್ಲ. ಸೋಽಯಂ ದೇವದತ್ತಃ ಎಂಬ ವಾಕ್ಯದಲ್ಲಿ ವಿಶೇಷ್ಯಾಂಶದಲ್ಲಿ ತ್ಯಾಗವಿಲ್ಲದಿದ್ದರೂ ತತ್ಪದವು ಹೇಳುವ ತದ್ದೇಶಕಾಲ ಸಂಬಂಧರೂಪ ವಿಶೇಷಣಾಂಶದ ತ್ಯಾಗವಿದೆ ಎಂದು ಅಂಗೀಕಾರ ಮಾಡಿದರೂ ಸಹ ಈ ದೃಷ್ಟಾಂತವು ಅವರಿಗೆ ಅನುಗುಣವಲ್ಲದ ಪ್ರಯುಕ್ತ ಐಕ್ಯವನ್ನು ಹೇಳುವ ಬೇರೆ ದೃಷ್ಟಾಂತಕ್ಕೆ ಹೋಗಬೇಕು. ಅದು ಯಾವುದೆಂದರೆ ಮೃದ್ಘಟಃ, ಸ್ವರ್ಣಮೇವ ಕರ್ಣಭೂಷಣಂ ಇತ್ಯಾದಿಗಳು. ಇಲ್ಲಿ ಮೊದಲನೇ ವಾಕ್ಯದಲ್ಲಿ ಮೃತ್ವದ ತ್ಯಾಗವಾಗಲೀ ಅಥವಾ ಘಟತ್ವದ ತ್ಯಾಗವಾಗಲೀ ಇಲ್ಲ. ಎರಡನೇ ವಾಕ್ಯದಲ್ಲಿ ಸ್ವರ್ಣತ್ವದ ತ್ಯಾಗವಾಗಲೀ, ಕರ್ಣಭೂಷಣತ್ವದ ತ್ಯಾಗವಾಗಲೀ ಇಲ್ಲ. ಆದ್ದರಿಂದ ಸೋಽಯಂ ದೇವದತ್ತಃ ಎಂಬ ವಾಕ್ಯದಲ್ಲಿ ಅಗತ್ಯಾ ತತ್ಪದ ಲಕ್ಷಣಾವನ್ನು ಒಪ್ಪಿದರೂ ಸಹ ತತ್ತ್ವಮಸಿ ಎಂಬ ವಾಕ್ಯದಲ್ಲಿ ತತ್ಪದ ವಾಚ್ಯವಾದ ಸತ್ಯತ್ವ, ಅರ್ಥತ್ವಾದಿ ಗುಣಗಳು ಐಕ್ಯವನ್ನು ಹೇಳುವ ದೆಶೆಯಲ್ಲೂ ಇದ್ದೇ ಇರುವುದರಿಂದ ಅನುಪಪತ್ತಿಯೇ ಇಲ್ಲದ ಕಾರಣದಿಂದ ಲಕ್ಷಣಾ ಮಾಡುವ ಅಗತ್ಯವೇ ಇಲ್ಲ. ವಿರುದ್ಧ ಧರ್ಮ ವಿಶಿಷ್ಟವಾದವುಗಳಿಗೆ ಐಕ್ಯವು ಕೂಡುವುದಿಲ್ಲ, ಆದ್ದರಿಂದ ಲಕ್ಷಣಾ ಮಾಡುತ್ತೇವೆ ಎಂದು ಹೇಳಿದರೆ ಇದು ಎಲ್ಲಿ ಕಂಡಿದೆ? ಎಂದು ನಮ್ಮ ಪ್ರಶ್ನೆ. ಮೃದ್ಘಟಃ ಇತ್ಯಾದಿಗಳಲ್ಲಿ ಕಂಡಿದೆ ಎಂದು ಅವರು ಉತ್ತರವನ್ನು ಹೇಳಬೇಕು. ಆದರೆ ನಾವು ಮೇಲೆ ತಿಳಿಸಿದಂತೆ ಮೃದ್ಘಟಃ ಎಂಬ ವಾಕ್ಯದಲ್ಲಿ ಪದವಾಚ್ಯವಾದ ಯಾವ ಅಂಶವನ್ನೂ ತ್ಯಾಗ ಮಾಡುವುದಿಲ್ಲ, ಯಾವ ಅನುಪಪತ್ತಿಯೂ ಇಲ್ಲ ಆದ್ದರಿಂದ ಲಕ್ಷಣಾ ಸ್ವೀಕಾರವನ್ನು ಮಾಡುವುದೇ ಇಲ್ಲ. ಆದ್ದರಿಂದ ಅದು ಉದಾಹರಣೆಯಾಗುವುದಿಲ್ಲ. 'ಸಿಂಹೋ ದೇವದತ್ತಃ' ಎಂಬ ಐಕ್ಯವಾಕ್ಯವನ್ನು ಉದಾಹರಣೆಯಾಗಿ ಹೇಳಿದರೆ ಅಲ್ಲಿ ಸಿಂಹತ್ವಕ್ಕೂ ದೇವದತ್ವಕ್ಕೂ ವಿರೋಧವಿದೆ. ಆದರೆ ಯಾರೂ ಮುಂಡಿತ ಸಿಂಹಕ್ಕೂ, ಮುಂಡಿತ ದೇವದತ್ತನಿಗೂ ನಿನ್ನಂತೆ ಐಕ್ಯವನ್ನು ಹೇಳುವುದಿಲ್ಲ. ಹಾಗೆ ಮುಂಡನೆ ಮಾಡಿ ವಿಶೇಷ್ಯಗಳಿಗೆ ಐಕ್ಯವನ್ನು ಹೇಳಿದರೆ ನಿನಗೆ ಅದೃಷ್ಟಕಲ್ಪನೆಯೆಂಬ ರೋಗವು ಬರುತ್ತದೆ, ಆ ರೋಗಕ್ಕೆ ಯಾವ ಔಷಧಿಯೂ ಇಲ್ಲ ಎಂದು ಅಭಿಪ್ರಾಯ.

**ಯೋ ದಂಡೀ ಕುಂಡಲೀ ಚಾಸಾವಿತಿ ದಂಡವಿಶಿಷ್ಟತಃ ।**
**ಸ್ಯಾತ್ ಕುಂಡಲವಿಶಿಷ್ಟೈಕ್ಯಂ ಕಿಮೇಕೇ ದಂಡಕುಂಡಲೇ ॥ ೧೧೧೩ ॥**

**ಅರ್ಥ–** ಯಃ = ಯಾರು, ದಂಡೀ = ದಂಡವುಳ್ಳವನಾಗಿದ್ದಾನೋ, ಅಸೌ = ಇವನು, ಕುಂಡಲೀ ಚ = ಕುಂಡಲವುಳ್ಳವನೂ ಆಗಿದ್ದಾನೆ, ಇತಿ = ಹೀಗೆ, ದಂಡವಿಶಿಷ್ಟತಃ = ದಂಡವಿಶಿಷ್ಟನಾದ ಪುರುಷನಿಂದ (ಪುರುಷನಿಗೆ) ಕುಂಡಲವಿಶಿಷ್ಟೈಕ್ಯಂ = ಕುಂಡಲವಿಶಿಷ್ಟನಿಗೆ ಐಕ್ಯವು, ಸ್ಯಾತ್ = ಬರಬಹುದು, ಕಿಂತು = ಆದರೆ, ದಂಡಕುಂಡಲೇ = ದಂಡ ಮತ್ತು ಕುಂಡಲಗಳು, ಏಕೇಕಿಮ್ = ಒಂದಾಗುತ್ತವೆಯೇ?

**ಅನುವಾದ–** ಯೋ ದಂಡೀ ಅಸೌ ಕುಂಡಲೀ ಎಂಬ ಸ್ಥಳದಲ್ಲಿ ದಂಡವಿಶಿಷ್ಟಕ್ಕೂ ಮತ್ತು ಕುಂಡಲ ವಿಶಿಷ್ಟಕ್ಕೂ ಐಕ್ಯವಿದ್ದರೆ ದಂಡಕುಂಡಲಗಳಿಗೆ ಐಕ್ಯವು ಉಂಟಾ-ಗುತ್ತದೆಯೇ?

**ಭಾವವಿಲಾಸಿನೀ–** ನನ್ವೇವಂ ಸೋಯಮಿತಿ ವಾಕ್ಯಸ್ಥ ಪದದ್ವಯಸ್ಯಾಪಿ ವಿಶಿಷ್ಟಪರತ್ವೇ ತಯೋಶ್ಚ ವಿಶೇಷ್ಯಭೂತದೇವದತ್ತೇನೈಕ್ಯೇ ವಿಶೇಷಣಭೂತಯೋರತೀತವರ್ತಮಾನದೇಶಕಾಲಯೋರಪಿ ತೇನೈಕ್ಯಂ ಸ್ಯಾದಿತ್ಯತ ಆಹ – **ಯೋ ದಂಡೀತಿ** ॥ ೧೧೧೩ ॥

**ವಿವರಣೆ–** 'ಸೋಯಂ ದೇವದತ್ತಃ' ಎಂಬ ವಾಕ್ಯದಲ್ಲಿ ಎರಡು ಪದಗಳಿಗೂ ವಿಶಿಷ್ಟಾರ್ಥವನ್ನೇ ಅಂಗೀಕಾರ ಮಾಡಿದರೆ ತದ್ದೇಶಕಾಲ ವಿಶಿಷ್ಟಕ್ಕೂ ಮತ್ತು ವಿಶೇಷ್ಯನಾದ ದೇವದತ್ತನಿಗೂ ಅಭೇದವಿರುವುದರಿಂದ ಹಾಗೆಯೇ ಏತದ್ದೇಶಕಾಲ ವಿಶಿಷ್ಟಕ್ಕೂ ಮತ್ತು ದೇವದತ್ತನಿಗೂ ಅಭೇದವಿರುವುದರಿಂದ ದೇವದತ್ತನಿಗೆ ವಿಶೇಷಣವಾದ ತದ್ದೇಶಕಾಲ ಮತ್ತು ಏತದ್ದೇಶಕಾಲಗಳಿಗೆ ಅಭೇದ ಉಂಟಾಗಲಿ ಎಂದು ಶಂಕೆಯನ್ನು ಮಾಡಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. 'ಯೋ ದಂಡೀ ಅಸಾವೇವ ಕುಂಡಲೀ' ಎಂಬಲ್ಲಿ ದಂಡ ವಿಶಿಷ್ಟ ದೇವದತ್ತನಿಗೂ, ಕುಂಡಲವಿಶಿಷ್ಟ ದೇವದತ್ತನಿಗೂ ಅಭೇದವಿದ್ದರೂ ವಿಶೇಷ್ಯನಾದ ದೇವದತ್ತನ ಅಂಶದಲ್ಲಿ ವಿಶೇಷಣವಾದ ದಂಡಕುಂಡಲಗಳಿಗೆ ಹೇಗೆ ಅಭೇದವಿಲ್ಲವೋ ಹಾಗೆ ಸೋಯಂ ದೇವದತ್ತಃ' ಎಂಬಲ್ಲಿ ತದ್ದೇಶಕಾಲ ಮತ್ತು ಏತದ್ದೇಶಕಾಲಗಳಿಗೆ ಅಭೇದದ ಪ್ರಸಂಗವಿಲ್ಲ ಎಂದು ಅಭಿಪ್ರಾಯ.

**ವಿಶೇಷ್ಯೋಪಾದಾನಕಸ್ಯ ವಿಶಿಷ್ಟಸ್ಯ ಹಿ ಜನ್ಮನಿ ।**
**ವಿಶೇಷಣಂ ನಿಮಿತ್ತಂ ನಸ್ತದೈಕ್ಯೇಽಸ್ಯೈಕತಾ ಕುತಃ ॥ ೧೧೧೪ ॥**

**ಅರ್ಥ–** ನಃ = ನಮ್ಮ, ಮತೇ = ಮತದಲ್ಲಿ, ವಿಶೇಷ್ಯೋಪಾದಾನಕಸ್ಯ = ವಿಶೇಷ್ಯವೇ ಉಪಾದಾನವಾಗಿವುಳ್ಳ, ಅಹಂ ವಿಶಿಷ್ಟಸ್ಯ = ವಿಶಿಷ್ಟ ವ್ಯಕ್ತಿಯ, ಜನ್ಮನಿ = ಉತ್ಪತ್ತಿಯಲ್ಲಿ,

ವಿಶೇಷಣಂ = ವಿಶೇಷಣವು, ನಿಮಿತ್ತಂ ಹಿ = ನಿಮಿತ್ತವಾಗಿದೆಯಷ್ಟೇ, ತದೈಕ್ಯೇ = ವಿಶಿಷ್ಟಗಳಿಗೆ ಐಕ್ಯವಿದ್ದಾಗ, ಅಸ್ಯ = ಈ ವಿಶೇಷಣಕ್ಕೆ, ಏಕತಾ = ಏಕತ್ವವು, ಕುತಃ = ಏಕೆ ಬರಬೇಕು?

**ಅನುವಾದ–** ವಿಶಿಷ್ಟದ ಉತ್ಪತ್ತಿಗೆ ವಿಶೇಷ್ಯವು ಉಪಾದಾನಕಾರಣ ಮತ್ತು ವಿಶೇಷಣವು ನಿಮಿತ್ತ ಕಾರಣ. ವಿಶೇಷಣಗಳಿಗೆ ಐಕ್ಯಬರಲಿ ಎಂದು ಹೇಳುವುದಕ್ಕೆ ಯಾವ ಸಮರ್ಥನೆಯೂ ಇಲ್ಲ.

**ಭಾವವಿಲಾಸಿನೀ–** ವಿಶಿಷ್ಟೈಕ್ಯೇऽಪಿ ವಿಶೇಷಣೈಕ್ಯಾಭಾವೇ ಕಾರಣಮಾಹ – **ವಿಶೇಷ್ಯೇತಿ** ॥ ವಿಶೇಷ್ಯೋ ದೇವದತ್ತಃ ನಃ ಮತೇ । ತದೈಕ್ಯೇ ಉಪಾದಾನೋಪಾದೇಯರೂಪವಿಶೇಷ್ಯ-ವಿಶಿಷ್ಟಯೋರೈಕ್ಯೇ । ಅಸ್ಯ ನಿಮಿತ್ತಭೂತಂ ದಂಡಾದೇಃ ॥ ೧೧೧೪ ॥

**ವಿವರಣೆ–** ದಂಡ ವಿಶಿಷ್ಟ ದೇವದತ್ತನನ್ನು ಕುರಿತು ದಂಡವು ನಿಮಿತ್ತಕಾರಣ. ಕುಂಡಲ ವಿಶಿಷ್ಟ ದೇವದತ್ತನನ್ನು ಕುರಿತು ಕುಂಡಲವು ನಿಮಿತ್ತಕಾರಣ. ಎರಡು ಕಡೆಗಳಲ್ಲಿಯೂ ವಿಶೇಷ್ಯಭೂತನಾದ ದೇವದತ್ತನು ಒಬ್ಬನೇ. ವಿಶಿಷ್ಟವನ್ನು ಕುರಿತು ನಿಮಿತ್ತ ಕಾರಣಗಳಾದ ದಂಡಕುಂಡಲಗಳಿಗೆ ಐಕ್ಯವಿಲ್ಲ. ಹಾಗೆಯೇ ಸೋಯಂ ದೇವದತ್ತಃ ಎಂಬಲ್ಲಿ ತದ್ದೇಶಕಾಲ ಸಂಬಂಧ ಮತ್ತು ಏತದ್ದೇಶಕಾಲ ಸಂಬಂಧಗಳು ವಿಶಿಷ್ಟಗಳನ್ನು ಕುರಿತು ನಿಮಿತ್ತಕಾರಣ. ಅವುಗಳಿಗೆ ಐಕ್ಯವು ಉಂಟಾಗುವ ಪ್ರಸಕ್ತಿಯೇ ಇಲ್ಲ.

**ಅಥೌದ್ಧತ್ಯಾದ್ ವಿಶಿಷ್ಟೈಕ್ಯಂ ಯದಿ ಕ್ವಾಪಿ ನ ಮನ್ಯಸೇ ।**
**ತರ್ಹಿ ದೃಷ್ಟಾಂತಶೂನ್ಯತ್ವಾದ್ ಗತಮಾಪಾದನಂ ತವ ॥ ೧೧೧೫ ॥**

**ಅರ್ಥ–** ಅಥ = ಅಥವಾ, ಔದ್ಧತ್ಯಾತ್ = ಉದ್ಧಟತನದಿಂದ, ತ್ವಂ = ನೀನು, ವಿಶಿಷ್ಟೈಕ್ಯಂ = ವಿಶಿಷ್ಟವ್ಯಕ್ತಿಗಳಿಗೆ ಐಕ್ಯವನ್ನು, ಕ್ವಾಪಿ = ಎಲ್ಲಿಯೂ ಕೂಡ, ಯದಿ = ಒಂದು ಪಕ್ಷದಲ್ಲಿ, ನ ಮನ್ಯಸೇ = ಒಪ್ಪುವುದಿಲ್ಲವಾದರೆ, ತರ್ಹಿ = ಆ ಪಕ್ಷದಲ್ಲಿ, ದೃಷ್ಟಾಂತಶೂನ್ಯತ್ವಾತ್ = ದೃಷ್ಟಾಂತವು ಇಲ್ಲದಿರುವುದರಿಂದ, ತವ = ನಿನ್ನ, ಆಪಾದನಂ = ವಿಶಿಷ್ಟೈಕ್ಯವಿದ್ದರೆ ವಿಶೇಷಣೈಕ್ಯವೂ ಬರಲಿ ಎಂಬ ಆಪಾದನೆಯು, ಗತಂ = ಬಿದ್ದುಹೋಯಿತು.

**ಅನುವಾದ–** ಅಥವಾ ಔದ್ಧತ್ಯವನ್ನು ಅವಲಂಬಿಸಿ ವಿಶಿಷ್ಟೈಕ್ಯವನ್ನು ನಾನು ಎಲ್ಲಿಯೂ ಒಪ್ಪುವುದಿಲ್ಲ ಎಂದು ಹೇಳುವುದಾದರೆ ನಿನ್ನ ಆಪಾದನೆಗೆ ದೃಷ್ಟಾಂತವೇ ಇಲ್ಲವಾದ ಕಾರಣ ಆಪಾದನೆಯು ಬಿದ್ದುಹೋಗುತ್ತದೆ.

**ಭಾವವಿಲಾಸಿನೀ–** ನನು ಕ್ವಾಪಿ ವಿಶಿಷ್ಟೈಕ್ಯಂ ಮಯಾ ನಾಂಗೀಕ್ರಿಯತೇ । ಅತೋ ಮದುಕ್ತವ್ಯಾಪ್ತಿ-ವ್ಯಭಿಚಾರಸ್ಯ ನೇದಮುದಾಹರಣಮಿತ್ಯತ ಆಹ – **ಅಥೇತಿ** ॥ ಉಪಾದಾನೋಪಾದೇಯಯೋಃ

ಸಂಭಾವಿತೈಕ್ಯಸ್ಯ ಪರಿತ್ಯಾಗಾದೌದ್ಧತ್ಯಾದಿತ್ಯುಕ್ತಮ್ । ಆಪಾದನಂ ವಿಶಿಷ್ಟೈಕ್ಯೇ ವಿಶೇಷಣಯೋರಪ್ಯೈಕ್ಯಂ ಸ್ಯಾದಿತ್ಯಾಪಾದನಮ್ ॥ ೧೧೧೫ ॥

**ವಿವರಣೆ–** ವಿಶಿಷ್ಟೈಕ್ಯವಿದ್ದರೆ ವಿಶೇಷಣೈಕ್ಯವು ಬರಲಿ ಎಂಬುದು ಅದ್ವೈತಿಗಳ ಆಪಾದನೆ. ಇಲ್ಲಿ ವಿಶಿಷ್ಟೈಕ್ಯವು ಆಪಾದಕ, ವಿಶೇಷಣೈಕ್ಯವು ಆಪಾದ್ಯ. ತರ್ಕದಲ್ಲಿ ಆಪಾದಕವು ಸಿದ್ಧವಾಗಬೇಕು. ಆದರೆ ವಿಶಿಷ್ಟೈಕ್ಯವನ್ನು ನಾವು ಎಲ್ಲಿಯೂ ಒಪ್ಪುವುದಿಲ್ಲ ಎಂದು ಹೇಳಿದರೆ ಆಪಾದಕವೇ ಸಿದ್ಧವಾಗಿಲ್ಲ ಎಂದಾಯಿತು. ಆದ್ದರಿಂದ ಆಪಾದಕ- ವಿದ್ದಲ್ಲಿ ಆಪಾದ್ಯವನ್ನು ತೋರಿಸಿ ವ್ಯಾಪ್ತಿಯನ್ನು ದೃಢಪಡಿಸಿ ತನ್ಮೂಲವಾಗಿ ಮಾಡಬೇಕಾದ ಆಪಾದನೆಯು ನಿರಾಧಾರವಾದ್ದರಿಂದ ಬಿದ್ದುಹೋಯಿತು ಎಂದು ಅರ್ಥ.

ಅಸ್ತಿ ರೂಪವಿಶಿಷ್ಟೈಕ್ಯೇ ರೂಪೈಕ್ಯಮಪಿ ಯದ್ಯಪಿ ।
ಭೇದಾಭೇದಮತೇ ತಚ್ಚ ನ ತೇ ತರ್ಕನಿದರ್ಶನಂ ॥ ೧೧೧೬ ॥

**ಅರ್ಥ–** ಯದ್ಯಪಿ = ವಸ್ತುತಃ, ರೂಪವಿಶಿಷ್ಟೈಕ್ಯೇ = ರೂಪವಿಶಿಷ್ಟಗಳಾದ ವ್ಯಕ್ತಿಗಳಿಗೆ ಐಕ್ಯವಿದ್ದಾಗ, ರೂಪೈಕ್ಯಂ ಮಪಿ = ರೂಪಗಳಿಗೆ ಐಕ್ಯವೂ ಕೂಡ, ಅಸ್ತಿ = ಇದೆ. ತಥಾಪಿ = ಹಾಗಿದ್ದರೂ ಕೂಡ, ತತ್ ಚ = ಅದಾದರೂ, ಭೇದಾಭೇದಮತೇ ಏವ = ಭೇದಾಭೇದ-ಮತವನ್ನು ಒಪ್ಪುವವರ ಮತದಲ್ಲಿ ಮಾತ್ರ ಯುಕ್ತವಾಗುತ್ತದೆ. ತತ್ = ಅದು, ತೇ = ನಿನ್ನ, ತರ್ಕನಿದರ್ಶನಂ = ತರ್ಕಕ್ಕೆ ದೃಷ್ಟಾಂತವು, ನ = ಆಗುವುದಿಲ್ಲ.

**ಅನುವಾದ–** ಯದ್ಯಪಿ ರೂಪವಿಶಿಷ್ಟೈಕ್ಯವು ಇರುವಾಗ ರೂಪೈಕ್ಯವೂ ಇದೆ. ಇದು ಭೇದಾಭೇದ ಮತದಲ್ಲಿ ಮಾತ್ರ ಕೂಡುತ್ತದೆ. ಆದರೆ ಅದು ನಿನ್ನ ತರ್ಕಕ್ಕೆ ದೃಷ್ಟಾಂತವಾಗುವುದಿಲ್ಲ.

**ಭಾವವಿಲಾಸಿನೀ–** ನನು ರೂಪವಿಶಿಷ್ಟಸ್ಯ ಘಟೇನೈಕ್ಯೇ ಆವಯೋರ್ಮತೇ ಧರ್ಮಧರ್ಮಿಣೋರ್ಭೇದಾಭೇದಾಂಗೀಕಾರಾತ್ ವಿಶೇಷಣೀಭೂತರೂಪಸ್ಯಾಪಿ ಘಟೇನೈಕ್ಯಮಸ್ತಿ । ಅತ ಇದಮೇವ ಮಮ ವ್ಯಾಪ್ತೇರುದಾಹರಣಂ ಭವಿಷ್ಯತೀತಿ ಶಂಕಾಮನೂದ್ಯ ದೂಷಯತಿ–ಅಸ್ತೀತಿ ॥೧೧೧೬॥

**ವಿವರಣೆ–** ರೂಪವಿಶಿಷ್ಟಕ್ಕೂ ಮತ್ತು ಘಟಕ್ಕೂ ಅಭೇದವನ್ನು ಅಂಗೀಕಾರ ಮಾಡಿದರೆ ನಮ್ಮಿಬ್ಬರ ಮತದಲ್ಲಿಯೂ ಧರ್ಮಧರ್ಮಿಗಳಿಗೆ ಭೇದಾಭೇದವನ್ನು ಅಂಗೀಕಾರ ಮಾಡುವುದರಿಂದ ವಿಶೇಷಣವಾದ ರೂಪದಿಂದಲೂ ಸಹ ಘಟಕ್ಕೆ ಐಕ್ಯವಿದೆ. ಆದರೆ ಇಂತಹ ಸ್ಥಳವು ನಿನಗೆ ದೃಷ್ಟಾಂತವಾಗಿ ದೊರೆಯುವುದಿಲ್ಲ ಎಂದು ಇಲ್ಲಿ ಹೇಳುತ್ತಾರೆ.

ಕಾರ್ಯಕಾರಣಭಾವಾದ್ವಾ ಧರ್ಮಧರ್ಮಿತ್ವತೋಽಪಿ ವಾ ।
ಈದೃಗ್ವಿಶೇಷಣೈಕ್ಯಸ್ಯ ಪ್ರಾಪ್ತಿಸ್ತವ ಮಮಾಪಿ ಚ ॥ ೧೧೧೭ ॥

**ಅರ್ಥ–** ತವ = ನಿನ್ನ, ಮಮ = ನನ್ನ, ಮತೇ ಅಪಿ ಚ = ಮತದಲ್ಲಿಯೂ ಕೂಡ, ಕಾರ್ಯಕಾರಣಭಾವಾತ್ ವಾ = ಕಾರ್ಯಕಾರಣ ಸಂಬಂಧವಿರುವುದ- ರಿಂದಾಗಲೀ, ಧರ್ಮಧರ್ಮಿತ್ವತಃ ಅಪಿ ವಾ = ಧರ್ಮಧರ್ಮಿಭಾವ ಸಂಬಂಧವಿರುವುದರಿಂದಾಗಲೀ, ಈದೃಗ್ವಿಶೇಷಣೈಕ್ಯಸ್ಯ - ಈದೃಕ್ = ಇಂತಹ, ವಿಶೇಷಣ = ರೂಪ ಎಂಬ ವಿಶೇಷಣ ಮತ್ತು ಘಟಗಳಿಗೆ, ಐಕ್ಯಸ್ಯ = ಐಕ್ಯದ, ಪ್ರಾಪ್ತಿಃ = ಪ್ರಾಪ್ತಿಯು ಇದೆ.

**ಅನುವಾದ– ಇಂತಹ ಘಟ ಮತ್ತು ರೂಪದ ಸ್ಥಳದಲ್ಲಿ ನಾವಿಬ್ಬರೂ ಕಾರ್ಯಕಾರಣಭಾವದ ಪ್ರಯುಕ್ತವಾಗಲೀ ಧರ್ಮಧರ್ಮಿತ್ವ ಪ್ರಯುಕ್ತವಾಗಲೀ ಐಕ್ಯವನ್ನು ಒಪ್ಪುತ್ತೇವೆ.**

**ಭಾವವಿಲಾಸಿನೀ– ತದ್ರೂಪವಿಶಿಷ್ಟೈಕ್ಯೇ ವಿಶೇಷಣೀಭೂತರೂಪೈಕ್ಯಂ ಕುತ ಇತ್ಯತ ಆಹ – ಕಾರ್ಯೇತಿ ॥ ೧೧೧೭ ॥**

**ವಿವರಣೆ–** ರೂಪವಿಶಿಷ್ಟಕ್ಕೂ ಘಟಕ್ಕೂ ಐಕ್ಯವಿದ್ದರೆ ರೂಪಕ್ಕೂ ಮತ್ತು ಘಟಕ್ಕೂ ಐಕ್ಯವು ಏಕೆ ಬರಬೇಕೆಂದು ಇಲ್ಲಿ ತಿಳಿಸುತ್ತಾರೆ. ನಮ್ಮಿಬ್ಬರ ಮತದಲ್ಲಿ ರೂಪ ಮತ್ತು ಘಟಗಳಿಗೆ ಧರ್ಮಧರ್ಮಿಭಾವವಿದೆ ಅಥವಾ ಉಪಾದೇಯ ಉಪಾದಾನ ಭಾವವಿದೆ. ನಾವು ಧರ್ಮಧರ್ಮಿಗಳಿಗೆ ಮತ್ತು ಉಪಾದೇಯ ಉಪಾದಾನಗಳಿಗೆ ಭೇದಾಭೇದವನ್ನು ಒಪ್ಪುತ್ತೇವೆ. ಭೇದಾಭೇದದಲ್ಲಿ ಅಭೇದವೂ ಸೇರಿಕೊಂಡಿರುವುದರಿಂದ ರೂಪಕ್ಕೂ ಮತ್ತು ಘಟಕ್ಕೂ ಐಕ್ಯ ಅಥವಾ ಅಭೇದವು ಉಂಟಾಗುತ್ತದೆ ಎಂದು ವಿವರಿಸುತ್ತಾರೆ.

**ಅಪ್ರಯೋಜಕಮೇವಾಭೂದ್ ವಿಶಿಷ್ಟೈಕ್ಯಮಿಹಾವಯೋಃ ।**
**ಔಪಾಧಿಕಸಮಾವೇಶೇ ವ್ಯಾಪ್ಯವ್ಯಾಪಕತಾ ನ ಹಿ ॥ ೧೧೧೮ ॥**

**ಅರ್ಥ–** ಆವಯೋಃ = ನಮ್ಮಿಬ್ಬರ, ಮತೇ ಅಪಿ = ಮತದಲ್ಲಿಯೂ ಕೂಡ, ಇಹ = ಅಭೇದವನ್ನು ನಿರ್ವಹಿಸುವುದರಲ್ಲಿ, ವಿಶಿಷ್ಟೈಕ್ಯಂ = ವಿಶಿಷ್ಟೈಕ್ಯವು, ಅಪ್ರಯೋಜಕಂ ಏವ = ಅನುಪಯೋಗಿಯಾದದ್ದೇ, ಅಭೂತ್ = ಆಯಿತು. ಔಪಾಧಿಕಸಮಾವೇಶೇ ಸತಿ = ಉಪಾಧಿ ನಿಮಿತ್ತವಾಗಿ ಸಾಹಚರ್ಯವುಂಟಾದಾಗ, ವ್ಯಾಪ್ಯವ್ಯಾಪಕತಾ = ವ್ಯಾಪ್ಯ ವ್ಯಾಪಕತ್ವ ಸಂಬಂಧವು, ನಹಿ = ಇಲ್ಲವಷ್ಟೇ.

**ಅನುವಾದ– ವಿಶಿಷ್ಟೈಕ್ಯವು ಇಂತಹ ಅಭೇದವನ್ನು ನಿರ್ವಾಹ ಮಾಡುವುದರಲ್ಲಿ ನಮ್ಮಿಬ್ಬರ ಮತದಂತೆಯೂ ಅಪ್ರಯೋಜಕವೇ ಆಯಿತು. ಉಪಾಧಿಪ್ರಯುಕ್ತವಾಗಿ ಸಾಹಚರ್ಯ ಉಂಟಾದಾಗ ಅಲ್ಲಿ ವ್ಯಾಪ್ಯವ್ಯಾಪಕಭಾವವಿಲ್ಲವೆಂಬುದು ನಿಶ್ಚಿತವಷ್ಟೇ?**

**ಭಾವವಿಲಾಸಿನೀ– ಅಪ್ರಯೋಜಕಂ ರೂಪಘಟಯೋರೈಕ್ಯೇ ಉಪಾದಾನೋಪಾದೇಯ-** ಭಾವಸ್ಯೈವ ಪ್ರಯೋಜಕತ್ವೇನ ವಿಶಿಷ್ಟೈಕ್ಯಂ ಪ್ರಯೋಜಕಂ ನೇತ್ಯರ್ಥಃ । ಇಹ ರೂಪವಿಶಿಷ್ಟೈಕ್ಯ-

ಸ್ಥಲೇ । ಔಪಾಧಿಕಸಮಾಗಮೇ ಉಪಾದಾನೋಪಾದೇಯತ್ವರೂಪೈಕ್ಯೋಪಾಧಿಸಂಬಂಧ-ನಿಮಿತ್ತಸಮಾಗಮೇ ॥ ೧೧೧೯ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ವಿವರಿಸಿದಂತೆ ರೂಪ ಮತ್ತು ಘಟಗಳ ಐಕ್ಯವನ್ನು ಕುರಿತು ಧರ್ಮಧರ್ಮಿಭಾವವೇ ಪ್ರಯೋಜಕವೇ ಹೊರತಾಗಿ ವಿಶಿಷ್ಟೈಕ್ಯವು ಪ್ರಯೋಜಕವಲ್ಲ. ಅಲ್ಲಿ ವಿಶಿಷ್ಟ ಮತ್ತು ಘಟದ ಐಕ್ಯವಿದ್ದರೂ ಅದು ಕೇವಲ ಸಾಹಚರ್ಯವನ್ನು ತೋರಿಸುತ್ತದೆಯೇ ಹೊರತು ವ್ಯಾಪ್ಯವ್ಯಾಪಕಭಾವವನ್ನು ತೋರಿಸುವುದಿಲ್ಲ. ವಿಶೇಷಣೈಕ್ಯವನ್ನು ಕುರಿತು ಧರ್ಮಧರ್ಮಿಭಾವವೇ ಪ್ರಯೋಜಕವಾದ್ದರಿಂದ ವಿಶಿಷ್ಟೈಕ್ಯವು ಪ್ರಯೋಜಕವಲ್ಲ ಎಂದು ಇಲ್ಲಿ ವಿವರಿಸುತ್ತಾರೆ.

**ಅತೋ ನಿದರ್ಶನಂ ನೇದಂ ಯದಿ ಭಿನ್ನೇ ವಿಶೇಷಣೇ ।**
**ವಿಶಿಷ್ಟೈಕ್ಯಬಲಾದೇವ ಸ್ಯಾದೈಕ್ಯಮಪಿ ಕುತ್ರಚಿತ್ ॥ ೧೧೧೯ ॥**

**ನಿದರ್ಶನಂ ತದೇವ ಸ್ಯಾತ್ ತಚ್ಚ ನಾಂಗೀಕೃತಂ ತ್ವಯಾ ।**
**ತದಾ ನಿದರ್ಶನಂ ನೇತಿ ಸೂಷೂಕ್ತಂ ಪೂರ್ವಸೂರಿಭಿಃ ॥ ೧೧೨೦ ॥**

**ಅರ್ಥ–** ಅತಃ = ಆದ್ದರಿಂದ, ಇದಂ = ರೂಪಘಟಗಳ ನಿದರ್ಶನವು, ತೇ = ನಿನಗೆ, ಅಪೇಕ್ಷಿತಮ್ = ಬೇಕಾದ, ನಿದರ್ಶನಂ = ದೃಷ್ಟಾಂತವು, ನ = ಅಲ್ಲ, ಯದಿ = ಒಂದುವೇಳೆ, ಕುತ್ರಚಿತ್ = ಒಂದು ಸ್ಥಳದಲ್ಲಿ, ವಿಶೇಷಣೇ = ವಿಶೇಷಣಗಳು, ಭಿನ್ನೇ = ಭಿನ್ನವಾಗಿವೆಯೋ, ಚ = ಮತ್ತು, ವಿಶಿಷ್ಟೈಕ್ಯಬಲಾತ್ ಏವ = ವಿಶಿಷ್ಟೈಕ್ಯದ ಸಾಮರ್ಥ್ಯದಿಂದಲೇ, ವಿಶೇಷಣಯೋಃ ಅಪಿ = ವಿಶೇಷಣಗಳಿಗೂ ಕೂಡ, ಐಕ್ಯಂ = ಐಕ್ಯವು, ಸ್ಯಾತ್ = ಆದರೆ, ತರ್ಹಿ = ಆ ಪಕ್ಷದಲ್ಲಿ, ತತ್ ಏವ = ಅದೇ, ತೇ = ನಿನಗೆ, ನಿದರ್ಶನಂ = ದೃಷ್ಟಾಂತವು, ಸ್ಯಾತ್ = ಆದೀತು. ತತ್ ಚ = ಅದಾದರೂ, ತ್ವಯಾ = ನಿನ್ನಿಂದ, ನ ಅಂಗೀಕೃತಂ = ಅಂಗೀಕರಿಸಲ್ಪಟ್ಟಿಲ್ಲ. ತದಾ = ಆದ್ದರಿಂದ, ತೇ = ನಿನಗೆ, ನಿದರ್ಶನಂ= ದೃಷ್ಟಾಂತವು, ನಾಸ್ತಿ ಇತಿ = ಇಲ್ಲವೆಂಬುದಾಗಿ, ಪೂರ್ವಸೂರಿಭಿಃ = ನಮ್ಮ ಪೂರ್ವಾಚಾರ್ಯರಿಂದ, ಸುಷ್ಠು= ಸರಿಯಾಗಿಯೇ, ಉಕ್ತಂ = ಹೇಳಲ್ಪಟ್ಟಿದೆ.

**ಅನುವಾದ–** ಆದ್ದರಿಂದ ಇದು ನಿನಗೆ ಬೇಕಾದ ದೃಷ್ಟಾಂತವಲ್ಲ. ಎಲ್ಲಿ ವಿಶೇಷಣಗಳು ಪರಸ್ಪರ ಭಿನ್ನವಾಗಿದ್ದರೂ ವಿಶಿಷ್ಟಗಳಿಗೆ ಐಕ್ಯವಿದ್ದು ಅದರ ಬಲದಿಂದ ವಿಶೇಷಣಗಳಿಗೂ ಐಕ್ಯವು ಉಂಟಾದರೆ ಅದೇ ನಿನಗೆ ಅಪೇಕ್ಷಿತವಾದ ದೃಷ್ಟಾಂತ ಸ್ಥಳವಾಗುತ್ತದೆ. ಆದರೆ ಅಂತಹ ದೃಷ್ಟಾಂತವನ್ನು ನೀನು ಅಂಗೀಕರಿಸಿಲ್ಲ. ಆದ್ದರಿಂದ ನಿನಗೆ ದೃಷ್ಟಾಂತವೇ ಇಲ್ಲವಾದ್ದರಿಂದ ನಿನ್ನ ತರ್ಕವು ವ್ಯಾಪ್ತಿಹೀನವಾದುದು ಎಂಬ ನಮ್ಮ ಪೂರ್ವಾಚಾರ್ಯರ ವಚನವು ಅತ್ಯಂತ ಸಾಧುವಾಗಿದೆ.

**ಭಾವವಿಲಾಸಿನೀ–** ಅತಃ ಅತ್ರ ವಿಶಿಷ್ಟೈಕ್ಯಸ್ಯಾಪ್ರಯೋಜಕತ್ವಾತ್ । ಭಿನ್ನೇ ಕಾರ್ಯಕಾರಣ-ಭಾವಾನವಲಂಬಿನಿ ಅತ್ಯಂತಭಿನ್ನೇ ದಂಡಕುಂಡಲಾದೌ । ತತ್ ಅತ್ಯಂತಭಿನ್ನವಿಶೇಷಣ-ಸ್ಥಲೀಯವಿಶಿಷ್ಟೈಕ್ಯಮ್ । ನಾಂಗೀಕೃತಮಿತ್ಯುಪಲಕ್ಷಣಮ್ । ದಂಡಕುಂಡಲವಿಶಿಷ್ಟೈಕ್ಯೇಽಪಿ ದಂಡಕುಂಡಲೈಕ್ಯಾದರ್ಶನೇನ ವ್ಯಭಿಚಾರ ಇತ್ಯಪಿ ದ್ರಷ್ಟವ್ಯಮ್ ॥ ೧೧೨೦ ॥

**ವಿವರಣೆ–** ಘಟರೂಪಸ್ಥಳವು ನಿನಗೆ ಅನುಗುಣವಾಗಿಲ್ಲ. ಆದ್ದರಿಂದ ಎಲ್ಲಿ ವಿಶೇಷಣಗಳು ಪರಸ್ಪರವಾಗಿ ಕಾರ್ಯಕಾರಣಭಾವವನ್ನು ಹೊಂದದೆ ಅತ್ಯಂತ ಭಿನ್ನವಾಗಿ ಇವೆಯೋ ಅಂತಹ ದಂಡಕುಂಡಲಾದಿ ಸ್ಥಳಗಳಲ್ಲಿ ವಿಶಿಷ್ಟೈಕ್ಯವು ಇರುವುದರಿಂದ ವಿಶೇಷಣೈಕ್ಯವು ಉಂಟಾಗಲಿ ಎಂದು ನೀನು ಆಪಾದಿಸಬೇಕು. ಆದರೆ ನೀನು ದಂಡ ವಿಶಿಷ್ಟಕ್ಕೂ ಮತ್ತು ಕುಂಡಲ ವಿಶಿಷ್ಟಕ್ಕೂ ಐಕ್ಯವನ್ನೇ ಒಪ್ಪುವುದಿಲ್ಲ. ಆದ್ದರಿಂದ ಅಲ್ಲಿಯೂ ನಿನಗೆ ಅಪೇಕ್ಷಿತವಾದ ವಿಶಿಷ್ಟೈಕ್ಯವು ಸಿದ್ಧವಾಗುವುದಿಲ್ಲ. ಇನ್ನು ವಿಶಿಷ್ಟೈಕ್ಯವಿದ್ದರೆ ವಿಶೇಷಣೈಕ್ಯವು ಬರಲಿ ಎಂಬ ನಿನ್ನ ಆಪಾದನೆಗೂ ಇಲ್ಲಿ ವ್ಯಭಿಚಾರ ಬರುತ್ತದೆ. ಇಲ್ಲಿ ಒಂದು ಪಕ್ಷ ವಿಶಿಷ್ಟೈಕ್ಯವನ್ನು ಒಪ್ಪಿದರೂ, ದಂಡಕುಂಡಲಾದಿ ವಿಶೇಷಣಗಳಿಗೆ ಪರಸ್ಪರವಾಗಿ ಐಕ್ಯವಿಲ್ಲದಿರುವುದರಿಂದ ವಿಶಿಷ್ಟೈಕ್ಯವಿದೆ, ವಿಶೇಷಣೈಕ್ಯವಿಲ್ಲ. ಆದ್ದರಿಂದ ವ್ಯಭಿಚಾರ ಬರುತ್ತದೆ ಆದ್ದರಿಂದ ನಿನಗೆ ವ್ಯಾಪ್ತಿಯೂ ಇಲ್ಲ, ವ್ಯಾಪ್ತಿಯನ್ನು ಅಂಗೀಕಾರ ಮಾಡಿದರೂ ವ್ಯಭಿಚಾರವು ಬರುತ್ತದೆ. ಆದ್ದರಿಂದ ನಿನ್ನ ತರ್ಕವು ಬಿದ್ದುಹೋಗುತ್ತದೆ ಎಂದು ಅಭಿಪ್ರಾಯ.

**ಕಿಂ ಚೈವಮಪಿ ಸಾರ್ವಜ್ಞಪೂರ್ವಧರ್ಮವಿಶಿಷ್ಟತಃ ।**
**ಅಜ್ಞಾನಾದಿವಿಶಿಷ್ಟಾಚ್ಚ ಚಿನ್ಮಾತ್ರೈಕ್ಯಮಿಹೋಚ್ಯತಾಂ ॥ ೧೧೨೧ ॥**

**ಅರ್ಥ–** ಕಿಂಚ = ಅದಲ್ಲದೇ, ಏವಂ ಅಪಿ = ಐಕ್ಯವನ್ನು ಹೇಳುವುದಾದರೆ, ಇಹ = ತತ್ವಮಸಿ ಎಂಬಲ್ಲಿ, ಸಾರ್ವಜ್ಞ ಪೂರ್ವಧರ್ಮವಿಶಿಷ್ಟತಃ = ಸಾರ್ವಜ್ಞ ಪೂರ್ವ = ಸರ್ವಜ್ಞತ್ವವೇ ಮೊದಲಾದ, ಧರ್ಮ = ಧರ್ಮಗಳಿಂದ, ವಿಶಿಷ್ಟತಃ = ವಿಶಿಷ್ಟನಾದ ವ್ಯಕ್ತಿಯಿಂದ, ಚ = ಮತ್ತು, ಅಜ್ಞನಾದಿವಿಶಿಷ್ಟಾತ್ = ಅಜ್ಞತ್ವ ಮೊದಲಾದ ಗುಣಗಳಿಂದ ಕೂಡಿದ ವ್ಯಕ್ತಿಯಿಂದ, ಚಿನ್ಮಾತ್ರೈಕ್ಯಂ = ಚಿನ್ಮಾತ್ರನಿಗೆ ಐಕ್ಯವು, ತ್ವಯಾ = ನಿನ್ನಿಂದ, ಉಚ್ಯತಾಂ = ಹೇಳಲ್ಪಡಲಿ.

**ಅನುವಾದ–** ನೀನು ಐಕ್ಯವನ್ನು ಹೇಳುವುದಾದರೆ ಸರ್ವಜ್ಞತ್ವ ವಿಶಿಷ್ಟಕ್ಕೂ ಮತ್ತು ಚಿನ್ಮಾತ್ರಕ್ಕೂ ಐಕ್ಯವನ್ನು ಹೇಳು. ಹಾಗೆಯೇ ಅಲ್ಪಜ್ಞತ್ವ ವಿಶಿಷ್ಟಕ್ಕೂ ಮತ್ತು ಚಿನ್ಮಾತ್ರಕ್ಕೂ ಐಕ್ಯವನ್ನು ಹೇಳು.

**ಭಾವವಿಲಾಸಿನೀ–** ಅಪಿ ಚ ಸೋಽಯಮಿತ್ಯತ್ರ ದೃಷ್ಟಾಂತೇ ತರ್ಕಬಲೇನ ವಿಶಿಷ್ಟೈಕ್ಯಂ ನಿರಾಕುರ್ವತಾ ಪರೇಣ ತತ್ತ್ವಮಸೀತ್ಯತ್ರಾಪಿ ತೇನೈವ ತರ್ಕೇಣ ವಿಶಿಷ್ಟೈಕ್ಯನಿರಾಕರಣಂ

ಕರ್ತವ್ಯಮ್ । ಅನ್ಯಥಾ ದೃಷ್ಟಾಂತದಾರ್ಷ್ಟಾಂತಿಕಯೋರ್ವೈಷಮ್ಯಪ್ರಸಂಗಾತ್ । ಅತ್ರ ಚ ತರ್ಕಸ್ಯೇಷ್ಟಾಪಾದನರೂಪಾಭಾಸತ್ವಮಿತ್ಯಾಹ – **ಕಿಂಚೇತಿ** ॥ ಚಿನ್ಮಾತ್ರೈಕ್ಯಂ ಚಿನ್ಮಾತ್ರೇಣೈಕ್ಯಮ್ । ಚಿನ್ನಿಷ್ಠವಿಶೇಷಣಾನಾಮಪಿ ಚಿದ್ರೂಪತ್ವಾತ್ ಈದೃಶವಿಶಿಷ್ಟೈಕ್ಯಮಪಿ ಚಿನ್ಮಾತ್ರೈಕ್ಯಮೇವೇತಿ ಪರಪರಿಹಾಸಾರ್ಥಮುದಿತಮ್ ॥ ೧೧೨೧ ॥

**ವಿವರಣೆ–** 'ಸೋಽಯಂ ದೇವದತ್ತಃ' ಎಂಬ ದೃಷ್ಟಾಂತದಲ್ಲಿ ತರ್ಕಬಲದಿಂದ ವಿಶಿಷ್ಟೈಕ್ಯವನ್ನು ನಿರಾಕರಣೆ ಮಾಡುವ ಅದ್ವೈತಿಗಳು ತತ್ತ್ವಮಸಿ ವಾಕ್ಯದಲ್ಲಿಯೂ ಕೂಡ ಅದೇ ತರ್ಕದಿಂದ ವಿಶಿಷ್ಟೈಕ್ಯವನ್ನು ನಿರಾಕರಣೆ ಮಾಡಬೇಕು. ಇಲ್ಲದಿದ್ದರೆ ದೃಷ್ಟಾಂತ ಮತ್ತು ದಾರ್ಷ್ಟಾಂತಿಕಗಳಿಗೆ ವೈಷಮ್ಯವು ಉಂಟಾಗುತ್ತದೆ. ಆದ್ದರಿಂದ ಸರ್ವಜ್ಞತ್ವ ವಿಶಿಷ್ಟಕ್ಕೂ ಮತ್ತು ಚೈತನ್ಯಕ್ಕೂ ನೀನು ಅಭೇದವನ್ನು ಆಪಾದನೆ ಮಾಡು. ಈ ಆಪಾದನೆಯು ಇಷ್ಟಾಪಾದನರೂಪವಾಗಿರುವುದರಿಂದ ಆಭಾಸವಾಗುತ್ತದೆ ಎಂದು ಇಲ್ಲಿ ಹೇಳುತ್ತಾರೆ. ಚಿತ್‌ನಲ್ಲಿರುವ ಧರ್ಮಗಳೂ ಸಹ ಚಿದ್ರೂಪವಾದುದರಿಂದ ಅಂತಹ ವಿಶಿಷ್ಟೈಕ್ಯವು ಚಿನ್ಮಾತ್ರೈಕ್ಯವೇ ಆಗುತ್ತದೆ ಎಂದು ಇಲ್ಲಿ ಪರರನ್ನು ಪರಿಹಾಸ ಮಾಡಿದ್ದಾರೆ.

**ಯತೋಽಸ್ತಿ ಗುಣಗುಣ್ಯೈಕ್ಯಮಪಿ ಜೀವೇ ಹರೌ ಚ ನಃ ।**
**ಉಕ್ತೈತದ್ಬಾಧಕಾಭಾವಾಲ್ಲಕ್ಷಣಾವಸರೋಽತ್ರ ನ ॥ ೧೧೨೨ ॥**

**ಅರ್ಥ–** ಯತಃ = ಯಾವ ಕಾರಣದಿಂದ, ನಃ = ನಮ್ಮ, ಮತೇ = ಮತದಲ್ಲಿ, ಜೀವೇ = ಜೀವನಲ್ಲಿ, ಹರೌ ಚ = ಹರಿಯಲ್ಲಿಯೂ ಕೂಡ, ಗುಣಗುಣ್ಯೈಕ್ಯಮ್ ಅಪಿ = ಗುಣ ಮತ್ತು ಗುಣಿಗಳಿಗೆ ಐಕ್ಯವೂ ಕೂಡ, ಅಸ್ತಿ = ಇದೆಯೋ, ತತಃ = ಆದ್ದರಿಂದ, ಉಕ್ತೈತದ್ಬಾಧಕಾಭಾವಾತ್ = ಹಿಂದೆ ಹೇಳಲ್ಪಟ್ಟ ಬಾಧಕಗಳು ಇಲ್ಲದಿರುವುದರಿಂದ, ಅತ್ರ = ತತ್ತ್ವಮಸಿ ಎಂಬ ವಾಕ್ಯದಲ್ಲಿ, ಲಕ್ಷಣಾವಸರಃ = ಲಕ್ಷಣಾವೃತ್ತಿಗೆ ಅವಕಾಶವು, ನ ಅಸ್ತಿ = ಇಲ್ಲ.

**ಅನುವಾದ–** ಜೀವನಲ್ಲಿಯೂ, ಹರಿಯಲ್ಲಿಯೂ ಗುಣಗುಣಿಗಳ ಐಕ್ಯವಿರುವುದರಿಂದ ಮತ್ತು ಗುಣಗುಣಿಭಾವವಿರುವುದರಿಂದ ಇಂತಹ ಐಕ್ಯವನ್ನು ಒಪ್ಪಿದರೆ ನೀನು ಹೇಳಿದ ತರ್ಕದ ಬಾಧವೂ ಬರುವುದಿಲ್ಲವಾದ್ದರಿಂದ ಇಲ್ಲಿ ಲಕ್ಷಣಾವೃತ್ತಿಯನ್ನು ಅನುಸರಿಸಬೇಕಾದ ಪ್ರಸಂಗವೇ ಇಲ್ಲ.

**ಭಾವವಿಲಾಸಿನೀ–** ಅಸ್ಮಿನ್ವಿಶಿಷ್ಟೈಕ್ಯೇ ವಿಶೇಷಣೈಕ್ಯಮಪಿ ಇಷ್ಟಮೇವೇತ್ಯಾಶಯೇನೋಕ್ತಮ್ ॥ **ಯತ ಇತಿ** ॥ ನಃ ಮತೇ । ಇದಂ ಚೋಪಲಕ್ಷಣಮ್ । ಪರೇಣಾಪಿ ಧರ್ಮಧರ್ಮಿಣೋ-ರೈಕ್ಯಾಂಗೀಕಾರಾತ್ । ಉಕ್ತೈತದ್ಬಾಧಕಾಭಾವಾತ್ ವಿಶಿಷ್ಟೈಕ್ಯೇ ವಿಶೇಷಣೈಕ್ಯಮಪಿ ಸ್ಯಾದಿತಿ ಬಾಧಕಾಭಾವಾದಿತ್ಯರ್ಥಃ । ಅತ್ರ ತತ್ತ್ವಮಸೀತಿ ವಾಕ್ಯೇ ॥ ೧೧೨೨ ॥

**ವಿವರಣೆ–** ತತ್ತ್ವಮಸಿ ವಾಕ್ಯದಲ್ಲಿಯೂ ಹೀಗೆ ಸರ್ವಜ್ಞತ್ವ ರೂಪವಾದ ವಿಶೇಷಣಕ್ಕೂ ಮತ್ತು ಚೈತನ್ಯಕ್ಕೂ ಹಾಗೆಯೇ ಅಲ್ಪಜ್ಞತ್ವ ರೂಪವಾದ ವಿಶೇಷಣಕ್ಕೂ ಮತ್ತು ಚೈತನ್ಯಕ್ಕೂ

ಅಭೇದವನ್ನು ಅಂಗೀಕಾರ ಮಾಡಿದರೆ ವಿಶಿಷ್ಟೈಕ್ಯವಿದ್ದರೆ ವಿಶೇಷಣೈಕ್ಯವು ಉಂಟಾಗಲಿ ಎಂಬ ಆಪಾದನೆಗೆ ಅವಕಾಶವೇ ಇಲ್ಲವಾದ್ದರಿಂದ ಅಂಗೀಕಾರ ಮಾಡಿದ ಅರ್ಥದಲ್ಲಿ ಯಾವ ಅನುಪಪತ್ತಿಯೂ ಇಲ್ಲವಾದ್ದರಿಂದ ಇಲ್ಲಿ ಲಕ್ಷಣಾಶ್ರಯಣದ ಪ್ರಸಂಗವೇ ಇಲ್ಲ.

ವಿಶೇಷಣದ್ವಯಸ್ಯಾತ್ರ ಯದ್ಯಪ್ಯಸ್ತಿ ವಿರುದ್ಧತಾ ।
ನ ಸಾ ದೃಷ್ಟಾಂತವಾಕ್ಯೇ ಮೇ ತದೇತೌ ದ್ರಾವಿಡಾಂಧ್ರಕೌ ॥ ೧೧೨೩ ॥

**ಅರ್ಥ–** ಯದ್ಯಪಿ = ವಸ್ತುತಃ, ಅತ್ರ = ತತ್ತ್ವಮಸಿ ಎಂಬ ವಾಕ್ಯದಲ್ಲಿ, ವಿಶೇಷಣದ್ವಯಸ್ಯ = ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವ ಎಂಬ ಎರಡು ವಿಶೇಷಣಗಳಿಗೆ, ವಿರುದ್ಧತಾ = ವಿರೋಧವು, ಅಸ್ತಿ = ಇದೆ. ಕಿಂತು = ಆದರೆ, ಸಾ = ಆ ವಿರೋಧವು, ದೃಷ್ಟಾಂತವಾಕ್ಯೇ = ಸೋಽಯಂ ದೇವದತ್ತಃ ಎಂಬ ದೃಷ್ಟಾಂತವಾಕ್ಯದಲ್ಲಿ, ಮೇ = ನನ್ನ, ಮತೇ = ಮತದಲ್ಲಿ, ನ ಅಸ್ತಿ = ಇಲ್ಲ. ತತ್ = ಆದ್ದರಿಂದ, ಏತೌ = ಇವೆರಡು ವಾಕ್ಯಭಾಗಗಳು, ದ್ರಾವಿಡಾಂಧ್ರಕೌ = ದ್ರಾವಿಡ ಮತ್ತು ಆಂಧ್ರರಂತೆ ಇವೆ.

**ಅನುವಾದ–** ತತ್ತ್ವಮಸಿ ಎಂಬ ವಾಕ್ಯದಲ್ಲಿ ತತ್ ತ್ವಂ ಪದಗಳಿಂದ ಹೇಳಲ್ಪಡುವ ವಿಶೇಷಣಗಳಲ್ಲಿ ಯದ್ಯಪಿ ವಿರೋಧವಿದೆ. ಆದರೆ ಸೋಽಯಂ ದೇವದತ್ತಃ ಎಂಬ ದೃಷ್ಟಾಂತವಾಕ್ಯದಲ್ಲಿ ನನಗೆ ವಿರೋಧವೇ ಇಲ್ಲ. ಈ ಎರಡು ವಾಕ್ಯಗಳು ದ್ರಾವಿಡ ಮತ್ತು ಆಂಧ್ರರಂತೆ.

**ಭಾವವಿಲಾಸಿನೀ–** ವಿಶೇಷಣದ್ವಯಸ್ಯ ತತ್ಪದೋಕ್ತಸಾರ್ವಜ್ಞಾದಿವಿಶೇಷಣಸ್ಯ ತ್ವಂಪದೋಕ್ತ ಕಿಂಚಿದಜ್ಞತ್ವಾದಿವಿಶೇಷಣಸ್ಯ ಚೇತ್ಯರ್ಥಃ । ಸಾ ವಿಶೇಷಣದ್ವಯವಿರುದ್ಧತಾ । ದೃಷ್ಟಾಂತವಾಕ್ಯೇ ಸೋಽಯಮಿತಿವಾಕ್ಯೇ । ಏಕಸ್ಯೈವ ದೇವದತ್ತಸ್ಯ ಕಾಶೀದೇಶಕಾಲಸ್ಥತ್ವಸ್ಯ ಏತದ್ದೇಶಕಾಲ-ಸ್ಥತ್ವಸ್ಯ ಚ ಕ್ರಮೇಣ ಸಂಭವೇನ ವಿರೋಧಾಭಾವಾತ್ । ಯುಗಪದ್ದೇಶಕಾಲದ್ವಯವರ್ತಿತ್ವಂ ಚ ನ ವಾಕ್ಯಾರ್ಥಃ । ವಕ್ತುರನಭಿಪ್ರೇತತ್ವಾತ್ । ಮ ಇತ್ಯುಪಲಕ್ಷಣಮ್ । ವಿದ್ವನ್ಮಾತ್ರಸ್ಯ ಚೇತಿ ದ್ರಷ್ಟವ್ಯಮ್। ತತ್ ತಸ್ಮಾತ್ ದೃಷ್ಟಾಂತೇ ವಿರೋಧಾಭಾವಾತ್ । ದಾರ್ಷ್ಟಾಂತಿಕ ವಾಕ್ಯೇ ತರ್ಕಸ್ಯಾನವಕಾಶಾತ್ । ಏತೌ ದೃಷ್ಟಾಂತದಾರ್ಷ್ಟಾಂತಿಕೌ । ದ್ರಾವಿಡಭಾಷಾಂ ಆಂಧ್ರೋ ನ ಜಾನಾತಿ । ಆಂಧ್ರವಾರ್ತಾಂ ಚ ದ್ರಾವಿಡೋ ನ ಜಾನಾತಿ । ತದ್ವದೇತಾವಪ್ಯಭೂತಾಮಿತಿ ಭಾವಃ ॥ ೧೧೨೩ ॥

**ವಿವರಣೆ–** ತತ್ತ್ವಮಸಿ ಎಂಬ ವಾಕ್ಯದಲ್ಲಿ ತತ್ ಪದದಿಂದ ಹೇಳಲ್ಪಟ್ಟ ಸರ್ವಜ್ಞತ್ವಕ್ಕೂ, ತ್ವಂ ಪದದಿಂದ ಉಕ್ತವಾದ ಅಲ್ಪಜ್ಞತ್ವರೂಪವಾದ ವಿಶೇಷಣಕ್ಕೂ ವಿರೋಧವಿದೆ. ಸೋಽಯಂ ದೇವದತ್ತಃ ಎನ್ನುವ ವಾಕ್ಯದಲ್ಲಿ ಒಬ್ಬನೇ ದೇವದತ್ತನಲ್ಲಿ ಕ್ರಮವಾಗಿ ತದ್ದೇಶಕಾಲ ಸಂಬಂಧ ಮತ್ತು ಏತದ್ದೇಶಕಾಲಸಂಬಂಧವು ಉಂಟಾಗಬಹುದಾದ್ದರಿಂದ ಯಾವ

ವಿರೋಧವೂ ಇಲ್ಲ. ಒಂದೇ ಕಾಲದಲ್ಲಿ ಎರಡು ದೇಶಗಳ ಸಂಬಂಧವನ್ನು ಈ ವಾಕ್ಯವು ಹೇಳುವುದಿಲ್ಲ, ಅದು ವಕ್ತೃವಿಗೂ ಅಭಿಮತವಲ್ಲ. ನನಗೆ ಸಮ್ಮತವಲ್ಲ ಎಂದಿಷ್ಟೇ ಅಲ್ಲ, ಯಾವ ವಿದ್ವಾಂಸರಿಗೂ ಸಮ್ಮತವಲ್ಲ ಎಂದು ತಿಳಿಯಬೇಕು. ದೃಷ್ಟಾಂತದಲ್ಲಿ ವಿರೋಧವಿಲ್ಲ, ದಾರ್ಷ್ಟಾಂತಿಕದಲ್ಲಿ ವಿರೋಧವಿದೆ. ಆದ್ದರಿಂದ ಒಬ್ಬನು ತೆಲುಗು ಮಾತನಾಡುವ ಆಂಧ್ರ, ಇನ್ನೊಬ್ಬ ತಮಿಳು ಮಾತನಾಡುವ ದ್ರಾವಿಡ. ಒಬ್ಬರ ಭಾಷೆ ಒಬ್ಬರಿಗೆ ತಿಳಿಯುವುದಿಲ್ಲ. ಅದರಂತೆ ಈ ಪ್ರಸಂಗವೂ ಆಯಿತು.

ತತ್ ತೇ ದೃಷ್ಟಾಂತಚರ್ಚೇಯಂ ನ ದಾರ್ಷ್ಟಾಂತಿಕಸಿದ್ಧಯೇ ।
ಕ್ರಮೇಲಕೋಽಯಂ ಕದಲೀಪಕ್ವತ್ವಙ್ಮೋಚನಂ ಚ ಸಾ ॥ ೧೧೨೪ ॥

**ಅರ್ಥ–** ತತ್ = ಆದ್ದರಿಂದ, ತೇ = ನಿನ್ನ, ಇಯಂ = ಈ, ದೃಷ್ಟಾಂತ ಚರ್ಚಾ = ದೃಷ್ಟಾಂತದ ಬಗೆಗಿನ ಚರ್ಚೆಯು, ದಾರ್ಷ್ಟಾಂತಿಕಸಿದ್ಧಯೇ = ದಾರ್ಷ್ಟಾಂತಿಕವಾದ ಅದ್ವೈತಸಿದ್ಧಿಗೆ, ನ = ಉಪಯೋಗಿಯಾಗುವುದಿಲ್ಲ. ಅಯಂ = ದಾರ್ಷ್ಟಾಂತಿಕವು, ಕ್ರಮೇಲಕಃ = ಒಂಟೆಯಂತಿದೆ, ಚ = ಮತ್ತು, ಸಾ = ನೀವು ಮಾಡುತ್ತಿರುವ ದೃಷ್ಟಾಂತವನ್ನು ತೋರಿಸುವ ಕೆಲಸವು, ಕದಲೀಪಕ್ವತ್ವಂಗ್ಮೋಚನಂ = ಬಾಳೆಹಣ್ಣಿನ ಸಿಪ್ಪೆ ಬಿಡಿಸುವ ರೀತಿಯಲ್ಲಿದೆ.

**ಅನುವಾದ–** ಆದ್ದರಿಂದ ಈ ದೃಷ್ಟಾಂತ ಚರ್ಚೆಯು ನಿನ್ನ ದಾರ್ಷ್ಟಾಂತಿಕ ಸಿದ್ಧಿಗೆ ಯಾವ ಉಪಕಾರವನ್ನೂ ಮಾಡುವುದಿಲ್ಲ. ದಾರ್ಷ್ಟಾಂತಿಕವು ಒಂದು ಒಂಟೆ. ನೀನು ಮಾಡುತ್ತಿರುವ ಕೆಲಸ ಬಾಳೆಹಣ್ಣಿನ ಸಿಪ್ಪೆಯನ್ನು ಬಿಡಿಸುವುದು.

**ಭಾವವಿಲಾಸಿನೀ–** ತತ್ತಸ್ಮಾತ್ ದೃಷ್ಟಾಂತೇ ಕ್ರಿಯಮಾಣಚರ್ಚಾಯಾಃ ದಾರ್ಷ್ಟಾಂತಿಕಾನನುಗುಣತ್ವಾತ್। ಅಯಂ ದಾರ್ಷ್ಟಾಂತಿಕಃ । ಸಾ ದೃಷ್ಟಾಂತಚರ್ಚಾ । ಯಥಾ ಮಹತಾ ಪ್ರಯತ್ನೇನ ಆಪಣಾದಾನೀಯ ಕದಲೀಪಕ್ವತ್ವಙ್ಮೋಚನೇಽಪಿ ಕಂಟಕಭಕ್ಷಕಸ್ಯೋಷ್ಟ್ರಸ್ಯ ನ ತೇನ ಪ್ರಯೋಜನಮ್ । ತಥೇಯಮಪಿ ಚರ್ಚಾ ದಾರ್ಷ್ಟಾಂತಿಕಾನನುಗುಣತ್ವಾದ್ವ್ಯರ್ಥೇತಿ ಭಾವಃ । ನನು ದಂಡವಿಶಿಷ್ಟಕುಂಡಲವಿಶಿಷ್ಟೈಕ್ಯೇ ದಂಡಕುಂಡಲಯೋರುಪಲಕ್ಷಣತ್ವಮೇವ ನ ವಿಶೇಷಣತ್ವಮಿತಿ ಚೇತ್ । ತರ್ಹಿ ವಿಶಿಷ್ಟೈಕ್ಯಸ್ಯಾಪ್ಯಭಾವಾತ್ ದೇವದತ್ತೋ ದೇವದತ್ತ ಇತಿವತ್ ವಾಕ್ಯಸ್ಯ ವೈಯರ್ಥ್ಯಂ ಸ್ಯಾತ್ । ಅದಂಡಿವ್ಯಾವೃತ್ತ್ಯಾ ಅಕುಂಡಲಿವ್ಯಾವೃತ್ತ್ಯಾ ಚ ವಿಶಿಷ್ಟೈಕ್ಯಾತ್ ನ ವೈಯರ್ಥ್ಯಮಿತಿ ಚೇತ್ । ನ । ದಂಡಕುಂಡಲಪದಾಭ್ಯಾಂ ದಂಡಕುಂಡಲಯೋರಸಮರ್ಪಣೇ ಉಕ್ತವ್ಯಾವೃತ್ತ್ಯೋರಪ್ಯಸಂಭವಾತ್ । ಕಥಂ ತರ್ಹಿ ಕಾಕವದ್ದೇವದತ್ತಗೃಹಮಿತ್ಯತ್ರ ಕಾಕಾದೀನಾಂ ಗೃಹವ್ಯಾವರ್ತಕತ್ವಮಿತಿ ಚೇತ್ ತತ್ರಾಪಿ ಕದಾಚಿತ್ಕಾಕಸಂಬಂಧಸ್ಯ ವಿದ್ಯಮಾನತ್ವಾದೇವ ತದಸಂಬಂಧಿಗೃಹಾದ್ವ್ಯಾವೃತ್ತಿಃ। ನ ತೂಷ್ಣೀಮ್ । ಅನ್ಯಥಾ ಸರ್ವಥಾ ಕಾಕಾಸಂಬಂಧಿನಿ ಗೃಹೇಽಪಿ

ಕಾಕವದಿತಿ ಪ್ರಯೋಗಪ್ರಸಂಗಾತ್ । ಮತುಪೋ ವೈಯರ್ಥ್ಯಾಚ್ಚ । ಏವಂ ತರ್ಹಿ ಕಾಕೋऽಪಿ ವಿಶೇಷಣಮೇವಾಭೂತ್ ನೋಪಲಕ್ಷಣಮಿತಿ ಚೇತ್ । ಸತ್ಯಮ್ । ತದಸಂಬಂಧಿನಃ ತದ್ವ್ಯಾವರ್ತಕತ್ವಾಯೋಗಾತ್ತತ್ ಸಂಬಂಧೇ ಚ ತದ್ವಿಶೇಷಣತ್ವಾಪರಿಹಾರಾನ್ನ ಮಹದಂತರಂ ವಿಶೇಷಣೋಪಲಕ್ಷಣಯೋಃ । ಕುಂಡಲಾದೀನಾಂ ಬಹುಕಾಲಸಂಬಂಧಾತ್ ವ್ಯಾವರ್ತ್ಯ-ಕಾಂತರಮನಂತರ್ಭಾವ್ಯಸಾಕ್ಷಾದ್ವ್ಯಾವರ್ತಕತ್ವಾದ್ವಾ ಕಾಕಾದೀನಾಮಲ್ಪಕಾಲಂ ಸಂಬಂಧಾತ್-ಸ್ವಾಪಗಮೇऽಪ್ಯತ್ಪಣತ್ವಾದಿವ್ಯಾವರ್ತಕಾಂತರಮಂತರ್ಭಾವ್ಯ ವ್ಯಾವರ್ತಕತ್ವಾದ್ವಾ ಕ್ವಾಪಿ ದ್ವಿ-ಪ್ರಕಾರತ್ವಕಥಾ । ಕಿಂಚೈವಂಸತಿ ಸೋಯಮಿತ್ಯತ್ರಾಪಿ ತತ್ಪದೇನಾ ತದ್ವ್ಯಾವೃತ್ತೇಃ ಇದಂಪದೇನ ಚಾನಿದಂಪದಾರ್ಥವ್ಯಾವೃತ್ತೇಶ್ಚಾವಶ್ಯಕತ್ವೇನ ವಿಶಿಷ್ಟೈಕ್ಯಸ್ಯೈವಾಪಾತಾತ್ ಸ್ವರೂಪೈಕ್ಯಕಥಾಯಾಂ ನೇದಮುದಾಹರಣಂ ಸ್ಯಾತ್ ।

ನನು ತತ್ತ್ವಮಸೀತ್ಯತ್ರಾಪ್ಯಸ್ತು ತರ್ಹಿ ವ್ಯಾವೃತ್ತಿವಿಶಿಷ್ಟೈಕ್ಯಂ ಸಾರ್ವಜ್ಞಾದಿಗುಣವಿಶಿಷ್ಟೈಕ್ಯಮೇವ ನಾಂಗೀಕ್ರಿಯತ ಇತಿ ಚೇನ್ನ ಅಭಾವವೈಶಿಷ್ಟ್ಯಾಂಗೀಕಾರೇ ಸುತರಾಂ ನಿರ್ವಿಕಲ್ಪಕತ್ವಾಸಂಭವಾತ್ । ಕಿಂಚ ದೇವದತ್ತಃ ಸೋಯಮಿತ್ಯತ್ರ ಏಕಸ್ಯೈವ ದೇವದತ್ತಸ್ಯೈಕದೋಭಯದೇಶಸ್ಥ-ತ್ವಾಯೋಗಾತ್ ಅತೀತಕಾಶೀದೇಶಸ್ಥತ್ವಾನುವಾದಕತತ್ಪದವ್ಯಾವರ್ತ್ಯಸ್ಯ ತದಾ ಕಾಶೀದೇಶಾವರ್ತಿನೋऽನ್ಯತ್ವಸ್ಯೈವ ಪ್ರಾಪ್ತ್ಯಾ ಇದಾನೀಮೇತದ್ದೇಶಸ್ಥತ್ವಾರ್ಥಕೇದಂಪದ-ವ್ಯಾವರ್ತ್ಯಸ್ಯ ಚೇದಾನೀಮೇತದ್ದೇಶಾತಿರಿಕ್ತ ದೇಶವರ್ತಿನೋऽನ್ಯತ್ವಸ್ಯೈವ ಪ್ರಾಪ್ತ್ಯಾ ವ್ಯಾವೃತ್ತಿ-ವಿಶಿಷ್ಟೈಕ್ಯಸ್ಯಾಪ್ಯಸಂಭವಾತ್ । ತತ್ತ್ವಮಸೀತ್ಯತ್ರ ಸಾರ್ವಜ್ಞಾದಿಗುಣವಿಶಿಷ್ಟಾರ್ಥಕತತ್ಪದೇನ ಕಿಂಚಿತ್ಜ್ಞಜೀವಸ್ಯೈವ ವ್ಯಾವರ್ತಿತತ್ವೇನಾಲ್ಪಜ್ಞತ್ವಾದಿವಿಶಿಷ್ಟಾರ್ಥಕತ್ವಂಪದೇನ ಚ ಸರ್ವಜ್ಞಬ್ರಹ್ಮಣ ಏವ ವ್ಯಾವರ್ತಿತತ್ವೇನ ವ್ಯಾವೃತ್ತೇಶ್ಚ ಭೇದಾಪರಪರ್ಯಾಯತ್ವೇನ ಪುನಸ್ತಯೋರೈಕ್ಯಾ-ಯೋಗಾತ್ । ಅಂಗೀಕೃತ್ಯ ಚೇದಮುದಿತಮ್ । ವಸ್ತುತಸ್ತ್ವತದ್ವ್ಯಾವೃತ್ತಿವೈಶಿಷ್ಟ್ಯಾಪೇಕ್ಷಯಾ ತತ್ತದ್ವೈಶಿಷ್ಟ್ಯಸ್ಯೈವ ಲಘುತ್ವಾತ್ ಯಥಾಸಂಭವಂ ವಾಕ್ಯಾರ್ಥತ್ವಮೂಹ್ಯಮ್ । ಅತಃ ಸೋಯಮಿತಿ ದೃಷ್ಟಾಂತಸ್ಯ ನ ಕಥಂಚಿತದಪಿ ಪರಮತೇ ಪ್ರಕೃತೋಪಯೋಗಃ । ಪ್ರತ್ಯುತಾ-ವಿರುದ್ಧಪದದ್ವಯಾರ್ಥಕತಯಾ ಐಕ್ಯೋಪಯೋಗಿತದ್ವಾಕ್ಯಂ ವಿರುದ್ಧಪದದ್ವಯಾರ್ಥಕತಯಾ ಸಾಕ್ಷಾದೈಕ್ಯವಿರೋಧಿನಸ್ತತ್ತ್ವಮಸೀತಿ ವಾಕ್ಯಸ್ಯ ಪ್ರತಿಕೂಲಮೇವ ।

ಕಿಂಚ ವಿಶೇಷಣಸ್ಯೋಪಲಕ್ಷಣಸ್ಯ ವಾ ಕಿಮಿದಂ ವ್ಯಾವರ್ತಕತ್ವಂ ನಾಮ । ನ ತಾವದ್ವಸ್ತು-ನಿಷ್ಠವ್ಯಾವೃತ್ತಿಜನಕತ್ವಮ್ । ಘಟಪಟಾದಿನಿಷ್ಠವ್ಯಾವೃತ್ತ್ಯಾಖ್ಯಭೇದಸ್ಯ ವಿಲಕ್ಷಣತತ್ತತ್-ಸಾಮಗ್ರೀಭೇದೇನೈವ ಸಂಭವಾತ್ । ಉತ್ಪದ್ಯಮಾನಘಟೇನ ಸಹಜಾಯಮಾನಸ್ಯ ಭೇದಸ್ಯ ವಸ್ತುನಿಷ್ಠವಿಶೇಷಣಸ್ಯ ಚ ಸಹೋತ್ಪದ್ಯಮಾನಸ್ಯಾನ್ಯೋನ್ಯಂ ಜನ್ಯಜನಕಭಾವಾಸಂಭವಾಚ್ಚ । ನಾಪಿ ವಸ್ತುನಿಷ್ಠವ್ಯಾವೃತ್ತಿಬೋಧಜನಕತ್ವಂ ವಿಲಕ್ಷಣಸ್ವಸ್ವಸಾಮಗ್ರ್ಯಾ ಬೋಧ್ಯಮಾನವಸ್ತುತಃ ಸ್ವೇತರಸಕಲಾಸಂಕೀರ್ಣತಯೈವ ಬೋಧನಿಯಮೇನ ತತ್ತದ್ವಸ್ತುನಿಷ್ಠವ್ಯಾವೃತ್ತಿಬೋಧೇऽಪಿ ವಿಶೇಷಣಾದ್ಯನಪೇಕ್ಷಣಾತ್ । ಕಿಂತು ವ್ಯಾವೃತ್ತೌ ವಿಪ್ರತಿಪನ್ನಂ ಮಂದಂ ಪ್ರತಿ ಲಿಂಗತಯಾ

ವ್ಯಾವೃತ್ತ್ಯನುಮಾಪಕತ್ವಮೇವ । ಅನುಭವಸ್ಯ ಪರಂ ಪ್ರತ್ಯುಪನ್ಯಾಸಾಯೋಗಾತ್ । ಲಿಂಗಂ ಚ ತತ್ರ ಸದೇವ ಭವೇತ್ । ಅನ್ಯಥಾ ಸ್ವರೂಪಾಸಿದ್ಧಿಪ್ರಸಂಗಾತ್ । ಕಥಂ ತರ್ಹಿ ಕಾಕಾದೀನಾಮುಪಲಕ್ಷಣತ್ವಮಿತಿ ಚೇತ್ । ನ । ತಸ್ಯಾಪಿ ಗೃಹೇ ವಿದ್ಯಾಮಾನತಾದಶಾಯಾಂ ನ ಕಾಪ್ಯನುಪಪತ್ತಿಃ । ಗೃಹಾದಪಗಮೇ ತು ತತ್‌ಕೃತಮುತ್ಪಣತ್ವಾದಿಕಮೇವ ವ್ಯಾವರ್ತಕಮ್ । ಗುರೂಣಾಂ ಟೀಕಾ ಕುರೂಣಾಂ ಕ್ಷೇತ್ರಮಿತ್ಯತ್ರಾಪಿ ಗುರುಕೃತತ್ವಂ ಕುರುಯುದ್ಧಯೋಗ್ಯಭೂಮಿತ್ವಂ ಚ ತತ್ತನ್ನಿಷ್ಠಮೇವ ಲಿಂಗಮ್ । ಘಟಾಭಾವ ಇತ್ಯತ್ರ ಚಾಭಾವನಿಷ್ಠಂ ಘಟಪ್ರತಿಯೋಗಿಕತ್ವಮೇವ ಲಿಂಗಮ್ । ಗುರ್ವಾದೀನಾಂ ಚ ಸಾಕ್ಷಾತ್ತನ್ನಿಷ್ಠತ್ವಾಭಾವೇನ ಮುಖ್ಯವ್ಯಾವರ್ತಕತ್ವಾಭಾವಾತ್ ವ್ಯಾವರ್ತಕಘಟಕತಯಾ ವ್ಯಾವರ್ತಕತ್ವೋಪಚಾರಾತ್ ಉಪಲಕ್ಷಣತ್ವಕಥಾ । ಜ್ಞಾನಸ್ಯ ಚ ಭಿನ್ನಭಿನ್ನಸ್ವಸ್ವಸಾಮಗ್ರೀಸಾಮರ್ಥ್ಯಾತ್ ವ್ಯಾವೃತ್ತತಯೈವ ಜಾಯಮಾನಸ್ಯ ನ ಘಟೋ ವ್ಯಾವರ್ತಕಃ । ಜ್ಞಾನಗ್ರಾಹಕಸಾಕ್ಷಿಣೈವ ತನ್ನಿಷ್ಠವ್ಯಾವೃತ್ತೇರಪಿ ಸ್ವಸಾಮರ್ಥ್ಯೇನ ಗ್ರಹಣಸಂಭವಾತ್ ಜ್ಞಾನನಿಷ್ಠವ್ಯಾವೃತ್ತಿಬೋಧೇಽಪಿ ನ ಘಟಸ್ಯೋಪಯೋಗಃ। ಅತೀತಾನಾಗತಜ್ಞಾನೇ ಉಭಯೋರಪ್ಯಸಂಭವಾತ್ । ಏಕಸ್ಮಿನ್ನೇವ ಘಟೇ ಭೂಯೋ ಭೂಯೋ ಜಾಯಮಾನಜ್ಞಾನಸ್ಯ ತತ್‌ಪ್ರಾಗಭಾವಭೇದಾತ್ ಸಾಮಗ್ರೀಭೇದೋಽಸ್ತ್ಯೇವ । ಜ್ಞಾನಜನಕಸನ್ನಿಕರ್ಷಾಶ್ರಯತಯಾ ವಿಷಯಸ್ಯಾಪಿ ಜ್ಞಾನೇ ನಿಯಮೇನೋಲ್ಲೇಖಾತ್ ವಿಷಯಸ್ಯಾಪಿ ವ್ಯಾವರ್ತಕತ್ವೋಪಚಾರಃ । ಜ್ಞಾನವ್ಯಾವೃತ್ತೌ ವಿವದಮಾನಂ ಪ್ರತಿ ತು ಘಟವಿಷಯಕತ್ವಾಖ್ಯಜ್ಞಾನನಿಷ್ಠಲಿಂಗೇನ ಜ್ಞಾನಾನಾಂತರಾದ್ವ್ಯಾವೃತ್ತಿರ್ಬೋಧ್ಯತೇ । ಭ್ರಮೇ ಚ ಭಿನ್ನಭಿನ್ನದೋಷಘಟಿತಸಾಮಗ್ರ್ಯಾ ಭಿನ್ನಭಿನ್ನೋ ಭ್ರಮೋಽಪಿ ಜಾಯತೇ । ತಸ್ಮಿಂಶ್ಚ ಭ್ರಮೇ ದೋಷಸಾಮರ್ಥ್ಯಾದೇವಾವಿದ್ಯಮಾನಸ್ಯ ತಸ್ಯ ತಸ್ಯ ಭ್ರಾಂತಾರ್ಥಸ್ಯ ಚೋಲ್ಲೇಖನಿಯಮಾದ್ವ್ಯಾವರ್ತಕತ್ವೋಪಚಾರಃ । ಪರಂ ಪ್ರತಿ ವ್ಯಾವೃತ್ತಿಬೋಧನಾಯ ತು ಶಶವಿಷಾಣವಿಷಯಕತ್ವಂ ಜ್ಞಾನನಿಷ್ಠಮೇವ ಲಿಂಗಮ್ । ತಸ್ಯ ಚ ಸತ್ಯತ್ವೇನ ಕಾರಣತ್ವಸಂಭವಾನ್ನ ಕಾಪ್ಯನುಪಪತ್ತಿಃ । ನಹಿ ಭಿನ್ನಭಿನ್ನಾಂಕುರಜನ್ಯಕಲಮಬೀಜಭೇದೋ ದೇವದತ್ತಸಂಬಂಧಾಯತ್ತಃ । ಮಧ್ಯೇಮಾರ್ಗಂ ಪತಿತಬೀಜಭೇದಾಭಾವಪ್ರಸಂಗಾತ್ । ದೇವದತ್ತಸ್ಯೈವ ಬೀಜೇಷು ಪರಸ್ಪರಂ ಭೇದಾಭಾವಪ್ರಸಂಗಾಚ್ಚ । ಬೀಜನಿಷ್ಠದೇವದತ್ತಸಂಬಂಧಿತ್ವಂ ಯಜ್ಞದತ್ತೀಯಬೀಜಾದಿತೋ ವ್ಯಾವೃತ್ತಿಬೋಧೇ ಕದಾಚಿದುಪಯುಜ್ಯೇತಾಪಿ । ಏವಂಚ ದಂಡಕುಂಡಲಯೋರುಪಲಕ್ಷಣತ್ವೋಕ್ತಾವಪಿ ವಿಶೇಷಣತ್ವಸ್ಯೈವೋಕ್ತತ್ವೇನೋಕ್ತತರ್ಕಸ್ಯ ವ್ಯಭಿಚಾರತಾದವಸ್ಥ್ಯಮ್ ॥೧೧೨೪॥

**ವಿವರಣೆ–** ದೃಷ್ಟಾಂತದಲ್ಲಿ ಮಾಡುವ ಚರ್ಚೆಯಿಂದ ದ್ರಾರ್ಷ್ಟಾಂತಿಕಕ್ಕೆ ಯಾವ ಉಪಕಾರವೂ ಇಲ್ಲ. ಹೇಗೆ ಬಹಳ ಪ್ರಯತ್ನಪಟ್ಟು ಅಂಗಡಿಯಿಂದ ಬಾಳೆಹಣ್ಣನ್ನು ತಂದು ಸಿಪ್ಪೆಯನ್ನು ಬಿಡಿಸಿದರೆ ಅದರಿಂದ ಮುಳ್ಳನ್ನು ತಿನ್ನುವ ಒಂಟೆಗೆ ಪ್ರಯೋಜನವಿಲ್ಲವೋ, ಹಾಗೆಯೇ ಒಂಟೆಯಂತಿರುವ ದಾರ್ಷ್ಟಾಂತಿಕಕ್ಕೆ ನೀನು ಮಾಡುವ ದೃಷ್ಟಾಂತ ಚರ್ಚೆಯಿಂದ ಯಾವ ಪ್ರಯೋಜನವೂ ಇಲ್ಲ. ಹಿಂದೆ ನಾವು ದಂಡವಿಶಿಷ್ಟ ಕುಂಡಲವಿಶಿಷ್ಟಗಳಿಗೆ ಐಕ್ಯವುಂಟಾದರೆ ದಂಡಕುಂಡಲಗಳಿಗೆ ಐಕ್ಯವಿಲ್ಲ ಎಂದು ಅದ್ವೈತಿಗಳ ತರ್ಕಕ್ಕೆ

ವ್ಯಭಿಚಾರವನ್ನು ಹೇಳಿದ್ದವು. ಅದರ ಮೇಲೆ ಅದ್ವೈತಿಗಳು ಶಂಕೆ ಮಾಡುತ್ತಾರೆ. ದಂಡೀ ಕುಂಡಲೀ ಎಂಬ ಸ್ಥಳದಲ್ಲಿ ದಂಡಕುಂಡಲಗಳು ಉಪಲಕ್ಷಣ ಮಾತ್ರ. ಅವು ವಿಶೇಷಣವೇ ಅಲ್ಲ ಎಂದು ಅವರ ಆಕ್ಷೇಪ. ಹಾಗಾದರೆ ಅಲ್ಲಿ ವಿಶಿಷ್ಟೈಕ್ಯವೂ ಇಲ್ಲದಿರುವುದರಿಂದ ದಂಡೀ ಕುಂಡಲೀ ಎಂಬ ವಾಕ್ಯಕ್ಕೆ ದೇವದತ್ತ ದೇವದತ್ತ ಎಂದು ಇಷ್ಟೇ ಅರ್ಥವಾಗುವುದರಿಂದ ಆ ವಾಕ್ಯವೇ ವ್ಯರ್ಥವಾಗುತ್ತದೆ ಎಂದು ನಮ್ಮ ಉತ್ತರ. ವಾಕ್ಯವು ವ್ಯರ್ಥವಾಗುವುದಿಲ್ಲ, ದಂಡೀ ಪದದಿಂದ ಅದಂಡೀವ್ಯಾವೃತ್ತಿವಿಶಿಷ್ಟವಾದುದು, ಕುಂಡಲೀ ಪದದಿಂದ ಅಕುಂಡಲೀ ವ್ಯಾವೃತ್ತಿವಿಶಿಷ್ಟವಾದುದು ಲಬ್ಧವಾಗಿ ಅವುಗಳಿಗೆ ಐಕ್ಯವು ಸಿದ್ಧವಾಗುತ್ತದೆ ಎಂಬ ಶಂಕೆಯೂ ಸರಿಯಿಲ್ಲ. ದಂಡೀ ಕುಂಡಲೀ ಪದಗಳು ದೇವದತ್ತನಲ್ಲಿ ದಂಡಕುಂಡಲಗಳನ್ನು ಸಮರ್ಪಣೆ ಮಾಡುತ್ತವೆಯೋ, ಇಲ್ಲವೋ? ಸಮರ್ಪಣೆ ಮಾಡುವುದಿಲ್ಲ ಎಂದರೆ ದೇವದತ್ತನಲ್ಲಿ ಅದಂಡಿ ವ್ಯಾವೃತ್ತಿಯು, ಅಕುಂಡಲ ವ್ಯಾವೃತ್ತಿಯು ಸಿದ್ಧವಾಗುವುದಿಲ್ಲ. ಹಾಗಾದರೆ 'ಕಾಕವದ್ ದೇವದತ್ತ ಗೃಹಂ' ಎಂಬಲ್ಲಿ ಕಾಗೆಗೆ ಹೇಗೆ ದೇವದತ್ತಗೃಹವ್ಯಾವರ್ತಕತ್ವವು ಉಪಪನ್ನವಾಗುತ್ತದೆ ಎಂಬ ಪ್ರಶ್ನೆ ಬರುತ್ತದೆ. ಅಲ್ಲಿಯೂ ಕೂಡ ಕಾಕಸಂಬಂಧವೇ ವ್ಯಾವರ್ತಕ, ಅದು ಗೃಹದಲ್ಲಿ ಇದೆ. ಅದು ಅಂತಹ ಕಾಕಸಂಬಂಧ ಇಲ್ಲದಿರುವ ಗೃಹದಿಂದ ದೇವದತ್ತನ ಗೃಹವನ್ನು ವ್ಯಾವೃತ್ತಿ ಮಾಡುತ್ತದೆಯೇ ಹೊರತು ತಾನು ಅಲ್ಲಿ ಇಲ್ಲದೇ ವ್ಯಾವರ್ತನೆ ಮಾಡುವುದಿಲ್ಲ. ಕಾಕಸಂಬಂಧವಿಲ್ಲದೆಯೂ ವ್ಯಾವರ್ತನೆ ಮಾಡುವುದಾದರೆ ಕಾಕ-ಅಸಂಬಂಧಿಯಾದ ಯಜ್ಞದತ್ತಗೃಹದಲ್ಲಿಯೂ ಕಾಕವದ್ ಯಜ್ಞದತ್ತಗೃಹಂ ಎಂಬ ಪ್ರಯೋಗವು ಬರಬೇಕಾಗುತ್ತದೆ. ಅಲ್ಲದೇ, ಕಾಕವದ್ ಎಂಬಲ್ಲಿ ಮತುಪ್ ಪ್ರತ್ಯಯವಿದೆ. ಅದು ಸಂಬಂಧವನ್ನು ಹೇಳುತ್ತದೆ. ಆದ್ದರಿಂದ ಕಾಕದ ಸಂಬಂಧವಿರುವುದರಿಂದಲೇ ಕಾಕವು ದೇವದತ್ತ ಗೃಹವನ್ನು ವ್ಯಾವೃತ್ತಿ ಮಾಡುತ್ತದೆ. ಹಾಗಾದರೆ ಕಾಕವು ವಿಶೇಷಣವೇ ಆಗಲಿ ಏಕೆ ಅದನ್ನು ಉಪಲಕ್ಷಣವೆಂದು ಒಪ್ಪಬೇಕು, ಹೇಗೆ ವಿಶೇಷಣ ಸಂಬಂಧವು ವಿಶೇಷ್ಯದಲ್ಲಿದೆಯೋ ಹಾಗೆಯೇ ಉಪಲಕ್ಷಣದ ಸಂಬಂಧವು ವಿಶೇಷ್ಯದಲ್ಲಿದೆಯಷ್ಟೇ ಎಂಬ ಪ್ರಶ್ನೆಯು ಬರುತ್ತದೆ. ಇದಕ್ಕೆ ಹೌದು ಎಂದೇ ಉತ್ತರ. ದೇವದತ್ತ ಗೃಹ ಅಸಂಬಂಧಿ ಯಾದುದು, ದೇವದತ್ತ ಗೃಹವನ್ನು ವ್ಯಾವೃತ್ತಿ ಮಾಡಲು ಸಾಧ್ಯವಿಲ್ಲವಾದ್ದರಿಂದ, ದೇವದತ್ತ ಗೃಹ ಸಂಬಂಧವನ್ನು ಒಪ್ಪಿದರೆ ವಿಶೇಷಣತ್ವವನ್ನು ಒಪ್ಪದಿರಲು ಸಾಧ್ಯವಿಲ್ಲವಾದ್ದರಿಂದ ವಿಶೇಷಣ ಮತ್ತು ಉಪಲಕ್ಷಣಗಳಿಗೆ ಬಹಳ ವ್ಯತ್ಯಾಸವೇನೂ ಇಲ್ಲ. ಕುಂಡಲ ಮೊದಲಾದವುಗಳು ದೇವದತ್ತನ ಜೊತೆಯಲ್ಲಿ ಬಹುಕಾಲದ ಸಂಬಂಧವನ್ನು ಹೊಂದಿರುವುದರಿಂದ ಇನ್ನೊಂದು ವ್ಯಾವರ್ತಕವನ್ನು ಅಪೇಕ್ಷಿಸದೆ ಸಾಕ್ಷಾತ್ತಾಗಿ ವ್ಯಾವರ್ತಕವಾದ ಕಾರಣದಿಂದ, ಮತ್ತು ಕಾಕಾದಿಗಳು ಅಲ್ಪಕಾಲಸಂಬಂಧವಿದ್ದ ಕಾರಣ ಅವು ಹೋದಮೇಲೆಯೂ ಉತ್ಪಣತ್ವ ಮೊದಲಾದ ಇನ್ನೊಂದು ವ್ಯಾವರ್ತಕವನ್ನು ಅಪೇಕ್ಷಿಸಿ ವ್ಯಾವರ್ತನೆಯನ್ನು ಉಂಟುಮಾಡುವ ಕಾರಣ ಕುಂಡಲವನ್ನು ವಿಶೇಷಣವೆಂದೂ, ಕಾಕವನ್ನು ಉಪಲಕ್ಷಣವೆಂದು ಕರೆಯುವುದಷ್ಟೇ. ಅದೂ ಅಲ್ಲದೇ, ಸೋಯಂ

ಎಂಬಲ್ಲಿಯೂ ಕೂಡ ತತ್ಪದದಿಂದ ಅತದ್ವ್ಯಾವೃತ್ತಿಯೂ ಇದಂ ಪದದಿಂದ ಅನಿದಂ ವ್ಯಾವೃತ್ತಿಯೂ ಲಭ್ಯವಾಗುತ್ತದೆ ಎಂದು ಅವಶ್ಯಕವಾಗಿ ಹೇಳಬೇಕಾಗುವುದರಿಂದ ಅತತ್ ವ್ಯಾವೃತ್ತಿ ವಿಶಿಷ್ಟಕ್ಕೂ, ಅನಿದಂವ್ಯಾವೃತ್ತಿ ವಿಶಿಷ್ಟಕ್ಕೂ ಐಕ್ಯವು ಪ್ರಾಪ್ತವಾಯಿತೇ ಹೊರತು ಸ್ವರೂಪೈಕ್ಯದ ವಿಷಯದಲ್ಲಿ ಇದು ಉದಾಹರಣೆಯೇ ಆಗುವುದಿಲ್ಲ. ಹಾಗಾದರೆ ತತ್ತ್ವಮಸಿ ವಾಕ್ಯದಲ್ಲಿಯೂ ವ್ಯಾವೃತ್ತಿ ವಿಶಿಷ್ಟೈಕ್ಯವನ್ನೇ ಅಂಗೀಕಾರ ಮಾಡುತ್ತೇವೆ ಸಾರ್ವಜ್ಞಾದಿ ಗುಣವಿಶಿಷ್ಟವನ್ನು ಅಂಗೀಕಾರ ಮಾಡುವುದಿಲ್ಲ ಎಂದು ಹೇಳಿದರೆ ಅಭಾವವು ಭಾವಕ್ಕಿಂತ ಗುರುಭೂತವಾದುದರಿಂದ ಅಭಾವವೈಶಿಷ್ಟ್ಯವನ್ನು ಅಂಗೀಕಾರ ಮಾಡಿದರೆ ಬ್ರಹ್ಮನ ನಿರ್ವಿಕಲ್ಪಕತ್ವಕ್ಕೆ ಭಂಗಬರುವುದರಿಂದ ಹಾಗೆ ಮಾಡಲು ಸಾಧ್ಯವಿಲ್ಲ. ಅದೂ ಅಲ್ಲದೇ, ಸೋಯಂ ದೇವದತ್ತಃ' ಎಂಬಲ್ಲಿ ಒಬ್ಬನೇ ದೇವದತ್ತನಿಗೆ ಒಂದೇ ಕಾಲದಲ್ಲಿ ಉಭಯ ದೇಶಸಂಬಂಧವು ಉಂಟಾಗಲು ಸಾಧ್ಯವಿಲ್ಲದಿರುವುದರಿಂದ ತತ್ ಪದವು ಅತೀತ ಕಾಶೀದೇಶಸಂಬಂಧವನ್ನು ಅನುವಾದ ಮಾಡಿ ಆಗ ಕಾಶಿದೇಶದ ಸಂಬಂಧಶೂನ್ಯದಿಂದ ವ್ಯಾವೃತ್ತಿಯನ್ನೇ ತಿಳಿಸಿಕೊಡುತ್ತದೆ. ಈಗ ಈ ದೇಶಕಾಲದ ಸಂಬಂಧವನ್ನು ಹೇಳುವ ಇದಂ ಪದವು ಈಗ ಈ ದೇಶವನ್ನು ಬಿಟ್ಟು ಬೇರೆ ದೇಶದಲ್ಲಿರುವ ಪುರುಷನಿಂದ ವ್ಯಾವೃತ್ತಿಯನ್ನು ಉಂಟುಮಾಡಿಕೊಡುತ್ತದೆ. ಹೀಗೆ ಎರಡು ವ್ಯಾವೃತ್ತಿಗಳು ಮತ್ತು ವ್ಯಾವೃತ್ತಿವಿಶಿಷ್ಟವಾದ ಪದಾರ್ಥಗಳು ಎರಡು. ವ್ಯಾವೃತ್ತಿ ವಿಶಿಷ್ಟವಾದ ಪದಾರ್ಥಗಳಿಗೆ ಇಲ್ಲಿ ಐಕ್ಯವೇ ಪ್ರಾಪ್ತವಾಗುವುದಿಲ್ಲ. ತತ್ತ್ವಮಸಿ ವಾಕ್ಯದಲ್ಲಾದರೆ ತತ್ ಪದಕ್ಕೆ ಸಾರ್ವಜ್ಞಾದಿ ಗುಣವಿಶಿಷ್ಟ ಎಂದು ಅರ್ಥ. ಆದ್ದರಿಂದ ಅದು ಸಾರ್ವಜ್ಞ್ಯ ವಿರುದ್ಧವಾದ ಅಲ್ಪಜ್ಞತ್ವವನ್ನು ಹೊಂದಿದ ಜೀವನನ್ನೇ ವ್ಯಾವೃತ್ತಿ ಮಾಡುತ್ತದೆ. ತ್ವಂ ಪದವು ಅಲ್ಪಜ್ಞತ್ವಾದಿ ವಿಶಿಷ್ಟ ಜೀವನನ್ನು ತಿಳಿಸುತ್ತಾ, ಸರ್ವಜ್ಞ ಬ್ರಹ್ಮನ ವ್ಯಾವೃತ್ತಿಯನ್ನೇ ಉಂಟುಮಾಡುತ್ತದೆ. ವ್ಯಾವೃತ್ತಿಯೆಂದರೂ ಭೇದವೆಂದರೂ ಒಂದೇ. ಆದ್ದರಿಂದ ಎರಡು ಪದಗಳೂ ಪರಸ್ಪರ ವ್ಯಾವೃತ್ತಿಯನ್ನು ತಿಳಿಸಿದಾಗ ಪುನಃ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳಲು ಸಾಧ್ಯವಿಲ್ಲ. ಇದು ಅದ್ವೈತಿಗಳ ಪ್ರಕ್ರಿಯೆಯನ್ನು ಅಂಗೀಕಾರ ಮಾಡಿ ಹೇಳಿದ ಮಾತು. ನಿಜವಾಗಿ ವಿಚಾರ ಮಾಡಿದರೆ ಅತದ್ವ್ಯಾವೃತ್ತಿ ವೈಶಿಷ್ಟ್ಯಕ್ಕಿಂತ ತದ್ವೈಶಿಷ್ಟ್ಯವು ಲಘುಭೂತವಾದುದು. ಆದ್ದರಿಂದ ಸೋಯಂ ವಾಕ್ಯದಲ್ಲಿ ತದ್ದೇಶಕಾಲವೈಶಿಷ್ಟ್ಯ ಮತ್ತು ಏತದ್ದೇಶಕಾಲ- ವೈಶಿಷ್ಟ್ಯವನ್ನು ಹೇಳಬೇಕು. ಆಗ ದಾರ್ಷ್ಟಾಂತಿಕಕ್ಕೆ ಯಾವ ಉಪಯೋಗವೂ ಇಲ್ಲ. ಇನ್ನೂ ವಿಚಾರ ಮಾಡಿದರೆ ಸೋಯಂ ವಾಕ್ಯವು ಅವಿರುದ್ಧವಾದ ಎರಡು ವಿಶೇಷಣಗಳನ್ನು ಹೇಳುವುದರಿಂದ ಅದು ಐಕ್ಯಕ್ಕೆ ಉಪಯೋಗಿಯಾಗುತ್ತದೆ. ತತ್ತ್ವಮಸಿ ವಾಕ್ಯವಾದರೂ ವಿರುದ್ಧವಾದ ಎರಡು ವಿಶೇಷಣವನ್ನು ಹೇಳುವುದರಿಂದ ಐಕ್ಯಕ್ಕೆ ಪ್ರತಿಕೂಲವಾಗಿಯೇ ಇದೆ. ಅಷ್ಟೇ ಅಲ್ಲದೆ, ವಿಶೇಷಣಕ್ಕಾಗಲೀ ಅಥವಾ ಉಪಲಕ್ಷಣಕ್ಕಾಗಲೀ ವ್ಯಾವರ್ತಕತ್ವವು ಇದೆಯಷ್ಟೇ. ಈ ವ್ಯಾವರ್ತಕತ್ವ ಎಂದರೆ ಏನು ಎಂದು ವಿಚಾರ ಮಾಡಬೇಕು. ವ್ಯಾವರ್ತಕತ್ವವೆಂದರೆ ವ್ಯಾವೃತ್ತಿ ಜನಕತ್ವವಲ್ಲ. ಏಕೆಂದರೆ ವ್ಯಾವೃತ್ತಿ ಎಂದರೆ ಭೇದ ಎಂದು ಮೊದಲೇ ಹೇಳಿದ್ದೇವೆ.

ಆದ್ದರಿಂದ ಘಟಪಟಾದಿನಿಷ್ಠ ವ್ಯಾವೃತ್ತಿಯು ಘಟಪಟಾದಿನಿಷ್ಠ ಭೇದಸ್ವರೂಪವಾದುದು. ಭೇದವು ಧರ್ಮಿ- ಸ್ವರೂಪವಾದ್ದರಿಂದ ತನ್ನ ಸಾಮಗ್ರೀ ಸಾಮರ್ಥ್ಯದಿಂದ ಘಟವು ಹುಟ್ಟುವಾಗ ಅದರ ಜೊತೆಯಲ್ಲಿಯೇ ಘಟಸ್ವರೂಪವಾದ ಭೇದವೂ ಹುಟ್ಟಿದೆ. ವಸ್ತುವಿನಲ್ಲಿ ಇರುವ ವಸ್ತುವಿನ ಜೊತೆಯಲ್ಲೇ ಹುಟ್ಟುವ ವಿಶೇಷಣಕ್ಕೂ ಮತ್ತು ವಸ್ತುವಿಗೂ ಕಾರ್ಯಕಾರಣಭಾವವಿರಲು ಸಾಧ್ಯವಿಲ್ಲ. ಆದ್ದರಿಂದ ವ್ಯಾವರ್ತಕತ್ವ ಎಂದರೆ ವ್ಯಾವೃತ್ತಿ ಜನಕತ್ವ ಎಂದು ಹೇಳಬಾರದು. ಇನ್ನು ವ್ಯಾವೃತ್ತಿ ಜ್ಞಾನಜನಕತ್ವ ಎಂದು ಹೇಳಿದರೆ ಅಲ್ಲಿಯೂ ನಮ್ಮ ವಿಮರ್ಶೆ ಇದೆ. ವಸ್ತುವಿನ ಜ್ಞಾನಬರುವಾಗ ಆಯಾ ಜ್ಞಾನದ ವಿಲಕ್ಷಣ ಸಾಮಗ್ರಿಗಳಿಂದ ಆಯಾ ವಸ್ತುವಿನ ಜ್ಞಾನವು ಬರುತ್ತದೆ ಮತ್ತು ವಸ್ತುವಿನ ಜ್ಞಾನ ಬರುವಾಗ ಉತ್ಸರ್ಗತಃ ಇತರ ಸಕಲ ಪದಾರ್ಥ ಭಿನ್ನತ್ವೇನ ಜ್ಞಾನವು ಬರುವ ನಿಯಮವು ಕಂಡಿದೆ. ಆದ್ದರಿಂದ ಆಯಾ ವಸ್ತುನಿಷ್ಠವಾದ ವ್ಯಾವೃತ್ತಿಯ ಬೋಧವನ್ನು ಕುರಿತು ವಿಶೇಷಣದ ಅಪೇಕ್ಷೆ ಇಲ್ಲ. ಹಾಗಾದರೆ ವಿಶೇಷಣಕ್ಕೆ ಏನು ಪ್ರಯೋಜನ ಎಂದು ಕೇಳಿದರೆ ಆ ಪದಾರ್ಥದಲ್ಲಿರುವ ಭೇದವನ್ನು ಕುರಿತು ಯಾರಾದರೂ ವಿವಾದವನ್ನು ಮಾಡಿದರೆ ಆಗ ವಿಶೇಷಣವನ್ನು ಲಿಂಗವನ್ನಾಗಿ ಮಾಡಿ, ವ್ಯಾವೃತ್ತಿಯನ್ನು ಅನುಮಾನ ಮಾಡುವುದರಲ್ಲಿ ಮಾತ್ರ ವಿಶೇಷಣದ ಉಪಯೋಗ. ಏಕೆಂದರೆ ವಿವಾದ ಮಾಡುವವರನ್ನು ಕುರಿತು ಅನುಭವವನ್ನು ಉಪನ್ಯಾಸ ಮಾಡಲು ಸಾಧ್ಯವಿಲ್ಲ. ಲಿಂಗದಿಂದಲೇ ಸಾಧನೆ ಮಾಡಬೇಕು. ಲಿಂಗವಾದರೂ ಆ ಪದಾರ್ಥದಲ್ಲಿ ಇದ್ದುಕೊಂಡೇ ಭೇದಾನುಮತಿಯನ್ನು ಹುಟ್ಟಿಸುತ್ತದೆ. ಇಲ್ಲದಿದ್ದರೆ ಹೇತುವಿಗೆ ಸ್ವರೂಪಾಸಿದ್ಧಿ ದೋಷವು ಬರುತ್ತದೆ. ಹಾಗಾದರೆ ಕಾಕಾದಿಗಳಿಗೆ ಹೇಗೆ ಉಪಲಕ್ಷಣತ್ವ, ಅವು ಗೃಹದಲ್ಲಿ ಇಲ್ಲದಿರುವುದರಿಂದ ಅವು ಹೇಗೆ ವ್ಯಾವೃತ್ತಿ-ಅನುಮಾಪಕವಾಗುತ್ತವೆ ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಹೀಗೆ ಉತ್ತರ. ಕಾಕವು ಗೃಹದಲ್ಲಿಯೇ ಇದ್ದಾಗ ವ್ಯಾವೃತ್ತಿಯ ಅನುಮಿತಿ ಬರಲು ಯಾವ ಅನುಪಪತ್ತಿಯೂ ಇಲ್ಲ. ಕಾಕವು ಗೃಹದಿಂದ ಹಾರಿಹೋದ ಮೇಲೆ ಕಾಕದಿಂದ ಜನ್ಯವಾದ ಉತ್ತೃಣತ್ವವೇ ವ್ಯಾವರ್ತಕ, ಕಾಕವಲ್ಲ. ಉತ್ತೃಣತ್ವದಲ್ಲಿ ಕಾಕದ ಉಪಕಾರವಿರುವುದರಿಂದ ಉತ್ತೃಣತ್ವಕ್ಕೆ ವ್ಯಾವರ್ತಕತ್ವವನ್ನು ಹೇಳುವಾಗ ಕಾಕಕ್ಕೂ ವ್ಯಾವರ್ತತ್ವದ ಉಪಚಾರವಷ್ಟೇ ಇರುವುದು. ಗುರೂಣಾಂ ಟೀಕಾ, ಕುರೂಣಾಂ ಕ್ಷೇತ್ರಮ್ ಎಂಬಲ್ಲಿಯೂ ಟೀಕೆಯಲ್ಲಿರುವ ಗುರುಸಂಬಂಧ, ಕ್ಷೇತ್ರದಲ್ಲಿರುವ ಕುರು ಸಂಬಂಧ ಇವುಗಳೇ ಲಿಂಗಗಳು. ಆದ್ದರಿಂದ ಅಲ್ಲಿಯೂ ಯಾವ ಅನುಪಪತ್ತಿಯೂ ಇಲ್ಲ. ಘಟಾಭಾವ ಎಂಬಲ್ಲಿ ಅಭಾವನಿಷ್ಠವಾದ ಘಟಪ್ರತಿಯೋಗಿಕತ್ವವೇ ಲಿಂಗ. ಅದು ಒಂದು ಅಭಾವವನ್ನು ಇನ್ನೊಂದು ಅಭಾವದಿಂದ ವ್ಯಾವೃತ್ತಿ ಮಾಡಿಕೊಡುತ್ತದೆ. ಜ್ಞಾನವಾದರೂ ತನ್ನ ಭಿನ್ನ ಭಿನ್ನ ಸಾಮಗ್ರಿಗಳಿಂದಲೇ ಜನಿಸುವಾಗ ಇತರ ವ್ಯಾವೃತ್ತಿ ವಿಶಿಷ್ಟವಾಗಿಯೇ ಜನಿಸುತ್ತದೆ. ಆದ್ದರಿಂದ ಘಟಜ್ಞಾನಕ್ಕೆ ಘಟವು ವ್ಯಾವರ್ತಕವಲ್ಲ ಎಂದರೆ ವ್ಯಾವೃತ್ತಿ ಜನಕವಲ್ಲ ಎಂದು ಅರ್ಥ. ಇನ್ನು ವ್ಯಾವೃತ್ತಿ ಜ್ಞಾನಕ್ಕೂ ಘಟವು ಕಾರಣವಲ್ಲ, ಏಕೆಂದರೆ ಸಾಕ್ಷಿಯು ತನ್ನ ಸಾಮರ್ಥ್ಯದಿಂದಲೇ

ಘಟಜ್ಞಾನವನ್ನು ಗ್ರಹಿಸುವಾಗ ತನ್ನ ಸಾಮರ್ಥ್ಯದಿಂದಲೇ ಘಟಜ್ಞಾನದಲ್ಲಿರುವ ವ್ಯಾವೃತ್ತಿಯನ್ನು ಘಟದ ಅಪೇಕ್ಷೆ ಇಲ್ಲದೆಯೇ ಗ್ರಹಿಸುತ್ತದೆ. ಅತೀತಾನಾಗತ-ವಸ್ತುವಿಷಯದಲ್ಲಿ ವಸ್ತುವಿಗೆ ವ್ಯಾವೃತ್ತಿ ಜನಕತ್ವವಾಗಲೀ, ವ್ಯಾವೃತ್ತಿಧೀಜನಕತ್ವವಾಗಲೀ ಕೂಡುವುದೇ ಇಲ್ಲ. ಒಂದೇ ಘಟದ ವಿಷಯದಲ್ಲಿ ಮತ್ತೆ ಮತ್ತೆ ಉಂಟಾಗುವ ಅನೇಕ ಜ್ಞಾನಗಳಲ್ಲಿ ಸಾಮಗ್ರೀ ಭೇದವಿಲ್ಲದಿರುವುದರಿಂದ ಅವುಗಳಲ್ಲಿ ವ್ಯಾವೃತ್ತಿಯು ಹೇಗೆ ಉಂಟಾಗುತ್ತದೆ ಎಂಬ ಪ್ರಶ್ನೆಗೆ ಅಲ್ಲಿಯೂ ಸಾಮಗ್ರೀ ಭೇದವಿದೆ ಎಂದೇ ಉತ್ತರ. ಘಟರೂಪವಾದ ವಿಷಯವು ಒಂದೇ ಆದರೂ ಜ್ಞಾನವ್ಯಕ್ತಿಗಳು ಬೇರೆ ಬೇರೆ. ಆದ್ದರಿಂದ ಆಯಾ ಜ್ಞಾನವ್ಯಕ್ತಿಗಳ ಪ್ರಾಗಭಾವಗಳು ಬೇರೆ ಬೇರೆ. ಆಯಾ ಜ್ಞಾನವ್ಯಕ್ತಿಗಳ ಸಾಮಗ್ರೀ ಕೋಟಿಯಲ್ಲಿ ಆಯಾ ಪ್ರಾಗಭಾವಗಳು ಸೇರಿದೆ. ಆದ್ದರಿಂದ ಪ್ರತಿಯೊಂದು ಜ್ಞಾನವ್ಯಕ್ತಿಯ ಸಾಮಗ್ರಿಯೂ ಭಿನ್ನ ಭಿನ್ನವೇ ಆಯಿತು. ಅಂತಹ ವಿಲಕ್ಷಣ ಸಾಮಗ್ರೀಜನ್ಯವಾದ ಜ್ಞಾನದಲ್ಲಿ, ವ್ಯಾವೃತ್ತಿಯೂ ಅದೇ ಸಾಮಗ್ರಿಯಿಂದಲೇ ಜನ್ಯವಾಗುತ್ತದೆ. ಕೆಲವು ಬಾರಿ ವಿಷಯವನ್ನು ವ್ಯಾವರ್ತಕವೆಂದು ಹೇಳುವುದಕ್ಕೆ ಏನು ಕಾರಣವೆಂದರೆ ವಿಷಯವು ಜ್ಞಾನಜನಕ ಸನ್ನಿಕರ್ಷಜನಕವಾದ ಕಾರಣ ಜ್ಞಾನದಲ್ಲಿ ನಿಯಮೇನ ಉಲ್ಲೇಖವನ್ನು ಪಡೆಯುವುದರಿಂದ ವ್ಯಾವರ್ತಕತ್ವದ ಉಪಚಾರ ಮಾತ್ರ. ಮತ್ತು ಜ್ಞಾನನಿಷ್ಠ ವ್ಯಾವೃತ್ತಿಯಲ್ಲಿ ಯಾರು ವಿವಾದ ಮಾಡುತ್ತಾರೋ, ಅವರಿಗೆ ಘಟ ವಿಷಯಕತ್ವರೂಪವಾದ ಜ್ಞಾನನಿಷ್ಠವಾದ ಲಿಂಗದಿಂದ ಘಟಜ್ಞಾನಕ್ಕೆ ಜ್ಞಾನಾಂತರದಿಂದ ವ್ಯಾವೃತ್ತಿಯನ್ನು ಉಂಟುಮಾಡಿಕೊಡುವ ಅನುಮಿತಿ ರೂಪವಾದ ಜ್ಞಾನವನ್ನು ಹುಟ್ಟಿಸಲು ಪರಂಪರಯಾ ಕಾರಣವಾದ್ದರಿಂದ ವ್ಯಾವರ್ತಕತ್ವ ಉಪಚಾರವು ಯುಕ್ತವಾಗುತ್ತದೆ. ಭ್ರಮಸ್ಥಳದಲ್ಲಿ ಆಯಾ ಭ್ರಮದ ಸಾಮಗ್ರಿಗಳು ಭಿನ್ನಭಿನ್ನವಾಗಿವೆ. ಪ್ರತಿಯೊಂದು ಭ್ರಮಸಾಮಗ್ರಿಯಲ್ಲಿಯೂ ಒಂದೊಂದು ದೋಷವಾದರೂ ಇದೆ. ಇಂದ್ರಿಯಾದಿಗಳು ಅನುಗತವಾದರೂ ದೋಷಗಳು ಅನುಗತವಲ್ಲ. ಆದ್ದರಿಂದ ದೋಷಘಟಿತಸಾಮಗ್ರಿಗಳು ಭಿನ್ನಭಿನ್ನವಾಗಿಯೇ ಇದೆ. ಆ ಭಿನ್ನಸಾಮಗ್ರಿಗಳಿಂದ ಉಂಟಾಗುವ ಭ್ರಮದಲ್ಲಿ ಸ್ವಾಭಾವಿಕವಾಗಿಯೇ ಆ ಸಾಮಗ್ರಿಯ ಬಲದಿಂದ ವ್ಯಾವೃತ್ತಿಯು ಉಂಟಾಗುತ್ತದೆ. ಅಲ್ಲಿಯೂ ಸಹ ದೋಷ ವಶದಿಂದ ಅವಿದ್ಯಮಾನ ವಸ್ತುಗಳ ಉಲ್ಲೇಖವು ನಿಯಮೇನ ಇರುವುದರಿಂದ ಅಸತ್ ಪದಾರ್ಥಕ್ಕೂ ಸಹ ವ್ಯಾವರ್ತಕತ್ವ ಉಪಚಾರವನ್ನು ಮಾಡುತ್ತೇವೆ. ಪ್ರಮಾ ಸ್ಥಳದಲ್ಲಿ ಮಾಡಿದಂತೆ ಭ್ರಮ ಸ್ಥಳದಲ್ಲಿಯೂ ಸಹ ವಿವಾದ ಮಾಡುವವನನ್ನು ಕುರಿತು ಭ್ರಮಗಳಿಗೆ ಭೇದವನ್ನು ಸಾಧಿಸುವುದಕ್ಕಾಗಿ ಮಾತ್ರ ಜ್ಞಾನನಿಷ್ಠವಾದ ರಜತವಿಷಯಕತ್ವ, ಶಶವಿಷಾಣ ವಿಷಯಕತ್ವವನ್ನು ಲಿಂಗವನ್ನಾಗಿ ಮಾಡಿ ಭೇದವನ್ನು ಸಾಧಿಸುತ್ತೇವೆ. ರಜತ ಮತ್ತು ಶಶವಿಷಾಣವು ಅಸತ್ತಾದರೂ ರಜತಜ್ಞಾನನಿಷ್ಠವಾದ ರಜತ ವಿಷಯಕತ್ವವು, ಶಶವಿಷಾಣ ಜ್ಞಾನನಿಷ್ಠವಾದ ಶಶವಿಷಾಣ ವಿಷಯಕತ್ವವು ಸತ್ಯವೇ ಆದುದರಿಂದ ಇಲ್ಲಿಯೂ ಯಾವ ಅನುಪಪತ್ತಿಯೂ ಇಲ್ಲ. ಬೇರೆ ಬೇರೆ ಕಲಮ ಸಸ್ಯದಿಂದ ಉಂಟಾದ ಕಲಮ ಬೀಜದಲ್ಲಿರುವ ವ್ಯಾವೃತ್ತಿಯು

ದೇವದತ್ತ ಸಂಬಂಧ ಪ್ರಯುಕ್ತವಾಗಿ ಇಲ್ಲ. ಅದು ಬೇರೆ ಬೇರೆ ಸಾಮಗ್ರಿಗಳಿಂದ ಹುಟ್ಟಿದ ಬೀಜಗಳಲ್ಲಿ ಸಹಜವಾಗಿಯೇ ಇದೆ. ದೇವದತ್ತ ಸಂಬಂಧದಿಂದಲೇ ಭೇದವು ಉಂಟಾಗುವುದಾದರೆ ಮಾರ್ಗದ ಮಧ್ಯದಲ್ಲಿ ಬಿದ್ದು ದೇವದತ್ತನ ಸಂಬಂಧವನ್ನು ಕಳೆದುಕೊಂಡ ಕಲಮಬೀಜಗಳಲ್ಲಿ ಪರಸ್ಪರ ಭೇದವಿಲ್ಲ ಎಂದಾದೀತು. ಮತ್ತು ದೇವದತ್ತನಿಗೆ ಸೇರಿದ ಅನೇಕ ಕಲಮಬೀಜಗಳಲ್ಲಿ ಎಲ್ಲದರಲ್ಲೂ ದೇವದತ್ತನ ಸಂಬಂಧವೇ ಇರುವುದರಿಂದ ಪರಸ್ಪರವಾಗಿ ಭೇದವು ಇಲ್ಲ ಎಂಬ ಪ್ರಸಂಗವು ಬಂದೀತು. ಹಿಂದೆ ಹೇಳಿದಂತೆ ಬೀಜದಲ್ಲಿರುವ ದೇವದತ್ತಸಂಬಂಧಿತ್ವವು ವಿವಾದ ಬಂದಾಗ ಮಾತ್ರ ಯಜ್ಞದತ್ತಸಂಬಂಧಿಯಾದ ಬೀಜದಿಂದ ವ್ಯಾವೃತ್ತಿಬೋಧವನ್ನು ಉಂಟುಮಾಡಲು ಉಪಯೋಗಿಯಾಗುತ್ತದೆ. ಆದ್ದರಿಂದ ದಂಡಕುಂಡಲಗಳಿಗೆ ಉಪಲಕ್ಷಣತ್ವವನ್ನು ಹೇಳಿದರೂ ಸಹ ಅವು ವಿಶೇಷಣವೇ ಆಗಿ ಪರ್ಯವಸಾನ ಹೊಂದುವುದರಿಂದ ವಿಶಿಷ್ಟೈಕ್ಯವಿದ್ದರೆ ವಿಶೇಷಣೈಕ್ಯವುಂಟಾಗಲಿ ಎಂಬ ತರ್ಕಕ್ಕೆ ದಂಡೀ ಕುಂಡಲೀ ದೇವದತ್ತಃ ಎಂಬಲ್ಲಿ ವ್ಯಭಿಚಾರವು ಇದ್ದೇ ಇದೆ ಎಂದು ತಾತ್ಪರ್ಯ.

ಯಥಾ ಧೂಮವಿಶಿಷ್ಟಸ್ಯ ವಹ್ನಿವೈಶಿಷ್ಟ್ಯವರ್ಣನೇ ।
ನ ವಿಶೇಷಣಯೋರೈಕ್ಯಂ ನ ತ್ಯಾಗೋ ನಾಪಿ ಲಕ್ಷಣಾ ॥ ೧೧೨೫ ॥

**ಅರ್ಥ–** ಯಥಾ = ಹೇಗೆ, ಧೂಮವಿಶಿಷ್ಟಸ್ಯ = ಧೂಮವಿಶಿಷ್ಟವಾದ ಪರ್ವತಕ್ಕೆ, ವಹ್ನಿವೈಶಿಷ್ಟ್ಯ ವರ್ಣನೇ = ವಹ್ನಿವೈಶಿಷ್ಟ್ಯದ ವರ್ಣನೆಯನ್ನು ಮಾಡಿದರೆ, ವಿಶೇಷಣಯೋಃ = ವಿಶೇಷಣಗಳಾದ ಧೂಮ ಮತ್ತು ವಹ್ನಿಗಳಿಗೆ, ಐಕ್ಯಂ = ಐಕ್ಯವು, ನ = ಇಲ್ಲ, ಅಥವಾ ತ್ಯಾಗಃ = ವಿಶೇಷಣಗಳ ತ್ಯಾಗವು, ನ = ಇಲ್ಲ, ಅಪಿಚಾ = ಮತ್ತೂ ಕೂಡ, ಲಕ್ಷಣಾತ್ = ಧೂಮವಾನ್ ಮತ್ತು ವಹ್ನಿಮಾನ್ ಎಂಬ ಎರಡು ಪದಗಳಿಗೆ ಪರ್ವತಸ್ವರೂಪದಲ್ಲಿ ಲಕ್ಷಣಾವು, ನ = ಇಲ್ಲವೋ, ತತ = ಹಾಗೇ, ಪ್ರಕೃತೇ ಅಪಿ = ತತ್ವಮಸಿ ಎಂಬಲ್ಲಿಯೂ ಕೂಡ.

**ಅನುವಾದ–** ಧೂಮವಿಶಿಷ್ಟವಾದ ಪರ್ವತಕ್ಕೆ ವಹ್ನಿವೈಶಿಷ್ಟ್ಯವನ್ನು ಹೇಳಿದರೆ ಹೇಗೆ ವಿಶೇಷಣಗಳಿಗೆ ಐಕ್ಯವಿಲ್ಲವೋ ಅಥವಾ ವಿಶೇಷಣಗಳಿಗೆ ತ್ಯಾಗವಿಲ್ಲವೋ ಅಥವಾ ಧೂಮವಾನ್ ವಹ್ನಿಮಾನ್ ಎಂಬ ಎರಡು ಪದಗಳಿಗೆ ಪರ್ವತಸ್ವರೂಪಗಳಲ್ಲಿ ಲಕ್ಷಣಾ ಇಲ್ಲವೋ ಹಾಗೆಯೇ ಪ್ರಕೃತದಲ್ಲಿಯೂ ಸಹ.

**ಭಾವವಿಲಾಸಿನೀ–** ಅಧುನಾ ಪರೋದೀರಿತತರ್ಕಸ್ಯೋಕ್ತಕುತ್ಸಿತಶಂಕಾನರ್ಹಂ ವ್ಯಭಿಚಾರಸ್ಥಲ-ಮಾಹ – **ಯಥಾಧೂಮೇತಿ** ॥ ತ್ಯಾಗೋ ವಿಶೇಷಣಯೋಃ । ಲಕ್ಷಣಾ ಪರ್ವತಸ್ವರೂಪಮಾತ್ರ-ಲಕ್ಷಣಾ ॥ ೧೧೨೫ ॥

**ವಿವರಣೆ–** ಹಿಂದೆ ಉಪಲಕ್ಷಣವೂ ವಿಶೇಷಣವೇ ಎಂಬ ಶಂಕೆಗೆ ಅವಕಾಶವಿರುವ ಒಂದು ಸ್ಥಳವನ್ನು ಹೇಳಿ ಈಗ ಅಂತಹ ಶಂಕೆಗೆ ಅವಕಾಶವಿಲ್ಲದಿರುವ ಇನ್ನೊಂದು ಸ್ಥಳವನ್ನು ತೋರಿಸಿ ತರ್ಕಕ್ಕೆ ಆಭಾಸತ್ವವನ್ನು ಸಮರ್ಥಿಸುತ್ತಾರೆ. ಯೋ ಧೂಮವಾನ್ ಅಸೌ ವಹ್ನಿಮಾನ್' ಎಂದು ಹೇಳಿದಾಗ ಧೂಮವಿಶಿಷ್ಟಕ್ಕೂ ಮತ್ತು ಪರ್ವತಕ್ಕೂ, ವಹ್ನಿ ವಿಶಿಷ್ಟಕ್ಕೂ ಪರ್ವತಕ್ಕೂ ಐಕ್ಯವಿದೆ. ಆದರೆ ವಿಶೇಷಣಗಳಾದ ಧೂಮವಹ್ನಿಗಳಿಗೆ ಐಕ್ಯವಾಗಲೀ ಅವುಗಳಿಗೆ ತ್ಯಾಗವಾಗಲೀ ಇಲ್ಲ. ಹಾಗೆಯೇ ಧೂಮವಾನ್ ವಹ್ನಿಮಾನ್ ಎಂಬ ಪದಗಳಿಗೆ ಪರ್ವತಸ್ವರೂಪ ಮಾತ್ರದಿಂದ ಲಕ್ಷಣಾ ಎಂಬುದು ಸಹ ಇಲ್ಲ.

**ತಥಾ ಸತಿ ಕಥಂ ವ್ಯಾಪ್ತಿರ್ಧೂಮವಹ್ನ್ಯೋಃ ಪ್ರಸಿದ್ಧ್ಯತಿ ।**
**ವ್ಯಾಪ್ತಿಬೋಧಾರ್ಥಮೇವೈತದ್ವಚನಂ ಸರ್ವವಾದಿನಾಂ ॥ ೧೧೨೬ ॥**

**ಅರ್ಥ–** ತಥಾ ಸತಿ = ವಿಶೇಷಣಗಳಾದ ಧೂಮ ಮತ್ತು ವಹ್ನಿಗಳನ್ನು ತ್ಯಾಗಮಾಡಿದರೆ, ಧೂಮವಹ್ನೋಃ = ಧೂಮ ಮತ್ತು ವಹ್ನಿಗಳಿಗೆ, ವ್ಯಾಪ್ತಿ = ವ್ಯಾಪ್ತಿಯು, ಕಥಂ = ಹೇಗೆ, ಪ್ರಸಿದ್ಧ್ಯತಿ = ಸಿದ್ಧವಾಗುತ್ತದೆ. ಸರ್ವವಾದಿನಾಂ = ಎಲ್ಲ ವಾದಿಗಳ , ಏತತ್ = ಇಲ್ಲಿ, ವಚನಂ = ಪರ್ವತಃ ವಹ್ನಿಮಾನ್ ಧೂಮಾತ್ ಎಂಬ ವಾಕ್ಯವು, ವ್ಯಾಪ್ತಿಬೋಧಾರ್ಥಂ ಏವ = ಧೂಮ ಮತ್ತು ವಹ್ನಿಗಳಿಗೆ ವ್ಯಾಪ್ತಿಯನ್ನು ತೋರಿಸಲಿಕ್ಕಾಗಿಯೇ ಇರುತ್ತದೆ.

**ಅನುವಾದ–** ವಿಶೇಷಣಗಳನ್ನು ಪರಿತ್ಯಾಗ ಮಾಡಿದ ಪಕ್ಷದಲ್ಲಿ ಧೂಮವಹ್ನಿಗಳಿಗೆ ವ್ಯಾಪ್ತಿಯು ಹೇಗೆ ಸಿದ್ಧವಾಗುತ್ತದೆ? ಎಲ್ಲ ವಾದಿಗಳೂ ಸಹ ವ್ಯಾಪ್ತಿ ಬೋಧನಕ್ಕಾಗಿಯೇ ಈ ವಾಕ್ಯವನ್ನು ಪ್ರಯೋಗಿಸುತ್ತಾರಷ್ಟೇ?

**ಭಾವವಿಲಾಸಿನೀ–** ತಥಾ ಸತಿ ವಿಶೇಷಣತ್ಯಾಗಾದೌ ಸತಿ । ಧೂಮವಂಹ್ನ್ಯೋರ್ವ್ಯಾಪ್ತಿ-ಬೋಧನಾಯ ಪ್ರಯುಜ್ಯಮಾನೇಽಸ್ಮಿನ್ವಾಕ್ಯೇ ತಯೋರವಶ್ಯಂ ಗ್ರಾಹ್ಯತಯಾ ವಿಶೇಷಣತ್ವಾತ್ ಉಭಯವಿಶಿಷ್ಟೇನ ವಿಶೇಷ್ಯಭೂತಪರ್ವತೇನೈಕ್ಯಾಭಾವಾಚ್ಚ ಸುಸ್ಥಃ ಪರಕೀಯತರ್ಕಸ್ಯಾತ್ರ ವ್ಯಭಿಚಾರ ಇತಿ ಭಾವಃ ॥ ೧೧೨೬ ॥

**ವಿವರಣೆ–** 'ಯೋ ಧೂಮವಾನ್ ಅಸೌ ವಹ್ನಿಮಾನ್' ಎಂಬ ವಾಕ್ಯವು ಧೂಮವಹ್ನಿಗಳಿಗೆ ವ್ಯಾಪ್ತಿ ಪ್ರತಿಪಾದಕವೆಂದು ಎಲ್ಲ ವಾದಿಗಳೂ ಒಪ್ಪುತ್ತಾರೆ. ಇಲ್ಲಿ ಧೂಮವಹ್ನಿಗಳನ್ನು ತ್ಯಾಗ ಮಾಡಿ ಕೇವಲ ಪರ್ವತಸ್ವರೂಪದಲ್ಲೇ ಲಕ್ಷಣಾ ಮಾಡುವುದಾದರೆ ಧೂಮವಹ್ನಿಗಳಿಗೆ ವ್ಯಾಪ್ತಿಯೇ ಸಿದ್ಧವಾಗುವುದಿಲ್ಲ. ಆದ್ದರಿಂದ ಅವಶ್ಯಕವಾಗಿ ಇಲ್ಲಿ ಧೂಮ ಮತ್ತು ವಹ್ನಿರೂಪ ವಿಶೇಷಣಗಳನ್ನು ಅಂಗೀಕಾರ ಮಾಡಬೇಕು. ಇಲ್ಲಿ ವಿಶಿಷ್ಟೈಕ್ಯವು ಇದೆ, ಆದರೆ ವಿಶೇಷಣಗಳಿಗೆ ಐಕ್ಯವಿಲ್ಲ. ಆದ್ದರಿಂದ ನಿಮ್ಮ ತರ್ಕಕ್ಕೆ ವ್ಯಭಿಚಾರವು ಬರುತ್ತದೆ.

**ಇದಂ ತು ತತ್ಪದಂ ಪೂರ್ವವಾಕ್ಯೋಕ್ತಗುಣಯುಕ್ತತಾಂ ।**
**ಬ್ರಹ್ಮಣೋ ವಕ್ತಿ ದೇಶಾದಿವ್ಯಾಪಕಸ್ಯ ನ ಚಾಪರಂ ॥ ೧೧೨೭ ॥**

**ಅರ್ಥ–** ಇದಂ = ಈ, ತತ್ಪದಂ ತು = ತತ್ತ್ವಮಸಿ ಎಂಬಲ್ಲಿನ ತತ್ ಎಂಬ ಪದವಾದರೂ, ದೇಶಾದಿವ್ಯಾಪಕಸ್ಯ = ದೇಶಕಾಲವ್ಯಾಪಕನಾದ, ಬ್ರಹ್ಮನ = ಪರಬ್ರಹ್ಮನಿಗೆ, ಪೂರ್ವವಾಕ್ಯೋಕ್ತಗುಣಯುಕ್ತತಾಂ - ಪೂರ್ವ = ತತ್ವಮಸಿ ಎಂಬ ವಾಕ್ಯಕ್ಕೆ ಪೂರ್ವವಾಕ್ಯವಾದ ಐತದಾತ್ಮ್ಯಮಿದಂ ಸರ್ವಂ ಎಂಬ ವಾಕ್ಯದಿಂದ, ಉಕ್ತ = ಹೇಳಲ್ಪಟ್ಟ, ಗುಣ = ಗುಣಗಳಿಂದ, ಯುಕ್ತತಾಂ = ಉಪೇತತ್ವವನ್ನು, ವಕ್ತಿ = ಹೇಳುತ್ತದೆ, ಅಪರಂ ಚ = ಬೇರೆ ಗುಣವನ್ನಾದರೂ, ನ ವಕ್ತಿ = ಹೇಳುವುದಿಲ್ಲ.

**ಅನುವಾದ–** ತತ್ತ್ವಮಸಿ ವಾಕ್ಯದಲ್ಲಿರುವ ತತ್ ಪದವು ದೇಶಕಾಲಗಳಲ್ಲಿ ವ್ಯಾಪ್ತನಾದ ಬ್ರಹ್ಮನಿಗೆ ಹಿಂದಿನ ವಾಕ್ಯದಲ್ಲಿ ಹೇಳಿದ ಗುಣಸಹಿತತ್ವವನ್ನು ಹೇಳುತ್ತದೆ. ಬೇರೆ ಏನನ್ನೂ ಹೇಳುವುದಿಲ್ಲ.

**ಭಾವವಿಲಾಸಿನೀ–** ಪ್ರಕಾರಾಂತರೇಣ ದೃಷ್ಟಾಂತದಾರ್ಷ್ಟಾಂತಿಕಯೋರ್ವೈಷಮ್ಯಂ ಸೂಚಯನ್ ತತ್ಪದತ್ತದೋಕ್ತಗುಣತ್ಯಾಗೇ ವಾಕ್ಯಾರ್ಥತ್ಯಾಗ ಏವ ಸ್ಯಾದಿತ್ಯಾಹ – **ಇದಂ ತ್ವಿತಿ** ॥ ದೇಶಾದಿ-ವ್ಯಾಪಕಸ್ಯ । ಅಪರಂ ಸೋಯಮಿತಿ ವಾಕ್ಯಸ್ಥ ತತ್‌ಪದವತ್ ಅತೀತದೇಶಕಾಲಸಂಬಂಧಿ-ತಾಮ್ । ಸರ್ವದೇಶಸಂಬಂಧಿನಿ ಬ್ರಹ್ಮಣಿ ಅತೀತದೇಶಸ್ಯೈವಾಯೋಗಾತ್ । ಇದಾನೀಂ ತ್ಯಕ್ತೋ ದೇಶೋಹ್ಯತೀತದೇಶಃ । ಸ ಚಾಣೋರೇವ ಘಟತೇ ನ ವ್ಯಾಪ್ತಸ್ಯ । ಅತಃ ಪ್ರಾಗುಕ್ತ ಧರ್ಮ-ಪರಾಮರ್ಶಕಮೇವ ತತ್ತ್ವಮಸೀತ್ಯತ್ರ ತದಿತಿ ಪದಮಿತಿ ಭಾವಃ ॥ ೧೧೨೭ ॥

**ವಿವರಣೆ–** ಪ್ರಕಾರಾಂತರದಿಂದ ದಾರ್ಷ್ಟಾಂತಿಕಗಳಿಗೆ ವೈಷಮ್ಯವನ್ನು ಸೂಚಿಸುತ್ತಾ ತತ್ ತ್ವಂ ಪದಗಳು ಹೇಳಿದ ಗುಣಗಳನ್ನು ತ್ಯಾಗ ಮಾಡಿದರೆ ವಾಕ್ಯಾರ್ಥವನ್ನೇ ತ್ಯಾಗ ಮಾಡಿದಂತಾಗುತ್ತದೆ ಎಂದು ಇಲ್ಲಿ ನಿರೂಪಿಸುತ್ತಾರೆ. ಸೋಯಂ ದೇವದತ್ತಃ ಎಂಬ ವಾಕ್ಯದಲ್ಲಿ ತತ್ ಪದದಿಂದ ಅತೀತ ದೇಶಕಾಲ ಸಂಬಂಧವನ್ನು ಅಥವಾ ತದ್ದೇಶಕಾಲ ಸಂಬಂಧ ಧ್ವಂಸವನ್ನು ಹೇಳುತ್ತೇವೆ. ಹಾಗೆಯೇ ಇಲ್ಲಿ ಬ್ರಹ್ಮನಿಗೆ ತದ್ದೇಶಕಾಲ ಸಂಬಂಧ ಧ್ವಂಸವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಬ್ರಹ್ಮನಲ್ಲಿ ಯಾವಾಗಲೂ ಎಲ್ಲ ದೇಶದ ಸಂಬಂಧವೂ ಇದ್ದೇ ಇದೆ. ಆದ್ದರಿಂದ ತತ್ಪದವು ಪೂರ್ವವಾಕ್ಯೋಕ್ತವಾದ ಗುಣಗಳನ್ನೇ ಹೇಳಬೇಕು. ಐತದಾತ್ಮ್ಯಂ ಇದಂ ಸರ್ವಂ ತತ್ಸತ್ಯಂ ಸ ಆತ್ಮಾ ಎಂಬುದು ತತ್ತ್ವಮಸಿ ವಾಕ್ಯದ ಹಿಂದಿನ ವಾಕ್ಯ. ಅದರಲ್ಲಿ ಐತದಾತ್ಮ್ಯ ಪದವು ಐಕ್ಯವನ್ನೇ ಹೇಳುತ್ತದೆಂದು ಅದ್ವೈತಿಗಳ ಅಭಿಪ್ರಾಯ. ಆದ್ದರಿಂದ ಅದು ಅವರಿಗೆ ಬೇಕು. ತತ್ಸತ್ಯಂ ಸ ಆತ್ಮಾ ಎಂಬ ವಾಕ್ಯವು ಸತ್ಯತ್ವ ಮತ್ತು ಆತ್ಮತ್ವರೂಪವಾದ ಧರ್ಮಗಳನ್ನು ಹೇಳುತ್ತದೆ. ಅದೂ ಅವರಿಗೆ ಇಷ್ಟವಾದುದೇ. ಆದ್ದರಿಂದ ಪೂರ್ವವಾಕ್ಯೋಕ್ತವಾದ ಈ ಗುಣಗಳನ್ನು ತ್ಯಾಗ ಮಾಡಿದರೆ

ವಾಕ್ಯಾರ್ಥವನ್ನೇ ತ್ಯಾಗಮಾಡಿದಂತಾಗುತ್ತದೆ. ಇದು ದಾರ್ಷ್ಟಾಂತಿಕದಲ್ಲಿ ಇರುವ ವೈಷಮ್ಯ.

**ಸತ್ಯತ್ವಾತ್ಮತ್ವೈತದಾತ್ಮ್ಯಪೂರ್ವಾಃ ಪೂರ್ವಪದೋದಿತಾಃ ।**
**ಗುಣಾಃ ಸ್ವಾರ್ಥಸಮಾಸ್ತೇಷಾಂ ತ್ಯಾಗೋಽರ್ಥತ್ಯಾಗ ಏವ ತೇ ॥ ೧೧೨೮ ॥**

**ಅರ್ಥ–** ಪೂರ್ವಪದೋದಿತಾಃ = ಹಿಂದಿನ ವಾಕ್ಯದಿಂದ ಹೇಳಲ್ಪಟ್ಟ, ಸತ್ಯತ್ವ ಆತ್ಮತ್ವೈತದಾತ್ಮ್ಯಪೂರ್ವಾಃ = ಸತ್ಯತ್ವ, ಆತ್ಮತ್ವ ಮತ್ತು ಐತತಾತ್ಮವೇ ಮೊದಲಾದ, ಗುಣಾಃ = ಗುಣಗಳು, ಸ್ವಾರ್ಥಸಮಾಃ= ಸ್ವಾರ್ಥ = ವಾಕ್ಯದ ಅರ್ಥಕ್ಕೆ, ಸಮಾಃ= ಸದೃಶವಾದವುಗಳು, ತೇ = ನಿನ್ನ, ಮತೇ = ಮತದಲ್ಲಿ, ತೇಷಾಂ = ಆ ಗುಣಗಳ, ತ್ಯಾಗಃ = ಪರಿತ್ಯಾಗವು, ಅರ್ಥತ್ಯಾಗಃ ಏವ = ವಾಕ್ಯದ ಅರ್ಥವನ್ನು ತ್ಯಾಗಮಾಡಿದಂತೆಯೇ.

**ಅನುವಾದ– ಸತ್ಯತ್ವ, ಆತ್ಮತ್ವ, ಐತದಾತ್ಮ್ಯ ಮೊದಲಾದ ಪೂರ್ವವಾಕ್ಯೋಕ್ತವಾದ ಗುಣಗಳು ಸ್ವಾರ್ಥಕ್ಕೆ ಸಮನಾದವು. ಅವುಗಳನ್ನು ಪರಿತ್ಯಾಗ ಮಾಡಿದರೆ ವಾಕ್ಯಾರ್ಥವನ್ನೇ ಪರಿತ್ಯಾಗ ಮಾಡಿದಂತಾಗುತ್ತದೆ.**

**ಭಾವವಿಲಾಸಿನೀ– ಪೂರ್ವಪದೋದಿತಾಃ । ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮೇತಿ ವಾಕ್ಯಸ್ಥೈತದಾತ್ಮ್ಯಾದಿಪದೋದಿತಾ ಇತ್ಯರ್ಥಃ । ಐತದಾತ್ಮ್ಯಪದೇನೈಕ್ಯಮೇವ ಹಿ ಪರೋ ವಕ್ತಿ । ಸತ್ಯತ್ವಾತ್ಮತ್ವಾದಿಕಂ ಚ ಪರಾಭಿಲಷಿತಂ ಪ್ರಮೇಯಮ್ । ಅತಸ್ತತ್ತ್ಯಾಗೋ ವಾಕ್ಯಾರ್ಥತ್ಯಾಗ ಏವೇತಿ ಭಾವಃ ॥ ೧೧೨೮ ॥**

**ವಿವರಣೆ–** ದೃಷ್ಟಾಂತದಲ್ಲಿ ಹೇಳಿದಂತೆ ತತ್ಪದದಿಂದ ಬ್ರಹ್ಮನಲ್ಲಿ ತದ್ದೇಶಕಾಲ ಸಂಬಂಧ ಧ್ವಂಸವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಬ್ರಹ್ಮನು ದೇಶತಃ ಮತ್ತು ಕಾಲತಃ ವ್ಯಾಪ್ತ. ಆದ್ದರಿಂದ ತತ್ ಎಂದರೆ ಪೂರ್ವೋಕ್ತ ಗುಣವಿಶಿಷ್ಟವಾದುದು ಎಂದೇ ಹೇಳಬೇಕು. ಎಲ್ಲ ಗುಣಗಳನ್ನು ತ್ಯಾಗ ಮಾಡಿದರೆ ತತ್ಪದದ ಅರ್ಥವೆಲ್ಲವನ್ನೂ ತ್ಯಾಗ ಮಾಡುವುದರಿಂದ ವಾಕ್ಯಾರ್ಥತ್ಯಾಗವೇ ಉಂಟಾಗುತ್ತದೆ.

**ಅತಃ ಕ್ಲೀಬವಿವಾಹಾರ್ಥಂ ಚಿತ್ತಸ್ತ್ರೀಪ್ರಾರ್ಥನಂ ತವ ॥ ೧೧೨೯ ॥**

**ಅರ್ಥ–** ಅತಃ = ಆದ್ದರಿಂದ, ತವ = ನಿನ್ನ ಪ್ರಯತ್ನಃ = ಅದ್ವೈತವನ್ನು ಸಾಧಿಸಲು ದೃಷ್ಟಾಂತವನ್ನು ಹುಡುಕುವ ಪ್ರಯತ್ನವು, ಕ್ಲೀಬವಿವಾಹಾರ್ಥಂ = ನಪುಂಸಕನ ವಿವಾಹಕ್ಕಾಗಿ, ಚಿತ್ತಸ್ತ್ರೀಪ್ರಾರ್ಥನಂ = ಚಿತ್ರದಲ್ಲಿರುವ ಕನ್ಯೆಯನ್ನು ಪ್ರಾರ್ಥಿಸಿದಂತೆ ಇದೆ.

**ಅನುವಾದ– ಆದ್ದರಿಂದ ನಿನ್ನ ಪ್ರಯತ್ನವು ನಪುಂಸಕನಿಗೆ ವಿವಾಹವನ್ನು ಮಾಡಲು ಚಿತ್ರ ಲಿಖಿತವಾದ ಕನ್ಯೆಯನ್ನು ಪ್ರಾರ್ಥನೆ ಮಾಡಿದಂತೆ ಆಗುತ್ತದೆ.**

**ಭಾವವಿಲಾಸಿನೀ–** ಅತಃ ತತ್ಪದೋಕ್ತಬ್ರಹ್ಮಗುಣತ್ಯಾಗಾಯೋಗಾತ್ । ಚಿತ್ರಸ್ತ್ರೀಪ್ರಾರ್ಥನಂ ಚಿತ್ರಲಿಖಿತಸ್ತ್ರೀಪ್ರಾರ್ಥನಮ್ । ಉಕ್ತವಿಧಯಾ ತತ್ತ್ವಮಸೀತಿ ವಾಕ್ಯಸ್ಥ- ತತ್ಪದಸ್ವರೂಪಮಾತ್ರ-ಲಕ್ಷಣಾಯೋಗಾತ್ । ತದರ್ಥಸಾಧ್ಯದೃಷ್ಟಾಂತಗವೇಷಣಂ ಕ್ಲೀಬವಿವಾಹಾಯ ಚಿತ್ರಸ್ತ್ರೀ-ಪ್ರಾರ್ಥನವತ್ ಸ್ವಾಕೌಶಲದ್ಯೋತಕಮೇವೇತ್ಯರ್ಥಃ ॥ ೧೧೨೯ ॥

**ವಿವರಣೆ–** ನೀನು ತತ್ಪದೋಕ್ತವಾದ ಗುಣಗಳನ್ನು ತ್ಯಾಗ ಮಾಡಲು ಒಂದು ದೃಷ್ಟಾಂತವನ್ನು ಹುಡುಕುತ್ತಿದ್ದೀಯೆ. ಆ ದೃಷ್ಟಾಂತವು ಎಲ್ಲಿಯೂ ಸಿಗುವುದಿಲ್ಲ. ಸೋಯಂ ದೇವದತ್ತಃ ಎಂಬುದಾಗಲೀ, ಧೂಮವಾನ್ ವಹ್ನಿಮಾನ್ ಎಂಬುದಾಗಲೀ ದೃಷ್ಟಾಂತವಾಗುವುದಿಲ್ಲ ಎಂದು ಉಪಪಾದನೆ ಮಾಡಿದ್ದೇವೆ. ಯಾವುದೇ ದೃಷ್ಟಾಂತವು ದೊರೆಯದಿರುವಾಗ ದೃಷ್ಟಾಂತವನ್ನು ಹುಡುಕುವ ನಿನ್ನ ಪ್ರಯತ್ನವು ಚಿತ್ರಲಿಖಿತ ಕನ್ಯೆಯನ್ನು ಪ್ರಾರ್ಥನೆ ಮಾಡಿದಂತೆ ವ್ಯರ್ಥವಾದ ಪ್ರಯತ್ನ. ಆದ್ದರಿಂದ ಇದು ನಿನ್ನ ಅಕೌಶಲವನ್ನೇ ತೋರಿಸುತ್ತದೆ ಎಂದು ಅಭಿಪ್ರಾಯ.

ವಿಶೇಷ್ಯಬ್ರಹ್ಮಶಬ್ದಾರ್ಥಸಾರ್ವಜ್ಞಾದಿಗುಣಾಂಬುಧೇಃ ।
ನಿಷೇಧಃ ಕುತ್ರ ದೃಷ್ಟಸ್ತೇ ತ್ವಂಪದಾರ್ಥಗುಣಸ್ಯ ಚ ॥ ೧೧೩೦ ॥

**ಅರ್ಥ–** ವಿಶೇಷ್ಯ ಬ್ರಹ್ಮಶಬ್ದಾರ್ಥಸಾರ್ವಜ್ಞಾದಿಗುಣಾಂಬುಧೇಃ = ವಿಶೇಷ್ಯ = ವಿಶೇಷ್ಯವಾದ, ಬ್ರಹ್ಮಶಬ್ದ = ಬ್ರಹ್ಮಶಬ್ದದ, ಅರ್ಥ = ಅರ್ಥವಾದ, ಸಾರ್ವಜ್ಞಾದಿ = ಸರ್ವಜ್ಞತ್ವವೇಮೊದಲಾದ, ಗುಣಾಂಬುಧೇಃ = ಗುಣಸಮುದ್ರದ, ನಿಷೇಧಃ = ನಿಷೇಧವು, ತೇ = ನಿನಗೆ, ಕುತ್ರ = ಎಲ್ಲಿ, ದೃಷ್ಟಃ = ಕಾಣಲ್ಪಟ್ಟಿದೆ, ಚ = ಮತ್ತು, ತ್ವಂ ಪದಾರ್ಥ = ತ್ವಂ ಎಂಬ ಪದದ ಅರ್ಥವಾದ, ಗುಣಸ್ಯ = ಗುಣದ, ನಿಷೇಧಃ = ನಿಷೇಧವಾದರೂ, ಕುತ್ರ = ಎಲ್ಲಿ, ದೃಷ್ಟಃ = ಕಾಣಲ್ಪಟ್ಟಿದೆ.

**ಅನುವಾದ–** ವಿಶೇಷ್ಯವಾದ ಬ್ರಹ್ಮಶಬ್ದದ ಅರ್ಥವಾದ ಸಾರ್ವಜ್ಞಾದಿ ಗುಣಸಮುದ್ರದ ನಿಷೇಧವು ಎಲ್ಲಿ ಕಂಡಿದೆ? ಅಥವಾ ತ್ವಂ ಪದಾರ್ಥದ ಗುಣದ ನಿಷೇಧವಾದರೂ ಎಲ್ಲಿ ಕಂಡಿದೆ?

**ಭಾವವಿಲಾಸಿನೀ–** ಅಪಿ ಚ ಸೋಯಂ ದೇವದತ್ತ ಇತಿ ವಾಕ್ಯೇऽಪಿ ದೇವದತ್ತಪದಾರ್ಥ-ಸ್ಯಾಯಮಿತಿ ಪದಾರ್ಥಸ್ಯ ಚ ತ್ಯಾಗಾದರ್ಶನೇನ ತತ್ತ್ವಮಸೀತ್ಯತ್ರಾಪಿ ತತ್ಬ್ರಹ್ಮೇತಿ ವಿಶೇಷ್ಯ-ವಾಚಕ ಬ್ರಹ್ಮಪದಾರ್ಥಸ್ಯ ತ್ವಮಿತಿ ಪದಾರ್ಥಸ್ಯ ಚ ತ್ಯಾಗೇ ನಿದರ್ಶನಾಭಾವೇನ ಸುಸ್ಥಿರತ್ವಾತ್ ತಯೋಶ್ಚ ತ್ವದಭಿಲಷಿತೈಕ್ಯಘಾತಕತ್ವಾತ್ ಕಥಮೈಕ್ಯಂ ವಾಕ್ಯಾರ್ಥ ಇತ್ಯಾಹ – **ವಿಶೇಷ್ಯೇತಿ ॥** ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್‌ಗುಣಾ ಇತಿ ಶ್ರುತೇಃಸಾರ್ವಜ್ಞಾದಿ ಗುಣಾಂಬುಧೇರಿತ್ಯುಕ್ತಮ್ ॥ ೧೧೩೦ ॥

**ವಿವರಣೆ–** 'ಸೋಯಂ ದೇವದತ್ತಃ' ಎಂಬಲ್ಲಿ ಅಯಂ ಎಂಬ ಪದದ ಅರ್ಥದ ತ್ಯಾಗವಾಗಲೀ, ವಿಶೇಷ್ಯ ವಾಚಕವಾದ ದೇವದತ್ತ ಎಂಬ ಅರ್ಥದ ತ್ಯಾಗವಾಗಲೀ ಇಲ್ಲವೆಂದು ನಿರೂಪಿಸಿದ್ದೇವೆ. ಹೀಗಿರುವಾಗ ತತ್ತ್ವಮಸಿ ವಾಕ್ಯದಲ್ಲಿ ವಿಶೇಷ್ಯವಾದ ಬ್ರಹ್ಮಪದಾರ್ಥಕ್ಕಾಗಲೀ ಅಥವಾ ತ್ವಂ ಪದಾರ್ಥಕ್ಕಾಗಲೀ ತ್ಯಾಗದ ವಿಷಯದಲ್ಲಿ ಯಾವ ದೃಷ್ಟಾಂತವೂ ಇಲ್ಲದಿರುವುದರಿಂದ ಆ ಅರ್ಥಗಳು ಗ್ರಾಹ್ಯವಾಗುತ್ತವೆ. ಅವು ಪರಸ್ಪರ ವಿರುದ್ಧವಾದ್ದರಿಂದ ನಿನಗೆ ಅಭಿಮತವಾದ ಐಕ್ಯಕ್ಕೆ ಹಿಂಸಾತ್ಮಕವಾಗುತ್ತವೆ ಎಂದು ಇಲ್ಲಿ ನಿರೂಪಿಸುತ್ತಾರೆ. 'ಅಥಕಸ್ಮಾತ್ ಉಚ್ಯತೇ ಬ್ರಹ್ಮೇತಿ....' ಎಂಬ ಶ್ರುತಿ ಇರುವುದರಿಂದ ಬ್ರಹ್ಮ ಶಬ್ದಾರ್ಥವು ಸಾರ್ವಜ್ಞಾದಿ ಗುಣಸಮುದ್ರ ಎಂದು ಮೂಲದಲ್ಲಿ ಹೇಳಿದ್ದಾರೆ.

**ಕಿಂಚಾವಿನಾಶೀ ಜೀವೋನುಚ್ಛಿತ್ತಿಧರ್ಮಾ ಶ್ರುತೌ ಶ್ರುತಃ ।**
**ನ ಕರ್ಮಣಾ ಕನೀಯಾನ್ ಯೋ ನಿತ್ಯೋಽಸ್ಯ ಮಹಿಮಾಽಪಿ ಚ ॥೧೧೩೧॥**

**ಅರ್ಥ–** ಕಿಂಚ = ಅದಲ್ಲದೇ, ಜೀವಃ = ಜೀವನು, ಅವಿನಾಶೀ = ನಾಶವಿಲ್ಲದವನೆಂದು, ಅನುಚ್ಛಿತ್ತಿಧರ್ಮಾ = ನಾಶವಿಲ್ಲದ ಧರ್ಮಗಳುಳ್ಳವನೆಂದು, ಶ್ರುತೌ = ಅವಿನಾಶೀ ವಾ ಎಂಬ ಶ್ರುತಿಯಲ್ಲಿ, ಶ್ರುತಃ = ವರ್ಣಿಸಲ್ಪಟ್ಟಿದ್ದಾನೆ. ಯಃ = ಯಾರು, ಕರ್ಮಣಾ = ತಾನು ಮಾಡುವ ಕರ್ಮಗಳಿಂದ, ನ ಕನೀಯಾನ್ = ಕನಿಷ್ಠನಾಗುವುದಿಲ್ಲವೋ, ಅಸ್ಯ = ಈ ಪರಮಾತ್ಮನ, ಮಹಿಮಾಪಿ = ಮಹಿಮೆಯೂ ಕೂಡ, ನಿತ್ಯಃ = ನಿತ್ಯವಾಗಿದೆ, ಇತಿ = ಎಂಬುದಾಗಿ, ಬ್ರಹ್ಮಾ ಚ = ಪರಬ್ರಹ್ಮನೂ ಕೂಡ, ಶ್ರುತೌ = ನಕರ್ಮಣಾ ವರ್ಧತೇ ಇತ್ಯಾದಿ ಶ್ರುತಿಗಳಲ್ಲಿ, ಶ್ರುತಃ = ವರ್ಣಿಸಲ್ಪಟ್ಟಿದ್ದಾನೆ.

**ಅನುವಾದ–** ಅದೂ ಅಲ್ಲದೇ, ಜೀವನೂ ಸಹ ಅವಿನಾಶಿ ಮತ್ತು ಅನುಚ್ಛಿತ್ತಿ ಧರ್ಮ ಎಂದು ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ. ಬ್ರಹ್ಮನೂ ಸಹ ನ ಕರ್ಮಣಾ ವರ್ಧತೇ ನೋಕನೀಯಾನ್ ಎಂದು ನಿರೂಪಿಸಿ 'ಏಷನಿತ್ಯೋಮಹಿಮಾ ಬ್ರಾಹ್ಮಣಸ್ಯ' ಎಂಬ ವಾಕ್ಯದಿಂದ ನಿತ್ಯಮಹಿಮೆ ಉಳ್ಳವನು ಎಂದು ಹೇಳಲ್ಪಟ್ಟಿದ್ದಾನೆ.

**ವಿವರಣೆ–** 'ಅವಿನಾಶೀ ವಾ ಅರೇ ಅಯಂ ಆತ್ಮಾ ಅನುಚ್ಛಿತ್ತಿಧರ್ಮಾ' ಎಂಬುದು ಜೀವನನ್ನು ಹೇಳುವ ಉಪನಿಷದ್ವಾಕ್ಯ. ಈ ವಾಕ್ಯದಲ್ಲಿ ಅವಿನಾಶೀ ಎಂಬ ಶಬ್ದದಿಂದ ಜೀವನ ಸ್ವರೂಪಕ್ಕೆ ನಾಶವಿಲ್ಲವೆಂದು, ಅನುಚ್ಛಿತ್ತಿ ಧರ್ಮಾ ಎಂಬ ಶಬ್ದದಿಂದ ಜೀವನ ಅಲ್ಪಜ್ಞತ್ವಾದಿ ಗುಣಗಳಿಗೆ ನಾಶವಿಲ್ಲವೆಂದೂ ಹೇಳಿದೆ. 'ಏಷನಿತ್ಯೋಮಹಿಮಾ ಬ್ರಾಹ್ಮಣಸ್ಯ' ಎಂಬ ಉಪನಿಷದ್ವಾಕ್ಯವು ಬ್ರಹ್ಮನ ಮಹಿಮೆಯು ನಿತ್ಯವಾದುದು. ಆದ್ದರಿಂದ ಎಂದೂ ನಾಶವನ್ನು ಹೊಂದುವುದಿಲ್ಲ ಎಂದು ಹೇಳಿದೆ. ಈ ಶ್ರುತಿಯಲ್ಲಿರುವ ಬ್ರಾಹ್ಮಣ ಶಬ್ದದಿಂದ ಬ್ರಹ್ಮನನ್ನೇ ಏಕೆ ತೆಗೆದುಕೊಳ್ಳಬೇಕು ಎಂಬ ಶಂಕೆಯನ್ನು ಪರಿಹಾರ ಮಾಡುವುದಕ್ಕಾಗಿ 'ನ ಕರ್ಮಣಾ ವರ್ಧತೇ ನೋಕನೀಯಾನ್' ಎಂಬ ವಾಕ್ಯಶೇಷವನ್ನು ಉದಾಹರಿಸಿದ್ದಾರೆ.

ಅವನು ಕರ್ಮದಿಂದ ಅಭಿವೃದ್ಧಿಯನ್ನೂ ಹೊಂದುವುದಿಲ್ಲ, ಹಾನಿಯನ್ನೂ ಹೊಂದುವುದಿಲ್ಲ ಎಂದು ಅರ್ಥ. ಇಂತಹ ಸ್ವಭಾವವುಳ್ಳವನು ಪರಬ್ರಹ್ಮನೇ ಆಗಬೇಕು. ಆದ್ದರಿಂದ ಅವನ ಮಹಿಮೆಯು ನಿತ್ಯ. ಆದ್ದರಿಂದ ನಿತ್ಯವಾದುದನ್ನು ಪರಿತ್ಯಾಗ ಮಾಡುವುದು ಹೇಗೆ ಎಂದು ಇಲ್ಲಿ ಪ್ರಶ್ನೆ ಮಾಡುತ್ತಾರೆ.

ಅತಸ್ತದ್ಗುಣಸಂತ್ಯಾಗಃ ಪ್ರಾಣತ್ಯಾಗಃ ಶ್ರುತೇರ್ಭವೇತ್ ।
ಪರನ್ಯಾಯಸ್ತು ನೈವಾಸ್ತಿ ದಗ್ಧಾರಣ್ಯಮೃಗೋಽಭವಃ ॥ ೧೧೩೨ ॥

**ಅರ್ಥ–** ಅತಃ = ಆದ್ದರಿಂದ, ತದ್ಗುಣಸಂತ್ಯಾಗಃ = ಜೀವ ಮತ್ತು ಬ್ರಹ್ಮರ ಗುಣಗಳನ್ನು ತ್ಯಾಗಮಾಡುವುದು, ಶ್ರುತೇಃ = ವೇದದ, ಪ್ರಾಣತ್ಯಾಗಃ = ಪ್ರಾಣಹರಣವೇ, ಭವೇತ್ = ಆಗಿದೆ, ಪರನ್ಯಾಯಃ ತು = ಅದ್ವೈತ ಮತದ ಪ್ರಮೇಯವನ್ನು ಸಮರ್ಥಿಸಲು ಉಪಯೋಗವಾಗುವ ಬೇರೆ ಮತಗಳಲ್ಲಿ ಹೇಳಿದ ನ್ಯಾಯವಾದರೂ, ನ ಅಸ್ತಿ ಏವ = ಇಲ್ಲವೇ ಇಲ್ಲ. ಅತಃ = ಆದ್ದರಿಂದ, ತ್ವಂ = ನೀನು, ದಗ್ಧಾರಣ್ಯಮೃಗಃ = ದಗ್ಧಾ = ಸುಟ್ಟುಹೋದ, ಅರಣ್ಯ = ಕಾಡಿನಲ್ಲಿರುವ, ಮೃಗಃ = ಜಿಂಕೆಯಂತೆ, ಅಭವಃ = ಆಗಿರುವಿ.

**ಅನುವಾದ–** ಆದ್ದರಿಂದ ಆ ಗುಣಗಳ ಪರಿತ್ಯಾಗವು ಶ್ರುತಿಗೆ ಪ್ರಾಣತ್ಯಾಗವನ್ನು ಮಾಡಿದಂತೆ ಆಗುತ್ತದೆ. ನಿನಗೆ ಅಭಿಮತವಾದ ಅರ್ಥವನ್ನು ಹೇಳುವ ಯಾವ ಪರನ್ಯಾಯವೂ ಇಲ್ಲ. ಆದ್ದರಿಂದ ನೀನು ಸುಟ್ಟುಹೋದ ಕಾಡಿನಲ್ಲಿರುವ ಜಿಂಕೆಯಂತೆ ಆಗಿದ್ದೀಯೆ.

**ಭಾವವಿಲಾಸಿನೀ–** ಜೀವಗುಣಾನಾಂ ಬ್ರಹ್ಮಗುಣಾನಾಂ ಚಾವಿನಾಶಿತ್ವಾಚ್ಚ ನ ತ್ಯಾಗ ಇತ್ಯಾಹ – **ಕಿಂಚೇತಿ॥** ಅವಿನಾಶೀ ವಾ ಅರೇಽಯಮಾತ್ಮಾನುಚ್ಛಿತ್ತಿಧರ್ಮಾ । ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ । ನ ಕರ್ಮಣಾ ವರ್ಧತೇ ನೋ ಕನೀಯಾನ್ ಇತಿ ಶ್ರುತಿದ್ವಯಮನೇನ ಗೃಹ್ಣಾತಿ । ಕರ್ಮನಿಮಿತ್ತಕಹಾನ್ಯಭಾವಶ್ರವಣಾತ್ ಪರಂ ಬ್ರಹ್ಮೈವಾಯಂ ಬ್ರಾಹ್ಮಣೋ ನ ಬ್ರಾಹ್ಮಣಮಾತ್ರಮಿತಿ ಯುಕ್ತಿಸೂಚನಾಯ ಯಃ ಕರ್ಮಣಾ ನೋ ಕನೀಯಾನಿತ್ಯುಕ್ತಮ್ । ತದ್ಗುಣಸಂತ್ಯಾಗಃ ತಯೋರ್ಜೀವಬ್ರಹ್ಮಣೋರ್ಗುಣಸಂತ್ಯಾಗಃ । ಸಿಂಹೋ ದೇವದತ್ತಃ ಯಜಮಾನಃ ಪ್ರಸ್ತರ ಇತ್ಯಾದಿ ವಿರುದ್ಧಾರ್ಥಕವಾಕ್ಯೇಷು ಜಹದಜಹಲ್ಲಕ್ಷಣಯಾ ಪರ್ಯೈಕ್ಯಾನಂಗೀಕಾರಾತ್ಪರನ್ಯಾಯೋ ನೈವಾಸ್ತೀತ್ಯುಕ್ತಮ್ । ಅತಸ್ತ್ವಂ ದಗ್ಧಾರಣ್ಯಮೃಗೋಽಭವಃ । ದಗ್ಧಾರಣ್ಯಮೃಗಸ್ಯ ಹಿ ವನಸ್ಥತೃಣಾಭಾವಾತ್ ಸ್ವನ್ಯಾಯೋ ನಾಸ್ತಿ । ತಸ್ಮಿನ್‌ಸಸ್ಯಾದೇರ ಭಾವಾತ್‌ಪರನ್ಯಾಯೋಽಪಿ ಯಥಾ ನಾಸ್ತಿ ತಥಾ ತವಾಪಿ ಸ್ವರೀತ್ಯಾ ಗುಣತ್ಯಾಗೋಽಪಿ ನಾಭೂತ್ । ಗುಣತ್ಯಾಗೇ ಪರರೀತಿಸ್ತು ನಾಸ್ತ್ಯೇವ । ಅತಸ್ತ್ವಮಪಿ ತಾದೃಶೋಽಭೂರಿತಿ ಭಾವಃ ॥ ೧೧೩೧, ೧೧೩೨ ॥

**ವಿವರಣೆ–** 'ಸಿಂಹೋ ದೇವದತ್ತಃ, ಯಜಮಾನಃ ಪ್ರಸ್ತರಃ' ಎಂಬ ವಾಕ್ಯಗಳಲ್ಲಿ ಯಾರೂ ಅದ್ವೈತಿಗಳು ತತ್ತ್ವಮಸಿ ವಾಕ್ಯದಲ್ಲಿ ಒಪ್ಪುವಂತೆ ಜಹದಜಹಲ್ಲಕ್ಷಣಾವನ್ನು ಒಪ್ಪಿಲ್ಲ.

ಆದ್ದರಿಂದ ಯಾವುದನ್ನು ಉಪಜೀವಿಸಿಕೊಂಡು ಬದುಕಬಹುದೋ ಅಂತಹ ಪರನ್ಯಾಯವು ಇಲ್ಲ. ಸುಟ್ಟುಹೋದ ಕಾಡಿನಲ್ಲಿರುವ ಜಿಂಕೆಗೆ ತನ್ನ ಆಹಾರವಾದ ತೃಣವೂ ಇಲ್ಲ, ಬೇರೆ ಪ್ರಾಣಿಗಳ ಆಹಾರವಾದ ಬೇರೆ ಸಸ್ಯಗಳೂ ಇಲ್ಲ. ಅದು ಹೇಗೆ ಬದುಕುವ ಮಾರ್ಗವಿಲ್ಲದೆ ಸಂಕಟಪಡುತ್ತದೆಯೋ ಹಾಗೆ ನಿನಗೆ ಅಭಿಮತವಾದ ಪ್ರಮೇಯವನ್ನು ಸ್ಥಾಪಿಸಲು ನಿನ್ನ ನ್ಯಾಯವೂ ಇಲ್ಲದೆ, ಪರರ ನ್ಯಾಯವೂ ಇಲ್ಲದೆ ನೀನು ಸಂಕಟಪಡುತ್ತೀಯೆ.

**ಯದ್ಯೈಕ್ಯೋಕ್ತಿಬಲಾದೇವ ಗುಣಾನಾಂ ಬಾಧನಂ ತವ ।**
**ಉತ್ಪನ್ನ ಬಾಲಮಂತ್ರೇಣ ವಿರೋಧಿಗ್ರಹನಿಗ್ರಹಃ ।**
**ನಿಗೃಹೀತೇ ಚ ತಸ್ಮಿನ್ ಸ್ಯಾದ್ ಬಾಲಸ್ಯೋತ್ಪಾದನಂ ತವ ॥ ೧೧೩೩ ॥**

**ಅರ್ಥ–** ಯದಿ = ಒಂದು ವೇಳೆ, ಐಕ್ಯೋಕ್ತಿ ಬಲಾದೇವ = ತತ್ವಮಸಿ ಎಂಬುವ ವೇದದಲ್ಲಿ, ಐಕ್ಯ = ಐಕ್ಯದ, ಉಕ್ತಿ = ಹೇಳುವಿಕೆಯ, ಬಲಾತ್ ಏವ = ಸಾಮರ್ಥ್ಯದಿಂದಲೇ, ಗುಣಾನಾಂ = ಜೀವ ಮತ್ತು ಬ್ರಹ್ಮರ ಗುಣಗಳಿಗೆ, ಬಾಧನಂ = ಬಾಧನವು ಇರುವುದಾದರೆ, ತವ = ಆಗ, ಉತ್ಪನ್ನ ಬಾಲಮಂತ್ರೇಣ = ಉತ್ಪನ್ನ = ಹುಟ್ಟಿದ, ಬಾಲ = ಬಾಲಕನು ಜಪಿಸುವ, ಮಂತ್ರೇಣ = ಮಂತ್ರದಿಂದ, ವಿರೋಧಿಗ್ರಹನಿಗ್ರಹಃ = ವಿರೋಧಿ= ಬಾಲನು ಹುಟ್ಟಲಿಕ್ಕೆ ವಿರೋಧವನ್ನೊಡ್ಡುವ, ಗ್ರಹ = ಗ್ರಹದೋಷಗಳ, ನಿಗ್ರಹಃ = ಪರಿಹಾರವು, ತಸ್ಮಿನ್ = ಆ ದೋಷವು, ನಿಗೃಹಿತೇ = ಪರಿಹೃತವಾದಾಗಲೇ, ತವ = ತಂದೆಯಾದ ನಿನಗೆ, ಬಾಲಸ್ಯ = ಬಾಲಕನ, ಉತ್ಪಾದನಂ = ಜನನವು, ಸ್ಯಾತ್ = ಆಗುತ್ತದೆ. (ಇಲ್ಲಿ ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದೋ, ನಿನಗೂ ಕೂಡ ಅನ್ಯೋನ್ಯಾಶ್ರಯದೋಷವು ಐಕ್ಯವನ್ನು ಸಮರ್ಥನೆ ಮಾಡುವುದರಲ್ಲಿ ಬರುತ್ತದೆ ಎಂದರ್ಥ.)

**ಅನುವಾದ– ತತ್ತ್ವಮಸಿ ವಾಕ್ಯವು ಐಕ್ಯವನ್ನು ಹೇಳುವ ಕಾರಣದಿಂದಲೇ ಸರ್ವಜ್ಞತ್ವಾದಿ ಗುಣಗಳಿಗೆ ಬಾಧವುಂಟಾಗುತ್ತದೆ ಎಂದು ಹೇಳುವುದಾದರೆ ಉತ್ಪನ್ನನಾದ ಕುಮಾರನ ಮಂತ್ರ ಜಪದಿಂದ ಪುತ್ರೋತ್ಪತ್ತಿಗೆ ವಿರೋಧಿಯಾದ ಗ್ರಹದ ನಿಗ್ರಹವುಂಟಾಗುತ್ತದೆ ಎಂದು ಒಪ್ಪಿದಂತಾಯಿತು. ಗ್ರಹದ ನಿಗ್ರಹವಾದಮೇಲಷ್ಟೇ ಬಾಲನ ಉತ್ಪತ್ತಿಯಾಗುತ್ತದೆ ಎಂದು ನೀನಾದರೂ ಒಪ್ಪಬೇಕಾಗುವುದು.**

**ವಿವರಣೆ–** ಐಕ್ಯವಾಕ್ಯದ ಬಲದಿಂದಲೇ ಗುಣಗಳ ಬಾಧವೆಂದು ಹೇಳಿದರೆ ಅನ್ಯೋನ್ಯಾಶ್ರಯವು ಬರುತ್ತದೆಂದು ಸಾಹಿತ್ಯಮುದ್ರೆಯಿಂದ ಹೇಳುತ್ತಾರೆ. ಬಾಲನ ಉತ್ಪತ್ತಿಗೆ ಪ್ರತಿಬಂಧಕವಾದ ಗ್ರಹವಿದ್ದರೆ ಆ ಗ್ರಹದ ನಿಗ್ರಹವಾದ ಹೊರತು ಬಾಲಕನು ಉತ್ಪತ್ತಿಯಾಗುವುದಿಲ್ಲ. ಬಾಲಕನ ಮಂತ್ರಜಪದಿಂದಲೇ ಆ ಗ್ರಹದ ನಿಗ್ರಹವಾಗುತ್ತದೆ ಎಂದು ಹೇಳಿದರೆ ಹೇಗೆ ಅನ್ಯೋನ್ಯಾಶ್ರಯವು ಬರುವುದೋ, ಹಾಗೆ ಸರ್ವಜ್ಞತ್ವಾದಿ ಗುಣಗಳಿಗೆ ಬಾಧವುಂಟಾದರೆ ತತ್ತ್ವಮಸಿ ವಾಕ್ಯಕ್ಕೆ ಐಕ್ಯವನ್ನು ಹೇಳುವ ಯಾವ

ವಿರೋಧವೂ ಇಲ್ಲವಾದ್ದರಿಂದ ಆ ವಾಕ್ಯದಿಂದ ಐಕ್ಯವು ಸಿದ್ಧವಾಗುತ್ತದೆ. ಐಕ್ಯವು ಸಿದ್ಧವಾದರೆ ಅನಂತರ ಅದರಿಂದ ಗುಣಗಳ ಬಾಧವುಂಟಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ.

**ಸಾಮಾನ್ಯನಿರ್ಗುಣೋಕ್ತ್ಯಾಪಿ ನ ಗುಣೋಕ್ತೇಃ ಪರಾಭವಃ ।**
**ಯದಗ್ನೀಷೋಮವಾಕ್ಯೇನೈವ ಹಿಂಸಾವಾಗಪೋದ್ಯತೇ ॥ ೧೧೩೪ ॥**

**ಅರ್ಥ–** ಸಾಮಾನ್ಯನಿರ್ಗುಣೋಕ್ತ್ಯಾಅಪಿ = ಕೇವಲೋ ನಿರ್ಗುಣಶ್ಚ ಎಂಬ ಶ್ರುತಿಯಲ್ಲಿ ಸಾಮಾನ್ಯತಃ ಬ್ರಹ್ಮನನ್ನು ನಿರ್ಗುಣ ಎಂದು ಹೇಳಿಕೆಯಿದ್ದರೂ, ತಯಾ = ಅದರಿಂದ, ಗುಣೋಕ್ತೇಃ = ಬ್ರಹ್ಮನನ್ನು, ಸತ್ಯಂ ಜ್ಞಾನಮ್ ಅನಂತಂ ಎಂಬ ಗುಣಗಳುಳ್ಳವನೆಂದು ಎಂದು ಹೇಳಿರುವುದಕ್ಕೆ, ಪರಾಭವಃ = ವಿರೋಧವು, ನ = ಇಲ್ಲ. ಯತ್= ಏಕೆಂದರೆ, ಹಿಂಸಾ ವಾಕ್-ಮಾ ಹಿಂಸ್ಯಾತ್ ಸರ್ವಾ ಭೂತಾನಿ ಎಂಬ ಸಾಮಾನ್ಯತಃ ಹಿಂಸಾ ನಿಷೇಧಕ ವಾಕ್ಯವೇ ಅಗ್ನೀಷೋಮೀಯ ವಾಕ್ಯೇನ= ಅಗ್ನೀಷೋಮೀಯಂ ಪಶುಮಾಲಭೇತ ಎಂದು ವಿಶೇಷ ಹಿಂಸೆಯನ್ನು ಹೇಳುವ ವಾಕ್ಯದಿಂದಲೇ ಅಪೋದ್ಯತೇ= ಬಾಧಿಸಲ್ಪಡುತ್ತದೆ.

**ಅನುವಾದ– ಕೇವಲೋ ನಿರ್ಗುಣಶ್ಚ ಎಂಬ ಶ್ರುತಿಯು ಸಾಮಾನ್ಯವಾಗಿ ನಿರ್ಗುಣ ಎಂದು ಹೇಳಿದರೂ ಅದರಿಂದ ಗುಣೋಕ್ತಿಗೆ ಬಾಧವಿಲ್ಲ.ಹೇಗೆ ಮಾಹಿಂಸ್ಯಾತ್ ಸರ್ವಾಭೂತಾನಿ ಎಂಬ ಸಾಮಾನ್ಯ ನಿಷೇಧದಿಂದ ಅಗ್ನಿಷೋಮೀಯ ಪಶುಹಿಂಸೆಗೆ ಬಾಧವಿಲ್ಲವೋ ಅದರಂತೆ ಇಲ್ಲಿಯೂ ಸಹ.**

**ಭಾವವಿಲಾಸಿನೀ–** ಐಕ್ಯೋಕ್ತ್ಯಾ ನಿರ್ಗುಣೋಕ್ತ್ಯಾ ವಾ ವಿರುದ್ಧಗುಣಸಂತ್ಯಾಗ ಇತಿ ಶಂಕಾಂ ಗುಣಸೌರಭೋಕ್ತಯುಕ್ತಿಮೇವ ಸಾಹಿತ್ಯಮುದ್ರಯಾ ಸ್ಮಾರಯನ್ ಪರಿಹರತಿ – **ಯದೀತಿ ॥** ವಿರೋಧಿಗ್ರಹನಿಗ್ರಹಃ ಉತ್ಪತ್ತಿವಿರೋಧಿಗ್ರಹಪರಿಹಾರ ಇತ್ಯರ್ಥಃ । ತಸ್ಮಿನ್ವಿರೋಧಿಗ್ರಹೇ । ತವಮತೇ ॥ ೧೧೩೪ ॥

**ವಿವರಣೆ–** ಸಾಮಾನ್ಯ ವಿಶೇಷ ಶಾಸ್ತ್ರಗಳ ಪ್ರಸಂಗವುಂಟಾದಾಗ ಸಾಮಾನ್ಯ ಶಾಸ್ತ್ರಕ್ಕೆ ವಿರೋಧಿಯಾದ ವಿಶೇಷ ಶಾಸ್ತ್ರದ ಭಿನ್ನ ವಿಷಯಕತ್ವವನ್ನು ಶಾಸ್ತ್ರದಲ್ಲಿ ಅಂಗೀಕಾರ ಮಾಡುವುದನ್ನು ಹಿಂದೆಯೇ ಸ್ಥಾಪಿಸಿರುವುದರಿಂದ ಯಾವ ವಿರೋಧವೂ ಇಲ್ಲ.

**ಯದಿ ತತ್ತ್ವಂ ಪದಾಭ್ಯಾಂ ತೇ ರೂಪಮಾತ್ರನಿರೂಪಣಂ ।**
**ಚಿಚ್ಚಿದಿತ್ಯೇವ ಚೋಕ್ತಂ ಸ್ಯಾತ್ಕಸ್ಯೈಕ್ಯಂ ತೇನ ಸಾಧ್ಯತೇ ॥ ೧೧೩೫ ॥**

**ಅರ್ಥ–** ತೇ = ನಿನ್ನ, ಮತೇ = ಮತದಲ್ಲಿ, ಯದಿ = ಒಂದು ವೇಳೆ, ತತ್ ತ್ವಂ ಪದಾಭ್ಯಾಂ = ತತ್ ಪದ ಮತ್ತು ತ್ವಂ ಪದಗಳಿಂದ, ರೂಪಮಾತ್ರ ನಿರೂಪಣಂ = ಚೈತನ್ಯವು

ಮಾತ್ರ ಹೇಳಲ್ಪಡುತ್ತದೆ ಎಂದಾದರೆ, ತರ್ಹಿ = ಆವಾಗ, ಚಿತ್‌ಚಿತ್ ಇತಿ ಏವ = ಚಿತ್‌ಚಿತ್ ಎಂಬ ಮಾತ್ರ, ಉಕ್ತಂ ಸ್ಯಾತ್ = ಹೇಳಲ್ಪಟ್ಟಂತೆ ಆಯಿತು. ತದಾ = ಆವಾಗ, ತೇನ = ಆ ವಾಕ್ಯದಿಂದ, ಕಸ್ಯ = ಯಾರ, ಐಕ್ಯಂ = ಐಕ್ಯವು, ಸಾಧ್ಯತೇ = ಸಾಧಿಸಲ್ಪಡುತ್ತದೆ.

**ಅನುವಾದ– ತತ್ ತ್ವಂ ಪದಗಳಿಂದ ಚೈತನ್ಯ ಮಾತ್ರವು ಹೇಳಲ್ಪಡುತ್ತದೆ ಎಂದು ಹೇಳಿದರೆ ಚಿತ್ ಚಿತ್ ಎಂದು ಇಷ್ಟೇ ಹೇಳಿದಂತಾಯಿತು. ಇಲ್ಲಿ ಐಕ್ಯದ ಪ್ರಸಕ್ತಿಯೇ ಇಲ್ಲದಿರುವುದರಿಂದ ಯಾವುದಕ್ಕೆ ಯಾವುದರ ಐಕ್ಯವನ್ನು ಸಾಧಿಸುತ್ತೀಯೆ?**

**ವಿವರಣೆ–** ತತ್ ತ್ವಂ ಪದಗಳು ಚಿತ್‌ಚಿತ್ ಎಂದು ಇಷ್ಟೇ ಹೇಳುತ್ತದೆ. ಯಾವ ಪದಗಳು ಐಕ್ಯವನ್ನು ಹೇಳುವುದಿಲ್ಲ. ಹೀಗಿರುವಾಗ ಐಕ್ಯದ ಉಪಸ್ಥಿತಿಯೇ ಇಲ್ಲದಿರುವುದರಿಂದ ಯಾವುದಕ್ಕೂ ಯಾವುದರಿಂದಲೂ ಐಕ್ಯವನ್ನು ಹೇಳಲು ಬರುವುದಿಲ್ಲ.

**ಸೋಽಯಮಿತ್ಯತ್ರ ಚೋಕ್ತಂ ಸ್ಯಾತ್ ಪ್ರಾಕ್ಕಾಲಾದ್ಯವಿವಕ್ಷಣೇ ।**
**ದೇವದತ್ತೋ ದೇವದತ್ತೋ ಘಟೋ ಘಟ ಇತಿ ಸ್ಫುಟಂ ॥ ೧೧೩೬ ॥**

**ಅರ್ಥ–** ಸೋಽಯಮಿತ್ಯತ್ರ ಚ = ಸೋಽಯಂ ದೇವದತ್ತಃ ಎಂಬಲ್ಲಿಯೂ ಕೂಡ, ಪ್ರಾಕ್ ಕಾಲಾದ್ಯವಿವಕ್ಷಣೇ = ಅತೀತದೇಶಕಾಲ ಸಂಬಂಧವನ್ನು ಮತ್ತು ಏತದ್ದೇಶಕಾಲ ಸಂಬಂಧವನ್ನು ವಿವಕ್ಷೆ ಮಾಡದಿದ್ದರೆ, ಘಟಃ ಘಟ ಇತಿವತ್= ಘಟಃ ಘಟಃ ಎಂಬಂತೆ, ದೇವದತ್ತಃ ದೇವದತ್ತಃ = ದೇವದತ್ತನು, ದೇವದತ್ತನು, ಇತಿ = ಎಂಬುದಾಗಿ, ಸ್ಫುಟಂ = ಸ್ಪಷ್ಟವಾಗಿ, ಉಕ್ತಂ ಸ್ಯಾತ್ = ಹೇಳಲ್ಪಟ್ಟಂತಾಯಿತು.

**ಅನುವಾದ– 'ಸೋಽಯಂ ದೇವದತ್ತಃ' ಎಂಬಲ್ಲಿಯೂ ಅತೀತದೇಶಕಾಲ ಸಂಬಂಧವನ್ನು ಏತದ್ದೇಶಕಾಲ ಸಂಬಂಧವನ್ನು ವಿವಕ್ಷೆ ಮಾಡದಿದ್ದರೆ ದೇವದತ್ತ ದೇವದತ್ತ ಎಂದು ಹೇಳಿದಂತಾಯಿತು. ಹೀಗೆ ಹೇಳಿದರೆ ಘಟೋ ಘಟಃ ಎಂಬ ವಾಕ್ಯವು ಹೇಗೆ ಶಾಬ್ದಬೋಧ ಜನಕವಾಗುವುದಿಲ್ಲವೋ, ಹಾಗೆಯೇ ಇದು ಶಾಬ್ದಬೋಧಜನಕವಾಗುವುದಿಲ್ಲ ಎಂಬ ಆಪತ್ತಿಯು ಬರುತ್ತದೆ.**

**ಭಾವವಿಲಾಸಿನೀ– ದೋಷಾಂತರಂ ಚ ವದತಿ– ಯದಿ ತತ್ತ್ವಂಪದಾಭ್ಯಾಮಿತಿ ॥ ೧೧೩೬ ॥**

**ವಿವರಣೆ–** 'ಸೋಽಯಂ ದೇವದತ್ತಃ' ಎಂಬ ವಾಕ್ಯದಲ್ಲಿ ಅವಶ್ಯವಾಗಿ ತದ್ದೇಶಕಾಲ ಸಂಬಂಧವನ್ನು, ಏತದ್ದೇಶಕಾಲ ಸಂಬಂಧವನ್ನು ವಿವಕ್ಷೆ ಮಾಡಲೇಬೇಕು. ಹಾಗಿಲ್ಲದೆ ಕೇವಲ ದೇವದತ್ತ ಸ್ವರೂಪವನ್ನು ಮಾತ್ರ ಬೋಧನೆ ಮಾಡಿದರೆ, ಶಾಬ್ದಬೋಧ ನಿಯಮದಂತೆ ಇಲ್ಲಿ ಯಾವ ಶಾಬ್ದಬೋಧವೂ ಬರದಿರುವುದರಿಂದ ಶ್ರುತಿವಾಕ್ಯವೇ ಅಪ್ರಮಾಣವಾಗುವ ಪ್ರಸಂಗವು ಬರುತ್ತದೆ.

**ಏವಂ ಚ ಪ್ರತ್ಯಭಿಜ್ಞಾನಸ್ವರೂಪಸ್ಯೈವ ಭರ್ಜನಾತ್ ।**
**ಸ್ಥೈರ್ಯಾಸಿದ್ಧೇಃ ಪದಾರ್ಥಾನಾಂ ಪ್ರಾಪ್ತಾ ಚ ಪುನರುಕ್ತತಾ ॥ ೧೧೩೭ ॥**

**ಅರ್ಥ–** ಏವಂ ಚ = ದೇವದತ್ತಃ ದೇವದತ್ತಃ ಎಂಬ ವಾಕ್ಯದಿಂದ ಶಾಬ್ದಬೋಧ ಬರುವುದಿಲ್ಲವಾದ್ದರಿಂದ, ಪ್ರತ್ಯಭಿಜ್ಞಾನ ಸ್ವರೂಪಸ್ಯೈವ = ಪ್ರತ್ಯಭಿಜ್ಞಾದ ಸ್ವರೂಪವನ್ನೇ, ಭರ್ಜನಾತ್ = ಅಪಲಾಪ ಮಾಡಿದಂತಾದ್ದರಿಂದ, ಪದಾರ್ಥಾನಾಂ = ಘಟಪಟಾದಿ ಪದಾರ್ಥಗಳಿಗೆ, ಸ್ಥೈರ್ಯ ಅಸಿದ್ಧೇಃ= ಸ್ಥಿರತ್ವವೇ ಸಿದ್ಧವಾಗುವುದಿಲ್ಲ, ಚ = ಮತ್ತು, ಪುನರುಕ್ತತಾ = ಘಟಘಟ ಮೊದಲಾದ ಪದಗಳಿಗೆ ಪುನರುಕ್ತಿ ದೋಷವು, ಪ್ರಾಪ್ತಾ = ಬರುತ್ತದೆ.

**ಅನುವಾದ– ಅಷ್ಟೆ ಅಲ್ಲದೆ ಪ್ರತ್ಯಭಿಜ್ಞಾನ ಸ್ವರೂಪವನ್ನೇ ಅಪಲಾಪ ಮಾಡುವುದರಿಂದ ಜಗತ್ತಿನಲ್ಲಿ ಸ್ಥಿರತ್ವವೇ ಸಿದ್ಧವಾಗುವುದಿಲ್ಲ ಮತ್ತು ವಾಕ್ಯಘಟಕಪದಗಳಿಗೆ ಪುನರುಕ್ತಿದೋಷವೂ ಬರುತ್ತದೆ.**

**ಭಾವವಿಲಾಸಿನೀ–** ಪ್ರತ್ಯಭಿಜ್ಞಾನಸ್ವರೂಪಸ್ಯ ಸೋಽಯಂ ಘಟ ಇತ್ಯಾದಿ ಪ್ರತ್ಯಭಿಜ್ಞಾನ-ಸ್ವರೂಪಸ್ಯ ॥ ೧೧೩೭ ॥

**ವಿವರಣೆ–** ಪ್ರತ್ಯಭಿಜ್ಞಾ ಸ್ವರೂಪವನ್ನು ಅಂಗೀಕಾರ ಮಾಡಿ ಅದು ಎರಡು ಕಾಲಗಳ ಸಂಬಂಧವನ್ನು ಒಂದೇ ವಸ್ತುವಿಗೆ ಹೇಳುವ ಕಾರಣ ಆ ವಸ್ತುವು ಸ್ಥಿರವಾದುದು, ಕ್ಷಣಿಕವಲ್ಲ ಎಂದು ಹೇಳಿ ಬೌದ್ಧರ ಕ್ಷಣಿಕತ್ವ ವಾದವನ್ನು ನಿರಾಕರಣೆ ಮಾಡಬೇಕು. ಪ್ರತ್ಯಭಿಜ್ಞೆಯಲ್ಲಿ ದೇಶಕಾಲ ಸಂಬಂಧವೇ ತೋರದಿದ್ದರೆ, ವಸ್ತುವಿನ ಸ್ಥೈರ್ಯವನ್ನು ಉಪಪಾದನೆ ಮಾಡಲು ಯಾವ ಯುಕ್ತಿಯೂ ಇಲ್ಲವಾದ್ದರಿಂದ ಸ್ಥೈರ್ಯವು ಸಿದ್ಧವಾಗದೆ ಬೌದ್ಧರ ಕ್ಷಣಿಕವಾದವನ್ನು ಅವಲಂಬಿಸಬೇಕಾದ ಪ್ರಸಂಗವು ಬರುತ್ತದೆ.

**ಪದೇನಾನುದಿತೋ ಧರ್ಮೋ ನೈವ ವ್ಯಾವರ್ತಕೋ ಭವೇತ್ ।**
**ನ ಹ್ಯಯಂ ಘಟ ಇತ್ಯುಕ್ತೇ ಸಿದ್ಧ್ಯೇದ್ರಕ್ತಘಟಾನ್ಯತಾ ॥ ೧೧೩೮ ॥**

**ಅರ್ಥ–** ಪದೇನ = ಒಂದು ವಸ್ತುವನ್ನು ಹೇಳುತ್ತಿರುವುದರಿಂದ, ಅನುದಿತಃ = ಹೇಳಲ್ಪಡದೇ ಇದ್ದ, ಧರ್ಮಃ = ಧರ್ಮವು, ವ್ಯಾವರ್ತಕ = ಒಂದು ವಸ್ತುವನ್ನು ಇತರ ವಸ್ತುಗಳಿಂದ ಭಿನ್ನ ಎಂದು ತೋರಿಸುವಂತದು, ನ ಭವೇತ್ ಏವ = ಆಗುವುದೇ ಇಲ್ಲ. ಅಯಂ ಘಟಃ ಇತ್ಯುಕ್ತೇ = ಅಯಂ ಘಟಃ ಎಂದು ಹೇಳಿದಾಗ, ತಸ್ಯ = ಪುರೋವೃತ್ತಿಯಾದ ಆ ಘಟಕ್ಕೆ, ರಕ್ತಘಟಾನ್ಯತಾ = ಕೆಂಪಾದ ಘಟದಿಂದ ಭೇದವು, ನ ಹಿ ಸಿದ್ಧ್ಯೇತ್ = ಸಿದ್ಧವಾಗುವುದಿಲ್ಲವಷ್ಟೆ.

**ಅನುವಾದ–** ಪದದಿಂದ ಹೇಳಲ್ಪಡದೇ ಇದ್ದ ಧರ್ಮವು ವ್ಯಾವರ್ತಕವಾಗುವುದಿಲ್ಲ. ಇದು ಘಟ ಎಂದು ಹೇಳಿದರೆ ಪೂರೋವೃತ್ತಿಯಲ್ಲಿ ರಕ್ತಘಟವ್ಯಾವೃತ್ತಿಯು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ವ್ಯಾವರ್ತಕಧರ್ಮಾನುಕ್ತೌ ವ್ಯಾವೃತ್ತೇರಪ್ಯಸಿದ್ಧಿರಿತ್ಯತ್ರ ದೃಷ್ಟಾಂತಮಾಹ – ನಹೀತಿ ॥ ೧೧೩೮ ॥

**ವಿವರಣೆ–** ಅದ್ವೈತಿಗಳು ತತ್ ತ್ವಂ ಪದಗಳಿಂದ ವ್ಯಾವೃತ್ತಿಗಳು ಹೇಳಲ್ಪಡುತ್ತದೆ ಎಂದು ಹೇಳುತ್ತಾರೆ. ವ್ಯಾವೃತ್ತಿಯ ಜ್ಞಾನವನ್ನು ಉಂಟುಮಾಡಿಕೊಡಬೇಕಾದರೆ ವ್ಯಾವರ್ತಕವನ್ನು ಹೇಳಬೇಕು. ಆ ವ್ಯಾವರ್ತಕವು ಪದದಿಂದಲೇ ಉಪಸ್ಥಾಪಿತ- ವಾಗಬೇಕು. ಸೋಯಂ ಎಂಬಲ್ಲಿ ಪದಗಳು ದೇಶಕಾಲ ಸಂಬಂಧವನ್ನು ಹೇಳದೆ ಮುಂಡಿತವಾದ ದೇವದತ್ತ ಸ್ವರೂಪವನ್ನು ಮಾತ್ರ ಹೇಳಿದರೆ ಅದರಲ್ಲಿ ಯಾವ ವ್ಯಾವೃತ್ತಿಯೂ ಸಿದ್ಧವಾಗುವುದಿಲ್ಲ. ಅದರಂತೆ ತತ್ ತ್ವಂ ಪದಗಳೂ ಸಹ ವ್ಯಾವರ್ತಕವನ್ನು ಹೇಳದಿದ್ದರೆ ಅಲ್ಲಿಯೂ ವ್ಯಾವೃತ್ತಿಯು ಸಿದ್ಧವಾಗುವುದಿಲ್ಲ.

**ಅತಃ ಸ್ವೇಷ್ಟಾರ್ಥಸಿದ್ಧ್ಯರ್ಥಂ ತತ್ತದರ್ಥಪರಿಗ್ರಹೇ ।**
**ಆವಶ್ಯಕೇ ರೂಪಮಾತ್ರಲಕ್ಷಣಾ ಕುತ್ರ ಕಥ್ಯತಾಂ ॥ ೧೧೩೯ ॥**

**ಅರ್ಥ–** ಅತಃ = ಆದ್ದರಿಂದ, ಸ್ವೇಷ್ಟಾರ್ಥ ಸಿದ್ಧ್ಯರ್ಥಂ = ಸ್ವ = ತನ್ನ, ಇಷ್ಟಾರ್ಥ = ಅಭಿಪ್ರೇತವಾದ ವ್ಯಾವರ್ತಿಯ, ಸಿದ್ಧ್ಯರ್ಥಂ = ಸಿದ್ಧಿಗಾಗಿ, ತೇನ = ಅದ್ವೈತಿಯಿಂದ, ತತ್ತದರ್ಥ ಪರಿಗ್ರಹೇ = ತತ್ ತ್ವಂ ಪದಗಳ ಅರ್ಥಗಳ ಪರಿಗ್ರಹೇ = ಸ್ವೀಕಾರವು, ಆವಶ್ಯಕೇ = ಅನಿವಾರ್ಯವಾದಾಗ, ರೂಪಮಾತ್ರಲಕ್ಷಣಾ = ಸ್ವರೂಪಮಾತ್ರದಲ್ಲಿ ಲಕ್ಷಣಾ ಎಂಬುದು, ಕುತ್ರ = ಎಲ್ಲಿದೆ? ಇತಿ = ಎಂಬುದಾಗಿ, ಕಥ್ಯತಾಂ = ಹೇಳಲ್ಪಡಲಿ.

**ಅನುವಾದ–** ಆದ್ದರಿಂದ ನಿನಗೆ ಅಭಿಪ್ರೇತವಾದ ವ್ಯಾವೃತ್ತಿಯ ಸಿದ್ಧಿಯಾಗಬೇಕಾದರೆ ತತ್ ತ್ವಂ ಪದಗಳ ಅರ್ಥಗಳಾದ ಮತ್ತು ವ್ಯಾವರ್ತಕಗಳಾದ ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವಗಳನ್ನು ಅಂಗೀಕರಿಸಬೇಕು. ಹಾಗಾದರೆ ಸ್ವರೂಪಮಾತ್ರ ಲಕ್ಷಣಾ ಎಂಬ ಮಾತು ಎಲ್ಲಿ ಉಳಿಯಿತು?

**ಭಾವವಿಲಾಸಿನೀ–** ಅತಃ ಉಕ್ತದೃಷ್ಟಾಂತಬಲಾತ್ । ಸ್ವೇಷ್ಟಾರ್ಥೋ ವ್ಯಾವೃತ್ತಿಃ । ತತ್ ಸಿದ್ಧ್ಯರ್ಥಮ್ ॥ ೧೧೩೯ ॥

**ಪೂರ್ವೋತ್ತರತ್ವಂ ಚೈಕಸ್ಯ ಸ್ಯಾದೇವೋಕ್ತವ್ಯವಸ್ಥಯಾ ।**
**ತತ್ಸೋಽಯಮಿತಿ ವಾಕ್ಯಾರ್ಥ ಐಕ್ಯಂ ಸ್ಯಾದವಿರೋಧತಃ ॥ ೧೧೪೦ ॥**

**ಅರ್ಥ–** ಏಕಸ್ಯ ಏವ = ಒಬ್ಬನೇ ದೇವದತ್ತನಿಗೆ, ಪೂರ್ವೋತ್ತರತ್ವಂ ಚ = ತದ್ದೇಶ ಸಂಬಂಧ ಮತ್ತು ಏತದ್ದೇಶಸಂಬಂಧವೂ ಕೂಡ, ಉಕ್ತವ್ಯವಸ್ಥಯಾ = ಕಾಲಭೇದ ವ್ಯವಸ್ಥೆಯಿಂದ, ಸ್ಯಾತ್ = ಯುಕ್ತವಾಗುತ್ತದೆ. ತತ್ = ಆದ್ದರಿಂದ, ಅವಿರೋಧತಃ = ಎರಡು ಧರ್ಮಗಳಿಗೂ ವಿರೋಧವಿಲ್ಲದಿರುವುದರಿಂದ, ಐಕ್ಯಂ = ಐಕ್ಯವು, ಸೋಯಂ ಮಿತಿ ವಾಕ್ಯಾರ್ಥಃ = ಸೋಯಂ ದೇವದತ್ತಃ ಎಂಬುದು ವಾಕ್ಯದ ಅರ್ಥವು, ಸ್ಯಾತ್ = ಆಗುತ್ತದೆ.

**ಅನುವಾದ– 'ಸೋಯಂ ದೇವದತ್ತಃ' ಎಂಬ ವಾಕ್ಯದಲ್ಲಿ ಒಬ್ಬ ದೇವದತ್ತನಿಗೆ ತದ್ದೇಶ ಸಂಬಂಧ ಮತ್ತು ಏತದ್ದೇಶಸಂಬಂಧಗಳು ಕಾಲಭೇದದಿಂದ ಕೂಡುತ್ತವೆ. ಆದ್ದರಿಂದ ಸಃ ಅಯಂ ಎಂಬ ಪದಗಳಿಂದ ಉಪಸ್ಥಾಪಿತವಾದ ಧರ್ಮಗಳಿಗೆ ಪರಸ್ಪರ ವಿರೋಧವಿಲ್ಲವಾದ ಕಾರಣ ಅಲ್ಲಿ ಐಕ್ಯವು ಸಿದ್ಧವಾಗುತ್ತದೆ.**

**ಭಾವವಿಲಾಸಿನೀ– ಉಕ್ತವ್ಯವಸ್ಥಯಾ ಕ್ರಮಿಕದೇಶಕಾಲವ್ಯವಸ್ಥಯಾ । ತತ್‌ಪದಸ್ಯ ಪೂರ್ವದೇಶಕಾಲಧ್ವಂಸವೈಶಿಷ್ಟ್ಯವ್ಯವಸ್ಥಯಾ ವಾ । ತತ್ತಸ್ಮಾತ್ ॥ ೧೧೪೦ ॥**

**ವಿವರಣೆ–** 'ಸೋಯಂ ದೇವದತ್ತಃ' ಎಂಬ ಪ್ರತ್ಯಭಿಜ್ಞಾನಕ್ಕೂ ಮತ್ತು ತತ್ತ್ವಮಸಿ ಎಂಬ ವಾಕ್ಯಕ್ಕೂ ಬಹಳ ವ್ಯತ್ಯಾಸವಿದೆ ಎಂದು ನಿರೂಪಣೆ ಮಾಡಲು ಇಲ್ಲಿ ಸೋಯಂ ದೇವದತ್ತಃ ಎಂಬ ಪ್ರತ್ಯಭಿಜ್ಞೆಯನ್ನು ವಿಚಾರ ಮಾಡಿ ಅಲ್ಲಿ ಐಕ್ಯವನ್ನು ಅಂಗೀಕರಿಸಲು ಯಾವ ಬಾಧಕವೂ ಇಲ್ಲ ಎಂದು ಉಪಪಾದನೆ ಮಾಡುತ್ತಾರೆ.

**ಸಾರ್ವಜ್ಞಸರ್ವಶಕ್ತತ್ವಪೂರ್ಣಾನಂದತ್ವಪೂರ್ವಕಃ ।**
**ತತ್ಪದಾರ್ಥೋ ಬ್ರಹ್ಮಗುಣೋ ದುಃಖಿತ್ವಾಜ್ಞತ್ವಪೂರ್ವಕಃ ॥ ೧೧೪೧ ॥**

**ಜೈವೋ ಗುಣಸ್ತ್ವಂಪದಾರ್ಥೋ ಯದಿ ತತ್ತ್ವಂಪದೋದಿತಃ ।**
**ಕಥಂ ಪುನಸ್ತಯೋರೈಕ್ಯಂ ಸ್ಯಾದತ್ಯಂತವಿರುದ್ಧಯೋಃ ॥ ೧೧೪೨ ॥**

**ಅರ್ಥ–** ಸಾರ್ವಜ್ಞ ಸರ್ವಶಕ್ತತ್ವ ಪೂರ್ಣಾನಂದತ್ವ ಪೂರ್ವಕಃ = ಸರ್ವಜ್ಞತ್ವ, ಸರ್ವಶಕ್ತತ್ವ, ಪೂರ್ಣಾನಂದತ್ವ ಇವೇ ಮೊದಲಾದ, ಬ್ರಹ್ಮಗುಣಃ = ಬ್ರಹ್ಮನ ಗುಣರಾಶಿಯು, ತತ್ ಪದಾರ್ಥಃ = ತತ್ ಎಂಬ ಪದದ ಅರ್ಥವು, ದುಃಖಿತ್ವ ಅಜ್ಞತ್ವ ಪೂರ್ವಕಃ = ದುಃಖಿತ್ವವು, ಅಜ್ಞತ್ವವು ಇವೇ ಮೊದಲಾದ, ಜೀವಃ = ಜೀವನಿಗೆ ಸಂಬಂಧಪಟ್ಟ, ಗುಣಃ = ಗುಣವು, ತ್ವಂಪದಾರ್ಥ = ತ್ವಂ ಎಂಬ ಪದದ ಅರ್ಥವು, ಯದಿ = ಒಂದು ವೇಳೆ, ತತ್ತ್ವಂಪದೋದಿತಃ = ತತ್ವಮಸಿ ಎಂಬ ವೇದವಾಕ್ಯದ ಪದಗಳಿಂದ ಹೇಳಲ್ಪಟ್ಟರೆ, ತರ್ಹಿ = ಆ ಪಕ್ಷದಲ್ಲಿ, ಅತ್ಯಂತವಿರುದ್ಧಯೋಃ = ವಿಭಿನ್ನ ಗುಣಧರ್ಮಗಳುಳ್ಳ, ತ್ವಯೋಃ = ಆ ಜೀವಬ್ರಹ್ಮರಿಗೆ, ಐಕ್ಯಂ = ಪುನಃ ಅಭೇದವಾದರೂ, ಕಥಂ ಸ್ಯಾತ್ = ಹೇಗೆ ಬಂದೀತು?

**ಅನುವಾದ–** ತತ್ತ್ವಮಸಿ ಎಂಬಲ್ಲಿ ಸಾರ್ವಜ್ಞ್ಯ, ಸರ್ವಶಕ್ತತ್ವ, ಪೂರ್ಣಾನಂದತ್ವ ಮೊದಲಾದ ಬ್ರಹ್ಮ ಗುಣಗಳು ತತ್ ಪದಾರ್ಥವಾಗಿವೆ. ದುಃಖಿತ್ವ, ಅಜ್ಞತ್ವ ಮೊದಲಾದ ಜೀವಗುಣಗಳು ತ್ವಂ ಪದಾರ್ಥವಾಗಿವೆ ಎಂದು ಅಂಗೀಕಾರ ಮಾಡಿದ ಮೇಲೆ ಆ ಧರ್ಮಗಳು ಪರಸ್ಪರ ವಿರುದ್ಧವಾದ್ದರಿಂದ ಆ ಧರ್ಮವಿಶಿಷ್ಟವಾದವುಗಳಿಗೆ ಪುನಃ ಐಕ್ಯವು ಹೇಗೆ ಕೂಡುತ್ತದೆ.

**ಭಾವವಿಲಾಸಿನೀ–** ವಿರೋಧಂ ಸ್ಫೋರಯಿತುಂ ತತ್ತ್ವಂಪದಾಭ್ಯಾಮುಕ್ತಗುಣಾನ್ ಸ್ಪಷ್ಟಮಾಹ **–ಸಾರ್ವಜ್ಞೇತಿ** ॥ ೧೧೪೧-೧೧೪೨ ॥

**ವಿವರಣೆ–** ಇಲ್ಲಿ ತತ್ತ್ವಮಸಿ ವಾಕ್ಯಕ್ಕೆ ಸೋಯಂ ದೇವದತ್ತಃ ಎಂಬ ವಾಕ್ಯದಿಂದ ವೈಲಕ್ಷಣ್ಯವನ್ನು ಉಪಪಾದನೆ ಮಾಡುತ್ತಾರೆ. ತತ್ತ್ವಮಸಿ ಎಂಬ ವಾಕ್ಯದಲ್ಲಿ ತತ್ ತ್ವಂ ಪದಗಳಿಂದ ಉಪಸ್ಥಾಪಿತವಾದ ಧರ್ಮಗಳು ಪರಸ್ಪರ ವಿರುದ್ಧವಾದವು. ಸೋಯಂ ಪದಗಳಿಂದ ಉಪಸ್ಥಾಪಿತವಾದ ಧರ್ಮಗಳಂತೆ ಅವಿರುದ್ಧವಲ್ಲ. ಆದ್ದರಿಂದ ಅಲ್ಲಿ ಐಕ್ಯವನ್ನು ಹೇಳಲು ಬಂದರೂ ಇಲ್ಲಿ ಐಕ್ಯವನ್ನು ಹೇಳಲು ಬರುವುದಿಲ್ಲ ಎಂದು ಉಪಪಾದನೆ ಮಾಡುತ್ತಾರೆ.

**ಅಸೀತ್ಯೈಕ್ಯಸ್ಯ ಧರ್ಮಾಣಾಂ ಲಟೋಕ್ತಾ ವರ್ತಮಾನತಾ ।**
**ಶ್ರುತ್ಯುಕ್ತಧರ್ಮಸ್ಯಾಧ್ಯಾಸೇತ್ವೈಕ್ಯಾಧ್ಯಾಸಃ ಕುತೋ ನ ತೇ ॥ ೧೧೪೩ ॥**

**ಅರ್ಥ–** ಅಸಿ ಇತಿ = ಅಸಿ ಎಂಬುದಾಗಿ, ಲಟಾ= ಲಟ್‌ಲಕಾರದಿಂದ, ಐಕ್ಯಸ್ಯ = ಐಕ್ಯಕ್ಕೆ, ಧರ್ಮಾಣಾಂ = ಸರ್ವಜ್ಞತ್ವ ಅಲ್ಪಜ್ಞತ್ವ ಎಂಬ ಧರ್ಮಗಳಿಗೆ, ವರ್ತಮಾನತಾ = ವರ್ತಮಾನತ್ವವು, ಉಕ್ತಾ = ಹೇಳಲ್ಪಟ್ಟಿದೆ. ಶ್ರುತ್ಯುಕ್ತಧರ್ಮಸ್ಯ = ವೇದವಾಕ್ಯದಿಂದ ಹೇಳಲ್ಪಟ್ಟ, ಸರ್ವಜ್ಞತ್ವ ಮೊದಲಾದ ಧರ್ಮಕ್ಕೆ, ಅಧ್ಯಾಸೇ = ಅಧ್ಯಾಸವಿದ್ದರೆ, ತೇ = ನಿನ್ನ ಮತೇ = ಮತದಲ್ಲಿ, ಐಕ್ಯಾಧ್ಯಾಸಃ ತು = ಐಕ್ಯದ ಅಧ್ಯಾಸವಾದರೂ, ಕುತಃ ನ = ಏಕೆ ಇಲ್ಲ.

**ಅನುವಾದ–** ತತ್ತ್ವಮಸಿ ಎಂಬ ವಾಕ್ಯದಲ್ಲಿ ಅಸಿ ಎಂಬ ವರ್ತಮಾನಕಾಲೀನ ಕ್ರಿಯಾಪದವು ಐಕ್ಯಕ್ಕೆ ವರ್ತಮಾನತ್ವವನ್ನು ಹೇಳಿದಂತೆ ಧರ್ಮಗಳಿಗೂ ವರ್ತಮಾನತ್ವವನ್ನು ಹೇಳುತ್ತದೆ. ಹೀಗಿರುವಾಗ ಶ್ರುತ್ಯುಕ್ತವಾದ ಧರ್ಮಗಳು ಅಧ್ಯಸ್ತ ಎಂದು ಹೇಳುವುದಾದರೆ ಶ್ರುತ್ಯುಕ್ತವಾದ ಐಕ್ಯವು ಏಕೆ ಅಧ್ಯಸ್ತವಲ್ಲ?

**ಭಾವವಿಲಾಸಿನೀ–** ಮಿಥ್ಯಾತ್ವಾತ್ ವಿರುದ್ಧಗುಣತ್ಯಾಗ ಇತಿ ಶಂಕಾಂ ಪರಿಹರ್ತುಂ ಧರ್ಮಾಧ್ಯಾಸ-ಪಕ್ಷಮೈಕ್ಯಪ್ರತಿಬಂಧ್ಯಾ ದೂಷಯತಿ – **ಅಸೀತಿ** ॥ ಐಕ್ಯಸ್ಯ ಧರ್ಮಾಣಾಂ ಚ ವರ್ತಮಾನತಾ। ತ್ವಮೇವ ದಂಡೀಕುಂಡಲೀ ಚಾಸೀತ್ಯುಕ್ತೇ ದಂಡಕುಂಡಲಯೋರಪಿ ವರ್ತಮಾನತ್ವಲಾಭಾದಿತಿ ಭಾವಃ । ಏವಂಚ ಧರ್ಮಾಣಾಮೈಕ್ಯಸ್ಯ ಚ ಸಹ ವಾ ಪ್ರವೃತ್ತಿಃ ಸಹ ವಾ ನಿವೃತ್ತಿರಿತ್ಯಾಹ – **ಶ್ರುತ್ಯುಕ್ತೇತಿ** ॥ ೧೧೪೩ ॥

**ವಿವರಣೆ–** ಮಿಥ್ಯಾಭೂತವಾದುದರಿಂದ ವಿರುದ್ಧಗುಣಗಳ ತ್ಯಾಗವನ್ನು ಮಾಡುತ್ತೇವೆ ಎಂಬ ಶಂಕೆಯನ್ನು ಪರಿಹರಿಸಲು ಧರ್ಮಮಿಥ್ಯಾತ್ವ ಪಕ್ಷವನ್ನು ಐಕ್ಯಪ್ರತಿಬಂಧಿಯಿಂದ ದೂಷಣೆ ಮಾಡುತ್ತಾರೆ. 'ತ್ವಮೇವ ದಂಡೀಕುಂಡಲೀ ಚ ಅಸಿ' ಎಂದು ಹೇಳಿದರೆ ದಂಡ ಕುಂಡಲಗಳಿಗೆ ಹೇಗೆ ವರ್ತಮಾನತ್ವವು ಲಭ್ಯವಾಗುತ್ತದೆಯೋ, ಹಾಗೆ ತತ್ತ್ವಮಸಿ ಎಂಬ ವಾಕ್ಯದಲ್ಲಿ ಸರ್ವಜ್ಞತ್ವಾದಿ ಧರ್ಮಗಳಿಗೂ ಮತ್ತು ಐಕ್ಯಕ್ಕೂ ವರ್ತಮಾನತ್ವವು ಲಭ್ಯವಾಗಬೇಕಷ್ಟೇ. ಹೀಗಿರುವಾಗ ಒಂದಕ್ಕೆ ಅಧ್ಯಾಸವನ್ನು ಅಂಗೀಕಾರ ಮಾಡಿ, ಇನ್ನೊಂದಕ್ಕೆ ಅಧ್ಯಾಸವನ್ನು ಅಂಗೀಕಾರ ಮಾಡದಿರುವುದು ಅನ್ಯಾಯವಾದುದು. ಅವೆರಡಕ್ಕೂ ಪ್ರವೃತ್ತಿಯಾಗಲೀ, ನಿವೃತ್ತಿಯಾಗಲೀ ಜೊತೆಯಲ್ಲಿಯೇ ಉಂಟಾಗಬೇಕು.

ತ್ಯಜೇದೇಕಂ ಕುಲಸ್ಯಾರ್ಥೆ ಇತಿ ನ್ಯಾಯಮನುಸ್ಮರ ॥ ೧೧೪೪ ॥

**ಅರ್ಥ–**ಏಕಂ = ಒಬ್ಬ ವ್ಯಕ್ತಿಯನ್ನು, ಕುಲಸ್ಯ = ವಂಶದ, ಅರ್ಥೇ = ಹಿತಕ್ಕಾಗಿ, ತ್ಯಜೇತ್ = ಬಿಡಬೇಕು, ಇತಿ = ಎಂಬ, ನ್ಯಾಯಮ್ = ಲೌಕಿಕನ್ಯಾಯವನ್ನು, ತ್ವಂ = ನೀನು, ಅನುಸ್ಮರ = ನೆನಪು ಮಾಡಿಕೋ.

**ಅನುವಾದ–** 'ತ್ಯಜೇದೇಕಂ ಕುಲಸ್ಯಾರ್ಥೇ' ಎಂದರೆ ಕುಲದ ಸಲುವಾಗಿ ಒಬ್ಬನನ್ನು ತ್ಯಾಗ ಮಾಡಬೇಕು ಎಂಬ ನ್ಯಾಯವನ್ನು ಸ್ಮರಿಸಿಕೋ.

**ಭಾವವಿಲಾಸಿನೀ–** ವಿರುದ್ಧಬಹುಗುಣಾನಾಂ ತತ್‌ಪ್ರತಿಪಾದಕಬಹುಶ್ರುತೀನಾಂ ಚ ರಕ್ಷಣಾಯ ಐಕ್ಯತ್ಯಾಗ ಏವ ನ್ಯಾಯ್ಯ ಇತ್ಯಾಹ – **ತ್ಯಜೇದಿತಿ** ॥ ಅನೇನ ತ್ಯಜೇದೇಕಂ ಕುಲಸ್ಯಾರ್ಥೇ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ । ಗ್ರಾಮಂ ಜನಪದಸ್ಯಾರ್ಥೆ ಆತ್ಮಾರ್ಥೇ ಪೃಥಿವೀಂ ತ್ಯಜೇದಿತಿ ವಾಕ್ಯಂ ಸಂಗೃಹ್ಣಾತಿ ॥ ೧೧೪೪ ॥

**ವಿವರಣೆ–** ಕುಲದ ಸಲುವಾಗಿ ಒಬ್ಬನನ್ನು ತ್ಯಜಿಸಬೇಕು. ಗ್ರಾಮದ ಸಲುವಾಗಿ ಒಂದು ಕುಲವನ್ನು ತ್ಯಜಿಸಬೇಕು. ರಾಷ್ಟ್ರದ ಸಲುವಾಗಿ ಒಂದು ಗ್ರಾಮವನ್ನು ತ್ಯಜಿಸಬೇಕು. ತನ್ನ ಸಲುವಾಗಿ ಪೃಥಿವಿಯನ್ನೇ ತ್ಯಜಿಸಬೇಕು ಎಂಬ ಭಾರತವಾಕ್ಯವಿದೆ. ಬ್ರಹ್ಮನ ಮತ್ತು ಜೀವನ ಧರ್ಮಗಳು ಅನೇಕಾನೇಕವಿದೆ. ಐಕ್ಯವು ಒಂದು ವಸ್ತುವು ಮಾತ್ರ. ಆದ್ದರಿಂದ ಅನೇಕಾನೇಕ ಧರ್ಮಗಳನ್ನು ಉಳಿಸಲು ಒಂದು ಐಕ್ಯವನ್ನೇ ಪರಿತ್ಯಾಗ ಮಾಡುವುದು ಒಳ್ಳೆಯದು.

ಅದ್ಯಾಪ್ಯಸಿದ್ಧೇರೈಕ್ಯಸ್ಯ ಧರ್ಮಾಧ್ಯಾಸಃ ಕುತೋ ಹರೇಃ ।
ಸತ್ಯಃ ಸೋ ಅಸ್ಯ ಮಹಿಮೇತ್ಯಸ್ತಿ ಹಿ ಶ್ರುತಿರಂಜಸಾ ॥ ೧೧೪೫ ॥

**ಅರ್ಥ–** ಅದ್ಯಾಪಿ = ಇದುವರೆಗೂ ಕೂಡ, ಐಕ್ಯಸ್ಯ = ಅಭೇದದ, ಅಸಿದ್ಧೇಃ = ಸಮರ್ಥನವು ಆಗಿಲ್ಲದಿರುವುದರಿಂದ, ಹರೇಃ = ಪರಮಾತ್ಮನ, ಧರ್ಮಾಧ್ಯಾಸಃ =

ಸರ್ವಜ್ಞತ್ವ ಮೊದಲಾದ ಗುಣಗಳ ಅಧ್ಯಾಸವು, ಕುತಃ = ಹೇಗೆ, ಕ್ರಿಯತೇ = ಮಾಡಲ್ಪಡುತ್ತದೆ? ಅಸ್ಯ = ಈ ಪರಮಾತ್ಮನ, ಸಃ = ಆ, ಮಹಿಮಾ = ಮಹಿಮೆಯು, ಸತ್ಯಃ = ಸತ್ಯವಾಗಿದೆ, ಇತಿ = ಹೀಗೆ, ಶ್ರುತಿಃ = ಶ್ರುತಿಯು, ಅಂಜಸಾ = ಸ್ಪಷ್ಟವಾಗಿ, ಅಸ್ತಿ ಹಿ = ಇದೆಯಷ್ಟೇ.

**ಅನುವಾದ–** ಇದುವರೆಗೂ ಐಕ್ಯವು ಸಿದ್ಧವಾಗಿಲ್ಲದಿರುವುದರಿಂದ ಬ್ರಹ್ಮನಿಗೆ ಧರ್ಮಾಧ್ಯಾಸವು ಹೇಗೆ ಸಿದ್ಧವಾಗುತ್ತದೆ? ಸತ್ಯಃ ಸೋ ಅಸ್ಯ ಮಹಿಮಾ' ಎಂಬ ಶ್ರುತಿಯಂತೂ ಅವನ ಗುಣಗಳು ಸತ್ಯವೆಂದು ಚೆನ್ನಾಗಿ ಸಾರುತ್ತಿವೆ.

**ಭಾವವಿಲಾಸಿನೀ–** ನನ್ವೈಕ್ಯಶ್ರುತಿಬಲಾದೇವ ಧರ್ಮಾಧ್ಯಾಸ ಇತ್ಯತ ಆಹ – ಅದ್ಯಾಪೀತಿ ॥೧೧೪೫॥

**ವಿವರಣೆ–** ಐಕ್ಯಶ್ರುತಿಯ ಬಲದಿಂದಲೇ ಧರ್ಮಗಳು ಅಧ್ಯಸ್ತವೆಂದು ಶಂಕಿಸುವುದಾದರೆ ಇದುವರೆಗೆ ಶ್ರುತಿಯು ಐಕ್ಯವನ್ನು ಹೇಳುತ್ತದೆ ಎಂದು ಸಿದ್ಧವಾಗದಿ ರುವುದರಿಂದ ಹಾಗೆ ಮಾಡಲು ಬರುವುದಿಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

ಅಧ್ಯಸ್ತಧರ್ಮಾದ್ ವ್ಯಾವೃತ್ತೌ ಭವೇಚ್ಛುಕ್ತಿರಶುಕ್ತಿಕಾ ।
ಇತರಸ್ಮಾದ್ಧಿ ರೂಪ್ಯತ್ವಂ ವ್ಯಾವರ್ತಯತಿ ಧರ್ಮಿಣಂ ॥ ೧೧೪೬ ॥

**ಅರ್ಥ–** ಅಧ್ಯಸ್ತಧರ್ಮಾತ್ = ಅಧ್ಯಸ್ತವಾದ ಧರ್ಮದಿಂದ, ವ್ಯಾವೃತ್ತೌ = ವ್ಯಾವೃತ್ತಿಯು ಸಾಧ್ಯವಾಗುವುದಾದರೆ (ಅಧ್ಯಸ್ತವಾದ ರಜತತ್ವ ಎಂಬ ಧರ್ಮದಿಂದ), ಶುಕ್ತಿ = ಶುಕ್ತಿಯು, ಅಶುಕ್ತಿಕಾ = ಶುಕ್ತಿಯಿಂದ ಭಿನ್ನವಾದದ್ದು, ಭವೇತ್ = ಆಗಬೇಕಾದೀತು, ರೂಪ್ಯತ್ವಂ = ಆರೋಪಿತವಾದ ರಜತತ್ವವು, ಧರ್ಮಿಣಂ = ತನಗೆ ಆಧಾರವಾದ ಧರ್ಮಿಯನ್ನು (ಶುಕ್ತಿಯನ್ನು) ಇತರಸ್ಮಾತ್ = ತನಗೆ ಆಧಾರವಾದ ಧರ್ಮಿಯಿಂದ ಭಿನ್ನವಾದ ಶುಕ್ತಿ ಮೊದಲಾದ ವಸ್ತುಗಳಿಂದ, ವ್ಯಾವರ್ತಯತಿ = ಭಿನ್ನವನ್ನಾಗಿ ಮಾಡುತ್ತದೆಯಷ್ಟೆ?

**ಅನುವಾದ–** ಅಧ್ಯಸ್ತವಾದ ಧರ್ಮವು ಸ್ವಾಶ್ರಯದಲ್ಲಿ ಎಂದೂ ವ್ಯಾವೃತ್ತಿಯನ್ನು ಉಂಟುಮಾಡುವುದಿಲ್ಲ. ಹಾಗೆ ಮಾಡುವುದಾದರೆ ಶುಕ್ತಿಯಲ್ಲಿ ಅಧ್ಯಸ್ತವಾದ ರಜತತ್ವವು ಸ್ವಾಶ್ರಯವಾದ ಶುಕ್ತಿಯನ್ನು ಶುಕ್ತಿಯಿಂದಲೇ ವ್ಯಾವೃತ್ತಿಯನ್ನು ಮಾಡುವುದರಿಂದ ಶುಕ್ತಿಯು ಶುಕ್ತಿಯಲ್ಲ ಎಂದಾಗಬೇಕಾಗುತ್ತದೆ. ಆರೋಪಿತವಾದ ರೂಪ್ಯತ್ವವು ಇತರದಿಂದ ಎಂದರೆ ಶುಕ್ತಿಯಿಂದಲೂ ಸಹ ಸ್ವಧರ್ಮಿಯನ್ನು ವ್ಯಾವೃತ್ತಿಮಾಡುವುದಷ್ಟೇ.

**ಭಾವವಿಲಾಸಿನೀ–** ಧರ್ಮಾಧ್ಯಾಸೇ ವ್ಯಾವೃತ್ತಚೈತನ್ಯದ್ವಯಾಸಿದ್ಧ್ಯಾ ಜೀವಬ್ರಹ್ಮೈಕ್ಯಾಸಿದ್ಧಿಶ್ಚೇತ್ಯಾಹ – ಅಧ್ಯಸ್ತಧರ್ಮಾದಿತಿ ॥ ಇತರಸ್ಮಾತ್ ಸ್ವಾಧಾರಾದನ್ಯಸ್ಮಾತ್ ಶುಕ್ತ್ಯಾದೇಃ ॥ ೧೧೪೬ ॥

**ವಿವರಣೆ–** ಧರ್ಮಾಧ್ಯಾಸ ಪಕ್ಷದಲ್ಲಿ ವ್ಯಾವೃರ್ತವಾದ ಚೈತನ್ಯದ್ವಯವೇ ಸಿದ್ಧವಾಗದಿರುವುದರಿಂದ ಜೀವಬ್ರಹ್ಮೈಕ್ಯವು ಸಿದ್ಧವಾಗುವುದಿಲ್ಲ ಎಂದು ಇಲ್ಲಿ ಪ್ರತಿಪಾದನೆ ಮಾಡುತ್ತಾರೆ. ಇತರ ಸ್ಮಾತ್ ಎಂದರೆ ತನಗೆ ಆಧಾರವಾದುದನ್ನು ಬಿಟ್ಟು ಉಳಿದುದರಿಂದ ಎಂದು ಅರ್ಥ.

**ಕಿಂಚ ಸರ್ವಜ್ಞತಾಲ್ಪಜ್ಞಾದ್ ವ್ಯಾವರ್ತಯತಿ ಧರ್ಮಿಣಂ ।**
**ವ್ಯಾವೃತ್ತಿರ್ನಾಮಭೇದೋಽತೋ ವ್ಯಾಹತಿಶ್ಚ ಧ್ರುವಾ ತವ ॥ ೧೧೪೭ ॥**

**ಅರ್ಥ–** ಕಿಂಚ = ಅದಲ್ಲದೇ, ಸರ್ವಜ್ಞತಾ = ಸರ್ವಜ್ಞತ್ವವು, ಧರ್ಮಿಣಂ = ತನ್ನ ಆಧಾರವಾದ ಈಶ್ವರನೆಂಬ ಧರ್ಮಿಯನ್ನು, ಅಲ್ಪಜ್ಞಾತ್ = ಅಲ್ಪಜ್ಞನಾದ ಜೀವನಿಂದ, ವ್ಯಾವರ್ತಯತಿ = ವ್ಯಾವೃತ್ತನನ್ನಾಗಿ ಮಾಡುತ್ತದೆ, ವ್ಯಾವೃತ್ತಿಃ ನಾಮ = ವ್ಯಾವೃತ್ತಿಯೆಂದರೆ, ಭೇದಃ ಏವ = ಭೇದವೇ ಆಗಿದೆ, ಅತಃ = ಆದ್ದರಿಂದ, ತವ = ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುತ್ತಿರುವ ನಿನಗೆ, ವ್ಯಾಹತಿಶ್ಚ = ಸ್ವವ್ಯಾಹತಿಯು ಕೂಡ, ಧ್ರುವಾ= ನಿಶ್ಚಿತವಾಗಿದೆ.

**ಅನುವಾದ– ಅದೂ ಅಲ್ಲದೆ, ಸರ್ವಜ್ಞತ್ವವು ತನ್ನ ಧರ್ಮಿಯನ್ನು ಅಲ್ಪಜ್ಞನಿಂದ ವ್ಯಾವೃತ್ತಿ ಮಾಡುತ್ತದೆ. ವ್ಯಾವೃತ್ತಿ ಎಂದರೆ ಭೇದವೇ. ಪುನಃ ಅಲ್ಪಜ್ಞನಿಂದ ಐಕ್ಯವನ್ನು ಹೇಳಿದರೆ ನಿಶ್ಚಯವಾಗಿ ವ್ಯಾಹತಿ ದೋಷವು ಬರುತ್ತದೆ.**

**ಭಾವವಿಲಾಸಿನೀ– ದೋಷಾಂತರಂ ಚಾಹ – ಕಿಂಚೇತಿ ॥ ವ್ಯಾಖ್ಯಾತಪ್ರಾಯಮೇತತ್ ॥ ೧೧೪೭॥**

**ಕಿಂಚ ಕಲ್ಪ್ಯಮಕಲ್ಪ್ಯಂ ವಾ ಸಾರ್ವಜ್ಞ್ಯಂ ಬ್ರಹ್ಮಣಶ್ಚಿತಃ ।**
**ಸಾರ್ವಜ್ಞ್ಯರಹಿತಾಯಾಸ್ತೇ ಶುದ್ಧಾಯಾಃ ಸ್ವೋಪಲಕ್ಷಿತಾಂ ॥ ೧೧೪೮ ॥**

**ಚಿತಂ ವ್ಯಾವರ್ತಯೇನ್ನ್ಯಾಯಸಾಮ್ಯಾಜ್ಜೀವಚಿತೋ ಯಥಾ ।**
**ಜೈವೋ ಧರ್ಮಾಪಿ ತಚ್ಛೂನ್ಯಚಿನ್ಮಾತ್ರಾತ್ ಸ್ವೋಪಲಕ್ಷಿತಾಂ॥ ೧೧೪೯ ॥**

**ಚಿತಂ ವ್ಯಾವರ್ತಯೇದೇವ ತತಶ್ಚಿನ್ಮಾತ್ರಯೋಸ್ತವ ।**
**ಕಥಮೈಕ್ಯಮಿದಂ ವಾಕ್ಯಂ ವಕ್ತಿ ಯೌಕ್ತಿಕಸಂಸದಿ ॥ ೧೧೫೦ ॥**

**ಅರ್ಥ–** ಕಿಂಚ = ಅದಲ್ಲದೇ, ಬ್ರಹ್ಮಣಃ = ಸರ್ವಜ್ಞಬ್ರಹ್ಮಚೈತನ್ಯದ, ಸಾರ್ವಜ್ಞ್ಯಂ = ಸರ್ವಜ್ಞತ್ವವು, ಕಲ್ಪ್ಯಂ = ಅಧ್ಯಸ್ಥವಾದದ್ದು, ಅಕಲ್ಪ್ಯಂ ವಾ = ಅನಧ್ಯಸ್ಥವಾದ್ದಾದರೂ, ಭವತು = ಆಗಲಿ, ತತ್ = ಆ ಸರ್ವಜ್ಞತ್ವವು, ತೇ ಮತೇ = ನಿನ್ನ ಮತದಲ್ಲಿ, ಯಥಾ = ಹೇಗೆ, ಸಾರ್ವಜ್ಞ್ಯರಹಿತಾಯಾ = ಸರ್ವಜ್ಞತ್ವವಿಲ್ಲದ, ಜೀವಚಿತಃ = ಜೀವಚೈತನ್ಯದಿಂದ, ಸ್ವೋಪಲಕ್ಷಿತಾಂ = ಸರ್ವಜ್ಞತ್ವ ಉಪಲಕ್ಷಿತವಾದ, ಚಿತಂ = ಬ್ರಹ್ಮಚೈತನ್ಯವನ್ನು, ವ್ಯಾವರ್ತಯೇತ್ = ವ್ಯಾವೃತ್ತವನ್ನಾಗಿ ಮಾಡುತ್ತದೋ, ತಥಾ= ಹಾಗೇ, ನ್ಯಾಯಸಾಮ್ಯಾತ್

= ಸಮಾನವಾದ ನ್ಯಾಯವಿರುವುದರಿಂದ, ಸಾರ್ವಜ್ಞರಹಿತಾಯಾ = ಸರ್ವಜ್ಞತ್ವವಿಲ್ಲದ, ಶುದ್ಧಾಯಾಃ ಚಿತಃ ಅಪಿ = ನಿರ್ಗುಣ ಚೈತನ್ಯದಿಂದಲೂ ಕೂಡ, ಸ್ವೋಪಲಕ್ಷಿತಾಂ = ಸರ್ವಜ್ಞತ್ವ ಉಪಲಕ್ಷಿತವಾದ, ಚಿತಂ = ಬ್ರಹ್ಮಚೈತನ್ಯವನ್ನು, ವ್ಯಾವರ್ತಯೇತ್ = ವ್ಯಾವೃತ್ತವನ್ನಾಗಿ ಮಾಡುತ್ತವೆ, ಜೈವ ಧರ್ಮಃ ಅಪಿ = ಜೀವನಿಗೆ ಸಂಬಂಧಿಸಿದ, ಅಲ್ಪಜ್ಞತ್ವ ಮೊದಲಾದ ಗುಣಗಳ ಸಮೂಹವೂ ಕೂಡ, ತಚ್ಛೂನ್ಯಚಿನ್ಮಾತ್ರಾತ್ = ಅಲ್ಪಜ್ಞತ್ವಾದಿಗಳಿಲ್ಲದ ಶುದ್ಧಚೈತನ್ಯದಿಂದ, ಸ್ವೋಪಲಕ್ಷಿತಾಂ = ಅಲ್ಪಜ್ಞತ್ವ ಉಪಲಕ್ಷಿತವಾದ, ಚಿತಂ = ಜೀವಚೈತನ್ಯವನ್ನು, ವ್ಯಾವರ್ತಯೇತ್ = ವ್ಯಾವೃತ್ತವನ್ನಾಗಿ ಮಾಡುತ್ತದೆ, ತತಃ = ಆದ್ದರಿಂದ, ಯೌಕ್ತಿಕ ಸಂಸದಿ = ಯುಕ್ತಿಯನ್ನು ಬಲ್ಲ ವಿವೇಕಿಗಳ ಸಭೆಯಲ್ಲಿ, ಇದಂ = ಈ, ವಾಕ್ಯಂ = ತತ್ವಮಸಿ ಎಂಬ ವಾಕ್ಯವು, ಚಿನ್ಮಾತ್ರಯೋಃ = ಎರಡು ಚಿನ್ಮಾತ್ರಗಳಿಗೆ, ತವ = ನಿನ್ನ ರೀತಿಯಿಂದ, ಕಥಂ = ಹೇಗೆ, ಐಕ್ಯಂ = ಐಕ್ಯವನ್ನು, ವಕ್ತಿ = ಹೇಳುತ್ತದೆ?

**ಅನುವಾದ–** ಅದೂ ಅಲ್ಲದೆ, ಸರ್ವಜ್ಞತ್ವವು ಕಲ್ಪಿತವಾಗಲಿ ಅಥವಾ ಅಕಲ್ಪಿತವಾಗಲಿ, ಅದು ಸಾರ್ವಜ್ಞರಹಿತವಾದ ಶುದ್ಧ ಚಿತ್ತಿನಿಂದ ಸರ್ವಜ್ಞತ್ವೋಪಲಕ್ಷಿತವಾದ ಸ್ವಾಶ್ರಯವನ್ನು ವ್ಯಾವೃತ್ತಿ ಮಾಡುತ್ತದೆ. ಸರ್ವಜ್ಞತ್ವರಹಿತವಾದ ಜೀವ ಚಿತ್ತಿನಿಂದ ಹೇಗೆ ವ್ಯಾವೃತ್ತಿಯನ್ನು ಮಾಡುತ್ತದೆಯೋ ಅದೇ ನ್ಯಾಯದಿಂದ ಸರ್ವಜ್ಞತ್ವ ರಹಿತವಾದ ಶುದ್ಧ ಚೈತನ್ಯದಿಂದಲೂ ವ್ಯಾವೃತ್ತಿಯನ್ನು ಮಾಡುತ್ತದೆ. ಅಲ್ಪಜ್ಞತ್ವಾದಿ ಜೀವಧರ್ಮವೂ ಸಹ ಅಲ್ಪಜ್ಞತ್ವ ಶೂನ್ಯವಾದ ಶುದ್ಧ ಚೈತನ್ಯದಿಂದ ಜೀವಚೈತನ್ಯವನ್ನು ವ್ಯಾವೃತ್ತಿ ಮಾಡುತ್ತದೆ. ಆದ್ದರಿಂದ ಯುಕ್ತಿಯನ್ನು ತಿಳಿದ ವಿವೇಕಿಗಳ ಸಭೆಯಲ್ಲಿ ಈ ವಾಕ್ಯವು ಚಿನ್ಮಾತ್ರಗಳಿಗೆ ನಿನ್ನ ಪ್ರಕಾರ ಹೇಗೆ ಐಕ್ಯವನ್ನು ಹೇಳಲು ಸಾಧ್ಯ?

**ಭಾವವಿಲಾಸಿನೀ–** ಪುನರಪಿ ಪ್ರಬಲಂ ದೋಷಾಂತರಮಾಹ – ಕಿಂಚ ಕಲ್ಪ್ಯಮಿತಿ ॥ ಕಲ್ಪ್ಯಮಧ್ಯಸ್ತಮ್ । ಬ್ರಹ್ಮಣಃ ಸರ್ವಜ್ಞಬ್ರಹ್ಮಚೈತನ್ಯಸ್ಯ । ಯತ್ ಸಾರ್ವಜ್ಞ್ಯ ತತ್‌ಕಲ್ಪ್ಯಮಕಲ್ಪ್ಯಂ ವಾ ಭವತು । ತಥಾಪಿ ತೇ ಮತೇ ಸಾರ್ವಜ್ಞರಹಿತಾಯಾಃ ಶುದ್ಧಚಿತಃ ನಿರ್ಗುಣಚೈತನ್ಯಾತ್ ಸ್ವೋಪಲಕ್ಷಿತಾಂ ಚಿತಂ ಬ್ರಹ್ಮಚಿತಂ ಜೀವಚಿತೋ ಯಥಾ ವ್ಯಾವರ್ತಯೇತ್ ತಥಾ ವ್ಯಾವರ್ತಯೇದೇವ । ನ್ಯಾಯಸಾಮ್ಯಾದಿತ್ಯನೇನ ಸಾರ್ವಜ್ಞರಾಹಿತ್ಯಸ್ಯ ಜೀವಚೈತನ್ಯೇ ಶುದ್ಧಚೈತನ್ಯೇ ಚ ವರ್ತಮಾನತ್ವಸಾಮ್ಯೇನ ಸಾರ್ವಜ್ಞಾದ್ಯರ್ಥಕತತ್ಪದೇನೋಭಯವ್ಯಾವೃತ್ತಿರಪಿ ನ್ಯಾಯ್ಯೇತಿ ಸೂಚಯತಿ । ಜೈವೋ ಧರ್ಮಃ ಅಲ್ಪಜ್ಞತ್ವಾದಿಃ । ತತಃ ಪದದ್ವಯೇನಾಪಿ ಶುದ್ಧಚೈತನ್ಯಸ್ಯ ವ್ಯಾವರ್ತಿತತ್ವೇನ ತದ್ಭಿನ್ನಯೋಃ ಕಿಂಚಿತ್‌ಜ್ಞತ್ವಸರ್ವಜ್ಞತ್ವಾಶ್ರಯಯೋಶ್ಚೈತನ್ಯಯೋರೇವೈಕ್ಯಲಾಭಾತ್ ಚಿನ್ಮಾತ್ರಯೋರ್ದ್ವೇಧಾ ಕ್ರೋಡೀಕೃತ ಸಕಲಚಿತೋಃ ಶುದ್ಧ ಬ್ರಹ್ಮಚಿದೈಕ್ಯಸ್ಯಾತ್ರಾಪ್ರತಿಪಾದನಾದಿತಿ ಭಾವಃ ॥ ೧೧೪೮-೧೧೫೦ ॥

**ವಿವರಣೆ–** ಈ ಮೂರು ಶ್ಲೋಕಗಳಲ್ಲಿ ಪ್ರಬಲವಾದ ದೋಷಾಂತರವನ್ನು ಹೇಳುತ್ತಾರೆ. ಬ್ರಹ್ಮನ ಸರ್ವಜ್ಞತ್ವವು ಅಧ್ಯಸ್ತವಾಗಲಿ ಅಥವಾ ಅನಧ್ಯಸ್ತವಾಗಲಿ. ಅದು ಸ್ವಾಶ್ರಯವನ್ನು ಸರ್ವಜ್ಞತ್ವರಹಿತವಾದ ಜೀವಚೈತನ್ಯದಿಂದ ವ್ಯಾವೃತ್ತಿ ಮಾಡಿದಂತೆ ಅದೇ ನ್ಯಾಯದಿಂದ ಶುದ್ಧ ಚೈತನ್ಯದಿಂದಲೂ ವ್ಯಾವೃತ್ತಿ ಮಾಡುತ್ತದೆ. ಜೀವಧರ್ಮವಾದ ಅಲ್ಪಜ್ಞತ್ವವೂ ಸಹ ಸರ್ವಜ್ಞನಾದ ಬ್ರಹ್ಮನಿಂದ ವ್ಯಾವೃತ್ತಿ ಮಾಡಿದಂತೆ ಅಲ್ಪಜ್ಞತ್ವ ರಹಿತವಾದ ಶುದ್ಧ ಚೈತನ್ಯದಿಂದಲೂ ವ್ಯಾವೃತ್ತಿಯನ್ನು ಮಾಡುತ್ತದೆ. ಆದ್ದರಿಂದ ವ್ಯಾವರ್ತಿತವಾದ ಅಲ್ಪಜ್ಞತ್ವ, ಸರ್ವಜ್ಞತ್ವಾಶ್ರಯವಾದ ಚೈತನ್ಯಗಳಿಗೆ ಐಕ್ಯ ಲಾಭವಾದೀತೇ ಹೊರತು ಶುದ್ಧ ಚೈತನ್ಯವು ಇಲ್ಲಿ ಎರಡು ಪದಗಳಿಂದಲೂ ಪ್ರತಿಪಾದಿಸಲ್ಪಡುವುದಿಲ್ಲವಾದ ಕಾರಣ ಶುದ್ಧ ಚೈತನ್ಯದ ಐಕ್ಯದ ಪ್ರಸಕ್ತಿಯೇ ಇಲ್ಲ.

**ವ್ಯಾವೃತ್ತೇರನಪೇಕ್ಷಾಯಾಂ ಚಿಚ್ಚಿದಿತ್ಯೇವ ತದ್ ವದೇತ್ ।**
**ಕಾ ನೋ ಹಾನಿರತೋ ಭೇದವಾದಿನಾಂ ತತ್ತ್ವವಾದಿನಾಮ್ ॥ ೧೧೫೧ ॥**

**ಅರ್ಥ–** ವ್ಯಾವೃತ್ತೇಃ = ವ್ಯಾವೃತ್ತಿಯ, ಅನಪೇಕ್ಷಾಯಾಂ = ಅಂಗೀಕಾರವನ್ನು ಮಾಡದಿದ್ದರೆ, ತತ್ = ತತ್ವಮಸಿ ಎಂಬ ವಾಕ್ಯವು, ಚಿತ್‌ಚಿತ್ ಇತ್ಯೇವ = ಚಿತ್‌ಚಿತ್ ಎಂಬ ಮಾತ್ರವೇ, ವದೇತ್ = ಹೇಳುತ್ತವೆ, ಅತಃ = ಆ ಚಿತ್‌ಚಿತ್ ಎಂಬ ವಾಕ್ಯಾರ್ಥದಿಂದ, ಭೇದವಾದಿನಾಂ = ಭೇದವಾದಿಗಳಿಂದ, ತತ್ತ್ವವಾದಿನಾಂ = ತತ್ತ್ವವಾದಿಗಳಾದ, ನಃ = ನಮಗೆ, ಕಾ ಹಾನಿಃ = ಏನು ಹಾನಿಯಿದೆ?

**ಅನುವಾದ–** ವ್ಯಾವೃತ್ತಿಯನ್ನು ಅಂಗೀಕಾರ ಮಾಡದಿದ್ದರೆ ಚಿತ್ ಚಿತ್ ಎಂದಿಷ್ಟೇ ವಾಕ್ಯಾರ್ಥವಾಯಿತು. ಅದರಿಂದ ಭೇದವಾದಿಗಳಾದ ತತ್ತ್ವವಾದಿಗಳಿಗೆ ಯಾವ ಹಾನಿಯಿದೆ?

**ಭಾವವಿಲಾಸಿನೀ–** ಮಾಸ್ತು ತರ್ಹಿ ಪದದ್ವಯಸ್ಯಾಪಿ ವ್ಯಾವರ್ತಕತ್ವಮಿತ್ಯತ ಆಹ – **ವ್ಯಾವೃತ್ತೇರಿತಿ ॥ ತದ್ವಾಕ್ಯಮ್ ॥** ಅತಿಸೂಕ್ಷ್ಮತ್ವಾತ್ ಪ್ರಬಲತ್ವಾಚ್ಚ ಅಸ್ಯ ದೂಷಣಸ್ಯ ಕಿಮನ್ಯೇನೇತ್ಯುಪಸಂಹರತಿ – **ಅತ ಇತಿ ॥** ಅತೋ ಘಟೋ ಘಟ ಇತಿವತ್ ಚಿದೇವ ಚಿದಿತಿ ಸರ್ವಸಿದ್ಧಪ್ರಮೇಯಾನುವಾದಾತ್ ತತ್ತ್ವಮಸೀತಿ ಪದಚ್ಛೇದೇಽಪಿ ಮಾಯಾವಾದ್ಯುಕ್ತಾರ್ಥಸ್ಯಾಯೋಗಾತ್ ॥೧೧೫೧॥

**ವಿವರಣೆ–** ತತ್ ತ್ವಂ ಪದಗಳು ವ್ಯಾವೃತ್ತಿಯನ್ನು ಹೇಳುತ್ತವೆ ಎಂದು ಹೇಳಲೇಬೇಕು. ವ್ಯಾವೃತ್ತಿಯನ್ನು ಹೇಳಿದಾಗ ಐಕ್ಯವು ಉಪಪನ್ನವಾಗುವುದಿಲ್ಲವೆಂದು ಉಪಪಾದನೆ ಮಾಡಿದ್ದಾಗಿದೆ. ಆದ್ದರಿಂದ ತತ್ ತ್ವಂ ಪದಗಳಿಂದ ವ್ಯಾವೃತ್ತಿಯು ಲಭ್ಯವಾಗುವುದಿಲ್ಲ ಎಂದು ಶಂಕೆಯನ್ನು ಮಾಡಿದರೆ ಆಗ ನಮಗೆ ಯಾವ ಹಾನಿಯೂ ಇಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಸರ್ವಜ್ಞತ್ವಾದಿ ಧರ್ಮಗಳನ್ನು ಹೇಳುವುದರ ಮೂಲಕ ವ್ಯಾವೃತ್ತಿಯನ್ನು ಹೇಳದಿದ್ದರೆ ತತ್ ತ್ವಂ ಪದಗಳಿಗೆ ಚಿತ್‌ಚಿತ್ ಎಂದು ಅರ್ಥವಾಯಿತು. ಇಲ್ಲಿ ಅಭೇದವನ್ನು

ಹೇಳುವುದಿಲ್ಲ, ಅಥವಾ ಭೇದವನ್ನು ಹೇಳುವುದಿಲ್ಲ. ಅಭೇದವನ್ನು ಹೇಳದಿರುವ ಕಾರಣ ಭೇದವಾದಿಗಳಾದ ನಮಗೆ ಇದು ವಿರೋಧಿಯಲ್ಲ ಎಂದು ಇಲ್ಲಿ ಪ್ರತಿಪಾದನೆ ಮಾಡಿದ್ದಾರೆ.

**ಅತಃ ಪ್ರತ್ಯಕ್‌ಪರಾಗ್ಭಾವಾದಲ್ಪಸಾಮ್ಯಾತ್ ತಯೋಃ ಸದಾ ।**
**ಸಾದೃಶ್ಯೈಕ್ಯಪರೈವೇಯಂ ವಾಗ್ ಬಿಂಬಪ್ರತಿಬಿಂಬಯೋಃ ॥ ೧೧೫೨ ॥**

**ಸಾದೃಶ್ಯೈಕ್ಯೇಪಿ ವಾಕ್ ಸಿಂಹೋ ದೇವದತ್ತ ಇತಿ ಸ್ಫುಟಾ ।**
**ಮುಖಂ ಚಂದ್ರಃ ಪದಂ ಪದ್ಮಮಿತ್ಯಾದ್ಯಾಶ್ಚ ಸಹಸ್ರಶಃ ॥ ೧೧೫೩ ॥**

**ಅರ್ಥ–** ಅತಃ = ಆದ್ದರಿಂದ, ಪ್ರತ್ಯಕ್ ಪರಾಗ್ಭಾವಾತ್ = ಪ್ರತ್ಯಕ್ ಪರಾಗ್‌ಭಾವ ವಿರುವುದರಿಂದ, ಸದಾ = ಯಾವಾಗಲೂ, ಅಲ್ಪಸಾಮ್ಯಾತ್ = ಅಲ್ಪಸಾದೃಶ್ಯವಿರುವುದರಿಂದ, ಇಯಂ = ಈ, ವಾಕ್ = ತತ್ವಮಸಿ ಎಂಬ ವಾಕ್ಯವು, ತಯೋಃ= ಆ, ಬಿಂಬ ಪ್ರತಿಬಿಂಬಯೋಃ = ಬಿಂಬ ಮತ್ತು ಪ್ರತಿಬಿಂಬರಾದ ಬ್ರಹ್ಮ ಮತ್ತು ಜೀವರಿಗೆ, ಸಾದೃಶ್ಯೈಕ್ಯಪರಾ ಏವ = ಸಾದೃಶ್ಯೈಕ್ಯವನ್ನೇ ಪ್ರತಿಪಾದಿಸುವಂತಹದು ಆಗಿದೆ, ಸಾದೃಶ್ಯೈಕ್ಯೇಪಿ= ಸಾದೃಶ್ಯೈಕ್ಯದ ವಿಷಯದಲ್ಲಿ ಕೂಡ, ಸಿಂಹೋ ದೇವದತ್ತಃ ಇತಿ = ದೇವದತ್ತನು ಸಿಂಹನಾಗಿದ್ದಾನೆ ಎಂಬ, ಸ್ಫುಟಾ = ಸ್ಪಷ್ಟವಾದ, ವಾಕ್ = ಮಾತು, ಚ = ಮತ್ತು, ಮುಖಂ ಚಂದ್ರಃ ಪದಂ ಪದ್ಮಂ ಇತ್ಯಾದ್ಯಾ= ಇವೇ ಮೊದಲಾದ, ಸಹಸ್ರಶಃ= ಸಾವಿರಾರು ವಾಚಃ = ಮಾತುಗಳು, ಸಂತಿ = ಇವೆ.

**ಅನುವಾದ–** ಆದ್ದರಿಂದ ಪ್ರತ್ಯಕ್‌ಪರಾಗ್ಭಾವವಿರುವುದರಿಂದಲೂ ಅಲ್ಪಸಾಮ್ಯ ವಿರುವುದರಿಂದಲೂ ಬಿಂಬಪ್ರತಿಬಿಂಬರಾದ ಬ್ರಹ್ಮ ಮತ್ತು ಜೀವರಿಗೆ ಈ ವಾಕ್ಯವು ಸಾದೃಶ್ಯೈಕ್ಯವನ್ನೇ ಹೇಳುತ್ತದೆ. 'ಸಿಂಹೋ ದೇವದತ್ತಃ' ಮುಖಂ ಚಂದ್ರಃ', 'ಪದಂ ಪದ್ಮಂ' ಇತ್ಯಾದಿಯಾದ ಸಾದೃಶ್ಯೈಕ್ಯವನ್ನು ಹೇಳುವ ಸಹಸ್ರಾರು ವಾಕ್ಯಗಳು ಪ್ರಸಿದ್ಧವಾಗಿವೆ. ಬ್ರಹ್ಮನು ಪ್ರತ್ಯಕ್, ಒಳಗಿರುವವನು. ಜೀವನು ಪರಾಕ್ ಅವನ ಹೊರಗೆ ಇರುವವನು. ಬ್ರಹ್ಮ ಮತ್ತು ಜೀವರಿಗೆ ಚೇತನತ್ವೇನ ಸಾಮ್ಯವಿದೆ. ಪ್ರತ್ಯಕ್ ಪರಾಗ್ಭಾವವಿರುವುದರಿಂದ ಅಭೇದವಿಲ್ಲ. ಜೊತೆಗೆ ರೂಪಂ ರೂಪಂ ಪ್ರತಿರೂಪೋ ಬಭೂವ ಎಂಬ ವಾಕ್ಯವು ಜೀವಬ್ರಹ್ಮರಿಗೆ ಬಿಂಬ ಪ್ರತಿಬಿಂಬಭಾವವನ್ನು ಹೇಳುತ್ತದೆ. ಆದ್ದರಿಂದ ಬಿಂಬಪ್ರತಿಬಿಂಬರಿಗೆ ಭೇದ ಮತ್ತು ಸಾದೃಶ್ಯವಿದ್ದಂತೆ, ಜೀವ ಬ್ರಹ್ಮರಿಗೂ ಭೇದ ಮತ್ತು ಸಾದೃಶ್ಯವೇ ಇದೆ. ಸಿಂಹೋ ದೇವದತ್ತಃ, ಮುಖಂ ಪದ್ಮಂ ಮೊದಲಾದ ವಾಕ್ಯಗಳು ಸಮಾನವಿಭಕ್ತಿಕವಾದ ಪದಗಳಿಂದ ಕೂಡಿದ್ದು, ಐಕ್ಯವನ್ನು ಹೇಳುವಂತೆ ಕಂಡರೂ ಐಕ್ಯವು ಅಲ್ಲಿ ವಾಕ್ಯಾರ್ಥವಲ್ಲ. ಸಿಂಹದಂತೆ ದೇವದತ್ತ, ಪದ್ಮದಂತೆ ಮುಖ ಎಂದು ಸಾದೃಶ್ಯಾರ್ಥವೇ ಇದೆ ಎಂದು ಸಹಸ್ರಾರು ಉದಾಹರಣೆಗಳಿವೆ.

**ಭಾವವಿಲಾಸಿನೀ–** ಪ್ರತಿಮುಖೇ ಇದಂ ಮುಖಮಿತಿವತ್ ಪ್ರತಿಬಿಂಬೇ ಜೀವೇ ತ್ವಂ ತದಸೀತಿ ಬಿಂಬೈಕ್ಯೋಕ್ತಿರೇವೇಯಂ ಶ್ರುತಿರಿತ್ಯಾಹ–**ಅತ ಇತಿ॥ ಅತಃ ಮುಖ್ಯೈಕ್ಯಾಯೋಗಾತ್** ॥೧೧೫೩॥

**ಏಕತ್ವರೂಪಣೇನ ಸ್ಯಾದುಪಮಾನೋಪಮೇಯಯೋಃ ।**
**ರೂಪಕಾಖ್ಯೋ ಹ್ಯಲಂಕಾರೋ ವಾಕ್ಯಸೌಂದರ್ಯಪೋಷಕಃ ॥ ೧೧೫೪ ॥**

**ಅರ್ಥ–** ಉಪಮಾನೋಪಮೇಯಯೋಃ = ಉಪಮಾನ ಮತ್ತು ಉಪಮೇಯಗಳಿಗೆ, ಏಕತ್ವರೂಪಣೇನ = ಏಕತ್ವವನ್ನು ನಿರೂಪಿಸುವುದರಿಂದ, ವಾಕ್ಯಸೌಂದರ್ಯ ಪೋಷಕಃ = ವಾಕ್ಯದ ಸೌಂದರ್ಯವನ್ನು ಹೆಚ್ಚಿಸುವ, ರೂಪಕಾಖ್ಯಃ = ರೂಪಕ ಎಂಬ ಹೆಸರಿನ, ಅಲಂಕಾರಃ = ಅಲಂಕಾರವು, ಸ್ಯಾತ್ ಹಿ = ಆಗುತ್ತದೆಯಷ್ಟೇ.

**ಅನುವಾದ– ಉಪಮಾನ ಮತ್ತು ಉಪಮೇಯಗಳಿಗೆ ಏಕತ್ವವನ್ನು ಹೇಳುವುದರಿಂದ ರೂಪಕ ಎಂಬ ಅಲಂಕಾರ ಉಂಟಾಗಿ ವಾಕ್ಯಸೌಂದರ್ಯವನ್ನು ಹೆಚ್ಚಿಸುತ್ತದೆ.**

**ಭಾವವಿಲಾಸಿನೀ–** ತತ್‌ಸದೃಶಸ್ಯ ತದಭಿನ್ನತಯಾ ವ್ಯವಹಾರೇ ಕಿಂ ಕಾರಣಮಿತ್ಯತ ಆಹ – **ಏಕತ್ವೇಽಪಿ॥** ಹೀತ್ಯನೇನ ಏಕತ್ವರೂಪಣಂ ಯತ್‌ಸ್ಯಾದುಪಮಾನೋಪಮೇಯಯೋಃ । ರೂಪಕಂ ನಾಮೇತಿ ರೂಪಕಾಲಂಕಾರಲಕ್ಷಣಪ್ರಸಿದ್ಧಿಂ ಸೂಚಯತಿ । ಉಪಲಕ್ಷಣಂ ಚೈತತ್ । ಶೌರ್ಯಧೈರ್ಯಪರಾಕ್ರಮ ಶತ್ರುಸಂಹಾರಾಪಲಾಯನಸಾಹಸಾದಿಧರ್ಮಾಣಾಂ ಲಘೂಕ್ತ್ಯಾ ಲಾಭಾಚ್ಚೇತ್ಯಪಿ ದ್ರಷ್ಟವ್ಯಮ್ ॥ ೧೧೫೪ ॥

**ವಿವರಣೆ–** ತತ್ತ್ವಮಸಿ ಎಂಬಲ್ಲಿ ತತ್ಪದೋಕ್ತನಾದ ಬ್ರಹ್ಮನು ಉಪಮಾನ, ತ್ವಂ ಪದೋಕ್ತವಾದ ಜೀವನು ಉಪಮೇಯ. ಬ್ರಹ್ಮನಂತೆ ನೀನಿದ್ದೇಯೆ ಎಂದು ಅರ್ಥ. ಈ ಸಾದೃಶ್ಯವನ್ನು ಹೇಳುವಾಗ ಸಾದೃಶ್ಯದ ಬದಲು ಅಭೇದವನ್ನು ಹೇಳಿದರೆ ಅದು ರೂಪಕಾಲಂಕಾರವೆನಿಸಿ ಕೊಂಡು ವಾಕ್ಯ ಸೌಂದರ್ಯವನ್ನು ಹೆಚ್ಚಿಸುತ್ತದೆ. ಉಪಮಾನ ಉಪಮೇಯಗಳಿಗೆ ಏಕತ್ವವನ್ನು ನಿರೂಪಣೆ ಮಾಡಿದರೆ ರೂಪಕಾಲಂಕಾರವಾಗುತ್ತದೆ ಎಂಬ ಅಲಂಕಾರ ಶಾಸ್ತ್ರದ ಲಕ್ಷಣವಾಕ್ಯವನ್ನು ಇಲ್ಲಿ ಗಮನಿಸಬಹುದು. ಅಷ್ಟೇ ಅಲ್ಲ, ಸಿಂಹೋ ದೇವದತ್ತಃ ಎಂದು ಹೇಳಿದಾಗ ರೂಪಕಾಲಂಕಾರದಿಂದ ಶೌರ್ಯ, ಧೈರ್ಯ, ಪರಾಕ್ರಮ, ಶತ್ರು ಸಂಹಾರ, ಸಾಹಸ ಮೊದಲಾದ ಧರ್ಮಗಳು ಲಘೂಕ್ತಿಯಿಂದಲೇ ಲಭ್ಯವಾಗುತ್ತದೆ. ಹಾಗೆಯೇ ಇಲ್ಲಿಯೂ ಬ್ರಹ್ಮನ ಧರ್ಮಕ್ಕೆ ಸದೃಶವಾದ ಅಲ್ಪವಾದ ಅನೇಕ ಧರ್ಮಗಳು ಜೀವನಲ್ಲಿ ಲಭ್ಯವಾಗುತ್ತವೆ.

**ಅತಃ ಸಾರ್ವಜನೀನೇಽರ್ಥೇ ಸತಿ ಸರ್ವಾವಿರೋಧಿನಿ ।**
**ಸ್ವತೋನ್ಯತೋ ವಿರುದ್ಧಾರ್ಥಂ ಕೋ ನೂನ್ಮಾದೀ ವದೇದ್ ವದ॥ ೧೧೫೫ ॥**

**ಅರ್ಥ–** ಅತಃ = ಆದ್ದರಿಂದ, ಸಾರ್ವಜನೀನೇ = ಎಲ್ಲರಿಗೂ ಸಮ್ಮತವಾಗುವಂತಹ, ಸರ್ವಾವಿರೋಧಿನಿ = ಎಲ್ಲಿಂದಲೂ ವಿರೋಧ ಬರದಂತಹ, ಅರ್ಥೇ = ಅರ್ಥವು, ಸತಿ =

ಇದ್ದಾಗ, ಸ್ವತಃ = ತನ್ನ ಪದಗಳಿಂದಲೂ, ಅನ್ಯತಃ = ಭೇದ-ಶ್ರುತಿಗಳಿಂದಲೂ, ವಿರುದ್ಧಾರ್ಥಂ = ವಿರುದ್ಧವಾದ ಅರ್ಥವನ್ನು, ಅಸ್ಯ ವಾಕ್ಯಸ್ಯ = ಈ ತತ್ವಮಸಿ ಎಂಬ ವಾಕ್ಯಕ್ಕೆ, ಕಃ ಉನ್ಮಾದೀ = ಯಾವ ಹುಚ್ಚನು, ವದೇತ್ ನು = ಹೇಳಿಯಾನು? ಎಂದು, ತ್ವಂ = ನೀನು, ವದ = ಹೇಳು.

**ಅನುವಾದ–** ಆದ್ದರಿಂದ ಎಲ್ಲಿಯೂ ವಿರೋಧಬರದಂತಹ ಸರ್ವಜನಸಮ್ಮತವಾದಂತಹ ಅರ್ಥವು ಇರುವಾಗ ತನ್ನ ಪದಗಳಿಂದಲೂ ಭೇದಶ್ರುತಿಗಳಿಂದಲೂ ವಿರೋಧವನ್ನು ಪಡೆಯುವ ಅರ್ಥವನ್ನು ಯಾವ ಹುಚ್ಚನು ತಾನೆ ಹೇಳುತ್ತಾನೆ ಎಂದು ಹೇಳು.

**ಭಾವವಿಲಾಸಿನೀ–** ಸ್ವತಃ ಸ್ವಪದಾಭ್ಯಾಮ್ । ಅನ್ಯತಃ ಭೇದಶ್ರುತ್ಯಾದಿತಃ ॥ ೧೧೫೫ ॥

**ವಿವರಣೆ–** ತತ್ತ್ವಮಸಿ ಎಂಬಲ್ಲಿ ಸರ್ವಜ್ಞತ್ವ, ಅಲ್ಪಜ್ಞತ್ವಾದಿ ಧರ್ಮಗಳಿಗೆ ಪರಸ್ಪರ ವಿರೋಧವಿರುವುದರಿಂದ ತನ್ನ ಪದಗಳಿಂದಲೇ ತನಗೆ ವಿರೋಧಬರುತ್ತದೆ ಎಂದು ಹಿಂದೆ ವಿವರಿಸಿದ್ದೇವೆ. ಇನ್ನು ಭೇದಶ್ರುತಿಗಳಂತೂ ಸಹಸ್ರಾರು ಸಂಖ್ಯೆಯಲ್ಲಿ ಇವೆ. ಅಲ್ಲಿ ಮುಖ್ಯವಾದ ಅಭೇದವು ಅತ್ಯಂತ ವಿರುದ್ಧವಾದುದು. ಸಾದೃಶ್ಯಾಭೇದವನ್ನೇ ಸ್ವೀಕರಿಸಬೇಕು.

**ಈಶಾಭೇದಸ್ಯ ಕಥನಂ ಸ್ತಬ್ಧಸ್ತಬ್ಧತ್ವವೃದ್ಧಿದಮ್ ।**
**ಪ್ರಕೃತಾಸಂಗತಂ ಚ ಸ್ಯಾಚ್ಛಿಷ್ಯಕಲ್ಪತರೋರ್ಗುರೋಃ ॥ ೧೧೫೬ ॥**

**ಅರ್ಥ–** ಶಿಷ್ಯಕಲ್ಪತರೋಃ = ಶಿಷ್ಯನಿಗೆ ಕಲ್ಪವೃಕ್ಷಕ್ಕೆ ಸಮಾನವಾದ, ಗುರೋಃ = ಗುರುವಿನ, ಶಿಷ್ಯಂ = ಶಿಷ್ಯನನ್ನು ಕುರಿತು, ಈಶಾಭೇದಸ್ಯ = ಜೀವೇಶ್ವರಾಭೇದದ, ಕಥನಂ = ಹೇಳುವಿಕೆಯು (ಗುರುವು ಶಿಷ್ಯನಿಗೆ ಮಾಡಿದ ಐಕ್ಯೋಪದೇಶವು), ಸ್ತಬ್ಧಸ್ತಬ್ಧತ್ವವೃದ್ಧಿದಂ = ಸ್ತಬ್ಧ = ಮೊದಲೇ ಅಹಂಕಾರವುಳ್ಳ ಶಿಷ್ಯರಿಗೆ, ಸ್ತಬ್ಧತ್ವವೃದ್ಧಿದಂ = ಸ್ತಬ್ಧತ್ವವನ್ನು ಹೆಚ್ಚಿಸುವಂತಹದು, ಚ = ಮತ್ತು, ಪ್ರಕೃತ ಅಸಂಗತಂ = ಪ್ರಕೃತ ಸಂದರ್ಭಕ್ಕೆ ಹೊಂದದಂತಹದು, ಚ = ಕೂಡ, ಸ್ಯಾತ್ = ಆಗುತ್ತವೆ.

**ಅನುವಾದ–** ಬ್ರಹ್ಮಾಭೇದವನ್ನು ಹೇಳಿದರೆ ಮೊದಲೇ ಸ್ತಬ್ಧನಾದ ಶಿಷ್ಯನಿಗೆ ಇನ್ನಷ್ಟು ಸ್ತಬ್ಧತೆಯು ಉಂಟಾಗುವುದರಿಂದ ಶಿಷ್ಯನಿಗೆ ಕಲ್ಪತರುವಾದ ಪ್ರಯುಕ್ತ ಯಾವ ಅನಿಷ್ಟವನ್ನೂ ಮಾಡದಿರುವ ಗುರುವು ನೀನು ಹೇಳಿದಂತೆ ಉಪದೇಶ ಮಾಡಿದರೆ ಅದು ಪ್ರಕೃತಕ್ಕೆ ಅಸಂಗತವೇ ಆಗುತ್ತದೆ.

**ಭಾವವಿಲಾಸಿನೀ–** ಐಕ್ಯಾರ್ಥೇ ದೋಷಾಂತರಂ ಚಾಹ – **ಈಶೇತಿ** ॥ ಸ್ತಬ್ಧಸ್ಯ ಶ್ವೇತಕೇತೋಃ । ಸ್ತಬ್ಧತ್ವವೃದ್ಧಿದಂ ಗುರೋಃ ಕಥನಮಿತಿ ಸಂಬಂಧಃ । ಅನೂಚಾನಮಾನೀಸ್ತಬ್ಧ ಏಯಾಯೇತಿ ಶ್ರುತ್ಯುಕ್ತಸ್ಯಾಹಂಕಾರೇಣ ಸ್ತಬ್ಧಸ್ಯ ಶ್ವೇತಕೇತೋಃ ಈಶೈಕ್ಯಕಥನಂ ಪುನರಪಿ ಗರ್ವಾಭಿವೃದ್ಧಿ-

ಹೇತುತ್ವಾದಸಂಗತಮಿತಿ ಭಾವಃ । ಶಿಷ್ಯಕಲ್ಪತರೋರಿತ್ಯನೇನ ಶಿಷ್ಯಾನಿಷ್ಟಕರಣಮನುಚಿತಮಿತಿ ಸೂಚಯತಿ ॥ ೧೧೫೬ ॥

**ವಿವರಣೆ–** ಶ್ವೇತಕೇತುವು ಗುರುಕುಲವಾಸವನ್ನು ಮಾಡಿ ಬಹಳ ಜ್ಞಾನವನ್ನು ಪಡೆದು ಅಹಂಕಾರದಿಂದ ಸ್ತಬ್ಧನಾಗಿ ಹಿಂದಿರುಗಿದ್ದಾನೆ. ತಂದೆಯ ಉಪದೇಶ ಅವನ ಸ್ತಬ್ಧತೆಯನ್ನು ಪರಿಹಾರ ಮಾಡುವುದಕ್ಕಾಗಿಯೇ ಇದೆ. ಹೀಗಿರುವಾಗ ನೀನೇ ಬ್ರಹ್ಮ ಎಂದು ಹೇಳಿದರೆ ಅವನ ಸ್ತಬ್ಧತೆಯು ಇನ್ನೂ ಹೆಚ್ಚುಗುವುದೇ ಹೊರತು ಕಡಿಮೆಯಾಗುವುದಿಲ್ಲ. ಆದ್ದರಿಂದ ಅದ್ವೈತಿಗಳು ಹೇಳುವ ಅಭೇದವು ಪ್ರಕೃತಕ್ಕೆ ಅಸಂಗತವಾದುದು.

**ಮಾನೇನ ಸ್ತಬ್ಧಚಿತ್ತಸ್ಯ ಪ್ರತಿಬಿಂಬತ್ವರೂಪಣೇ ।**
**ಈಶಾಧೀನತ್ವಬೋಧಾಪ್ತ್ಯಾ ವಾಕ್ಯಂ ಸ್ಯಾದಿತಿ ಸಂಗತಮ್ ॥ ೧೧೫೭ ॥**

**ಅರ್ಥ–** ಮಾನೇನ = ಅಹಂಕಾರದಿಂದ, ಸ್ತಬ್ಧ = ಸ್ತಬ್ಧವಾದ, ಚಿತ್ತಸ್ಯ = ಮನಸ್ಸುಳ್ಳ, ಶಿಷ್ಯನಿಗೆ, ಪ್ರತಿಬಿಂಬತ್ವರೂಪಣೇ = ಪರಮಾತ್ಮನ ಪ್ರತಿಬಿಂಬತ್ವವನ್ನು ನಿರೂಪಿಸಿದಾಗ, ಈಶಾಧೀನತ್ವಬೋಧಾಪ್ತ್ಯಾ= ತನಗೆ ಭಗವಂತನ ಅಧೀನತ್ವವು ಇದೆಯೆಂಬ ತಿಳುವಳಿಕೆಯು ಪ್ರಾಪ್ತವಾಗುವುದರಿಂದ, ವಾಕ್ಯಂ = ತತ್ವಮಸಿ ಎಂಬ ವಾಕ್ಯವು , ಅತಿಸಂಗತಂ = ಅತ್ಯಂತ ಸಂಗತವಾದದ್ದು ಸ್ಯಾತ್ = ಆಗುತ್ತದೆ.

**ಅನುವಾದ–** ಅಹಂಕಾರದಿಂದ ಸ್ತಬ್ಧವಾದ ಮನಸ್ಸುಳ್ಳ ಶ್ವೇತಕೇತುವಿಗೆ ನೀನು ಬ್ರಹ್ಮನ ಪ್ರತಿಬಿಂಬ ಎಂದು ನಿರೂಪಣೆ ಮಾಡಿದರೆ ಈಶಾಧೀನತ್ವವನ್ನು ಹೇಳುವುದರಿಂದ ಸ್ತಬ್ಧತೆಯು ಕಡಿಮೆಯಾಗುವುದರಿಂದ ವಾಕ್ಯವು ಅತ್ಯಂತ ಸಂಗತವಾಗುತ್ತದೆ.

**ಭಾವವಿಲಾಸಿನೀ–** ಅಸ್ಮದರ್ಥಸ್ತು ಪ್ರಕೃತಸಂಗತ ಏವೇತ್ಯಾಹ – **ಮಾನೇನೇತಿ** ॥ ೧೧೫೭ ॥

**ವಿವರಣೆ–** ಸ್ತಬ್ಧತೆ ಎಂದರೆ ದೊಡ್ಡವರು ಮಾತನಾಡಿಸಿದರೂ ಮಾತನಾಡದೆ ಇರುವುದು. ತಾನು ಮಹಾಜ್ಞಾನಿ ಎಂದು ತಿಳಿದು ಶ್ವೇತಕೇತುವು ಹಾಗೆ ಸ್ತಬ್ಧನಾಗಿದ್ದಾನೆ. ಅವನನ್ನು ಕುರಿತು ನೀನು ಈಶ್ವರನ ಪ್ರತಿಬಿಂಬ ಎಂದು ಹೇಳಿದರೆ, ಪ್ರತಿಬಿಂಬವು ಯಾವಾಗಲೂ ಬಿಂಬಾಧೀನವಾಗಿರುವುದರಿಂದ ನಾನು ಈಶ್ವರನ ಅಧೀನ ಎಂದು ತಿಳಿದು ಅವನ ಸ್ತಬ್ಧತೆಯು ಕಡಿಮೆಯಾಗುವುದರಿಂದ ಪ್ರತಿಬಿಂಬತ್ವವನ್ನು ಹೇಳುವುದೇ ಅತ್ಯಂತ ಸಂಗತವಾಗುತ್ತದೆ.

**ದೃಷ್ಟೇಽರ್ಥೇಽಯುಕ್ತಶಿಷ್ಟೋಕ್ತೇಸ್ತಮೇವಾರ್ಥಂ ವಿಮರ್ಶವಾನ್ ।**
**ಕೋ ಗೃಹ್ಣೀಯಾದ್ ವಿಷಂ ಭುಂಕ್ಷ್ವೇತ್ಯುಕ್ತೇ ಕಿಂ ವಿಷಮತ್ತಿ ತತ್ ॥೧೧೫೮॥**

**ಅರ್ಥ–** ದೃಷ್ಟೇ = ಮೇಲ್ನೋಟಕ್ಕೆ ಕಂಡ, ಅರ್ಥೇ = ವಿಷಯದ ಬಗ್ಗೆ ಅಯುಕ್ತಶಿಷ್ಟೋಕ್ತೇಃ = ಯುಕ್ತಿಬಾಧಿತವಾದ, ಶಿಷ್ಟ = ಆಪ್ತನ, ಉಕ್ತೇಃ = ಹೇಳಿಕೆ ಇರುವುದರಿಂದ (ಆಪ್ತನ ಯುಕ್ತಿಬಾಧಿತವಾದ ಹೇಳಿಕೆ ಇರುವುದರಿಂದ) ತಂ ಅರ್ಥಂ ಏವ = ಯುಕ್ತಿಬಾಧಿತವಾದ ಮೇಲ್ನೋಟಕ್ಕೆ ಕಂಡ ಅದೇ ವಿಷಯವನ್ನು, ವಿಮರ್ಶವಾನ್ = ವಿವೇಕವುಳ್ಳ, ಕಃ = ಯಾವನು, ಗೃಹ್ಣೀಯಾತ್ = ಸ್ವೀಕರಿಸುತ್ತಾನೆ, ಶಿಷ್ಟೇನ = ಆಪ್ತನಿಂದ, ವಿಷಮ್ = ವಿಷಯವನ್ನು, ಭುಂಕ್ಷ್ವ = ತಿನ್ನು, ಇತಿ = ಹೀಗೆ, ಉಕ್ತೇ = ಹೇಳಲ್ಪಟ್ಟರೆ, ವಿಮರ್ಶವಾನ್ = ವಿವೇಕಿಯು, ತತ್ = ಆ, ವಿಷಂ = ವಿಷವನ್ನು ಅತ್ತಿ ಕಿಂ= ತಿನ್ನುತ್ತಾನೇನು?

**ಅನುವಾದ–** ಆಪ್ತನಾದವನು ಯುಕ್ತಿಬಾಧಿತವಾದ ಒಂದು ವಾಕ್ಯವನ್ನು ಹೇಳಿದರೆ ವಿಮರ್ಶೆ ಉಳ್ಳವನು ಯಾವನು ತಾನೆ ಆ ವಾಕ್ಯದಿಂದ ಆಪಾತತಃ ತೋರುವ ಅರ್ಥವನ್ನು ತಿಳಿದು ಅದನ್ನು ಸ್ವೀಕರಿಸುತ್ತಾನೆ. ವಿಷಂ ಭುಂಕ್ಷ್ವ ಎಂದು ಆಪ್ತನು ಹೇಳಿದರೆ ಯಾವನು ತಾನೇ ಆ ವಿಷವನ್ನು ಭಕ್ಷಿಸುತ್ತಾನೆ?

**ಭಾವವಿಲಾಸಿನೀ–** ನನು ಯಥಾಸ್ಥಿತವಾಕ್ಯಾರ್ಥಗ್ರಹಣೇನ ಗರ್ವವೃದ್ಧೇಃ ಪರಿಹಾರ ಇತ್ಯತ ಆಹ– ದೃಷ್ಟ ಇತಿ ॥ ದೃಷ್ಟೇಽರ್ಥೇ ಆಪಾತತಃ ದೃಷ್ಟೇಽರ್ಥೇ । ಅಯುಕ್ತಾಯಾಃ ಯುಕ್ತಿಬಾಧಿತಾಯಾಃ । ಶಿಷ್ಟಸ್ಯ ಆಪ್ತಸ್ಯ ಉಕ್ತೇರಿತ್ಯರ್ಥಃ । ತತ್ ಅಯುಕ್ತಮಾಪಾತಾರ್ಥಮ್ । ತತ್ ತದೇವ ॥೧೧೫೮॥

**ವಿವರಣೆ–** ತಂದೆಯಾದವನು ಅಕಾರ್ಯವನ್ನು ಮಾಡಿದರೆ ಮಗನನ್ನು ಕುರಿತು ವಿಷಂ ಭುಂಕ್ಷ್ವ ಎಂದು ಪ್ರಯೋಗ ಮಾಡುತ್ತಾನೆ. ತಂದೆಯು ಶಿಷ್ಟನಾದವನು, ಆಪ್ತನಾದವನು. ಈ ವಾಕ್ಯದ ಆಪಾತತಃ ಪ್ರತೀತವಾಗುವ ಅರ್ಥ ವಿಷವನ್ನು ತಿನ್ನು ಎಂದು, ಇದು ಅಯುಕ್ತವಾದುದು. ಆದ್ದರಿಂದ ವಿಮರ್ಶೆವುಳ್ಳ ಮಗನು ಈ ಮಾತನ್ನು ಕೇಳಿದ ಮೇಲೆ ಅಕಾರ್ಯವನ್ನು ಮಾಡಬೇಡ ಎಂದು ತಂದೆಯ ಅಭಿಪ್ರಾಯ ಎಂದು ತಿಳಿಯುತ್ತಾನೆಯೇ ಹೊರತು ವಿಷವನ್ನು ತಿನ್ನು ಎಂದು ಅಭಿಪ್ರಾಯವನ್ನು ತಿಳಿದು ಆ ವಿಷವನ್ನು ತಿನ್ನುವುದಿಲ್ಲ. ಹಾಗೆಯೇ ಶ್ರುತಿಯು ಹೇಳಿದ ಅರ್ಥವು ಆಪಾತತಃ ವಿರುದ್ಧವಾದಾಗ ಅರ್ಥಾಂತರವನ್ನು ಗ್ರಹಿಸಿ ವಾಕ್ಯದ ಪ್ರಾಮಾಣ್ಯವನ್ನು ಮತ್ತು ಸಂಗತಿಯನ್ನು ರಕ್ಷಿಸಬೇಕು.

**ಅತ ಏವ ಗುರುಃ ಶಿಷ್ಯಸ್ತಬ್ಧಬುದ್ಧಿಂ ಪದೇ ಪದೇ ।**
**ವಿಚಾರಶೀಲಾಂ ರಚಯನ್ ಸ್ಪಷ್ಟಂ ನಾಚಷ್ಟ ಕಾರ್ಯವಿತ್ ॥ ೧೧೫೯ ॥**

**ಅರ್ಥ–** ಅತ ಏವ = ಆದ್ದರಿಂದಲೇ, ಕಾರ್ಯವಿತ್ = ತನ್ನ ಉದ್ದೇಶವನ್ನು ಚೆನ್ನಾಗಿ ಬಲ್ಲ, ಗುರುಃ = ಗುರುವು, ಶಿಷ್ಯಸ್ತಬ್ಧಬುದ್ಧಿಂ = ಶಿಷ್ಯ = ಶಿಷ್ಯನ, ಸ್ತಬ್ಧ = ಅಹಂಕಾರದಿಂದ ಕೂಡಿದ, ಬುದ್ಧಿಂ = ಬುದ್ಧಿಯನ್ನು, ಪದೇ ಪದೇ = ಹೆಜ್ಜೆಹೆಜ್ಜೆಗೆ, ವಿಚಾರಶೀಲಾಂ =

ಚಿಂತನಶೀಲವನ್ನಾಗಿ, ರಚಯನ್ = ಮಾಡುತ್ತಾ, ವಕ್ತವ್ಯಂ = ಹೇಳಬೇಕಾದ ವಿಷಯವನ್ನು, ಸ್ಪಷ್ಟಂ = ಸ್ಪಷ್ಟವಾಗಿ, ನ ಆಚಷ್ಟ= ಹೇಳಲಿಲ್ಲ.

**ಅನುವಾದ–** ಆದ್ದರಿಂದಲೇ ಗುರುವು ಶಿಷ್ಯನ ಸ್ತಬ್ಧಬುದ್ಧಿಯನ್ನು ನಿವಾರಿಸಲು ಹೆಜ್ಜೆ ಹೆಜ್ಜೆಗೆ ಅವನನ್ನು ಚಿಂತನಪರನನ್ನಾಗಿ ಮಾಡಲು ತನ್ನ ಉದ್ದೇಶವನ್ನು ಸ್ಪಷ್ಟವಾಗಿ ತಿಳಿದಿದ್ದ ಗುರುವು ಸ್ಪಷ್ಟವಾಗಿ ಇದನ್ನು ಹೇಳಲಿಲ್ಲ.

**ಭಾವವಿಲಾಸಿನೀ–** ತರ್ಹೀಶಾಧೀನೋಽಸೀತಿ ಸ್ಪಷ್ಟಂ ಕಿಮಿತಿ ನೋಕ್ತವಾನಿತ್ಯತ ಆಹ – ಅತ ಏವೇತಿ ॥ ಕಾರ್ಯವಿತ್ ಸ್ತಬ್ಧತ್ವವಿಮೋಚನಾಖ್ಯಕಾರ್ಯವಿತ್ ॥ ೧೧೫ ॥

**ವಿವರಣೆ–** ಹಾಗಾದರೆ ನೀನು ಈಶಾಧೀನನಾಗಿದ್ದೀಯೆ ಎಂದೇ ಸ್ಪಷ್ಟವಾಗಿ ಗುರುವು ಹೇಳಬಹುದಾಗಿದ್ದಿತು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಅಷ್ಟು ಸ್ಪಷ್ಟವಾಗಿ ಹೇಳಿದ್ದರೆ ಶಿಷ್ಯನ ಚಿಂತನಶಕ್ತಿಯು ಅಭಿವೃದ್ಧಿಯನ್ನು ಹೊಂದುವುದಿಲ್ಲ. ಆದ್ದರಿಂದ ಶಿಷ್ಯನ ಮೇಧಾಶಕ್ತಿಯನ್ನು ಅಭಿವೃದ್ಧಿಪಡಿಸಿ ಯಥಾರ್ಥಜ್ಞಾನವನ್ನೂ ಉಂಟು ಮಾಡುವುದಕ್ಕಾಗಿ ಗುರುವು ಈ ವಿಷಯವನ್ನು ಸ್ಪಷ್ಟವಾಗಿ ಹೇಳದೆ ಬಳಸು ದಾರಿಯಿಂದ ಹೇಳಿದ್ದಾನೆ.

ಅದ್ಯಾಪಿ ಬುದ್ಧಿವೈಶದ್ಯಸಿದ್ಧ್ಯರ್ಥಂ ವಕ್ರಮುದ್ರಯಾ ।
ಆಲಿಖ್ಯ ವರ್ಣಶಿಕ್ಷಾಯಾಂ ಮೇಧಾಮಾಧಾವಯಂತಿ ಹಿ ॥ ೧೧೬೦ ॥

**ಅರ್ಥ–** ಅದ್ಯ ಅಪಿ = ಈಗಲೂ ಕೂಡ, ಗುರವಃ = ಗುರುಗಳು, ವರ್ಣಶಿಕ್ಷಾಯಾಂ = ಅಕ್ಷರಾಭ್ಯಾಸ ಸಮಯದಲ್ಲಿ, ಶಿಷ್ಯಾಣಂ = ಶಿಷ್ಯರ, ಬುದ್ಧಿವೈಶದ್ಯ ಸಿದ್ಧ್ಯರ್ಥಂ = ಬುದ್ಧಿ = ಬುದ್ಧಿಯ, ವೈಶದ್ಯ = ತೀಕ್ಷ್ಣತೆಯ, ಸಿದ್ಧ್ಯರ್ಥಂ = ಸಿದ್ಧಿಗಾಗಿ, ವರ್ಣಾನ್ = ಅಕ್ಷರಗಳನ್ನು, ವಕ್ರಮುದ್ರಯಾ = ಹಿಂದುಮುಂದಾಗಿ, ಆಲಿಖ್ಯ = ಬರೆದು, ತೇಷಾಂ = ಆ ಶಿಷ್ಯರ, ಮೇಧಾಂ = ಬುದ್ಧಿಯನ್ನು, ಆಧಾವಯಂತಿ ಹಿ = ಅಭಿವೃದ್ಧಿಪಡಿಸುತ್ತಾರಷ್ಟೆ.

**ಅನುವಾದ–** ಈಗಲೂ ಸಹ ಬುದ್ಧಿಯ ಅಭಿವೃದ್ಧಿಗಾಗಿ ವರ್ಣಗಳನ್ನು ಹಿಂದು ಮುಂದಾಗಿ ಬರೆದು ಅಧ್ಯಯನ ಕಾಲದಲ್ಲಿ ಶಿಷ್ಯನ ಬುದ್ಧಿಯನ್ನು ಅಭಿವೃದ್ಧಿಪಡಿಸುತ್ತಾರೆ.

**ಭಾವವಿಲಾಸಿನೀ–** ವಕ್ರಮುದ್ರಯಾ ಆಲಿಖ್ಯ । ನಾಮ್ನೋನುಲೋಮವರ್ಣಾನಾಂ ಪ್ರತಿಲೋಮ್ನಾ ಲೇಖನಂ ಕೃತ್ವಾ। ವರ್ಣಶಿಕ್ಷಾಯಾಂ ಅಕ್ಷರಶಿಕ್ಷಾಕಾಲೇ ॥ ೧೧೬೦ ॥

**ವಿವರಣೆ–** ನೇರವಾಗಿ ಹೇಳದೆ ವಕ್ರಮುದ್ರೆಯಿಂದ ಹೇಳುವುದು ಬುದ್ಧಿಯು ಚುರುಕಾಗುವುದಕ್ಕೆ ಕಾರಣವಾಗುತ್ತದೆ. ಈಗಲೂ ಸಹ ಪದಗಳ ಶಿಕ್ಷಣವನ್ನು ಕೊಡುವವರು

ಭೀಮಸೇನ ಎಂಬ ಪದವನ್ನು 'ನಸೇಮಭೀ' ಎಂದು ಬರೆದು ಇದನ್ನು ಓದು ಎಂದು ಶಿಷ್ಯರಿಗೆ ಹೇಳುತ್ತಾರೆ. ಇಲ್ಲಿಯೂ ಸಹ ವಕ್ರಮುದ್ರೆಯಿಂದ ಹೇಳುವುದಕ್ಕೆ ಇದೇ ಫಲ.

**ಬೋಧೋ ಬುದ್ಧ್ಯೈ ತಥಾ ಪ್ರಾಹ ಮಂತಾರಂ ಮನ ಇತ್ಯಪಿ ।**
**ಅಭ್ರಮಾಯ ಪ್ರಜಾಶಬ್ದಂ ತತ್ರ ಪ್ರಾಯುಂಕ್ತ ಚೋಪರಿ ॥ ೧೧೬೧ ॥**

**ಅರ್ಥ–** ಶ್ರುತೌ = ವೇದದಲ್ಲಿ, ತಥಾ ಬೋಧಃ = ಆ ಅದ್ವೈತೋಪದೇಶವು, ಶಿಷ್ಯಸ್ಯ = ಶಿಷ್ಯನ, ಬುದ್ಧ್ಯೈ = ಬುದ್ಧಿವೈಶದ್ಯಕ್ಕಾಗಿ, ಅಸ್ತಿ = ಇದೆ, ಶ್ರುತಿಃ = ವೇದವು, ಅಸ್ಮಿನ್ ಪ್ರಕರಣೇ ಏವ = ಇದೇ ಪ್ರಕರಣದಲ್ಲಿಯೇ, ಮಂತಾರಂ = ಮಂತೃವಾದ, ಜೀವಂ = ಜೀವನನ್ನು, ಮನ ಇತಿ ಅಪಿ = ಮನಃ ಎಂಬುದಾಗಿ ಕೂಡ, ಪ್ರಾಹ = ಹೇಳಿದೆ, ಚ = ಮತ್ತೂ ಕೂಡ, ಸ = ಆ ಶ್ರುತಿಯು, ಉಪರಿ = ಇದೇ ಪ್ರಕರಣದ ಕೊನೆಯಲ್ಲಿ, ಅಭ್ರಮಾಯ = ಮನಶ್ಶಬ್ದಕ್ಕೆ ಮನಸ್ಸು ಎಂಬ ಅರ್ಥ ಎಂಬ ಭ್ರಮೆ ಬರಬಾರದೆಂಬ ದೃಷ್ಟಿಯಿಂದ, ತತ್ರ = ಜೀವನಲ್ಲಿ, ಪ್ರಜಾಶಬ್ದಂ = ಪ್ರಜಾ ಎಂಬ ಶಬ್ದವನ್ನು, ಪ್ರಾಯುಂಕ್ತ = ಪ್ರಯೋಗಿಸಿದೆ.

**ಅನುವಾದ–** ಅಭೇದ ಬೋಧವು ಶಿಷ್ಯನ ಬುದ್ಧಿಯ ವೈಶದ್ಯಕ್ಕಾಗಿ ಇದೆ. ಇಲ್ಲಿಯೇ ಮಂತೃವಾದ ಜೀವನನ್ನು ಮನಃ ಎಂಬ ಶಬ್ದದಿಂದ ಹೇಳಿದ್ದಾರೆ. ಮನಃ ಶಬ್ದಕ್ಕೆ ಮನಸ್ಸು ಎಂದು ಭ್ರಾಂತಿ ಬರಬಾರದೆಂಬ ದೃಷ್ಟಿಯಿಂದ ಉಪನಿಷತ್ತೇ ಮುಂದೆ ಮನಃ ಶಬ್ದದಿಂದ ಹೇಳಿದ ವಸ್ತುವನ್ನು ಪ್ರಜಾಶಬ್ದದಿಂದ ಹೇಳಿ ಭ್ರಾಂತಿಯನ್ನು ಪರಿಹಾರ ಮಾಡುತ್ತದೆ.

**ಭಾವವಿಲಾಸಿನೀ–** ತಥಾ ಐಕ್ಯವ್ಯಪದೇವಶವತ್ । ತತ್ರ ಮನಃಶಬ್ದೇನೋಕ್ತೇ ಇದಮಪಿ ಬೋಧೋ ಬೋಧನಾರ್ಥಮೇವೇತಿ ಭಾವಃ ॥ ೧೧೬೧ ॥

**ವಿವರಣೆ–** ಹೀಗೆ ಬೇರೆ ಶೈಲಿಯಿಂದ ಹೇಳುವುದು ಉಪನಿಷತ್ತಿನಲ್ಲಿಯೇ ಕಂಡುಬರುತ್ತದೆ. 'ಪ್ರಾಣಬಂಧನಂ ಹಿ ಸೌಮ್ಯ ಮನಃ' ಎಂಬ ಹಿರಿಯ ಪ್ರಕರಣದ ವಾಕ್ಯದಲ್ಲಿ ಜ್ಞಾತೃವಾದ ಜೀವನನ್ನು ಮನಃ ಶಬ್ದದಿಂದ ಹೇಳಲಾಗಿದೆ. ಮನಃ ಶಬ್ದಕ್ಕೆ ಮನಸ್ಸು ಎಂದು ತಿಳಿದುಕೊಳ್ಳಬಾರದು ಎಂದು ಉಪನಿಷತ್ತೇ ಪ್ರಕರಣದ ಕೊನೆಯಲ್ಲಿ 'ಸನ್ಮೂಲಾಃ ಸೌಮ್ಯ ಇಮಾಃ ಸರ್ವಾಪ್ರಜಾಃ' ಎಂದು ಹೇಳಿ ಮನಃ ಶಬ್ದದ ಅರ್ಥ ಜೀವ ಎಂದು ಹೇಳಿ ಸ್ಪಷ್ಟಪಡಿಸುತ್ತದೆ.

**ಅಹಂ ಬ್ರಹ್ಮೇತಿ ಯೋಽನುಕ್ತ್ವಾ ತ್ವಂ ಬ್ರಹ್ಮೇತ್ಯಾಹ ಮಾಂ ಗುರುಃ ।**
**ಅತೋ ನಾಸ್ಯ ಪ್ರತೀತಾರ್ಥ ಇತ್ಯನ್ಯಾರ್ಥೇಽಕರೋನ್ಮತಿಂ ॥ ೧೧೬೨ ॥**

**ಅರ್ಥ–** ಯಃ = ಯಾವ, ಗುರುಃ = ಗುರುವು, ಅಹಂ = ನಾನು, ಬ್ರಹ್ಮ = ಬ್ರಹ್ಮನು, ಇತಿ = ಹೀಗೆ, ಅನುಕ್ತ್ವಾ = ಹೇಳದೇ, ತ್ವಂ = ಶಿಷ್ಯನಾದ ನೀನು, ಬ್ರಹ್ಮ =ಬ್ರಹ್ಮನು, ಇತಿ= ಈ ರೀತಿಯಾಗಿ, ಮಾಂ = ನನ್ನನ್ನು ಕುರಿತು, ಆಹ = ಹೇಳಿದನೋ, ಅತಃ = ಆದ್ದರಿಂದ, ಅಸ್ಯ = ಈ ಗುರುವಿಗೆ, ಪ್ರತೀತಾರ್ಥಃ = ಮೇಲ್ನೋಟಕ್ಕೆ ತೋರುವ ಅರ್ಥವು, ನ ತಾತ್ಪರ್ಯಂ= ತಾತ್ಪರ್ಯ ವಿಷಯವಲ್ಲ (ಅಸ್ಯ = ಈ ವಾಕ್ಯಕ್ಕೆ ಪ್ರತೀತಾರ್ಥಃ = ಮೇಲ್ನೋಟಕ್ಕೆ ತೋರಿದ ಅರ್ಥವು, ನ = ತಾತ್ಪರ್ಯವಲ್ಲ) ಇತಿ = ಎಂಬುದಾಗಿ, ಶಿಷ್ಯ = ಶಿಷ್ಯನು, ಅನ್ಯಾರ್ಥೇ= ಬೇರೆಯ ಅರ್ಥದ ಬಗ್ಗೆ, ಮತಿಂ = ಬುದ್ಧಿಯನ್ನು, ಅಕರೋತ್ = ಮಾಡಿದನು.

**ಅನುವಾದ–** ಗುರುವು ನಾನು ಬ್ರಹ್ಮನೆಂದು ಹೇಳದೆ ನೀನು ಬ್ರಹ್ಮ ಎಂದು ನನ್ನನ್ನು ಕುರಿತು ಹೇಳುತ್ತಿರುವುದರಿಂದ ಇದಕ್ಕೆ ಪ್ರತೀತಾರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಗ್ರಹಿಸಬೇಕೆಂದು ಶಿಷ್ಯನು ಊಹಿಸುತ್ತಾನೆ.

**ಭಾವವಿಲಾಸಿನೀ– ಶ್ವೇತಕೇತೋರ್ವಿಮರ್ಶಪ್ರಕಾರಮಾಹ – ಅಹಮಿತಿ ॥ ಯಃ ಗುರುಃ ಅತಃ ಮತ್ತೋऽಪ್ಯಧಿಕಸ್ಯ ಸ್ವಸ್ಯ ಬ್ರಹ್ಮತ್ವಾಕೀರ್ತನಾತ್ । ಅಸ್ಯ ಗುರೋಃ । ಇತಿ ಹೇತೋಃ ॥೧೧೬.೨॥**

**ವಿವರಣೆ–** ಶಿಷ್ಯನಿಗೆ ಗುರುವಿನಲ್ಲಿ ಗೌರವವೂ ಮಹತ್ತ್ವಬುದ್ಧಿಯೂ ಇರುತ್ತದೆ. ಆದ್ದರಿಂದ ಜೀವಬ್ರಹ್ಮರ ಅಭೇದವನ್ನು ಗುರುವು ಹೇಳುವುದಾದರೆ ನಾನು ಬ್ರಹ್ಮ ಎಂದು ಹೇಳಬೇಕು. ಅದನ್ನು ಬಿಟ್ಟು ನೀನು ಬ್ರಹ್ಮ ಎಂದು ಗುರುವು ಹೇಳುತ್ತಿದ್ದಾನೆ. ನನಗಿಂತ ಜ್ಞಾನಿಯಾದ ಗುರುವೇ ಬ್ರಹ್ಮನಾಗದಿದ್ದರೆ ನಾನು ಹೇಗೆ ಬ್ರಹ್ಮನಾಗಲು ಸಾಧ್ಯ ಎಂದು ಚಿಂತಿಸಿದ ಶಿಷ್ಯನು ಈ ವಾಕ್ಯಕ್ಕೆ ಬೇರೆ ಅರ್ಥವನ್ನು ಗ್ರಹಿಸಿ ನಾನು ಬ್ರಹ್ಮನ ಅಧೀನ ಎಂದೇ ಗ್ರಹಿಸುತ್ತಾನೆ.

**ಕಥಂ ಸ್ವಶಿಷ್ಯಸ್ಯ ಮಮ ಸ್ವಾಶಿಷ್ಯಬ್ರಹ್ಮತಾಂ ವದೇತ್ ।**
**ಕಥಂ ಚ ದುಃಖಿನೋऽಜ್ಞಸ್ಯ ಬ್ರಹ್ಮತ್ವಮಪಿ ಮೇऽಧುನಾ ॥ ೧೧೬.೩ ॥**

**ಅರ್ಥ–** ಸ್ವಶಿಷ್ಯಸ್ಯ = ತನ್ನ ಶಿಷ್ಯನಾದ, ಮಮ = ನನಗೆ, ಸ್ವಾಶಿಷ್ಯಬ್ರಹ್ಮತಾಂ = ತನ್ನ ಶಿಷ್ಯನಲ್ಲದ ಬ್ರಹ್ಮನ ಅಭೇದವನ್ನು, ಗುರುಃ = ಗುರುವು, ಕಥಂ = ಹೇಗೆ, ವದೇತ್ = ಹೇಳುತ್ತಾನೆ. ಚ = ಮತ್ತು, ದುಃಖಿನಃ = ದುಃಖವುಳ್ಳ, ಅಜ್ಞಸ್ಯ = ಅಜ್ಞಾನಿಯಾದ, ಮೇ= ನನಗೆ, ಬ್ರಹ್ಮತ್ವಮ್ ಅಪಿ = ಬ್ರಹ್ಮತ್ವವನ್ನಾದರೂ, ಅಧುನಾ ಏವ = ಈಗಲೇ, ಗುರುಃ= ಗುರುವು, ಕಥಂ = ಹೇಗೆ, ವದೇತ್ = ಹೇಳುತ್ತಾನೆ.

**ಅನುವಾದ–** ತನ್ನ ಶಿಷ್ಯನಾದ ನನಗೆ ನನ್ನ ಗುರುವು ಹೇಗೆ ತನ್ನ ಶಿಷ್ಯನಲ್ಲದ ಬ್ರಹ್ಮನ ಅಭೇದವನ್ನು ಹೇಳುತ್ತಾನೆ? ದುಃಖಿಯೂ ಅಜ್ಞನೂ ಆದ ನನಗೆ ಈಗಲೇ ಬ್ರಹ್ಮನಾಗಿದ್ದೇನೆ ಎಂದು ಹೇಗೆ ಹೇಳುತ್ತಾನೆ?

**ಭಾವವಿಲಾಸಿನೀ–** ವಿಮರ್ಶಾಂತರಾಣ್ಯಾಹ – **ಕಥಮಿತ್ಯಾದಿನಾ ॥** ಸ್ವಾಶಿಷ್ಯಬ್ರಹ್ಮತಾಂ ಸ್ವಾಶಿಷ್ಯಭೂತಂ ಪ್ರತ್ಯುತ ದೇವರೂಪಂ ಯತ್ ಬ್ರಹ್ಮ ತದ್ಭಾವವ್ । ಅಹಂ ತು ಶಿಷ್ಯತಯಾ ಸ್ವೋಪಾಸಕಃ। ಬ್ರಹ್ಮ ತು ಸ್ವಸ್ಯಾಪ್ಯುಪಾಸ್ಯಂ ತದೈಕ್ಯಂ ಮಮ ಕಥಂ ಬ್ರೂಯಾತ್ । ಬ್ರೂಯಾಚ್ಚೇತ್ ಬ್ರಹ್ಮೋಪಾಸನ ವನ್ಮದುಪಾಸನಮಪಿ ಕುತೋ ನ ಕುರ್ಯಾತ್ । ಅತಃ ಸ್ವೋಪಾಸ್ಯಬ್ರಹ್ಮೈಕ್ಯಮಪಿ ನೋಕ್ತವಾನ್ । ಕಿಂ ತ್ವಸ್ಯ ವಾಕ್ಯಸ್ಯಾನ್ಯೋಽರ್ಥೋಽಸ್ತೀತಿ ಮತಿಂ ಕೃತವಾನಿತಿ ಭಾವಃ । ದುಃಖಿನೋ ಜ್ಞಸ್ಯ ಮೇ ಇತಿ ಸಂಬಂಧಃ । ಬ್ರಹ್ಮತ್ವಂ ಸರ್ವಜ್ಞನಿತ್ಯಸುಖಿತ್ವ ರೂಪಬ್ರಹ್ಮತ್ವಮ್ । ಅಧುನಾ ಸ್ಯಾತ್ । ಭಾವ್ಯೈಕ್ಯಸ್ಯ ಕಥಂಚಿತ್ ಸಂಭವೇಽಪಿ ಅಸೀತಿ ಲಟೋಕ್ತವರ್ತಮಾನೈಕ್ಯಂ ಕಥಂ ಸ್ಯಾದಿತಿ ಸೂಚನಾಯಾಧುನೇತ್ಯುಕ್ತಮ್ ॥ ೧೧೬೩ ॥

**ವಿವರಣೆ–** ಶಿಷ್ಯನು ಗುರುವಿನ ಉಪಾಸಕ. ಗುರುವಾದರೋ ಬ್ರಹ್ಮನ ಉಪಾಸನೆ ಮಾಡುತ್ತಾನೆ. ನಾನೇ ಬ್ರಹ್ಮನಾಗಿದ್ದರೆ ಗುರುವು ನನ್ನ ಉಪಾಸನೆಯನ್ನೇ ಮಾಡಬೇಕಾಗಿದ್ದಿತು. ನನ್ನ ಉಪಾಸನೆಯನ್ನು ಮಾಡದೇ ಬ್ರಹ್ಮನನ್ನು ಉಪಾಸನೆ ಮಾಡಿ ನನ್ನನ್ನು ಹೇಗೆ ಬ್ರಹ್ಮನೆಂದು ಹೇಳುತ್ತಾನೆ? ತತ್ತ್ವಮಸಿ ಎಂದು ವರ್ತಮಾನ ಕಾಲದಲ್ಲಿಯೇ ನೀನು ಬ್ರಹ್ಮನೆಂದು ಹೇಳುತ್ತಿದ್ದಾನೆ. ಭವಿಷ್ಯತ್ಕಾಲದಲ್ಲಿ ಒಂದು ಪಕ್ಷ ಅನ್ಯವಾದಿಗಳು ಹೇಳುವಂತೆ ಬ್ರಹ್ಮನ ಐಕ್ಯವು ಬರಬಹುದು. ಆದರೆ ವರ್ತಮಾನಕಾಲದಲ್ಲಿ ದುಃಖಿಯೂ, ಅಜ್ಞನೂ ಆಗಿರುವ ನನಗೆ ಈಗಲೇ ಬ್ರಹ್ಮೈಕ್ಯವು ಉಂಟಾಗುತ್ತದೆ ಎಂದು ಚಿಂತನೆಯನ್ನು ಮಾಡುತ್ತಾನೆ.

**ಪ್ರಜಾಮೂಲಬ್ರಹ್ಮತಾ ಸ್ಯಾತ್ ಕಥಂ ತಾಸ್ವಧಮಸ್ಯ ಮೇ ।**
**ಪ್ರಾಣಸಂಸ್ಥಸ್ಯ ಜೀವಸ್ಯ ಪ್ರಾಣಾಖ್ಯಬ್ರಹ್ಮತಾ ಚ ನ ।**
**ಸುಪ್ತೌ ಚ ಯೇನ ಸಂಪನ್ನಃ ಸೋಽಸುಪ್ತೌ ಸ್ಯಾಮಹಂ ಕಥಂ ॥ ೧೧೬೪ ॥**

**ಅರ್ಥ–** ಪ್ರಜಾಮೂಲಬ್ರಹ್ಮತಾ = ಪ್ರಜಾ = ಜೀವಿಗಳಿಗೆ, ಮೂಲ = ಮೂಲಕಾರಣನಾದ, ಬ್ರಹ್ಮತಾ = ಬ್ರಹ್ಮನ ಅಭೇದವು, ತಾಸು= ಆ ಪ್ರಜೆಗಳಲ್ಲಿ, ಅಧಮಸ್ಯ = ಕನಿಷ್ಠನಾದ, ಮೇ = ನನಗೆ, ಕಥಂ = ಹೇಗೆ, ಸ್ಯಾತ್ = ಬಂದೀತು. ಪ್ರಾಣಸಂಸ್ಥಸ್ಯ = ಪ್ರಾಣನನ್ನು ಆಶ್ರಯಿಸಿದ, ಜೀವಸ್ಯ = ಜೀವನಿಗೆ, ಪ್ರಾಣಾಖ್ಯಬ್ರಹ್ಮತಾ ಚ = ಪ್ರಾಣನೆಂಬ ಬ್ರಹ್ಮನ ಅಭೇದವೂ ಕೂಡ, ನ = ಇಲ್ಲ. ಸುಪ್ತೌ = ಸುಷುಪ್ತಿಯಲ್ಲಿ, ಅಹಂ = ನಾನು, ಯೇನ = ಯಾವ ಪರಮಾತ್ಮನಿಂದ, ಸಂಪನ್ನಃ = ಸಂಯೋಗವನ್ನು ಪಡೆದವನಾಗುತ್ತೇನೋ, ಸ = ಆ ಬ್ರಹ್ಮನೇ, ಅಸುಪ್ತೌ = ಜಾಗ್ರದವಸ್ಥೆಯಲ್ಲಿ, ಕಥಂ = ಹೇಗೆ, ಸ್ಯಾಮ್ = ಆದೇನು?

**ಅನುವಾದ– ಪ್ರಜೆಗಳಲ್ಲಿ ಅಧಮನಾದ ನನಗೆ ಪ್ರಜೆಗಳಿಗೆ ಮೂಲನಾದ ಬ್ರಹ್ಮಭಾವವು ಹೇಗೆ ಉಂಟಾಗುತ್ತದೆ? ಪ್ರಾಣನನ್ನು ಆಶ್ರಯಿಸಿದ ಜೀವನಿಗೆ ಪ್ರಾಣವೆಂಬ ಬ್ರಹ್ಮತ್ವವು ಕೂಡುವುದಿಲ್ಲ. ಸುಷುಪ್ತಿಯಲ್ಲಿ ಯಾವನ ಜೊತೆಯಲ್ಲಿ ಸಂಯೋಗವನ್ನು**

ಪಡೆಯುತ್ತೇನೆಯೋ ಅಂತಹ ನಾನು ಜಾಗ್ರದವಸ್ಥೆಯಲ್ಲಿ ಬ್ರಹ್ಮನೇ ಆಗುವುದು ಹೇಗೆ?

**ಭಾವವಿಲಾಸಿನೀ–** ತಾಸು ಪ್ರಜಾಸು । ಪ್ರಾಣಸಂಸ್ಥಂ ಮನ ಇತಿ ಶ್ರುತೇಃ ಪ್ರಾಣಾಧಾರಸ್ಯ ಜೀವಸ್ಯ । ನ ಯುಕ್ತಿಯುಕ್ತಾ ನ । ಯೇನೇಶೇನ । ಸಃ ಈಶಃ ॥ ೧೧೬೨ ॥

**ವಿವರಣೆ–** ಶ್ವೇತಕೇತುವಿನ ಚಿಂತನ ಪ್ರಕಾರವನ್ನೇ ತಿಳಿಸುತ್ತಾರೆ. ಸನ್ಮೂಲಾಃ ಸೌಮ್ಯೇಮಾಸರ್ವಾಃ ಪ್ರಜಾಃ' ಎಂದು ಈ ಪ್ರಕರಣದಲ್ಲಿ ಎಲ್ಲ ಪ್ರಜೆಗಳಿಗೂ ಬ್ರಹ್ಮನು ಆಧಾರನೆಂದು ಹೇಳಲಾಗಿದೆ. ಅಂತಹ ಪ್ರಜೆಗಳಲ್ಲಿ ಒಬ್ಬನಾದ ನಾನು ಅಧಮನಾದವನು. ನಾನು ಹೇಗೆ ಎಲ್ಲ ಪ್ರಜೆಗಳಿಗೂ ಆಧಾರನಾಗುತ್ತೇನೆ? ಹಾಗೆಯೇ ಇದೇ ಪ್ರಕರಣದಲ್ಲಿ 'ಪ್ರಾಣ ಬಂಧನಂ ಹಿ ಸೌಮ್ಯಮನಃ' ಎಂಬ ವಾಕ್ಯವಿದೆ. ಅಲ್ಲಿ ಪ್ರಾಣ ಎಂದರೆ ಬ್ರಹ್ಮ ಮನಃ ಎಂದರೆ ಜೀವ. ಪ್ರಾಣ ಎಂಬ ಬ್ರಹ್ಮನನ್ನು ಆಶ್ರಯಿಸಿದ ನಾನು ಪ್ರಾಣನೇ ಆಗುವುದು ಹೇಗೆ? ಹಾಗೆಯೇ ಇದೇ ಪ್ರಕರಣದಲ್ಲಿ 'ಸತಿ ಸಂಪದ್ಯ ನ ವಿದುಃ' ಎಂಬ ವಾಕ್ಯದಲ್ಲಿ ಸುಷುಪ್ತಿಯಲ್ಲಿ ಜೀವನು ಪರಮಾತ್ಮನ ಸಂಯೋಗವನ್ನು ಪಡೆಯುತ್ತಾನೆ ಎಂದು ಹೇಳಲಾಗಿದೆ. ಸುಷುಪ್ತಿಯಲ್ಲಿ ಸಂಯೋಗವನ್ನು ಪಡೆಯುವ ನಾನು ಜಾಗ್ರದವಸ್ಥೆಯಲ್ಲಿ ಹೇಗೆ ಬ್ರಹ್ಮನೇ ಆಗುತ್ತೇನೆ ಎಂದು ಶ್ವೇತಕೇತುವಿನ ಚಿಂತನೆ.

**ಕರುಣಾಪೂರ್ಣಗುರುಣಾ ತನ್ನಾತ್ರ ಬ್ರಹ್ಮತೋಚ್ಯತೇ ।**
**ಮಮೇತಿ ನಿರ್ಮಮೋ ಭೂತ್ವಾ ಪುನರ್ಮೀಮಾಂಸಕೋऽಭವತ್ ॥೧೧೬೩॥**

**ಅರ್ಥ–** ತತ್ = ಆದ್ದರಿಂದ, ಕರುಣಾಪೂರ್ಣಗುರುಣಾ = ಕರುಣಾಶಾಲಿಗಳಾದ ಗುರುಗಳಿಂದ, ಅತ್ರ = ಈ ಸಂದರ್ಭದಲ್ಲಿ, ಮಮ = ನನಗೆ, ಬ್ರಹ್ಮತಾ = ಬ್ರಹ್ಮಾಭೇದವು, ನ ಉಚ್ಯತೇ = ಹೇಳಲ್ಪಡುತ್ತಿಲ್ಲ, ಇತಿ = ಈ ರೀತಿಯಾಗಿ ವಿಮರ್ಶೆ ಮಾಡಿ, ನಿರ್ಮಮಃ = ಅಹಂಕಾರ ರಹಿತನು, ಭೂತ್ವಾ = ಆಗಿ, ಶಿಷ್ಯಃ = ಶಿಷ್ಯನು, ಪುನಃ = ಮತ್ತೊಮ್ಮೆ ಮೀಮಾಂಸಕಃ = ವಿಚಾರ ಪರವಶನೂ, ಅಭವತ್ = ಆದನು.

**ಅನುವಾದ–** ಕರುಣಾಪೂರ್ಣರಾದ ಗುರುಗಳು ಆದ್ದರಿಂದ ಇಲ್ಲಿ ನನಗೆ ಬ್ರಹ್ಮಭಾವವನ್ನು ಹೇಳುತ್ತಿಲ್ಲ ಎಂದು ತನ್ನ ಅಹಂಕಾರವನ್ನು ತ್ಯಜಿಸಿ ಪುನಃ ಮೀಮಾಂಸಕನಾದನು.

**ಭಾವವಿಲಾಸಿನೀ–** ತತ್ತಸ್ಮಾತ್ । ಇತಿ ಏವಂ ವಿಮೃಶ್ಯ ॥ ೧೧೬೩ ॥

**ವಿವರಣೆ–** ಹೀಗೆ ವಿಚಾರವನ್ನು ಮಾಡಿ ಕರುಣಾಪೂರ್ಣನಾದ ತನ್ನ ಗುರುವು ಹಿತವಾದ ಮತ್ತು ಅಬಾಧಿತವಾದ ತತ್ತ್ವವನ್ನೇ ಹೇಳಿದ್ದಾನೆಂದು ತಿಳಿದು ತನ್ನ ಬ್ರಹ್ಮಭಾವವನ್ನು ವಾಕ್ಯದ ಅರ್ಥವೆಂದು ಸ್ವೀಕಾರ ಮಾಡದೆ ಶ್ವೇತಕೇತುವು ಪುನಃ ವಿಚಾರಪರನಾದನು ಎಂದು ಅಭಿಪ್ರಾಯ.

**ಅಸ್ತಿ ಸಾದೃಶ್ಯಮಾತ್ರಾಚ್ಚ ವಸ್ತು ವಸ್ತ್ವಂತರಾತ್ಮನಾ ।**
**ಕಥ್ಯಮಾನಂ ತತ್ರ ತತ್ರ ಸೇಯಂ ವಾಕ್ ತಾವತೈವ ನ ॥ ೧೧೬೬ ॥**

**ಅರ್ಥ–** ಚ = ಮತ್ತು, ಏಕಂ ವಸ್ತು = ಒಂದು ವಸ್ತುವು, ಸಾದೃಶ್ಯಮಾತ್ರಾತ್ = ಇನ್ನೊಂದು ವಸ್ತುವಿನ ಹೋಲಿಕೆಯಿರುವ ಕಾರಣದಿಂದಲೇ, ವಸ್ತ್ವಂತರಾತ್ಮನಾ = ಇನ್ನೊಂದು ವಸ್ತುವಿನಿಂದ ಅಭಿನ್ನವೆಂಬುದಾಗಿ, ಕಥ್ಯಮಾನಂ = ಹೇಳಲ್ಪಡುತ್ತಿರುವುದು, ತತ್ರ ತತ್ರ = ಅಲ್ಲಲ್ಲಿ, ಅಸ್ತಿ = ಇದೆ. ಕಿಂತು = ಆದರೆ, ಇಯಂ ವಾಕ್ = ತತ್ವಮಸಿ ಎಂಬೀ ವಾಕ್ಯವು, ತಾವತಾ ಏವ = ಸಾದೃಶ್ಯ ಐಕ್ಯದಿಂದಲೇ ಪ್ರವೃತ್ತವಾಗಿಲ್ಲ.

**ಅನುವಾದ–** ಕೇವಲ ಸಾದೃಶ್ಯವನ್ನು ಅವಲಂಬಿಸಿ ಒಂದು ವಸ್ತುವನ್ನು ಇನ್ನೊಂದು ವಸ್ತುವೆಂದು ಹೇಳುವ ವಾಕ್ಯಗಳು ಅಲ್ಲಲ್ಲಿ ಕಂಡುಬರುತ್ತವೆ. ಆದರೆ ಈ ವಾಕ್ಯಕ್ಕೆ ಅಷ್ಟೇ ಅಭಿಪ್ರಾಯವಲ್ಲ.

**ಭಾವವಿಲಾಸಿನೀ–** ತತ್ರ ಸಿಂಹೋ ದೇವದತ್ತ ಇತ್ಯಾದೌ । ಇಯಂ ತತ್ತ್ವಮಸೀತ್ಯಾದಿರೂಪಾ । ತಾವತಾ ಸಾದೃಶ್ಯೈಕ್ಯಮಾತ್ರೇಣ ॥ ೧೧೬೬ ॥

**ವಿವರಣೆ–** 'ಸಿಂಹೋ ದೇವದತ್ತಃ' ಮುಂತಾದ ವಾಕ್ಯಗಳು ಕೇವಲ ಸಾದೃಶ್ಯವನ್ನು ಅವಲಂಬಿಸಿ ಪ್ರವೃತ್ತವಾಗುತ್ತವೆ. ಅಲ್ಲಿ ಅದಕ್ಕಿಂತ ಹೆಚ್ಚಿನ ಅರ್ಥವಿಲ್ಲ. ಆದರೆ ನನ್ನ ಗುರುಗಳು ಅದಕ್ಕಿಂತ ಹೆಚ್ಚಿನ ಅರ್ಥವನ್ನು ಅನುಸಂಧಾನ ಮಾಡಿ ಈ ವಾಕ್ಯವನ್ನು ಹೇಳಿದ್ದಾರೆ ಎಂದು ವಿಚಾರ ಮಾಡುತ್ತಾನೆ.

**ಪ್ರತೀಚಃ ಸ್ವನಿಯಂತುಶ್ಚ ಕಥಂ ಸಾದೃಶ್ಯಮಾತ್ರತಃ ।**
**ಪರಾಚೀಶನಿಯಮ್ಯೇ ಚ ಮಯೀಯಂ ವಾಕ್ ಪ್ರವರ್ತತಾಂ ॥ ೧೧೬೭ ॥**

**ಅರ್ಥ–** ಪ್ರತೀಚಃ = ನನ್ನ ಅಂತರ್ಗತನಾದ, ಸ್ವನಿಯಂತುಃ ಚ = ನನಗೆ ನಿಯಾಮಕನೂ ಆದ, ಬ್ರಹ್ಮಣಃ = ಬ್ರಹ್ಮನ, ಸಾದೃಶ್ಯಮಾತ್ರಾತ್ = ಸಾದೃಶ್ಯವು (ನನಗೆ) ಇರುವ ಕಾರಣದಿಂದಲೇ, ಪರಾಚಿ= ಬ್ರಹ್ಮನಿಂದ ಹೊರಗೆ ಇರುವ, ಈಶನಿಯಮ್ಯೇ ಚ = ಪರಮಾತ್ಮನಿಂದ ನಿಯಮ್ಯನೂ ಆದ, ಮಯಿ= ಜೀವನಾದ ನನ್ನಲ್ಲಿ, ಇಯಂ ವಾಕ್ = ತತ್ವಮಸಿ ಎಂಬೀ ವಾಕ್ಯವು, ಕಥಂ = ಹೇಗೆ, ಪ್ರವರ್ತತಾಂ = ಪ್ರವೃತ್ತಿಮಾಡಬೇಕು.

**ಅನುವಾದ–** ನನ್ನ ಅಂತರ್ಗತನೂ, ನಿಯಾಮಕನೂ ಆದ ಬ್ರಹ್ಮನಿಂದ ಅವನಿಗಿಂತ ಬಾಹ್ಯನೂ, ಅವನಿಂದ ನಿಯಮ್ಯನೂ ಆದ ನನಗೆ ಏಕತ್ವವನ್ನು ಆಪಾತತಃ ಹೇಳುವ ಈ ವಾಕ್ಯವು ಕೇವಲ ಸಾದೃಶ್ಯದಿಂದ ಹೇಗೆ ಪ್ರವೃತ್ತವಾಗುತ್ತದೆ ಎಂದು ಚಿಂತಿಸುತ್ತಾನೆ.

**ಭಾವವಿಲಾಸಿನೀ–** ಸ್ವನಿಯಂತುಶ್ಚ ಬ್ರಹ್ಮಣಃ ಸಾದೃಶ್ಯಮಾತ್ರತಃ ಕಥಂ ಪ್ರವರ್ತತಾಮಿತಿ ಸಂಬಂಧಃ॥

**ವಿವರಣೆ–** ಪುನಃ ಶ್ವೇತಕೇತುವಿನ ಚಿಂತನೆ ಪ್ರಕಾರವನ್ನೇ ಹೇಳುತ್ತಾರೆ. ಇಲ್ಲಿ ಪ್ರತ್ಯಕ್ತ್ವ, ಪರಾಕ್ತ್ವ ನಿಯಮ್ಯತ್ವ ಮತ್ತು ನಿಯಾಮಕತ್ವ ಮೊದಲಾದ ಅನೇಕ ಧರ್ಮಗಳಿವೆ. ಹೀಗಿರುವಾಗ ಕೇವಲ ಸಾದೃಶ್ಯವನ್ನು ಅವಲಂಬಿಸಿ ವಾಕ್ಯವು ಪ್ರವೃತ್ತವಾಗಲಾರದು. ಆದಕ್ಕಿಂತ ಹೆಚ್ಚಿನ ವಿಷಯವಿರಬೇಕೆಂದು ಊಹಿಸುತ್ತಾನೆ.

**ಪ್ರತಿಬಿಂಬಂ ದರ್ಪಣಸ್ಥಂ ಮುಖಮಿತ್ಯೇವ ಲೌಕಿಕಾಃ ।**
**ವದಂತಿ ತನ್ನಿಯಮ್ಯೋಽಸೌ ಪರಾಕ್ಚ ಪ್ರತಿದೃಶ್ಯತೇ ॥ ೧೧೬೮ ॥**

**ಅರ್ಥ–** (ಹೀಗೆ ವಿಚಾರ ಮಾಡುತ್ತಾ ಶಿಷ್ಯನು ಮುಂದುವರೆಯುತ್ತಾನೆ) ಲೌಕಿಕಾಃ = ಲೋಕದ ಜನರು, ದರ್ಪಣಸ್ಥಂ = ಕನ್ನಡಿಯಲ್ಲಿ ಇರುವ, ಪ್ರತಿಬಂಧಂ = ಪ್ರತಿಬಂಧವನ್ನು, ಮುಖಂ ಇತಿ ಏವ = ಮುಖವೆಂಬುದಾಗಿಯೇ, ವದಂತಿ = ಹೇಳುತ್ತಾರೆ, ಅಸೌ = ಈ ಪ್ರತಿಬಿಂಬವು, ತನ್ನಿಯಮ್ಯಃ = ಆ ಬಿಂಬದಿಂದ ನಿಯಮ್ಯವಾಗಿದೆ. ಚ= ಮತ್ತು, ಪರಾಕ್= ಹೊರಗೆ, ಪ್ರತಿದೃಶ್ಯತೇ= ಕಾಣುತ್ತದೆ.

**ಅನುವಾದ–** ದರ್ಪಣದಲ್ಲಿರುವ ಪ್ರತಿಬಿಂಬವನ್ನು ಲೌಕಿಕರು ಮುಖವೆಂದೇ ವ್ಯವಹರಿಸುತ್ತಾರೆ. ಬಿಂಬಪ್ರತಿಬಿಂಬಗಳಿಗೆ ನಿಯಮ್ಯನಿಯಾಮಕಭಾವವು ಪರಾಕ್ ಪ್ರತ್ಯಕ್ ಭಾವವು ಕಂಡುಬರುತ್ತದೆ.

**ಭಾವವಿಲಾಸಿನೀ–** ತನ್ನಿಯಮ್ಯಃ ತೇನ ಬಿಂಬೇನ ನಿಯಮ್ಯಃ । ಅಸೌ ಪ್ರತಿಬಿಂಬಃ । ಪ್ರತಿದೃಶ್ಯತೇ ಆಭಿಮುಖ್ಯೇನ ದೃಶ್ಯತೇ ॥ ೧೧೬೮ ॥

**ವಿವರಣೆ–** ಆ ಹೆಚ್ಚಿನ ಅಂಶ ಯಾವುದೆಂದು ಹುಡುಕುತ್ತಾ ಶ್ವೇತಕೇತುವು ಬಿಂಬ ಪ್ರತಿಬಿಂಬಗಳ ವಿರುದ್ಧ ಧರ್ಮಗಳನ್ನು ಮತ್ತು ಐಕ್ಯವ್ಯವಹಾರವನ್ನು ಗಮನಿಸುತ್ತಾನೆ.

**ಅತಸ್ತದ್ವಿಧತಾಮೇವ ಲಘೂಕ್ತ್ಯಾ ಮಯಿ ಬೋಧಯನ್ ।**
**ಮತಿಂ ಪ್ರಚಾರಯಂಶ್ಚೋಚೇ ನೋ ಚೇದಾಚಾರ್ಯತಾ ಕಥಮ್ ॥೧೧೬೯॥**

**ಅರ್ಥ–** ಅತಃ = ಆದ್ದರಿಂದ, ಆಚಾರ್ಯಃ = ನನ್ನ ಗುರುವು, ತದ್ವಿಧತಾಂ ಏವ = ಆ ಪರಮಾತ್ಮನ, ಅಂತಹ ಸಂಬಂಧವನ್ನೇ, ಮಯಿ= ನನ್ನಲ್ಲಿ, ಲಘೂಕ್ತ್ಯಾ = ಸಂಕ್ಷಿಪ್ತವಾದ ವಾಕ್ಯದಿಂದ, ಬೋಧಯನ್ = ತಿಳಿಸುತ್ತಾ, ಮತಿಂ = ನನ್ನ ಬುದ್ಧಿಯನ್ನು ಪ್ರಚಾರಯಂಶ್ಚ= ತೀಕ್ಷ್ಣಗೊಳಿಸುತ್ತಾ ಕೂಡ (ತೀಕ್ಷ್ಣಗೊಳಿಸುವ ಉದ್ದೇಶದಿಂದಲೂ), ಊಚೇ = ತತ್ವಮಸಿ ಎಂದು ಹೇಳಿದನು. ನೋ ಚೇತ್ = ಅವನಿಗೆ ಈ ಅಭಿಪ್ರಾಯವಿಲ್ಲದಿದ್ದರೆ, ಆಚಾರ್ಯತಾ = ಗುರುತ್ವವು, ಅಸ್ಯ = ಅವನಿಗೆ, ಕಥಂ = ಹೇಗೆ, ಸ್ಯಾತ್ = ಇದ್ದೀತು? (ಕೂಡಿೀತು)

**ಅನುವಾದ–** ಆದ್ದರಿಂದ ಅಂತಹ ಸಂಬಂಧವೇ ನನಗೂ ಬ್ರಹ್ಮನಿಗೂ ಇದೆ ಎಂದು ಅಲ್ಪವಾದ ಮಾತಿನಿಂದ ಬೋಧಿಸಲು ಮತ್ತು ನನ್ನ ಬುದ್ಧಿಯನ್ನು ತೀವ್ರಗೊಳಿಸಲು

**ಗುರುಗಳು ಈ ಮಾತನ್ನು ಹೇಳಿದ್ದಾರೆ. ಇಲ್ಲದಿದ್ದರೆ ಅವರಿಗೆ ಗುರುತ್ವವು ಹೇಗೆ ಕೂಡುತ್ತದೆ?**

**ಭಾವವಿಲಾಸಿನೀ–** ಅತಃ ಬ್ರಹ್ಮಣಃ ಬಿಂಬಸ್ವಭಾವತ್ವಾತ್ ಮಮ ಚ ಪ್ರತಿಬಿಂಬಸ್ವಭಾವತ್ವಾತ್ । ತದ್ವಿಗತಾಂ ಪ್ರತಿಬಿಂಬವತ್ ಬಿಂಬಭೂತಪರಮಾತ್ಮನಿಯಮ್ಯತಾಮ್ । ತಸ್ಮಾತ್ಪರಾಕ್ತ್ವಂ ತದಾಭಿಮುಖ್ಯಂ ಚೇತ್ಯರ್ಥಃ । ಲಘೂಕ್ತ್ಯಾ ತ್ವಂ ತದಸೀತಿ ಅಕ್ಷರಚತುಷ್ಟಯಾತ್ಮಕವಾಕ್ಯೋಕ್ತ್ಯಾ । ನೋ ಚೇತ್ ನಿಯಮ್ಯತ್ವತದಧೀನತ್ವತತ್ಸಾದೃಶ್ಯಪರಾಕ್ತ್ವಾಽಽಭಿಮುಖ್ಯರೂಪಾಣಾಂ ಬಹೂನಾಮರ್ಥಾನಾಂ ಲಘೂಕ್ತ್ಯಾ ಕಥನಕುಶಲೋ ನೋಚೇತ್ ॥ ೧೧೬೯ ॥

**ವಿವರಣೆ–** ಇಲ್ಲಿ ಉದ್ದಾಲಕರು ಬ್ರಹ್ಮನ ನಿಯಾಮಕತ್ವ ಮತ್ತು ಪ್ರತ್ಯಕ್ತ್ವವನ್ನು ಜೀವನ ನಿಯಮ್ಯತ್ವ ಮತ್ತು ಪರಾಕ್ತ್ವವನ್ನು, ಸಾದೃಶ್ಯವನ್ನೂ ತಿಳಿಸಬೇಕಾಗಿದೆ. ಆದ್ದರಿಂದ ತ್ವಂ ತದಸಿ' ಎಂಬ ನಾಲ್ಕು ಅಕ್ಷರದ ವಾಕ್ಯದಿಂದ ಈ ಎಲ್ಲ ಧರ್ಮಗಳನ್ನೂ ತಿಳಿಸುವ ಕೌಶಲವನ್ನು ಗುರುಗಳು ಹೊಂದಿದ್ದಾರೆ ಎಂದು ತಿಳಿಯುತ್ತಾನೆ.

**ತಸ್ಮಾತ್ ಪ್ರತ್ಯಕ್ಪರಾಗ್ಭಾವೋ ನಿಯಾಮಕನಿಯಮ್ಯತಾ ।**
**ಅಶಬ್ದೋಚ್ಚಾರಣಸ್ಯೇವ ಸಾದೃಶ್ಯಂ ಚಾಲ್ಪಮೇವ ಮೇ ।**
**ಇತಿ ಪ್ರಬುಧ್ಯ ದುರ್ಬುದ್ಧಿಂ ತ್ಯಕ್ತ್ವಾಭಕ್ತೋಽಭವತ್ ಪ್ರಭೋಃ॥ ೧೧೭೦ ॥**

**ಅರ್ಥ–** ತಸ್ಮಾತ್ = ಆದ್ದರಿಂದ, ಆವಯೋಃ = ನಮ್ಮಿಬ್ಬರಿಗೆ, ಪ್ರತ್ಯಕ್‌ಪರಾಗ್ಭಾವಃ = ಪ್ರತ್ಯಕ್‌ಪರಾಕ್ ಸಂಬಂಧವು, ನಿಯಾಮಕನಿಯಮ್ಯತಾ ಚ = ನಿಯಾಮಕ ನಿಯಮ್ಯತ್ವ ಸಂಬಂಧವೂ ಕೂಡ, ಸಃ = ಇದೆ. ಚ = ಮತ್ತು, ಅಶಬ್ದೋಚಾರಣಸ್ಯ= ಶಬ್ದೋಚಾರವಿಲ್ಲದ, ಪ್ರತಿಬಿಂಬಸ್ಯ = ಕನ್ನಡಿಯಲ್ಲಿ ಕಂಡ ಪ್ರತಿಬಿಂಬಕ್ಕೆ, ಅಲ್ಪಂ = ಸ್ವಲ್ಪ, ಬಿಂಬಸಾದೃಶ್ಯಂ ಏವ = ಬಿಂಬವಾದ ಮುಖದ ಹೋಲಿಕೆಯಿರುವಂತೇ, ಮೇ = ಜೀವನಾದ ನನಗೆ, ಬ್ರಹ್ಮನಃ = ಬ್ರಹ್ಮನ, ಅಲ್ಪಮ್ = ಸ್ವಲ್ಪ, ಸಾದೃಶ್ಯಂ = ಸಾದೃಶ್ಯವು, ಅಸ್ತಿ= ಇದೆ. ಇತಿ = ಹೀಗೆ, ಶಿಷ್ಯಃ= ಶಿಷ್ಯನು, ಪ್ರಬುದ್ಧ್ಯ = ತಿಳಿದುಕೊಂಡು, ದುರ್ಬುದ್ಧಿಂ= ಅನ್ಯಥಾ ಜ್ಞಾನವನ್ನು, ತ್ಯಕ್ತ್ವಾ = ಪರಿಹಾರ ಮಾಡಿಕೊಂಡು, ಪ್ರಭೋಃ = ಭಗವಂತನ, ಭಕ್ತಃ = ಭಕ್ತನು, ಅಭವತ್ = ಆದನು.

**ಅನುವಾದ–** ಆದ್ದರಿಂದ ನನಗೂ ಮತ್ತು ಬ್ರಹ್ಮನಿಗೂ ಪ್ರತ್ಯಕ್‌ಪರಾಗ್ ಭಾವವೂ, ನಿಯಮ್ಯನಿಯಾಮಕಭಾವವೂ ಇವೆ. ಆದ್ದರಿಂದ ಪ್ರತಿಬಿಂಬಕ್ಕೆ ಹೇಗೆ ಬಿಂಬದ ಅಲ್ಪಸಾದೃಶ್ಯವಿದೆಯೋ ಹಾಗೆಯೇ ನನಗೂ ಬ್ರಹ್ಮನ ಅಲ್ಪಸಾದೃಶ್ಯವೇ ಇದೆ ಎಂಬ ವಿವೇಕವನ್ನು ಹೊಂದಿ ದುರ್ಬುದ್ಧಿಯನ್ನು ತ್ಯಜಿಸಿ ಪರಮಾತ್ಮನ ಭಕ್ತನಾದನು.

**ಭಾವವಿಲಾಸಿನೀ–** ಅಶಬ್ದೋಚ್ಚಾರಣಸ್ಯೇವ ಶಬ್ದೋಚ್ಚಾರಣರಹಿತಪ್ರತಿಮುಖಸ್ಯೇವ । ಯಥಾ ಶಬ್ದೋಚ್ಚಾರಣಸಹಿತಮುಖಸ್ಯ ತದ್ರಹಿತಪ್ರತಿಮುಖಸ್ಯ ಚ ನೈಕ್ಯಂ ನಾಪಿ ಸರ್ವಸಾದೃಶ್ಯಂ ತಥಾ

ಮೇ ಸಾದೃಶ್ಯಂ ಬ್ರಹ್ಮಸಾದೃಶ್ಯಂ ಅಲ್ಪಂ ತತ್ ಸ್ವಾತಂತ್ರ್ಯಾಭಾವಾತ್ । ಚಶಬ್ದಸಮುಚ್ಚಿತಮೈಕ್ಯಂ ಚ ಅಲ್ಪಮ್। ಕಿಂಚಿತ್ ಸಾದೃಶ್ಯಾದಿರೂಪಂ ನತು ಸರ್ವಥೈಕ್ಯಮಿತ್ಯರ್ಥಃ ॥ ೧೧೭೦ ॥

**ವಿವರಣೆ–** ಬಿಂಬಪ್ರತಿಬಿಂಬಗಳಲ್ಲಿರುವ ಸಾದೃಶ್ಯವು ಅಲ್ಪವಾದುದು. ಆ ಕಾಲದಲ್ಲಿ ಸಾದೃಶ್ಯವಿದ್ದರೂ ಬಿಂಬವು ಶಬ್ದೋಚ್ಚಾರವನ್ನು ಮಾಡುತ್ತದೆ, ಪ್ರತಿಬಿಂಬವು ಶಬ್ದೋಚ್ಚಾರಣೆಯನ್ನು ಮಾಡುವುದಿಲ್ಲ. ಆದ್ದರಿಂದ ಅಲ್ಲಿ ಹೇಗೆ ಸಾದೃಶ್ಯವು ಅಲ್ಪವೋ, ಹಾಗೆಯೇ ನನಗೂ ಮತ್ತು ಬ್ರಹ್ಮನಿಗೂ ಇರುವ ಸಾದೃಶ್ಯ ಅತ್ಯಲ್ಪವಾದುದು ಎಂದು ತಿಳಿಯುತ್ತಾನೆ.

**ಅಥಾಪಿ ಕೃಪಯಾ ಶಿಷ್ಯಸ್ಯಾಯೋಗ್ಯಾರ್ಥೇ ಪ್ರಮಾದತಃ ।**
**ಗತಿಂ ನಿವಾರಯನ್ ಸೂತ್ರಶಕುನ್ಯಾದೀನ್ನ್ಯದರ್ಶಯತ್ ॥ ೧೧೭೧ ॥**

**ಅರ್ಥ–** ಅಥಾಪಿ = ಶಿಷ್ಯನು ವಿಚಾರ ಮಾಡಿ ಅರ್ಥವನ್ನು ನಿರ್ಣಯಿಸಿಕೊಳ್ಳಲು ಸಮರ್ಥನಾಗಿದ್ದರೂ ಕೂಡ, ಕೃಪಯಾ = ಕೃಪೆಯಿಂದ, ಅಯೋಗ್ಯಾರ್ಥೇ = ತಪ್ಪಾದ ಅರ್ಥದ ವಿಷಯದಲ್ಲಿ, ಪ್ರಮಾದತಃ = ಪ್ರಮಾದದಿಂದ ಉಂಟಾಗಬಹುದಾದ, ಶಿಷ್ಯಸ್ಯ = ಶಿಷ್ಯನ, ಗತಿಂ = ಪ್ರವೃತ್ತಿಯನ್ನು (ಜ್ಞಾನವನ್ನು) ನಿವಾರಯನ್ = ಪರಿಹಾರ ಮಾಡುತ್ತಾ, ಗುರುಃ = ಗುರುವು, ಸೂತ್ರಶಕುನ್ಯಾದೀನ್ = ಸೂತ್ರ ಶಕುನಿ ಮೊದಲಾದವುಗಳನ್ನು, ನ್ಯದರ್ಶಯತ್ = ದೃಷ್ಟಾಂತಗಳನ್ನಾಗಿ ಪ್ರದರ್ಶಿದರು.

**ಅನುವಾದ–** ಆದರೂ ಸಹ ಶಿಷ್ಯನಿಗೆ ಪ್ರಮಾದದಿಂದಲಾದರೂ ಅಯೋಗ್ಯಾರ್ಥದ ಜ್ಞಾನವು ಬರಬಾರದೆಂಬ ದೃಷ್ಟಿಯಿಂದ ಗುರುವು ಶಕುನಿ ಸೂತ್ರಾದಿಗಳ ದೃಷ್ಟಾಂತಗಳನ್ನು ಪ್ರದರ್ಶಿಸಿದರು.

**ಭಾವವಿಲಾಸಿನೀ–** ಅಥಾಪಿ ಯುಕ್ತ್ಯಾ ಸ್ವಾಭಿಪ್ರಾಯಸ್ಯ ಬೋದ್ಧುಂ ಶಕ್ಯತ್ವೇಽಪಿ । ನ್ಯದರ್ಶಯತ್ ದೃಷ್ಟಾಂತತಯೋಕ್ತವಾನ್ ॥ ೧೧೭೧ ॥

**ವಿವರಣೆ–** ಹೀಗೆ ಶಿಷ್ಯನು ಚಿಂತನೆ ಮಾಡಿ ಯುಕ್ತಿಯಿಂದಲೇ ಗುರುಗಳ ಅಭಿಪ್ರಾಯವನ್ನು ಮತ್ತು ಪರಮತತ್ವವನ್ನು ತಿಳಿದವನಾದರೂ, ಗುರುಗಳು ಶಿಷ್ಯನ ಮೇಲೆ ಪರಮ ಕರುಣೆಯಿಂದ, ಶಿಷ್ಯನಿಗೆ ಎಂದೂ ಅನ್ಯಥಾ ಜ್ಞಾನ ಬರಬಾರದೆಂಬ ದೃಷ್ಟಿಯಿಂದ ದೃಷ್ಟಾಂತಗಳನ್ನು ಹೇಳುವ ಅಗತ್ಯವಿಲ್ಲದಿದ್ದರೂ ಶಕುನಿಸೂತ್ರಾದಿ ದೃಷ್ಟಾಂತಗಳನ್ನು ಹೇಳುತ್ತಾರೆ.

**ತದುಕ್ತಸ್ಪಷ್ಟದೃಷ್ಟಾಂತೈಃ ಸ್ವಯೋಗ್ಯಾಂ ಪ್ರತಿಬಿಂಬತಾಂ ।**
**ಜ್ಞಾತ್ವೇಶಾಧೀನತಾಬೋಧಾದಸ್ತಬ್ಧೋಽಭೂದಿತಿ ಸ್ಥಿತಂ ॥ ೧೧೭೨ ॥**

**ಅರ್ಥ–** ತದುಕ್ತಸ್ವಷ್ಟದೃಷ್ಟಾಂತೈಃ = ತದುಕ್ತ = ಗುರುವಿನಿಂದ ಹೇಳಲ್ಪಟ್ಟ, ಸ್ವಷ್ಟ = ಸುಸ್ಪಷ್ಟಗಳಾದ, ದೃಷ್ಟಾಂತೈಃ = ನಿದರ್ಶನಗಳಿಂದ, ಸ್ವಯೋಗ್ಯಾಂ = ತನಗೆ ಯೋಗ್ಯವಾದ, ಪ್ರತಿಬಿಂಬತಾಂ = ಭಗವಂತನ ಪ್ರತಿಬಿಂಬತ್ವವನ್ನು, ಜ್ಞಾತ್ವಾ = ತಿಳಿದು, ಈಶಾಧೀನತಾಬೋಧಾತ್ = ತನ್ನ ಭಗವದಧೀನತ್ವ ಜ್ಞಾನದಿಂದ, ಶಿಷ್ಯಃ = ಶಿಷ್ಯನು, ಅಸ್ತಬ್ಧಃ = ಅಹಂಕಾರ ರಹಿತನು, ಅಭೂತ್ = ಆದನು, ಇತಿ = ಎಂಬುದಾಗಿ, ಸ್ಥಿತಂ = ಸಿದ್ಧವಾಯಿತು.

**ಅನುವಾದ– ಗುರುಗಳು ಹೇಳಿದ ಸ್ಪಷ್ಟದೃಷ್ಟಾಂತಗಳಿಂದ ಶ್ವೇತಕೇತುವು ಸ್ವಯೋಗ್ಯವಾದ ಪ್ರತಿಬಿಂಬತ್ವವನ್ನು ತಿಳಿದು, ಈಶಾಧೀನತ್ವವನ್ನು ತಿಳಿದು ಸ್ತಬ್ಧತೆಯನ್ನು ತ್ಯಜಿಸಿದನು ಎಂದು ಸಿದ್ಧವಾಗುತ್ತದೆ.**

**ಭಾವವಿಲಾಸಿನೀ– ತತ್ತಸ್ಮಾತ್ ಉಕ್ತಯುಕ್ತಿಸಮುದಾಯಾತ್ ॥ ೧೧೭೨ ॥**

**ವಿವರಣೆ–** ಇಲ್ಲಿ ಶಕುನಿ ಸೂತ್ರಾದಿ ಒಂಭತ್ತು ದೃಷ್ಟಾಂತಗಳನ್ನು ಹೇಳುತ್ತಾರೆ. ಒಂಭತ್ತು ದೃಷ್ಟಾಂತಗಳು ಭೇದ ಪರವಾಗಿಯೇ ಇವೆ. ಆದ್ದರಿಂದ ಈಶ್ವರನ ಭೇದವಿರುವ ತನ್ನಲ್ಲಿ ಈಶ್ವರನ ಅಭೇದವಾಕ್ಯವು ಈಶ್ವರಾಧೀನತ್ವವನ್ನು ತಿಳಿಸುತ್ತದೆ ಎಂದು ಚಿಂತಿಸಿ ಶ್ವೇತಕೇತುವು ತನ್ನ ಸ್ತಬ್ಧತೆಯನ್ನು ತ್ಯಜಿಸಿದನು ಎಂದು ಹೇಳಿದರೆ ಈ ಅರ್ಥವು ಪ್ರಕೃತಕ್ಕೆ ಸಂಗತವಾಗುತ್ತದೆ.

**ಕಿಂಚ ಜೀವಬ್ರಹ್ಮಭಾವೋ ಯದಿ ತಸ್ಯ ವಿವಕ್ಷಿತಃ ।**
**ತರ್ಹ್ಯಹಂ ತದಿತಿ ಬ್ರೂಯಾತ್ ಸರ್ವಂ ತದಿತಿ ವಾ ವದೇತ್ ।**
**ತ್ವಂ ತದಿತ್ಯುಪದೇಶಸ್ತು ವ್ಯರ್ಥಸ್ತದ್ಭಾವಮಾನಿನಿ ॥ ೧೧೭೩ ॥**

**ಅರ್ಥ–** ಕಿಂಚ = ಅದಲ್ಲದೇ, ತಸ್ಯ = ಆ ಗುರುವಿಗೆ, ಯದಿ = ಒಂದು ವೇಳೆ, ಜೀವಬ್ರಹ್ಮಭಾವಃ = ಜೀವಬ್ರಹ್ಮೈಕ್ಯವು, ವಿವಕ್ಷಿತಃ = ಅಭಿಪ್ರೇತವು, ಸ್ಯಾತ್ = ಆಗಿದ್ದರೆ, ತರ್ಹಿ = ಆ ಪಕ್ಷದಲ್ಲಿ, ಸಃ = ಆ ಗುರುವು, ಅಹಂ = ನಾನು, ತತ್ = ಅದು, ಇತಿ = ಹೀಗೆ, ಬ್ರೂಯಾತ್ = ಹೇಳಿಯಾನು, ವಾ = ಅಥವಾ, ಸರ್ವಂ = ಎಲ್ಲವೂ, ತತ್ ಇತಿ = ಅದು ಎಂದಾದರೂ, ವದೇತ್ = ಹೇಳಿಯಾನು, ತದ್ಭಾವಮಾನಿನಿ = ತನಗೆ ಬ್ರಹ್ಮಾಭೇದವನ್ನು ತಿಳಿದಿರುವ, ಶಿಷ್ಯೇ = ಶಿಷ್ಯನಲ್ಲಿ, ತ್ವಂ ತತ್ ಇತಿ = ನೀನು ಅದಾಗಿದ್ದೀಯೆ ಎಂದು, ಉಪದೇಶಃ ತು = ಉಪದೇಶವಾದರೂ, ವ್ಯರ್ಥಃ = ವ್ಯರ್ಥವಾಗುತ್ತದೆ.

**ಅನುವಾದ– ಅದೂ ಅಲ್ಲದೆ, ಗುರುಗಳಿಗೆ ಜೀವಬ್ರಹ್ಮೈಕ್ಯವು ಪ್ರತಿಪಾದಿಸಲ್ಪಡಲು ಇಷ್ಟವಾಗಿದ್ದರೆ ನಾನು ಬ್ರಹ್ಮ ಎಂದಾಗಲಿ ಅಥವಾ ಎಲ್ಲರೂ ಬ್ರಹ್ಮ ಎಂದಾಗಲೀ ಹೇಳಬೇಕಾದ್ದಿತು. ತಾನೇ ಬ್ರಹ್ಮನೆಂದು ತಿಳಿದಿರುವ ಶ್ವೇತಕೇತುವನ್ನು ಕುರಿತು ನೀನು ಬ್ರಹ್ಮ ಎಂಬ ಉಪದೇಶವು ವ್ಯರ್ಥವಾಗುತ್ತದೆ.**

**ಭಾವವಿಲಾಸಿನೀ–** ಪ್ರಾಗುಕ್ತಸ್ಯಾತದಿತಿ ಪದಚ್ಛೇದಸ್ಯಾತಿಸುಲಭತ್ವಾತ್ ಪುನರಪಿ ತಮೇವ ಸ್ಮಾರಯತಿ – ಕಿಂಚೇತಿ ॥ ತದ್ಭಾವಮಾನಿನಿ ಗರ್ವೇಣಾಹಮೀಶ್ವರ ಇತಿ ಭಾವನಾಯುಕ್ತೇ ॥ ೧೧೭೩ ॥

**ವಿವರಣೆ–** ಶ್ವೇತಕೇತು ತನ್ನನ್ನು ನಾನೊಬ್ಬ ದೇವತೆ ಅಥವಾ ಕೇಶವನೇ ಇರಬಹುದು ಎಂದು ತಿಳಿದಿದ್ದಾನೆ. ಅಂತಹವನಿಗೆ ಆ ತತ್ತ್ವ ನಿಜವಾಗಿದ್ದರೆ ಅದನ್ನು ತಿಳಿಸಬೇಕಾದ ಅಗತ್ಯವಿಲ್ಲ. ನಾನೂ ಬ್ರಹ್ಮ ಎಲ್ಲರೂ ಬ್ರಹ್ಮ ಎಂದು ತಿಳಿಸಿದರೆ ಆಗ ಅದು ಸಂಗತವಾಗುತ್ತಿತ್ತು. ಅದನ್ನು ಬಿಟ್ಟು ನೀನು ಬ್ರಹ್ಮ ಎಂದು ತಿಳಿಸಿದಾಗ ಆ ವಾಕ್ಯಕ್ಕೆ ನಾವು ಹೇಳಿದಂತೆಯೇ ಗತಿಕಲ್ಪನೆಯನ್ನು ಮಾಡಬೇಕು.

ಗರ್ವಿಷ್ಠಗರ್ವನಿರ್ವಾಣಂ ಕುರ್ವನ್ ಗುರ್ವಗ್ರಣೀರಸೌ ।
ಅತದ್ವಸ್ತು ತ್ವಮಿತ್ಯಾಹೇತ್ಯಸ್ತಿ ಶಸ್ತಾ ಗತಿಶ್ಚ ಮೇ ॥ ೧೧೭೪ ॥

**ಅರ್ಥ–** ಗರ್ವಿಷ್ಠಗರ್ವನಿರ್ವಾಣಂ = ಗರ್ವಿಷ್ಠ= ಅಹಂಕಾರಿಯಾದ ಶಿಷ್ಯನ, ಗರ್ವ = ಅಹಂಕಾರದ, ನಿರ್ವಾಣಂ = ಪರಿಹಾರವನ್ನು, ಕುರ್ವನ್ = ಮಾಡಲು ಪ್ರವೃತ್ತರಾದ, ಗುರ್ವಗ್ರಣೀಃ = ಶ್ರೇಷ್ಠ ಗುರುಗಳಾದ, ಅಸೌ = ಈ ಉದ್ದಾಲಕರು, ಶಿಷ್ಯಃ = ಶಿಷ್ಯನಾದ ಶ್ವೇತಕೇತುವಿಗೆ, ತ್ವಂ= ನೀನು, ಅತದ್ (ವಸ್ತು) = ಆ ವಸ್ತುವಲ್ಲ, ಇತಿ= ಎಂದು ಅತತ್ತ್ವಮಸಿ ಎಂಬ ವಾಕ್ಯದಿಂದ, ಆಹ = ಹೇಳುತ್ತಿದ್ದಾರೆ, ಇತಿ = ಎಂಬ, ಶಸ್ತಾ = ಶ್ರೇಷ್ಠವಾದ, ಗತಿಃ ಚ = ಇನ್ನೊಂದು ಪ್ರಕಾರವೂ ಕೂಡ, ಮೇ = ನನ್ನ, ಮತೇ = ಮತದಲ್ಲಿ, ಅಸ್ತಿ = ಇದೆ.

**ಅನುವಾದ–** ಗರ್ವಿಷ್ಠನಾದ ಶಿಷ್ಯನ ಗರ್ವವನ್ನು ಪರಿಹಾರ ಮಾಡಲು ಅಪೇಕ್ಷಿಸಿದ ಗುರುಶ್ರೇಷ್ಠರಾದ ಉದ್ದಾಲಕರು ಅತತ್ತ್ವಮಸಿ ಎಂದು ಹೇಳಿ ನೀನು ಬ್ರಹ್ಮನಲ್ಲ ಎಂದು ಹೇಳಿದರು ಎಂದು ಅರ್ಥವನ್ನು ಹೇಳುವುದೇ ಶ್ರೇಷ್ಠವಾದುದು ಎಂಬ ಇನ್ನೊಂದು ಪ್ರಕಾರವೂ ನನಗಿದೆ.

**ಭಾವವಿಲಾಸಿನೀ–** ಶಸ್ತಾ ಪ್ರಶಸ್ತಾ । ಉಪಕ್ರಮೋಪಸಂಹಾರಾನುಗುಣತಯಾ ಕಾಠಿನ್ಯಾಭಾವೇನ ಚ ಸರ್ವಜನಮನೋಹರೇತ್ಯರ್ಥಃ ॥ ೧೧೭೪ ॥

**ವಿವರಣೆ–** 'ಸ ಆತ್ಮಾ ತತ್ತ್ವಮಸಿ' ಎಂಬ ವಾಕ್ಯವಿದೆ. ಅದನ್ನು ತತ್ ತ್ವಮಸಿ ಎಂದೂ ಅತತ್ ತ್ವಮಸಿ ಎಂದೂ ಭೇದ ಮಾಡಬಹುದು. ತತ್ತ್ವಮಸಿ ಎಂದು ಭೇದ ಮಾಡಿದರೆ ಹೇಗೆ ಅರ್ಥವನ್ನು ಮಾಡಬೇಕು ಎಂದು ಇದುವರೆಗೆ ವಿಚಾರ ಮಾಡಿದ್ದಾಯಿತು. ಈಗ ತತ್ತ್ವಮಸಿ ಎಂಬ ಭೇದವೇ ಬೇಡ, ಅತತ್ತ್ವಮಸಿ ಎಂಬ ಭೇದವನ್ನೇ ಇಟ್ಟುಕೊಳ್ಳೋಣ. ಉಪನಿಷತ್ತುಗಳಲ್ಲಿ ಪದಚ್ಛೇದವು ಹೇಗೂ ನಿಯತವಾಗಿಲ್ಲ. ಆದ್ದರಿಂದ ಹೀಗೆ ಪದಚ್ಛೇದವನ್ನು ಮಾಡಿದರೆ ಉಪಕ್ರಮ ಉಪಸಂಹಾರಗಳಿಗೂ ಮಧ್ಯದಲ್ಲಿ ಹೇಳಿದ

॥ ಶ್ರೀ ವಾತ ಕ್ಷೇ: ಪ್ರಿಯಃ ॥

ದೃಷ್ಟಾಂತಗಳಿಗೂ ಅರ್ಥವು ಅತ್ಯಂತ ಸಂಗತವಾಗುತ್ತದೆ. ಆದ್ದರಿಂದ ಕ್ಲೇಶವಿಲ್ಲದ ಪ್ರಶಸ್ತವಾದ ಈ ಇನ್ನೊಂದು ಮಾರ್ಗ ನನಗೆ ಇದೆ ಎಂದು ಗ್ರಂಥಕಾರರು ಹೇಳುತ್ತಾರೆ.

ತ್ವಂ ವಾಸುದೇವೋ ಭಗವಾನವತೀರ್ಣೋ ಜಗತ್ಪತಿಃ ।
ಇತಿ ಪ್ರಸ್ತೋಭಿತೋ ಬಾಲೈರ್ಮೇನೇ ಸ್ವಾತ್ಮಾನಮಚ್ಯುತಂ ॥ ೧೧೭೫ ॥

ಕದಾಚಿತ್ ಪೌಂಡ್ರಕೋ ನಾಮ ಕಾಶೀರಾಜಃ ಪ್ರತಾಪವಾನ್ ।
ವಾಸುದೇವೋಹಮಿತ್ಯಜ್ಞೋ ದೂತಂ ಕೃಷ್ಣಾಯ ಪ್ರಾಹಿಣೋತ್ ॥ ೧೧೭೬ ॥

ಕತ್ಥನಂ ತದುಪಾಕರ್ಣ್ಯ ಪೌಂಡ್ರಕಸ್ಯಾಲ್ಪಮೇಧಸಃ ।
ಉಚ್ಚಕ್ಕೈರುಗ್ರಸೇನಾದ್ಯಾಃ ಸಭ್ಯಾಃ ಪ್ರಜಹಸುಸ್ತದಾ ॥ ೧೧೭೭ ॥

**ಅರ್ಥ–** ತ್ವಂ= ನೀನು, ಭಗವಾನ್ ವಾಸುದೇವಃ= ಭಗವಂತನಾದ ವಾಸುದೇವ, ಜಗತ್ಪತಿಃ= ಜಗತ್ಪತಿಯಾದ ನೀನು, ಅವತೀರ್ಣಃ= ಭೂಮಿಯಲ್ಲಿ ಅವತರಿಸಿದ್ದೀಯೇ, ಇತಿ= ಈ ರೀತಿಯಲ್ಲಿ, ಬಾಲೈಃ= ಬಾಲಕರಿಂದ, ಪ್ರಸ್ತೋಭಿತಃ= ವಂಚನೆಗಾಗಿ ಹೊಗಳಲ್ಪಟ್ಟ ಪೌಂಡ್ರಕ ವಾಸುದೇವನು, ಸ್ವಾತ್ಮಾನಂ= ತನ್ನನ್ನು, ಅಚ್ಯುತಂ ಮೇನೇ= ಅಚ್ಯುತನೆಂದು ತಿಳಿದನು. ಕದಾಚಿತ್= ಒಮ್ಮೆ, ಪ್ರತಾಪವಾನ್= ಪ್ರತಾಪಶಾಲಿಯಾದ, ಅಜ್ಞಃ= ಅಜ್ಞಾನಿಯಾದ, ಪೌಂಡ್ರಕೋ ನಾಮ= ಪೌಂಡ್ರಕನೆಂಬ, ಕಾಶೀರಾಜಃ= ಕಾಶೀರಾಜನು, ಅಹಂ ವಾಸುದೇವಃ= ನಾನೇ ವಾಸುದೇವ, ಇತಿ= ಎಂದು, ಕೃಷ್ಣಾಯ= ಕೃಷ್ಣನಿಗೆ, ದೂತಂ ಪ್ರಾಹಿಣೋತ್= ಒಬ್ಬ ದೂತನನ್ನು ಕಳುಹಿಸಿದನು. ಅಲ್ಪಮೇಧಸಃ= ಅತ್ಯಲ್ಪಜ್ಞಾನಿಯಾದ, ಪೌಂಡ್ರಕಸ್ಯ= ಪೌಂಡ್ರಕನ, ತತ್ ಕತ್ಥನಂ= ಆ ಜಂಭದ ಮಾತುಗಳನ್ನು, ಉಪಾಕರ್ಣ್ಯ= ಕೇಳಿ, ತದಾ= ಆಗ, ಸಭ್ಯಾಃ= ಆ ಸಭೆಯಲ್ಲಿದ್ದ, ಉಗ್ರಸೇನಾದ್ಯಾಃ= ಉಗ್ರಸೇನ ಮೊದಲಾದವರು, ಉಚ್ಚಕ್ಕೈಃ= ಗಟ್ಟಿಯಾಗಿ, ಪ್ರಜಹಸುಃ= ನಕ್ಕರು.

**ಅನುವಾದ–** ನೀನೇ ಜಗತ್ಪತಿಯಾದ ಭಗವಂತನಾದ ವಾಸುದೇವ. ಭೂಮಿಯಲ್ಲಿ ಅವತಾರ ಮಾಡಿದ್ದೀಯೆ ಎಂದು ಬಾಲಕರಿಂದ ಪ್ರಸ್ತೋಭಿಸಲ್ಪಟ್ಟ (ವಂಚನೆಗಾಗಿ ಹೊಗಳಲ್ಪಟ್ಟ) ಪೌಂಡ್ರಕ ವಾಸುದೇವನು ತನ್ನನ್ನೇ ಅಚ್ಯುತನೆಂದು ತಿಳಿದನು. ಒಮ್ಮೆ ಪ್ರತಾಪಶಾಲಿಯಾದ ಅಜ್ಞಾನಿಯಾದ ಪೌಂಡ್ರಕನೆಂಬ ಕಾಶೀರಾಜನು ನಾನೇ ವಾಸುದೇವನೆಂಬ ಸಂದೇಶವನ್ನು ಕೊಟ್ಟು ಕೃಷ್ಣನ ಬಳಿಗೆ ಒಬ್ಬ ದೂತನನ್ನು ಕಳುಹಿಸಿದನು. ಅತ್ಯಲ್ಪ ಜ್ಞಾನಿಯಾದ (ದುರ್ಬುದ್ಧಿಯುಳ್ಳ) ಪೌಂಡ್ರಕನ ಇಂತಹ ಜಂಭದ ಮಾತುಗಳನ್ನು ಕೇಳಿ ಆ ಸಭೆಯಲ್ಲಿದ್ದ ಉಗ್ರಸೇನ ಮೊದಲಾದವರೆಲ್ಲರೂ ಗಟ್ಟಿಯಾಗಿ ನಕ್ಕರು.

ನೇಹೋ ಅವತೀರ್ಣೋಽಹಂ ಏಕ ಏವ ನ ಚಾಪರಃ ।

**ವಿವರಣೆ–** ಈ ಮೂರು ಶ್ಲೋಕಗಳು ಭಾಗವತದಲ್ಲಿವೆ (10.69.15, 10.69.16, 10.69.20) ಮುಂದಿನ ಶ್ಲೋಕಗಳಲ್ಲಿ ಇವುಗಳ ವಿಮರ್ಶೆಯನ್ನು ಗ್ರಂಥಕಾರರು ಮಾಡುತ್ತಾರೆ.

**ಯೋ ಸೋಹಂಭಾವನಾಮೂಲಾಸ್ತೇ ಬಾಲಾಃ ಕಿಲ ಸರ್ವಶಃ ।**
**ವಂಚನಂ ಕಿಲ ತಜ್‌ಜ್ಞಾನಂ ಕತ್ಥನಂ ಕಿಲ ತದ್ವಚಃ ॥ ೧೧೭೮ ॥**

**ಅರ್ಥ–** ಯೇ= ಯಾರು, ಸೋಹಂಭಾವನಾಮೂಲಾಃ= ನಾನೇ ಬ್ರಹ್ಮನೆಂಬ ಅಹಂಕಾರದಿಂದ ಕೂಡಿರುತ್ತಾರೆಯೋ, ತೇ ಸರ್ವಶಃ= ಅವರೆಲ್ಲರೂ, ಬಾಲಾಃ ಕಿಲ= ಬಾಲರೇ ಅಷ್ಟೇ, ತಜ್‌ಜ್ಞಾನಂ= ಅವರ ಜ್ಞಾನವು, ವಂಚನಂ ಕಿಲ= ವಂಚನೆಯಷ್ಟೇ, ತದ್ವಚಃ= ಅವರ ಮಾತುಗಳು, ಕತ್ಥನಂ ಕಿಲ= ಒಣ ಜಂಭದ ಮಾತುಗಳಷ್ಟೇ.

**ಅನುವಾದ–** ಯಾರು ಅಹಂಕಾರ ಮೂಲಕವಾದ ನಾನೇ ಬ್ರಹ್ಮನೆಂಬ ಭಾವನೆಯನ್ನು ಹೊಂದಿರುತ್ತಾರೆಯೋ ಅವರೆಲ್ಲರೂ ಬಾಲರೇ ಅಷ್ಟೇ? ಅವರ ಜ್ಞಾನವು ವಂಚನೆಯಷ್ಟೇ? ಅವರ ಮಾತುಗಳು ಜಂಭದ ಮಾತುಗಳಷ್ಟೇ?

**ಭಾವವಿಲಾಸಿನೀ–** ಸ್ಪಷ್ಟಭಾಗವತೋಕ್ತಿಭಿಶ್ಚ ಜೀವಬ್ರಹ್ಮೈಕ್ಯಸ್ಯ ನಿಂದಿತತ್ವಾತ್ ತದ್ಭೇದ ಏವ ವ್ಯಾಸಸಿದ್ಧಾಂತ ಇತ್ಯಾಹ – **ತ್ವಂ ವಾಸುದೇವ ಇತ್ಯಾದಿನಾ** ॥ ಅತ್ರ ಚ ಶ್ಲೋಕತ್ರಯಂ ಭಾಗವತೀಯಮ್ । ಯೇ ಸೋಹಂಭಾವನಾಮೂಲಾ ಇತ್ಯಾದಿ ತು ಮೂಲಸ್ಥಭಾವಪ್ರಕಾಶನಾಯ ಗ್ರಂಥಕಾರಸ್ಯೈವ ವಚನಮ್ । ಇತಿ ಬಾಲೈಃ ಪ್ರಸ್ತೋಭಿತಃ ಸ್ವಾತ್ಮಾನಮಚ್ಯುತಂ ಮೇನೇ ಇತ್ಯಸ್ಯಾಭಿಪ್ರಾಯಕಥನಮ್ ॥ **ತೇ ಬಾಲಾಃ, ವಂಚನಂ ಕಿಲತತ್‌ಜ್ಞಾನಮಿತಿ** ॥ ಕತ್ಥನಂ ತದುಪಾಕರ್ಣ್ಯೇತ್ಯಸ್ಯಾಭಿಪ್ರಾಯಕಥನಮ್ । **ಕತ್ಥನಂ ಕಿಲ ತದ್ವಚ ಇತಿ** ॥ ತದ್ವಚಃ ಅಹಮೇವಾಚ್ಯುತ ಇತಿ ವಚಃ । ಶುನೋಧ್ವನಿಸಮಾನಂ । ಅತಿಹೀನಂ ವಚನಂ ಕತ್ಥನಮಿತ್ಯುಚ್ಯತೇ ॥೧೧೭೫ – ೧೧೭೮॥

**ವಿವರಣೆ–** ಭಾಗವತದ ಮೂಲ ಶ್ಲೋಕದಲ್ಲಿ ಬಾಲಕರು ಅವನನ್ನು ಪ್ರಸ್ತೋಭನೆಗೊಳಿಸಿದರು ಎಂದಿದೆ. ನೀನು ವಾಸುದೇವ ಎಂದು ಹೇಳುವ ಅವರೆಲ್ಲರೂ ಪ್ರೌಢಮತಿಗಳಲ್ಲ ಬಾಲಕರೇ ಎಂಬುದು ಈ ಬಾಲ ಎಂಬ ಶಬ್ದದಿಂದ ಸೂಚಿತವಾಗುತ್ತದೆ. ಅವರಾದರೂ ಪ್ರಸ್ತೋಭನೆ ಎಂದರೆ ವಂಚನೆ ಮಾಡುವುದಕ್ಕೋಸ್ಕರ ಹೇಳಿದ ಮಾತು ಎನ್ನುವುದರಿಂದ ಆ ಮಾತಿನ ಅರ್ಥವು ಬಾಧಿತವಾದುದು ಎಂದು ತಿಳಿಯುತ್ತದೆ ಮತ್ತು ದೂತನ ಸಂದೇಶವನ್ನು ಕತ್ಥನ ಎಂದು ಹೇಳಿರುವುದರಿಂದ ಅದು ಕೇವಲ ದುರಂಹಕಾರದ ಮಾತುಗಳು, ವಾಸ್ತವ ಸ್ಥಿತಿಯು ಹಾಗಲ್ಲ ಎಂದು ತಿಳಿಯುತ್ತದೆ. ಆದ್ದರಿಂದ ಭಾಗವತ ಶ್ಲೋಕಗಳಲ್ಲಿರುವ ಈ ಪದಗಳಿಂದಲೇ ಪೌಂಡ್ರಕನು ತಾನೇ ಬ್ರಹ್ಮನೆಂದು ತಿಳಿದರೂ, ಅವನು ಬ್ರಹ್ಮನಲ್ಲ ಎಂದು ಸ್ಪಷ್ಟವಾಗಿ ಗೊತ್ತಾಗುತ್ತದೆ.

**ಅಜ್ಞೋಽಲ್ಪಮೇಧಾಃ ಸ ಕಿಲ ಯಸ್ತತ್ರ ಕೃತನಿಶ್ಚಯಃ ।**
**ಸಭ್ಯಾನಾಂ ನ ತದಭ್ಯಾಸಯೋಗ್ಯಂ ಹಾಸ್ಯಂ ಕಿಲಾಖಿಲೈಃ ॥ ೧೧೭೯ ॥**

**ಅರ್ಥ–** ಯಃ= ಯಾವನು, ತತ್ರ= ನಾನೇ ಬ್ರಹ್ಮನು ಎಂಬ ವಿಷಯದಲ್ಲಿ, ಕೃತನಿಶ್ಚಯಃ= ನಿಶ್ಚಯವನ್ನು ಹೊಂದಿರುತ್ತಾನೆಯೋ ಅವನು, ಅಜ್ಞಃ= ಅಜ್ಞನೂ, ಅಲ್ಪಮೇಧಾಃ= ಅಲ್ಪಮೇಧಸ್ಸುಳ್ಳವನೂ, ಕಿಲ= ಆಗಿರುತ್ತಾನಷ್ಟೇ, ಸಭ್ಯಾನಾಂ ಚ= ವಿವೇಕಿಗಳಾದವರಿಗೆ, ನ ತದಭ್ಯಾಸಯೋಗ್ಯಂ= ಅವನ ಚಿಂತನೆಯು ಅಯೋಗ್ಯವಾಗಿರುತ್ತದೆಯಷ್ಟೇ, ಅಖಿಲೈಃ= ಎಲ್ಲರಿಂದಲೂ, ಹಾಸ್ಯಂ ಕಿಲ= ಅವನು ಹಾಸ್ಯಕ್ಕೆ ವಿಷಯನಾಗುತ್ತಾನಷ್ಟೇ.

**ಅನುವಾದ–** ಯಾವನು ನಾನೇ ಬ್ರಹ್ಮನೆಂದು ನಿಶ್ಚಯವನ್ನು ಹೊಂದಿರುತ್ತಾನೆಯೋ ಅವನು ಅಜ್ಞನೂ, ಅಲ್ಪಮೇಧನೂ ಆಗಿರುವನಷ್ಟೇ? ವಿವೇಕಿಗಳಾದ ಸಭ್ಯರಿಗೆ ಅವನ ಚಿಂತನೆಯು ಅನುಸಂಧಾನವು ಅಯೋಗ್ಯವಾದುದಷ್ಟೇ? ಅವನ ಮಾತನ್ನು ಕೇಳಿ ಎಲ್ಲರೂ ಹಾಸ್ಯವನ್ನೇ ಮಾಡಿದರಷ್ಟೇ?

**ಭಾವವಿಲಾಸಿನೀ–** ವಾಸುದೇವೋಽಹಮಿತ್ಯಜ್ಞಃ ಪೌಂಡ್ರಕಸ್ಯಾಲ್ಪಮೇಧಸಃ ಇತ್ಯಸ್ಯಾಭಿಪ್ರಾಯಕಥನಮ್ ॥ **ಅಜ್ಞೋಽಲ್ಪಮೇಧಾಃ ಸ ಕಿಲೇತಿ** ॥ ತತ್ರ ಸೋಹಂಭಾವೇ । ಸಭ್ಯಾಃ ಪ್ರಜಹಸುರಿತ್ಯಸ್ಯಾಭಿಪ್ರಾಯಕಥನಮ್ । **ಸಭ್ಯಾನಾಮಿತಿ** ॥ ೧೧೭೯ ॥

**ವಿವರಣೆ–** ಆ ಶ್ಲೋಕಗಳಲ್ಲಿರುವ ಅಜ್ಞಃ, ಅಲ್ಪಮೇಧಾಃ ಮತ್ತು ಜಹಸುಃ ಎಂಬ ಶಬ್ದಗಳಿಂದ ಪೌಂಡ್ರಕನ ಜ್ಞಾನವು ಭ್ರಾಂತಿ ಎಂದು ತಿಳಿದುಬರುತ್ತದೆ ಎಂದು ಅಭಿಪ್ರಾಯ.

**ಮುಖ್ಯಾಧಿಕಾರೀ ತದ್ಭಾವೇ ಪೌಂಡ್ರಕಾಖ್ಯೋಽಸುರಃ ಕಿಲ ।**
**ಏವಂ ವಿನಿಂದಿತಂ ಸೋಹಂಭಾವಂ ಕಃ ಶ್ರದ್ದಧೀತ ತತ್ ॥ ೧೧೮೦ ॥**

**ಅರ್ಥ–** ತದ್ಭಾವೇ= ನಾನೇ ಬ್ರಹ್ಮನೆಂದು ಉಪಾಸನೆ ಮಾಡುವವರಲ್ಲಿ, ಮುಖ್ಯಾಧಿಕಾರೀ= ಮುಖ್ಯನಾದ ಅಧಿಕಾರಿಯು, ಪೌಂಡ್ರಕಾಖ್ಯೋಸುರಃ ಕಿಲ= ಪೌಂಡ್ರಕನೆಂಬ ಅಸುರನಷ್ಟೇ, ಏವಂ= ಈ ರೀತಿಯಲ್ಲಿ, ವಿನಿಂದಿತಂ= ನಿಂದಿಸಲ್ಪಟ್ಟಂತಹ, ತತ್ ಸೋಹಂಭಾವಂ= ಜೀವನಿಗೆ ಆ ಬ್ರಹ್ಮಭಾವವನ್ನು, ಕಃ= ಯಾವನು ತಾನೇ, ಶ್ರದ್ದಧೀತ= ನಂಬುತ್ತಾನೆ.

**ಅನುವಾದ–** ನಾನೇ ಬ್ರಹ್ಮನೆಂಬ ಚಿಂತನೆಗೆ ಮುಖ್ಯವಾದ ಅಧಿಕಾರಿ ಎಂದರೆ ಅಸುರನಾದ ಪೌಂಡ್ರಕನಷ್ಟೇ? ಹೀಗೆ ಭಾಗವತದಲ್ಲಿ ವಿಶೇಷವಾಗಿ ನಿಂದಿತವಾಗಿರುವ ಆ ಜೀವಬ್ರಹ್ಮ ಭಾವವನ್ನು ಯಾವನು ನಂಬುತ್ತಾನೆ?

**ಭಾವವಿಲಾಸಿನೀ–** ತದ್ಭಾವೇ ತಸ್ಯ ಸೋಹಂಭಾವಸ್ಯ ಭಾವನಾಯಾಮ್ । ತತ್ತಸ್ಮಾತ್ ಉಕ್ತದೂಷಕಶಬ್ದಸಮುದಾಯಾತ್ ॥ ೧೧೮೦ ॥

ಯದಿ ತತ್ತ್ವಂ ಮಹದಿದಂ ಕಥಂ ನಿಂದ್ಯಂ ಭವೇತ್ ಸತಾಂ ।
ಸಕೃನ್ನಿಂದಾಪಿ ನಿಂದ್ಯೈವ ಕಿಮು ನಿಂದಾ ಪದೇಪದೇ ॥ ೧೧೮೧ ॥

**ಅರ್ಥ–** ಯದಿ= ಒಂದು ಪಕ್ಷ, ಇದಂ= ಈ ಜೀವಬ್ರಹ್ಮಭಾವವು, ಮಹತ್ತತ್ತ್ವಂ= ಶ್ರೇಷ್ಠವಾದ ತತ್ತ್ವವಾಗಿದ್ದರೆ, ಸತಾಂ= ಸಜ್ಜನರಿಗೆ, ಕಥಂ= ಹೇಗೆ, ನಿಂದ್ಯಂ= ನಿಂದನೀಯವಾಗುತ್ತದೆ, ಸಕೃನ್ನಿಂದಾಪಿ= ಒಂದು ಸಲ ನಿಂದಿಸಿದರೂ, ನಿಂದ್ಯೈವ= ಅದು ನಿಂದೆಯೇ. ಪದೇ ಪದೇ ನಿಂದಾ= ಪದ ಪದಗಳಲ್ಲಿ ನಿಂದಿಸಿದರೆ, ಕಿಮು= ನಿಂದನೀಯವೆಂದು ಹೇಳಬೇಕಾದುದೇನು?

**ಅನುವಾದ–** ಜೀವಬ್ರಹ್ಮಭಾವವೇ ಶ್ರೇಷ್ಠವಾದ ತತ್ತ್ವವಾಗಿದ್ದರೆ ಅದು ಸಜ್ಜನರಿಗೆ ಹೇಗೆ ನಿಂದನೀಯವಾಗುತ್ತದೆ? ಒಂದು ಭಾರಿ ನಿಂದಿಸಿದರೂ ಅದು ನಿಂದನೀಯವೇ ಆಗುತ್ತದೆ. ಹೀಗಿರುವಾಗ ಪುನಃ ಪುನಃ ನಿಂದೆ ಇರುವಾಗ ಅದು ನಿಂದನೀಯವಾದುದು ಎಂದು ಪುನಃ ಹೇಳಬೇಕಾದುದಿಲ್ಲ.

**ಭಾವವಿಲಾಸಿನೀ–** ಸತಾಂ ನಿಂದ್ಯಮಿತಿ ಹರಿಣಾ ಕೃತತಚ್ಛಿರಚ್ಛೇದಸ್ಯಾಪ್ಯುಪಲಕ್ಷಣಮ್ ॥೧೧೮೧॥

**ವಿವರಣೆ–** ಈ ಮೂರು ಶ್ಲೋಕಗಳಲ್ಲಿ ಅಜ್ಞ, ಅಲ್ಪಮೇಧಸ್, ಬಾಲ ಪ್ರಸ್ತೋಭಿತ, ಕತ್ಥನ, ಜಹಸುಃ ಈ ಪ್ರತಿಯೊಂದು ಶಬ್ದದಿಂದಲೂ ನಿಂದೆಯೇ ಕಂಡುಬರುವುದರಿಂದ ಜೀವಬ್ರಹ್ಮಭಾವವು ಅತ್ಯಂತ ನಿಂದನೀಯವಾದುದು ಎಂದು ಅಭಿಪ್ರಾಯ.

ನನ್ವಸೌ ದೂರಮಾನೀಯ ಶೇತೇ ಮಾಮಿಹ ಸಾಧುವತ್ ।
ಇತಿ ಮತ್ವಾಽಚ್ಯುತಂ ಮೂಢಃ ಸ್ವಪದಾ ತಮತಾಡಯತ್ ॥ ೧೧೮೨ ॥

**ಅರ್ಥ–** ಅಸೌ= ಇವನು, ಮಾಂ= ನನ್ನನ್ನು, ದೂರಮಾನೀಯ= ಬಹಳ ದೂರದವರೆಗೆ ಕರೆದುಕೊಂಡು ಬಂದು, ಇಹ= ಇಲ್ಲಿ, ಸಾಧುವತ್= ಸಜ್ಜನನಂತೆ, ಶೇತೇ= ಮಲಗಿದ್ದಾನಷ್ಟೇ, ಇತಿಮತ್ವಾ= ಹೀಗೆ ತಿಳಿದು, ಮೂಢಃ= ಮೂಢನಾದ ಆ ಕಾಲಯವನನು, ಸ್ವಪದಾ= ತನ್ನ ಕಾಲಿನಿಂದ, ಅಚ್ಯುತಂ= ಅಚ್ಯುತನನ್ನು, ಅತಾಡಯತ್= ಒದ್ದನು.

**ಅನುವಾದ–** ಇವನು ನನ್ನನ್ನು ಬಹಳ ದೂರದಿಂದ ಇಲ್ಲಿಯವರೆಗೆ ಕರೆದುಕೊಂಡು ಬಂದು ಸಜ್ಜನನಂತೆ ಇಲ್ಲಿ ಮಲಗಿದ್ದಾನಷ್ಟೇ ಎಂದು ತಿಳಿದು ಮೂಢನಾದ ಕಾಲಯವನನು ಅಚ್ಯುತನನ್ನು ತನ್ನ ಪಾದದಿಂದ ಒದ್ದನು.

**ಭಾವವಿಲಾಸಿನೀ–** ಭಾಗವತವಾಕ್ಯಾಂತರಮಪಿ ಪಠಿತ್ವಾ ತಸ್ಯಾಭಿಪ್ರಾಯಮಾಹ – ನನ್ವಸಾವಿತಿ ॥ ಮೂಢಃ ಮಿಥ್ಯಾಜ್ಞಾನೀ ಕಾಲಯವನಃ । ತಂ ಮುಚುಕುಂದಮ್ ॥ ೧೧೮೨ ॥

**ವಿವರಣೆ–** ಇದು ಭಾಗವತದ ದಶಮಸ್ಕಂದದಲ್ಲಿ ಬರುವ ಒಂದು ಶ್ಲೋಕ. ಇದರ ವಿಮರ್ಶೆಯನ್ನು ಗ್ರಂಥಕಾರರೇ ಮುಂದಿನ ಶ್ಲೋಕಗಳಲ್ಲಿ ಮಾಡುತ್ತಾರೆ.

**ಪೃಥಕ್ ಸ್ಥಿತಾಚ್ಯುತಾಜ್ಞಾನಾತ್ ತತ್ಸಾದೃಶ್ಯಯುತೇ ನೃಪೇ ।**
**ಯವನಸ್ಯಾಚ್ಯುತಮತಿಶ್ಚ್ಯುತಿಕಾಲೇಽಭವತ್ ಕಿಲ ॥ ೧೧೮೩ ॥**

**ಅರ್ಥ–** ಪೃಥಕ್ ಸ್ಥಿತಾಚ್ಯುತಾಜ್ಞಾನಾತ್= ಬೇರೆ ದೂರದಲ್ಲಿ ನಿಂತಿದ್ದ ಅಚ್ಯುತನ ಜ್ಞಾನವಿಲ್ಲದ ಕಾರಣ (ಅಚ್ಯುತನನ್ನು ತಿಳಿಯದೇ), ತತ್ಸಾದೃಶ್ಯಯುತೇ = ಅಚ್ಯುತನ ಸಾದೃಶ್ಯವನ್ನು ಹೊಂದಿದ, ನೃಪೇ= ಮುಚುಕುಂದ ರಾಜನಲ್ಲಿ, ಯವನಸ್ಯ= ಯವನನಿಗೆ ಉಂಟಾದ, ಅಚ್ಯುತ ಮತಿಃ= ಇವನು ಅಚ್ಯುತ ಎಂಬ ಜ್ಞಾನವು, ಚ್ಯುತಿಕಾಲೇ= ಅವನ ಮರಣ ಕಾಲದಲ್ಲಿ, ಅಭವತ್ಕಿಲ= ಉಂಟಾಯಿತಷ್ಟೇ.

**ಅನುವಾದ–** ದೂರದಲ್ಲಿ ಮರೆಯಾಗಿ ನಿಂತಿದ್ದ ಅಚ್ಯುತನನ್ನು ತಿಳಿಯದ ಕಾಲಯವನನಿಗೆ ಎದುರಿಗೆ ಮಲಗಿದ್ದ ಮುಚುಕುಂದನಿಗೆ ಅಚ್ಯುತನ ಸಾದೃಶ್ಯವಿದ್ದ ಕಾರಣ ಇವನು ಅಚ್ಯುತ ಎಂಬ ಜ್ಞಾನವು ಅವನ ಮರಣ ಕಾಲದಲ್ಲಿಯೇ ಉಂಟಾಯಿತಷ್ಟೇ ?

**ಭಾವವಿಲಾಸಿನೀ–** ತತ್ಸಾದೃಶ್ಯಯುತೇ ತಸ್ಯ ಕೃಷ್ಣಸ್ಯ ಸಾದೃಶ್ಯಯುತೇ । ಕೃಷ್ಣೇನ ಪೀತಾಂಬರ-ಕಿರೀಟಾದಿಕಂ ಮುಚುಕುಂದದೇಹೇಽರ್ಪಿತಮ್ । ಅತಸ್ತಸ್ಮಿನ್ಮುಚುಕುಂದೇ ಏವ ಕೃಷ್ಣ ಇತಿ ಭ್ರಮೋ ಯವನಸ್ಯಾಸೀದಿತಿ ಹರಿವಂಶಪ್ರಥಾಂ ಕಿಲೇತ್ಯನೇನ ಸೂಚಯತಿ । ತಂ ರಾಜಾನಂ ಅಚ್ಯುತಂ ಮತ್ವೇತ್ಯಸ್ಯಾಭಿಪ್ರಾಯಕಥನಂ ನೃಪೇ ಯವನಸ್ಯಾಚ್ಯುತಮತಿರಭವದಿತಿ । ನೃಪ ಏವಾಚ್ಯುತ ಇತಿ ಮತಿರಿತ್ಯರ್ಥಃ ॥ ೧೧೮೩ ॥

**ವಿವರಣೆ–** ಅಚ್ಯುತನೆಂದು ಜೀವನನ್ನು ತಿಳಿದ ತಕ್ಷಣ ಕಾಲಯವನನಿಗೆ ಏನು ಗತಿಯಾಯಿತೋ ಜೀವಬ್ರಹ್ಮತ್ವವನ್ನು ಉಪಾಸನೆ ಮಾಡುವ ಎಲ್ಲರಿಗೂ ಅದೇ ಗತಿಯಾಗುತ್ತದೆ ಎಂದು ಇಲ್ಲಿ ಸೂಚಿಸುತ್ತಾರೆ.

ಏಕಸ್ಮಿನ್ನಪಿ ಜೀವೇಸ್ಮಿನ್ ಮೂಢಸ್ಯಾಚ್ಯುತಧೀಃ ಕಿಲ ।
ಅತಃ ಸರ್ವೇಷು ಜೀವೇಷು ಸಾ ಧೀರ್ಮೂಢತಮಸ್ಯ ಹಿ ।
ನಿನಿಂದ ಶುಕಯೋಗೀಂದ್ರೋ ಯಾಂ ಸಭಾಸ್ಥಃ ಸ್ಥಲೇಸ್ಥಲೇ ॥ ೧೧೮೪ ॥

**ಅರ್ಥ–** ಏಕಸ್ಮಿನ್ನಪಿ ಜೀವೇ= ಒಬ್ಬ ಜೀವನಲ್ಲಾದರೂ ಕೂಡ, ಅಚ್ಯುತಧೀಃ= ಇವನು ಅಚ್ಯುತ ಎಂಬ ಜ್ಞಾನವು, ಮೂಢಸ್ಯ ಕಿಲ= ಮೂಢನಾದವನಿಗೇ ಉಂಟಾಗುವುದಷ್ಟೇ,

ಅತಃ= ಆದ್ದರಿಂದ, ಸರ್ವೇಷು ಜೀವೇಷು= ಎಲ್ಲ ಜೀವರಲ್ಲಿಯೂ, ಸಾ ಧೀಃ= ಅಚ್ಯುತನೆಂಬ ಜ್ಞಾನವು, ಮೂಢತಮಸ್ಯ ಹಿ= ಮಹಾಮೂಢನಿಗೆ ಉಂಟಾಗುವುದಷ್ಟೇ, ಯಾಂ= ಅಂತಹ ಜೀವ ಬ್ರಹ್ಮೈಕ್ಯವನ್ನು, ಶುಕಯೋಗೀಂದ್ರಃ= ಶುಕಯೋಗೀಂದ್ರರು, ಸಭಾಸ್ಥ= ಸಭೆಯಲ್ಲಿ ಕುಳಿತು, ಸ್ಥಲೇ ಸ್ಥಲೇ= ಮತ್ತೆ ಮತ್ತೆ, ನಿನಿಂದ= ನಿಂದಿಸಿದ್ದಾರಷ್ಟೇ.

**ಅನುವಾದ–** ಒಬ್ಬ ಜೀವನನ್ನಾದರೂ ಬ್ರಹ್ಮನೆಂದು ತಿಳಿದುಕೊಳ್ಳುವವನು ಮೂಢ ಎಂದು ಕರೆಯಲ್ಪಟ್ಟದ್ದಾನಷ್ಟೇ? ಇನ್ನು ಯಾವ ಜೀವಬ್ರಹ್ಮಭಾವವನ್ನು ಗಂಗಾತೀರದಲ್ಲಿ ಸಭೆಯಲ್ಲಿ ಕುಳಿತ ಶುಕಾಚಾರ್ಯರು ಹೆಜ್ಜೆ ಹೆಜ್ಜೆಗೂ ನಿಂದಿಸಿದ್ದಾರೋ ಅಂತಹ ಎಲ್ಲಾ ಜೀವರಿಗೂ ಮತ್ತು ಬ್ರಹ್ಮನಿಗೂ ಐಕ್ಯವನ್ನು ತಿಳಿಯುವವನು ಮಹಾಮೂಢನೇ ಆಗಿರಬೇಕಷ್ಟೇ?

**ಭಾವವಿಲಾಸಿನೀ–** ಸಾ ಧೀಃ ಅಚ್ಯುತಧೀಃ । ಯಾಂ ಜೀವೇಷ್ವಚ್ಯುತಮತಿಮ್ ॥ ೧೧೮೪ ॥

**ಈಶ್ವರೋಹಮಿತಿ ಬ್ರೂಯುರ್ಮದಿರಾಮತ್ತವೃತ್ತಯಃ ।**
**ದೈತ್ಯಾ ಇತ್ಯಾಹ ಸ ಮುನಿರ್ವ್ಯಕ್ತಂ ಭೂಗೋಲವರ್ಣನೇ ॥ ೧೧೮೫ ॥**

**ಅರ್ಥ–** ಮದಿರಾಮತ್ತವೃತ್ತಯಃ= ಮದ್ಯದಿಂದ ಮದವೇರಿದ ಬುದ್ಧಿಯುಳ್ಳ, ದೈತ್ಯಾ= ದೈತ್ಯರು, ಈಶ್ವರೋಹಮಿತಿ= ನಾನು ಈಶ್ವರನೆಂದು, ಬ್ರೂಯುಃ= ಹೇಳುತ್ತಾರೆ, ಇತಿ= ಎಂದು, ಸಃ= ಆ ಶುಕಾಚಾರ್ಯರು, ಭೂಗೋಲವರ್ಣನೇ= ಭೂಗೋಲವರ್ಣನದಲ್ಲಿ, ವ್ಯಕ್ತಂ= ಸ್ಪಷ್ಟವಾಗಿ, ಆಹ= ಹೇಳಿದ್ದಾರೆ.

**ಅನುವಾದ–** ಮದ್ಯಪಾನದಿಂದ ಮದವೇರಿದ ಬುದ್ಧಿಯುಳ್ಳ ದೈತ್ಯರು ನಾನೇ ಈಶ್ವರನೆಂದು ಹೇಳುತ್ತಾರೆ ಎಂದು ಆ ಶುಕಾಚಾರ್ಯರು ಪಂಚಮಸ್ಕಂದದಲ್ಲಿ ಭೂಗೋಲವರ್ಣನೆಯ ಪ್ರಸಂಗದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

**ಭಾವವಿಲಾಸಿನೀ–** ಸ ಮುನಿಃ ಶುಕಮುನಿಃ । ಈಶ್ವರೋಹಮಿತ್ಯನೇನ ಯಸ್ಮಿನ್ನುಪಯುಕ್ತೇ ಪುರುಷ ಈಶ್ವರೋಹಂ ಸಿದ್ಧೋಹಮಿತಿ ಅಯುತಗಜಮಹಾಬಲ ಆತ್ಮಾನಂ ಮನ್ಯಮಾನಃ ಕತ್ಥತೇ ಮದಾಂಧವದಿತಿ ಪಂಚಮಸ್ಕಂಧವಾಕ್ಯಂ ಸಂಗೃಹ್ಣಾತಿ । ಯಸ್ಮಿನ್ನೈರೇಯೀನಾಮಕಮದ್ಯೇ ಉಪಯುಕ್ತೇ ಸತೀತ್ಯರ್ಥಃ ॥

**ವಿವರಣೆ–** ಇದು ಪಂಚಮಸ್ಕಂದದ ಒಂದು ವಾಕ್ಯ (5.23.18). ಯಸ್ಮಿನ್ ಉಪಭುಕ್ತೇ ಪುರುಷಾಃ ಈಶ್ವರೋಹಂ ಸಿದ್ಧೋಹಂ ಇತಿ ಅಯುತಮಹಾಗಜ- ಬಲಮಾತ್ಮಾನಂ ಮನ್ಯಮಾನಾಃ ಕತ್ಥಂತೇ ಮದಾಂಧಾ ಇವ ಇದು ಆ ಸಂಪೂರ್ಣವಾಕ್ಯ. ಆ ಮದ್ಯರೂಪವಾದ ರಸವನ್ನು ಪಾನ ಮಾಡಿದ ಪುರುಷನು ಮದಾಂಧನಾದವನಂತೆ ತನ್ನನ್ನು ಹತ್ತು ಸಹಸ್ರ ಗಜಗಳ ಬಲವುಳ್ಳವನೆಂದು ತಿಳಿದು ನಾನು ಈಶ್ವರ, ನಾನು ಸಿದ್ಧ ಎಂದು

ಬಡಬಡಿಸುತ್ತಾನೆ ಎಂದು ಅರ್ಥ. ಹೀಗೆ ಹೇಳಿರುವುದರಿಂದ ನಾನು ಈಶ್ವರನೆಂಬ ಬುದ್ಧಿಯು ಮದ್ಯಪಾನ ಮಾಡಿದವರಿಗೆ ಮಾತ್ರ ಯೋಗ್ಯವಾದುದು ಎಂದು ಗ್ರಂಥಕಾರರು ಸೂಚಿಸುತ್ತಾರೆ.

**ಯಸ್ತ್ವಯಾ ಮಂದಭಾಗ್ಯೋಕ್ತೋ ಮದನ್ಯೋ ಜಗದೀಶ್ವರಃ ।**
**ಕ್ವಾಸೌ ಯದಿ ಸ ಸರ್ವತ್ರ ಸ್ತಂಭೇ ಕಸ್ಮಾನ್ನ ದೃಶ್ಯತೇ ॥ ೧೧೮೬ ॥**

**ಅರ್ಥ–** ತ್ವಯಾ= ನಿನ್ನಿಂದ, ಉಕ್ತಃ= ಹೇಳಲ್ಪಟ್ಟ, ಮಂದನ್ಯಃ= ನನ್ನಿಂದ ಭಿನ್ನನಾದ, ಮಂದಭಾಗ್ಯಃ= ಮಂದಭಾಗ್ಯನಾದ, ಜಗದೀಶ್ವರಃ= ಜಗದೀಶ್ವರನು, ಯಃ= ಯಾವನಿದ್ದಾನಿಯೇ, ಅಸೌ= ಅವನು, ಕ್ವ= ಎಲ್ಲಿದ್ದಾನೆ, ಯದಿ ಸ ಸರ್ವತ್ರ= ಅವನು ಎಲ್ಲ ಕಡೆಯಲ್ಲಿಯೂ ಇರುವುದಾದರೆ, ಸ್ತಂಭೇ ಕಸ್ಮಾನ್ ಅದೃಶ್ಯತೇ= ಏಕೆ ಕಂಭದಲ್ಲಿ ಕಾಣುವುದಿಲ್ಲ.

**ಅನುವಾದ–** ನೀನು ಹೇಳುವಂತಹ ನನಗಿಂತ ಭಿನ್ನನಾದ ದೌರ್ಭಾಗ್ಯಶಾಲಿಯಾದ ಜಗದೀಶ್ವರನು ಎಲ್ಲಿದ್ದಾನೆ? ಅವನು ಎಲ್ಲಾ ಕಡೆಯಲ್ಲಿಯೂ ಇದ್ದರೆ ಈ ಕಂಬದಲ್ಲಿ ಏಕೆ ಕಾಣುವುದಿಲ್ಲ?

**ಸ್ವಾನ್ಯೇಶ್ವರನಿಷೇಧೇನ ಸ್ವಸ್ಯೈವೇಶ್ವರತಾ ಹೃದಿ ।**
**ಹಿರಣ್ಯಕಶಿಪೋಶ್ಚೇತಿ ಸ್ಪಷ್ಟಂ ಹ್ಯತ್ರ ಪ್ರತೀಯತೇ ॥ ೧೧೮೭ ॥**

**ಅರ್ಥ–** ಸ್ವಾನ್ಯೇಶ್ವರನಿಷೇಧೇನ= ತನಗಿಂತ ಭಿನ್ನನಾದ ಈಶ್ವರನನ್ನು ನಿಷೇಧಿಸುವುದರಿಂದ, ಹಿರಣ್ಯಕಶಿಪೋಶ್ಚ= ಹಿರಣ್ಯಕಶಿಪುವಿಗೂ ಸಹ, ಹೃದಿ= ಅವನ ಮನಸ್ಸಿನಲ್ಲಿ, ಸ್ವಸ್ಯ ಈಶ್ವರತಾ= ತನಗೇ ಈಶ್ವರತ್ವವು, ಅತ್ರ= ಈ ಶ್ಲೋಕದಲ್ಲಿ, ಸ್ಪಷ್ಟಂ ಪ್ರತೀಯತೇಃ= ಸ್ಪಷ್ಟವಾಗಿ ತೋರುವುದಷ್ಟೇ.

**ಅನುವಾದ–** ತನಗಿಂತ ಭಿನ್ನನಾದ ಈಶ್ವರನು ಇಲ್ಲವೆಂದು ಹೇಳುವ ಹಿರಣ್ಯಕಶಿಪುವಿನ ಮನಸ್ಸಿನಲ್ಲಿ ತಾನೇ ಈಶ್ವರನೆಂಬ ಭಾವನೆಯು ಇರುವುದೆಂದು ಇಲ್ಲಿ ಸ್ಪಷ್ಟವಾಗಿ ತೋರುವುದಷ್ಟೇ.

**ಇತಿ ಭಾಗವತೇ ಪ್ರೋಕ್ತಂ ತತ್ರ ತತ್ರ ಕಥಾಂತರೇ ।**
**ಅತ್ರಾಧಿಕಾರಿಣಃ ಸರ್ವೇ ಶ್ರೂಯಂತೇ ಕ್ರೂರರಾಕ್ಷಸಾಃ ॥ ೧೧೮೮ ॥**

**ಅರ್ಥ–** ಇತಿ= ಈ ರೀತಿಯಲ್ಲಿ, ಕಥಾಂತರೇ= ಬೇರೆ ಬೇರೆ ಕಥೆಗಳಲ್ಲಿ, ತತ್ರ ತತ್ರ= ಅಲ್ಲಲ್ಲಿ, ಭಾಗವತೇ= ಭಾಗವತ ಗ್ರಂಥದಲ್ಲಿ, ಪ್ರೋಕ್ತಂ= ಹೇಳಲ್ಪಟ್ಟಿದೆ, ಅತ್ರ= ಈ

ಚಿಂತನೆಯಲ್ಲಿ, ಸರ್ವೇ ಕ್ರೂರ ರಾಕ್ಷಸಾಃ ಎಲ್ಲಾ ಕ್ರೂರ ರಾಕ್ಷಸರೇ, ಅಧಿಕಾರಿಣಃ= ಅಧಿಕಾರಿಗಳೆಂದು, ಶ್ರೂಯಂತೇ= ಹೇಳಲ್ಪಟ್ಟಿದೆ.

**ಅನುವಾದ–** ಹೀಗೆ ಭಾಗವತದಲ್ಲಿ ಬೇರೆ ಬೇರೆ ಕಥೆಗಳಲ್ಲಿ ಅಲ್ಲಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ನಾನೇ ಬ್ರಹ್ಮನೆಂಬ ಉಪಾಸನೆಯಲ್ಲಿ ಅಧಿಕಾರಿಗಳಾದವರೆಲ್ಲರೂ ಕ್ರೂರರಾದ ರಾಕ್ಷಸರೆಂದೇ ಹೇಳಲ್ಪಟ್ಟಿದ್ದಾರೆ.

**ಭಾವವಿಲಾಸಿನೀ–** ಯಸ್ತ್ವಯೇತಿ ॥ ಸಪ್ತಮಸ್ಕಂಧೇ ಹಿರಣ್ಯಕಶಿಪುವಚನಮ್ । ಮದನ್ಯೋ ಜಗದೀಶ್ವರಃ ಕ್ವೇತಿ ಸ್ವಾನ್ಯೇಶ್ವರನಿಷೇಧೇನ । ಉಪಲಕ್ಷಣಂ ಚೈತತ್ । ಸ್ವಾನ್ಯಮೀಶ್ವರಂ ನರಹರಿಂ ಭಾವಯತಃ ಪ್ರಹ್ಲಾದಸ್ಯ ಮಂದಭಾಗ್ಯೇತಿ ನಿಂದನಾಚ್ಚೇತ್ಯಪಿ ದ್ರಷ್ಟವ್ಯಮ್ । ಅತ್ರ ವಾಕ್ಯೇ ಅತ್ರ ಅಚ್ಯುತೋಽಹಮಿತಿ ಬುದ್ಧೌ ॥ ೧೧೮೬–೧೧೮೮ ॥

ಈಶ್ವರೋಹಮಹಂ ಭೋಗೀ ಸಿದ್ಧೋಹಂ ಬಲವಾನ್ ಸುಖೀ ।
ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ ॥ ೧೧೮೯ ॥

ಇದಂ ಗೀತಾಸು ಕೃಷ್ಣೇನ ಹ್ಯಾಸುರೀಂ ಪಾರ್ಥ ಮೇ ಶೃಣು ।
ಇತ್ಯಾರಭ್ಯೋದಿತಂ ತಸ್ಮಾನ್ಮತಮೇತದ್ಧಿ ರಕ್ಷಸಾಂ ॥ ೧೧೯೦ ॥

**ಅರ್ಥ–** ಅಹಂ ಈಶ್ವರಃ= ನಾನೇ ಈಶ್ವರ, ಅಹಂ ಭೋಗೀ= ನಾನು ಒಳ್ಳೆಯ ಭೋಗವುಳ್ಳವನು, ಅಹಂ ಸಿದ್ಧಃ ಬಲವಾನ್ ಸುಖೀ= ನಾನು ಸಿದ್ಧಪುರುಷ, ಬಲಿಷ್ಠನಾದವನು, ಸುಖವನ್ನು ಹೊಂದಿದವನು, ಜಗತ್= ಪ್ರಪಂಚವು, ಅಸತ್ಯಂ= ಅಸತ್ಯವಾದುದು, ಅಪ್ರತಿಷ್ಠಂ= ಪ್ರತಿಷ್ಠಾರಹಿತವಾದುದು, ಅನೀಶ್ವರಂ= ಈಶ್ವರ ರಹಿತವಾದುದು ಎಂದು, ತೇ= ಅವರು, ಆಹುಃ= ಹೇಳುತ್ತಾರೆ, ಇದಂ= ಇದು, ಗೀತಾಸು= ಭಗವದ್ಗೀತೆಯಲ್ಲಿ, ಕೃಷ್ಣೇನ= ಕೃಷ್ಣನಿಂದ, ಆಸುರೀಂ ಪಾರ್ಥ ಮೇ ಶೃಣು= ಪಾರ್ಥನೇ ಆಸುರೀ ಸಂಪತ್ತಿಯನ್ನು ಹೇಳುತ್ತೇನೆ ಕೇಳು, ಇತ್ಯಾರಭ್ಯ= ಎಂದು ಪ್ರಾರಂಭಿಸಿ, ಉದಿತಂ= ಹೇಳಲ್ಪಟ್ಟಿದೆ, ತಸ್ಮಾತ್= ಆ ಕಾರಣದಿಂದ, ಏತನ್ಮತಂ= ಈ ಮತವು, ರಕ್ಷಸಾಂ ಹಿ= ರಾಕ್ಷಸರಿಗೇ ಸೇರಿದ್ದಷ್ಟೇ.

**ಅನುವಾದ–** 'ನಾನು ಈಶ್ವರ, ನಾನು ಭೋಗಿ, ನಾನು ಸಿದ್ಧ ಪುರುಷ, ನಾನು ಬಲಿಷ್ಠ, ನಾನು ಪ್ರಶಸ್ತವಾದ ಸುಖವುಳ್ಳವನು, ಜಗತ್ತು ಅಸತ್ಯವಾದುದು, ಪ್ರತಿಷ್ಠಾರಹಿತವಾದುದು, ಈಶ್ವರ ರಹಿತವಾದುದು ಎಂದು ಅವರು ಹೇಳುತ್ತಾರೆ' ಎಂದು ಭಗವದ್ಗೀತೆಯಲ್ಲಿ ಕೃಷ್ಣನೇ 'ಅರ್ಜುನನೇ ಆಸುರೀ ಸಂಪತ್ತನ್ನು ಹೇಳುತ್ತೇನೆ ಕೇಳು' ಎಂದು ಪ್ರಾರಂಭಿಸಿ ಹೇಳಿರುವುದರಿಂದ ಈ ಮತವು ರಾಕ್ಷಸರ ಮತವೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಈಶ್ವರೋಹಮಿತಿ ಗೀತಾವಾಕ್ಯಮ್ । ತೇಽಸುರಾಃ । ಇದಂ ವಚನದ್ವಯಮ್ ॥ ೧೧೯೦ ॥

**ಅತೋಪಿ ಜೀವಭೇದೋಯಂ ಬುಧೈರ್ಮಾನ್ಯೋ ಮುಮುಕ್ಷುಭಿಃ ॥೧೧೯೧॥**

**ಅರ್ಥ–** ಅತೋಪಿ= ಆ ಕಾರಣದಿಂದಲೂ, ಅಯಂ ಜೀವಭೇದಃ= ಈ ಜೀವೇಶ್ವರ ಭೇದವು, ಮುಮುಕ್ಷುಭಿಃ= ಮೋಕ್ಷಾಕಾಂಕ್ಷಿಗಳಾದ, ಬುಧೈಃ= ವಿವೇಕಿಗಳಿಂದ, ಮಾನ್ಯಃ= ಗೌರವಿಸಲ್ಪಡತಕ್ಕದ್ದು.

**ಅನುವಾದ–** ಈ ಎಲ್ಲ ಕಾರಣಗಳಿಂದಲೂ ಜೀವೇಶ್ವರ ಭೇದವು ಮುಮುಕ್ಷುಗಳಾದ ವಿವೇಕಿಗಳಿಂದ ಗೌರವಿಸಲ್ಪಡತಕ್ಕದ್ದು.

**ಭಾವವಿಲಾಸಿನೀ–** ಅತಃ ಈಶ್ವರೋಹಮಿತಿ ಬುದ್ಧೇಃ ಜಗದಸತ್ಯತ್ವಬುದ್ಧೇಶ್ಚ ಆಸುರಮತತ್ವಕಥನಾತ್ ॥ ೧೧೯೧ ॥

**ಇತ್ಯೈಕ್ಯನಿಂದನಾದ್ ಗ್ರಂಥೇ ಸ್ಪಷ್ಟಂ ಗ್ರಂಥಕೃತೈವ ಹಿ ।**
**ಕ್ವಚಿದಾಪಾತತಃ ಪ್ರಾಪ್ತಂ ನೈಕ್ಯಂ ವಾಕ್ಯಾರ್ಥ ಇಷ್ಯತೇ ॥ ೧೧೯೨ ॥**

**ಅರ್ಥ–** ಇತಿ= ಈ ರೀತಿಯಲ್ಲಿ, ಗ್ರಂಥಕೃತೈವ= ಭಾಗವತ, ಮಹಾಭಾರತ ಗ್ರಂಥಕರ್ತರಾದ ವ್ಯಾಸರಿಂದಲೇ, ಗ್ರಂಥೇ= ತಮ್ಮ ಗ್ರಂಥಗಳಲ್ಲಿ, ಸ್ಪಷ್ಟಂ ಐಕ್ಯ ನಿಂದನಾತ್= ಸ್ಪಷ್ಟವಾಗಿ ಐಕ್ಯವು ನಿಂದಿಸಲ್ಪಡುವುದರಿಂದ, ಕ್ವಚಿತ್= ಒಮ್ಮೊಮ್ಮೆ, ಆಪಾತತಃ ಪ್ರಾಪ್ತಂ= ಮೇಲ್ನೋಟಕ್ಕೆ ಕಾಣುವಂತಹ, ಐಕ್ಯಂ= ಜೀವ ಬ್ರಹ್ಮೈಕ್ಯವು, ವಾಕ್ಯಾರ್ಥಃ= ವ್ಯಾಕಾರ್ಥವೆಂದು, ನ ಇಷ್ಯತೇ= ಸ್ವೀಕರಿಸಲ್ಪಡುವುದಿಲ್ಲ.

**ಅನುವಾದ–** ಹೀಗೆ ಗ್ರಂಥಕಾರರಾದ ವೇದವ್ಯಾಸರೇ ತಮ್ಮ ಗ್ರಂಥಗಳಾದ ಭಾಗವತದಲ್ಲಿ ಮತ್ತು ಮಹಾಭಾರತದಲ್ಲಿ ಸ್ಪಷ್ಟವಾಗಿ ಜೀವಬ್ರಹ್ಮೈಕ್ಯವನ್ನು ನಿಂದಿಸಿರುವುದರಿಂದ ಒಮ್ಮೊಮ್ಮೆ ಅಂತಹ ಐಕ್ಯವನ್ನು ಹೇಳುವಂತೆ ತೋರುವ ವಾಕ್ಯವು ಅಂತಹ ವಾಕ್ಯಗಳ ನಿಜವಾದ ಅರ್ಥವಾಗುವುದಿಲ್ಲ.

**ಭಾವವಿಲಾಸಿನೀ–** ಇತಿ ಭಾಗವತೇ ಗೀತಾಸು ಚೋಕ್ತಪ್ರಕಾರೇಣ ॥ ೧೧೯೨ ॥

**ಅವಿರುದ್ಧೇ ತು ವಾಕ್ಯಾರ್ಥೇ ಯಥಾಶ್ರುತಪರಿಗ್ರಹಃ ।**
**ವಿರುದ್ಧೇ ಸತಿ ವಾಕ್ಯಾರ್ಥೇ ವೃತ್ತಿರ್ವೃತ್ತ್ಯಂತರೇ ಸತಾಂ ॥ ೧೧೯೩ ॥**

**ಅರ್ಥ–** ವಾಕ್ಯಾರ್ಥೇ= ವಾಕ್ಯಾರ್ಥವು, ಅವಿರುದ್ಧೇ ತು= ಯಾವ ಪ್ರಮಾಣಕ್ಕೂ ವಿರುದ್ಧವಾಗದಿದ್ದರೆ ಮಾತ್ರ, ಯಥಾಶ್ರುತಪರಿಗ್ರಹಃ= ಮೇಲ್ನೋಟಕ್ಕೆ ತೋರುವ

ಅರ್ಥವನ್ನೇ ಸ್ವೀಕರಿಸಬೇಕು, ವಾಕ್ಯಾರ್ಥೇ= ಮೇಲ್ನೋಟಕ್ಕೆ ತೋರುವ ವಾಕ್ಯಾರ್ಥವು, ವಿರುದ್ಧೇ ಸತಿ= ಪ್ರಮಾಣಾಂತರ ವಿರುದ್ಧವಾಗಿದ್ದರೆ, ಸತಾಂ= ಸಜ್ಜನರಿಗೆ, ವೃತ್ತ್ಯಂತರೇ= ಲಕ್ಷಣಾದಿ ವೃತ್ತಿಯಲ್ಲಿ, ವೃತ್ತಿಃ= ವಾಕ್ಯವು ಪ್ರವೃತ್ತವಾಗುತ್ತದೆ ಎಂದು ಅಭಿಪ್ರಾಯವಿರುತ್ತದೆ.

**ಅನುವಾದ–** ಮೇಲ್ನೋಟಕ್ಕೆ ತೋರುವ ವಾಕ್ಯಾರ್ಥವು ಪ್ರಮಾಣಾಂತರ ವಿರುದ್ಧವಾಗದಿದ್ದರೆ ಮಾತ್ರ ಆ ಅರ್ಥವನ್ನೇ ಸ್ವೀಕರಿಸಬೇಕು. ಆ ವಾಕ್ಯಾರ್ಥವು ಪ್ರಮಾಣಾಂತರ ವಿರುದ್ಧವಾಗಿದ್ದರೆ ವಾಕ್ಯಕ್ಕೆ ಶಕ್ತಿ ವೃತ್ತಿಯನ್ನು ಬಿಟ್ಟು ಲಕ್ಷಣಾವೃತ್ತಿಯಿಂದಲಾಗಲೀ ಅಥವಾ ಗೌಣೀವೃತ್ತಿಯಿಂದಲಾಗಲೀ ಅರ್ಥವನ್ನು ಹೇಳಬೇಕು ಎಂದು ಸಜ್ಜನರಿಗೆ ಅಭಿಪ್ರೇತವಾದುದು.

**ಭಾವವಿಲಾಸಿನೀ–** ಆಪಾತಪ್ರತೀತಮೈಕ್ಯಮರ್ಥೋ ನಚೇತ್ ಕಸ್ತರ್ಹಿ ವಾಕ್ಯಾರ್ಥ ಇತ್ಯತ ಆಹ – **ಅವಿರುದ್ಧ ಇತಿ** ॥ ಅನೇನ ದ್ವಾಸುಪರ್ಣೇತ್ಯಾದಿ ಭೇದಶ್ರುತೀನಾಂ ಪ್ರತೀತಾರ್ಥ ಏವ ಗ್ರಾಹ್ಯ ಇತಿ ಚ ಸೂಚಯತಿ ॥ ೧೯೩ ॥

ಏವಂ ಚ ಭವದದ್ವೈತಭಿಕ್ಷುಃ ರಾಕ್ಷಸಮಂದಿರೇ ।
ಭೈಕ್ಷಾರ್ಥಮಗಮತ್ ತೇಷಾಂ ನಾಶೇ ಚಾನಶನೋಽಪತತ್ ॥ ೧೯೪ ॥

**ಅರ್ಥ–** ಏವಂ ಚ= ಈ ರೀತಿಯಲ್ಲಿ, ಭವದದ್ವೈತಭಿಕ್ಷುಃ= ನಿನ್ನ ಅದ್ವೈತ ವಾಕ್ಯವೆಂಬ ಸಂನ್ಯಾಸಿಯು, ರಾಕ್ಷಸಮಂದಿರೇ= ರಾಕ್ಷಸರ ಮನೆಗಳಿಗೆ, ಭೈಕ್ಷಾರ್ಥಂ= ಭಿಕ್ಷೆಯ ಸಲುವಾಗಿ, ಅಗಮತ್= ಹೋಯಿತು, ತೇಷಾಂ ನಾಶೇ= ಆ ರಾಕ್ಷಸರು ನಾಶವಾಗುತ್ತಿರಲು, ಅನಶನಃ= ಅನ್ನವಿಲ್ಲದೇ, ಅಪತತ್ ಚ= ಬಿದ್ದು ಹೋಯಿತು.

**ಅನುವಾದ–** ಆದ್ದರಿಂದ ನಿನ್ನ ಅದ್ವೈತವಾಕ್ಯವೆಂಬ ಭಿಕ್ಷುವು ರಾಕ್ಷಸ ಮಂದಿರಕ್ಕೆ ಭಿಕ್ಷೆಗಾಗಿ ಹೋಯಿತು. ಆ ರಾಕ್ಷಸರು ನಾಶವಾಗುತ್ತಿರಲು ಅನ್ನವಿಲ್ಲದೇ ಅದೂ ಬಿದ್ದು ಹೋಯಿತು.

**ಭಾವವಿಲಾಸಿನೀ–** ಭಾಗವತೇ ಗೀತಾಯಾಂ ಚ ಸರ್ವತ್ರೈಕ್ಯಸ್ಯಾಸುರಪಕ್ಷತ್ವ ಶ್ರವಣಾದೈಕ್ಯ-ಮಪಹಸತಿ- **ಏವಂಚೇತಿ** ॥ ೧೯೪ ॥

**ವಿವರಣೆ–** ಅದ್ವೈತೋಪಾಸನೆಯನ್ನು ಮಾಡುವವರು ರಾಕ್ಷಸರೇ ಎಂದು ಹೇಳಿರುವುದರಿಂದ ಅದ್ವೈತ ವಾಕ್ಯಗಳಿಗೆ ಆ ಅರ್ಥವನ್ನು ಹೇಳಲು ರಾಕ್ಷಸರಿಂದಲೇ ಅದನ್ನು ಪಡೆಯಬೇಕಾಗಿರುವುದರಿಂದ ಅದು ರಾಕ್ಷಸರ ಮನೆಗೆ ಹೋಗಿ ಆ ಅರ್ಥವನ್ನು ಸಂಪಾದಿಸಬೇಕು. ಆದರೆ ರಾಕ್ಷಸರಿಗೆ ವಾಯುದೇವರಿಂದ ನಾಶವುಂಟಾಗುವಾಗ ಈ ಸಂನ್ಯಾಸಿಗೆ ಭಿಕ್ಷೆಯನ್ನು ಹಾಕುವವರು ಯಾರೂ ಇಲ್ಲವಾದ್ದರಿಂದ ಆಹಾರವಿಲ್ಲದೇ ಅದ್ವೈತವಾಕ್ಯವು ಬಿದ್ದು ಮೃತವಾಯಿತು ಎಂದು ಅಭಿಪ್ರಾಯ.

ಸುಪರ್ಣೌ ದ್ವೌ ಸಹಯುಜೌ ಸಖಾಯೌ ದೇಹಪಿಪ್ಪಲಂ ।
ಬ್ರಹ್ಮಜೀವಾಭಿದೌ ನಿತ್ಯಂ ಸಸ್ವಜಾತೇ ಪರಾವರೌ ॥ ೧೯೫ ॥

ತಯೋರ್ಮಧ್ಯೇ ಬ್ರಹ್ಮಣೋನ್ಯೋ ಯಸ್ತು ಜೀವಾಭಿದಃ ಖಗಃ ।
ಸ ಪುಣ್ಯಪಾಪಕರ್ಮೋತ್ಥಂ ಫಲಮತ್ತಿ ಸುಖಾಸುಖಂ ॥ ೧೯೬ ॥

ಜೀವಾದನ್ಯಸ್ತು ಯಃ ಪಕ್ಷೀ ಪರಮಾತ್ಮಾಭಿದೋ ಮಹಾನ್ ।
ಸೋಽನಶ್ನನ್ನಭಿತೋ ನಿತ್ಯಂ ಚಾಕಶೀತಿ ಮಹಾಪ್ರಭುಃ ॥ ೧೯೭ ॥

ಇತಿ ಶ್ರುತಿಸ್ತಯೋರ್ಭೇದಂ ಸ್ಪಷ್ಟಮಾಹ ಸಯುಕ್ತಿಕಂ ।
ಅನ್ಯಾವಕಾಶಶೂನ್ಯಾ ಸಾ ಮಾನ್ಯಾ ಕೇನ ನ ವಾದಿನಾ ॥ ೧೯೮ ॥

**ಅರ್ಥ–** ಸಹಯುಜೌ= ಜೊತೆಯಲ್ಲೇ ಇರುವ, ಸಖಾಯೌ= ಸ್ನೇಹಿತರಾದ, ಪರಾವರೌ= ಉತ್ತಮ ಮತ್ತು ನೀಚರಾದ, ದೇಹಪಿಪ್ಪಲಂ= ದೇಹವೆಂಬ ಅಶ್ವತ್ಥ ವೃಕ್ಷವನ್ನು, ಬ್ರಹ್ಮಜೀವಾಭಿದೌ= ಬ್ರಹ್ಮ ಮತ್ತು ಜೀವ ಎಂಬ ಹೆಸರಿನ, ದ್ವೌ ಸುಪರ್ಣೌ= ಎರಡು ಪಕ್ಷಿಗಳು, ನಿತ್ಯಂ= ಯಾವಾಗಲೂ, ಸಸ್ವಜಾತೇ= ಆಲಿಂಗನ ಮಾಡಿಕೊಂಡಿವೆ, ತಯೋರ್ಮಧ್ಯೇ= ಅವೆರಡರ ಮಧ್ಯದಲ್ಲಿ, ಬ್ರಹ್ಮಣಃ ಅನ್ಯಃ= ಬ್ರಹ್ಮನಿಗಿಂತ ಭಿನ್ನನಾದ, ಯಃ= ಯಾವ, ಜೀವಾಭಿದಃ ಖಗಃ= ಜೀವನೆಂಬ ಪಕ್ಷಿ ಇದ್ದಾನೆಯೋ, ಸಃ= ಅವನು, ಪುಣ್ಯಪಾಪಕರ್ಮೋತ್ಥಂ= ಪುಣ್ಯ ಮತ್ತು ಪಾಪಗಳಿಂದ ಉಂಟಾದ, ಸುಖಾಸುಖಂ= ಸುಖ ದುಃಖರೂಪವಾದ, ಫಲಂ= ಫಲವನ್ನು, ಅತ್ತಿ= ತಿನ್ನುತ್ತಾನೆ. ಜೀವಾದನ್ಯಸ್ತು= ಆದರೆ ಜೀವನಿಗಿಂತ ಭಿನ್ನನಾದ, ಪರಮಾತ್ಮಾಭಿದಃ= ಪರಮಾತ್ಮ ಎಂಬ ಹೆಸರಿನ, ಯಃ ಮಹಾನ್ ಪಕ್ಷೀ= ಯಾವ ದೊಡ್ಡ ಪಕ್ಷಿ ಇದೆಯೋ, ಮಹಾಪ್ರಭುಃ= ಮಹಾಪ್ರಭುವಾದ, ಸಃ= ಅವನು, ಅನಶ್ನನ್= ಏನನ್ನೂ ತಿನ್ನದೆಯೇ, ಅಭಿತಃ= ಎಲ್ಲ ಕಡೆಗಳಲ್ಲಿಯೂ, ನಿತ್ಯಂ= ಯಾವಾಗಲೂ, ಚಾಕಶೀತಿ= ಪ್ರಕಾಶಿಸುತ್ತಿದ್ದಾನೆ, ಇತಿ= ಈ ರೀತಿಯಾದ, ಅನ್ಯಾವಕಾಶಶೂನ್ಯಾ= ಬೇರೆ ಅರ್ಥವನ್ನು ಮಾಡಲು ಸಾಧ್ಯವಿಲ್ಲದಂತಹ, ಶ್ರುತಿಃ= ದ್ವಾಸುರ್ಪಣಾ ಶ್ರುತಿಯು, ತಯೋರ್ಭೇದಂ= ಅವರಿಬ್ಬರ ಭೇದವನ್ನು, ಸಯುಕ್ತಿಕಂ= ಯುಕ್ತಿ ಸಹಿತವಾಗಿ, ಸ್ಪಷ್ಟಂ= ಸ್ಪಷ್ಟವಾಗಿ, ಆಹ= ಹೇಳಿದೆ, ಸಾ= ಆ ಶ್ರುತಿಯು, ಕೇನ ವಾದಿನಾ= ಯಾವ ವಾದಿಯಿಂದ, ನ ಮಾನ್ಯಾ= ಗೌರವಿಸಲ್ಪಡುವುದಿಲ್ಲ?

**ಅನುವಾದ–** ಜೊತೆಯಲ್ಲಿರುವ ಸ್ನೇಹಿತರಾದ ಜೀವ ಬ್ರಹ್ಮ ಎಂಬ ಹೆಸರಿನ ಉತ್ತಮವಾದ ಮತ್ತು ನೀಚವಾದ ಎರಡು ಪಕ್ಷಿಗಳು ದೇಹವೆಂಬ ಪಿಪ್ಪಲ ವೃಕ್ಷವನ್ನು ಯಾವಾಗಲೂ ಆಲಿಂಗನ ಮಾಡಿಕೊಂಡಿವೆ. ಅವುಗಳ ಮಧ್ಯದಲ್ಲಿ ಬ್ರಹ್ಮನಿಗಿಂತ ಭಿನ್ನನಾದ ಜೀವ ಎಂಬ ಪಕ್ಷಿಯು ಪುಣ್ಯಕರ್ಮ ಮತ್ತು ಪಾಪಕರ್ಮಗಳ ಫಲವಾದ

ಸುಖ ಮತ್ತು ದುಃಖಗಳನ್ನು ಭೋಗಿಸುತ್ತದೆ. ಆದರೆ ಜೀವನಿಗಿಂತ ಭಿನ್ನವಾದ ಪರಮಾತ್ಮನೆಂಬ ಹೆಸರಿನ ಯಾವ ದೊಡ್ಡ ಪಕ್ಷಿ ಇದೆಯೋ ಮಹಾಪ್ರಭುವಾದ ಅದು ಆಹಾರವಿಲ್ಲದೆಯೇ ಎಲ್ಲ ಕಡೆಗಳಲ್ಲಿಯೂ ಪೂರ್ಣವಾಗಿ ಪ್ರಕಾಶಿಸಿ ಕೊಂಡಿದೆ. ಈ ರೀತಿಯಾಗಿ ಬೇರೆ ಅರ್ಥವನ್ನು ಹೇಳಲು ಸಾಧ್ಯವಿಲ್ಲದಂತಹ ಈ ದ್ವಾಸುಪರ್ಣಾ ಶ್ರುತಿಯು ಜೀವೇಶ್ವರರಿಗೆ ಯುಕ್ತಿ ಸಹಿತವಾಗಿ ಭೇದವನ್ನು ಸ್ಪಷ್ಟವಾಗಿ ಹೇಳಿದೆ. ಆ ಶ್ರುತಿಯು ಯಾರಿಗೆ ಮಾನ್ಯವಾಗುವುದಿಲ್ಲ?

**ಭಾವವಿಲಾಸಿನೀ–** ಇದಾನೀಂ ದ್ವಾಸುಪರ್ಣೇತಿ ಶ್ರುತೇಃ ಸವಿಸ್ತರಮರ್ಥಮಾಹ – ಸುಪರ್ಣಾ-ವಿತಿ ॥ ತಯೋರನ್ಯ ಇತ್ಯತ್ರ ಸಾಕಾಂಕ್ಷಾನ್ಯಪದಸ್ಯ ಯೋಗ್ಯತಯಾ ಶೇಷಪೂರಣಂ ಬ್ರಹ್ಮಣ ಇತಿ। ಅನಶ್ನನ್ನನ್ಯ ಇತ್ಯತ್ರ ಚ ಜೀವಾದಿತಿ। ಚಾಕಶೀತಿ ಅತಿಶಯೇನ ಪ್ರಕಾಶತೇ ॥ ॥ ೧೧೫-೧೧೮ ॥

**ವಿವರಣೆ–** ದ್ವಾಸುಪರ್ಣಾ ಎಂಬ ಶ್ರುತಿಯನ್ನು ವಿಸ್ತಾರವಾಗಿ ವಿಮರ್ಶೆ ಮಾಡಿ ಜೀವ ಬ್ರಹ್ಮರ ಭೇದವನ್ನು ಸಮರ್ಥನೆ ಮಾಡುತ್ತಾರೆ.

ಯಸ್ಮಾಜ್ಜೀವೇಶಯೋರ್ಭೇದವ್ಯಾಪ್ಯದ್ವಿತ್ವಾಖ್ಯಯುಕ್ತಿತಃ ।
ಪ್ರಾಕ್ ಪ್ರಸಾಧ್ಯ ಭಿದಾಂ ಪಶ್ಚಾದಶನಾನಶನಾಖ್ಯಯಾ ।
ವಿರುದ್ಧ ಧರ್ಮಯುಕ್ತ್ಯಾ ಚ ಬಲೀಯಸ್ಯಾ ತಯೋರ್ಭಿದಾಂ ॥ ೧೧೯ ॥

ಪುನಃ ಪ್ರಸಾಧ್ಯ ಪಶ್ಚಾಚ್ಚ ಶ್ರುತಿಃ ಸ್ಪಷ್ಟಂ ದ್ವಿಧರ್ಮಿಣೀಂ ।
ಅನ್ಯೋಽಸಾವಯಮನ್ಯಶ್ಚೇತ್ಯಾಹ ಜೀವೇಶಯೋರ್ಭಿದಾಂ ॥ ೧೨೦೦ ॥

ತಸ್ಮಾದ್ ದ್ವಿರೂಪಯಾ ಯುಕ್ತ್ಯಾ ಶ್ರುತ್ಯಾ ಚೋಭಯರೂಪಯಾ ।
ಸಾಧಯಂತೀ ತಯೋರ್ಭೇದಂ ಕೇನ ಮಾನ್ಯಾ ನ ವಾದಿನಾ ॥ ೧೨೦೧ ॥

**ಅರ್ಥ–** ಯಸ್ಮಾತ್= ಯಾವ ಕಾರಣದಿಂದ, ಜೀವೇಶಯೋರ್ಭೇದ ವ್ಯಾಪ್ಯದ್ವಿತ್ವಾಖ್ಯಯುಕ್ತಿತಃ= ಜೀವೇಶ್ವರ ಭೇದಕ್ಕೆ ವ್ಯಾಪ್ಯವಾದ ದ್ವಿತ್ವ ಎಂಬ ಯುಕ್ತಿಯಿಂದ, ಪ್ರಾಕ್= ಮೊದಲು, ಭಿದಾಂ ಪ್ರಸಾಧ್ಯ= ಭೇದವನ್ನು ಸಾಧಿಸಿ, ಪಶ್ಚಾದ್= ಅನಂತರ, ಅಶನಾನಶನಾಖ್ಯಯಾ= ಭೋಗ ಮತ್ತು ತದಭಾವರೂಪವಾದ, ಬಲೀಯಸ್ಯಾ= ಪ್ರಬಲವಾದ, ವಿರುದ್ಧ ಧರ್ಮಯುಕ್ತ್ಯಾ ಚ= ವಿರುದ್ಧ ಧರ್ಮಾಧಿಕರಣತ್ವರೂಪವಾದ ಯುಕ್ತಿಯಿಂದಲೂ, ತಯೋರ್ಭಿದಾಂ= ಆ ಜೀವೇಶ್ವರ ಭೇದವನ್ನು, ಪುನಃ ಪ್ರಸಾಧ್ಯ= ಪುನಃ ಸಮರ್ಥಿಸಿ, ಪಶ್ಚಾಚ್ಚ= ಅನಂತರವೂ ಸಹ, ಶ್ರುತಿಃ= ಶ್ರುತಿಯು, ದ್ವಿಧರ್ಮಿಣೀಂ= ಎರಡೂ ಧರ್ಮಿಗಳಲ್ಲಿರುವ, ಜೀವೇಶಯೋರ್ಭಿದಾಂ= ಜೀವಭೇದವನ್ನು ಮತ್ತು ಈಶ್ವರ

ಭೇದವನ್ನು, ಅನ್ಯೋಽಸೌ= ಪರಮಾತ್ಮನು ಭಿನ್ನನಾದವನು, ಅಯಮನ್ಯಶ್ಚ= ಈ ಜೀವನೂ ಭಿನ್ನನಾದವನು, ಇತ್ಯಾಹ= ಎಂದು ಹೇಳಿತೋ (ಆ ಕಾರಣದಿಂದ ಜೀವೇಶ್ವರ ಭೇದವು ಸಿದ್ಧವಾಗುತ್ತದೆ). ತಸ್ಮಾತ್= ಆ ಕಾರಣದಿಂದ, ದ್ವಿರೂಪಯಾ ಯುಕ್ತ್ಯಾ= ಎರಡು ರೂಪವಾದ ಯುಕ್ತಿಯಿಂದಲೂ, ಉಭಯರೂಪಯಾ ಶ್ರುತ್ಯಾ ಚ= ಎರಡು ರೀತಿಯಾದ ಶ್ರುತಿಯಿಂದಲೂ, ತಯೋರ್ಭೇದಂ ಸಾಧಯಂತೀ= ಆ ಜೀವೇಶ್ವರ ಭೇದವನ್ನು ಸಾಧಿಸುವ ಶ್ರುತಿಯು, ಕೇನ ವಾದಿನಾ= ಯಾವ ವಾದಿಯಿಂದ, ನ ಮಾನ್ಯಾ= ಮಾನ್ಯವಾಗುವುದಿಲ್ಲ?

**ಅನುವಾದ–** ಯಾವ ಕಾರಣದಿಂದ ಆ ಶ್ರುತಿಯು ಮೊದಲು ಜೀವೇಶ ಭೇದವ್ಯಾಪ್ತವಾದ ದ್ವಿತ್ವ ರೂಪವಾದ ಯುಕ್ತಿಯಿಂದ ಭೇದವನ್ನು ಸಾಧಿಸಿ ಅನಂತರ ಪ್ರಬಲವಾದ ಅತ್ತೃತ್ವತದಭಾವ ರೂಪವಾದ ವಿರುದ್ಧ ಧರ್ಮಾಧಿಕರಣತ್ವ ರೂಪವಾದ ಯುಕ್ತಿಯಿಂದಲೂ ಅವರಿಬ್ಬರ ಭೇದವನ್ನು ಪುನಃ ಸಮರ್ಥಿಸಿ ಮತ್ತೂ ಅನಂತರ ಈಶ್ವರನು ಭಿನ್ನನಾದವನು, ಜೀವನು ಭಿನ್ನನಾದವನು ಎಂದು ಹೇಳಿ, ಈಶ್ವರ ಮತ್ತು ಜೀವ ಧರ್ಮಿಕವಾದ ಭೇದವನ್ನು ಸ್ಪಷ್ಟವಾಗಿ ಹೇಳಿದೆಯೋ, ಆ ಕಾರಣದಿಂದ ಎರಡು ಯುಕ್ತಿಗಳಿಂದಲೂ ಮತ್ತು ಎರಡು ಶ್ರುತಿಗಳಿಂದಲೂ ಜೀವೇಶ್ವರ ಭೇದವನ್ನು ಸಾಧನೆ ಮಾಡುವ ಆ ಶ್ರುತಿಯು ಯಾವ ವಾದಿಯಿಂದ ಮಾನ್ಯವಾಗುವುದಿಲ್ಲ?

**ಭಾವವಿಲಾಸಿನೀ–** ಅನ್ಯಾವಕಾಶಶೂನ್ಯತ್ವಮೇವ ವಿಶದಯತಿ ॥ **ಯಸ್ಮಾದಿತ್ಯಾದಿನಾ** ॥ ಜೀವೇಶಯೋರ್ಭಿದಾಮಿತಿ ಸಂಬಂಧಃ । ತಯೋರ್ಜೀವೇಶಯೋಃ । ತಯೋರನ್ಯ ಇತ್ಯತ್ರ ಬ್ರಹ್ಮಪ್ರತಿಯೋಗಿಕ ಜೀವಧರ್ಮಿಕಭೇದಕಥನಾತ್ ಅನಶ್ನನ್ನನ್ಯ ಇತ್ಯತ್ರ ಚ ಜೀವಪ್ರತಿಯೋಗಿ-ಕೇಶ್ವರಧರ್ಮಿಕಭೇದಕಥನಾತ್ ದ್ವಿಧರ್ಮಿಣೇಮಿತ್ಯುಕ್ತಮ್ ॥ ೧೧೯೯-೧೨೦೧ ॥

**ವಿವರಣೆ–** 'ದ್ವಾಸುಪರ್ಣಾ' ಎಂಬಲ್ಲಿ 'ದ್ವೌ' ಎಂಬ ಶಬ್ದವಿದೆ. ಇದಕ್ಕೆ 'ದ್ವಿತ್ವ' ಉಳ್ಳದ್ದು ಎಂದು ಅರ್ಥ. ದ್ವಿತ್ವವು ಭೇದವ್ಯಾಪ್ತ. ಆದ್ದರಿಂದ ವ್ಯಾಪ್ಯವಾದ ದ್ವಿತ್ವವನ್ನು ಹೇಳಿದ್ದರಿಂದ ವ್ಯಾಪಕವಾದ ಭೇದವು ಸಿದ್ಧವಾಗುತ್ತದೆ. ಇದು ಒಂದು ಯುಕ್ತಿ. ಅಶನ ಅನಶನ ಎಂದರೆ ಭೋಗ-ಭೋಗಾಭಾವ ಅಥವಾ ಅತ್ತೃತ್ವ-ಅನತ್ತೃತ್ವ ಇವು ವಿರುದ್ಧ ಧರ್ಮಗಳು. ವಿರುದ್ಧ ಧರ್ಮಾದಿಕರಣತ್ವವು ಯಾವಾಗಲೂ ಭೇದವನ್ನು ಸಾಧಿಸುತ್ತದೆ. ಇದು ಎರಡನೇ ಯುಕ್ತಿ. ಹೀಗೆ ಎರಡು ಯುಕ್ತಿಗಳು. 'ಇನ್ನು ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ' ಎಂಬಲ್ಲಿ ಮೊದಲನೆಯ ಅನ್ಯ ಶಬ್ದವು ಜೀವನನ್ನು ಹೇಳುತ್ತದೆ. ಆದ್ದರಿಂದ ಅದು ಜೀವಧರ್ಮಿಕ ಪರಮಾತ್ಮ ಪ್ರತಿಯೋಗಿಕ ಭೇದವನ್ನು ಹೇಳುತ್ತದೆ. ಎರಡನೆಯ ಅನ್ಯಶಬ್ದವು ಈಶ್ವರನನ್ನು ಹೇಳುತ್ತದೆ. ಅದು ಜೀವ ಪ್ರತಿಯೋಗಿಕವಾದ ಈಶ್ವರಧರ್ಮಿಕವಾದ ಭೇದವನ್ನು ಹೇಳುತ್ತದೆ. ಹೀಗೆ ಭೇದವನ್ನು ಹೇಳುವ ಎರಡು ಶ್ರುತಿಗಳು ಮತ್ತು ಮೊದಲು ಹೇಳಿದ ಎರಡು ಯುಕ್ತಿಗಳು ಎಂದು ಅಭಿಪ್ರಾಯ.

**ಅಭ್ಯಾಸಶ್ಚೋಪಪತ್ತೀ ಚ ತಾತ್ಪರ್ಯದ್ಯೋತಕಂ ತ್ರಯಂ ।**
**ಲಿಂಗಂ ಯತೋಽಸ್ತಿ ತತ್ ಸ್ವಾರ್ಥಾನ್ನೈವ ಚಾಲ್ಯಾ ಕಥಂಚನ ॥ ೧೨೦೨ ॥**

**ಅರ್ಥ–** ಅಭ್ಯಾಸಶ್ಚ= ಅಭ್ಯಾಸವೂ, ಉಪಪತ್ತೀ ಚ= ಎರಡು ಉಪಪತ್ತಿಗಳೂ, ತ್ರಯಂ= ಈ ಮೂರು, ಯತಃ= ಯಾವ ಕಾರಣದಿಂದ, ತಾತ್ಪರ್ಯದ್ಯೋತಕಂ ಲಿಂಗಂ= ತಾತ್ಪರ್ಯ ನಿಶ್ಚಾಯಕವಾದ ಲಿಂಗವಾಗಿದೆಯೋ, ತತ್= ಆ ಕಾರಣದಿಂದ ಈ ಶ್ರುತಿಯು, ಕಥಂಚನ= ಯಾವ ಪ್ರಕಾರದಿಂದಲೂ, ಸ್ವಾರ್ಥಾತ್= ತಾನು ಹೇಳುವ ಅರ್ಥದಿಂದ, ಅಚಾಲ್ಯಾ= ಅಲುಗಾಡಿಸಲ್ಪಡುವುದಿಲ್ಲ.

**ಅನುವಾದ–** ಅಭ್ಯಾಸ ಮತ್ತು ಎರಡು ಯುಕ್ತಿಗಳು, ಒಟ್ಟು ಈ ಮೂರು ತಾತ್ಪರ್ಯ ನಿರ್ಣಾಯಕವಾದ ಲಿಂಗಗಳಿರುವುದರಿಂದ ಈ ಶ್ರುತಿಯು ತನ್ನ ಸ್ವಾರ್ಥದಿಂದ ಯಾವ ಪ್ರಕಾರದಿಂದಲೂ ಚ್ಯುತವಾಗುವುದಿಲ್ಲ.

**ಭಾವವಿಲಾಸಿನೀ–** ಅನ್ಯಃ ಅನ್ಯ ಇತ್ಯೇಕಪ್ರಕಾರಾಸಕೃದುಕ್ತಿರೂಪೋಽಭ್ಯಾಸಃ । ತತ್ತಸ್ಮಾತ್ ತಾತ್ಪರ್ಯದ್ಯೋತಕಲಿಂಗತ್ರಯವತ್ತ್ವಾತ್ ॥ ೧೨೦೨ ॥

**ವಿವರಣೆ–** ಯುಕ್ತಿ ಎಂದರೂ ಉಪಪತ್ತಿ ಎಂದರೂ ಒಂದೇ. ಎರಡು ಉಪಪತ್ತಿಗಳನ್ನು ಹಿಂದಿನ ಶ್ಲೋಕದಲ್ಲಿ ಹೇಳಿದ್ದಾಗಿದೆ. ಅನ್ಯ ಶಬ್ದವು ತಯೋರನ್ಯಃ ಅನಶ್ನನ್ ಅನ್ಯಃ ಎಂದು ಎರಡು ಬಾರಿ ಹೇಳಲ್ಪಟ್ಟಿದೆ. ಇದಕ್ಕೆ ಅಭ್ಯಾಸವೆಂದು ಹೆಸರು. ಯುಕ್ತಿಯು ತಾತ್ಪರ್ಯ ಲಿಂಗವಾಗುವಂತೆ ಅಭ್ಯಾಸವೂ ತಾತ್ಪರ್ಯಲಿಂಗವೆಂದು ಸರ್ವವಾದಿ ಸಮ್ಮತವಾಗಿದೆ. ಇಂತಹ ಮೂರು ತಾತ್ಪರ್ಯಲಿಂಗಗಳ ಬಲದಿಂದ ಭೇದವನ್ನು ಹೇಳುವ ಈ ಶ್ರುತಿಯನ್ನು ಯಾವ ಕಾರಣದಿಂದಲೂ ಅದರ ಅರ್ಥದಿಂದ ಅಲುಗಾಡಿಸಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ತದ್ವಿರುದ್ಧಾ ಸಾವಕಾಶಾ ಶ್ರುತಿರೈಕ್ಯಂ ಕಥಂ ವದೇತ್ ।**
**ಪ್ರಬಲಾಯಾ ವಿರೋಧೇನ ದುರ್ಬಲಾಽರ್ಥಾಂತರಂ ಭಜೇತ್ ॥ ೧೨೦೩ ॥**

**ಅರ್ಥ–** ತದ್ವಿರುದ್ಧಾ= ಇದಕ್ಕೆ ವಿರುದ್ಧವಾದಂತಹ, ಸಾವಕಾಶಾ= ಸ್ವತಃ ಅನೇಕ ಅರ್ಥಗಳನ್ನು ಹೊಂದಿರುವಂತಹ, ಶ್ರುತಿಃ= ಐಕ್ಯಶ್ರುತಿಯು, ಐಕ್ಯಂ= ಐಕ್ಯವನ್ನು, ಕಥಂ ವದೇತ್= ಹೇಗೆ ಹೇಳಲು ಸಾಧ್ಯ, ಪ್ರಬಲಾಯಾ ವಿರೋಧೇನ= ಪ್ರಬಲಶ್ರುತಿಯ ವಿರೋಧದಿಂದ, ದುರ್ಬಲಾ= ದುರ್ಬಲವಾದ ಶ್ರುತಿಯು, ಅರ್ಥಾಂತರಂ ಭಜೇತ್= ಬೇರೆ ಅರ್ಥವನ್ನು ಆಶ್ರಯಿಸುತ್ತದೆ.

**ಅನುವಾದ–** ಇಂತಹ ಪ್ರಬಲಶ್ರುತಿಗೆ ವಿರುದ್ಧವಾದ ಸಾವಕಾಶವಾದ ಐಕ್ಯಶ್ರುತಿಯು ಐಕ್ಯವೆಂಬ ಅರ್ಥವನ್ನು ಹೇಗೆ ಹೇಳುತ್ತದೆ? ಈ ಪ್ರಬಲ ಶ್ರುತಿಯ ವಿರೋಧವಿರುವ ಕಾರಣ ದುರ್ಬಲವಾದ ಆ ಶ್ರುತಿಯು ಅರ್ಥಾಂತರವನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ತಥಾ ಭೇದಶ್ರುತ್ಯಾ ವಿರುದ್ಧಾ ತದ್ವಿರುದ್ಧಾ । ಸಾವಕಾಶ ನಿರವಕಾಶಯೋ-ರ್ಮಧ್ಯೇ ನಿರವಕಾಶಂ ಬಲೀಯ ಇತಿ ನ್ಯಾಯಾದಿತಿ ಭಾವಃ ॥ ೧೨೦೩ ॥

**ವಿವರಣೆ–** 'ದ್ವಾಸುಪರ್ಣಾ' ಶ್ರುತಿಯು ಭೇದರೂಪಾರ್ಥದಲ್ಲಿ ಉಪಪತ್ತಿ ಮತ್ತು ಅಭ್ಯಾಸಗಳಿಂದ ಕೂಡಿರುವುದರಿಂದ ಪ್ರಬಲವಾದುದು. ಐಕ್ಯಶ್ರುತಿಗೆ ಅಂತಹ ಉಪಪತ್ತಿ ಇಲ್ಲದಿರುವ ಕಾರಣ ಅದು ದುರ್ಬಲವಾದುದು ಎಂದು ಅಭಿಪ್ರಾಯ.

**ದ್ವೌ ಬುದ್ಧಿಜೀವಾವಿತ್ಯಾಹುಃ ಸಾಂಖ್ಯಾಃ ತ್ವತ್ಪೂರ್ವಪಕ್ಷಿಣಃ ।**
**ತ್ವಂ ತು ಜೀವಪರಾತ್ಮಾನೌ ದ್ವೌ ಹೃದೀತಿ ಪ್ರಸಾಧಯನ್ ॥ ೧೨೦೪ ॥**

**ತಜ್ಜೀವಪರಮಾತ್ಮಾನೌ ಖಗೌ ತವ ಮಮಾಪಿ ಚ ।**
**ತದ್ಭೇದಬೋಧಿಕಾ ಸೇಯಂ ಶ್ರುತಿರಿತ್ಯಪಿ ಸಂಮತಂ ॥ ೧೨೦೫ ॥**

**ಅರ್ಥ–** ತ್ವತ್ಪೂರ್ವಪಕ್ಷಿಣಃ= ನಿನ್ನ ಪೂರ್ವಪಕ್ಷಿಗಳಾದ, ಸಾಂಖ್ಯಾಃ= ಸಾಂಖ್ಯರು, ದ್ವೌ= ಅವೆರಡು, ಬುದ್ಧಿಜೀವಾವಿತ್ಯಾಹುಃ= ಬುದ್ಧಿ ಮತ್ತು ಜೀವ ಎಂದು ಹೇಳುತ್ತಾರೆ, ತ್ವಂ ತು= ನೀನಾದರೂ, ಹೃದಿ= ಹೃದಯದಲ್ಲಿ, ಜೀವಪರಾತ್ಮಾನೌ ಇತಿ= ಜೀವ ಮತ್ತು ಪರಮಾತ್ಮರು ಎಂದು, ಪ್ರಸಾಧಯನ್= ಸಾಧನೆಯನ್ನು ಮಾಡುವವನು. ತತ್= ಆದ್ದರಿಂದ, ತವ ಮಮಾಪಿ ಚ= ನಿನಗೂ ಮತ್ತು ನನಗೂ, ಖಗೌ= ಇಲ್ಲಿ ಹೇಳಲ್ಪಟ್ಟ ಪಕ್ಷಿಗಳು, ಜೀವ ಪರಮಾತ್ಮಾನೌ= ಜೀವಪರಮಾತ್ಮರೇ. ತತ್= ಆದ್ದರಿಂದ, ಇಯಂ ಶ್ರುತಿಃ= ಈ ಶ್ರುತಿಯು, ಭೇದಬೋಧಿಕಾ ಇತ್ಯಪಿ= ಭೇದವನ್ನು ಹೇಳುತ್ತದೆ ಎಂಬುದೂ, ಸಂಮತಂ= ನಮ್ಮಿಬ್ಬರಿಗೂ ಸಮ್ಮತವಾಗಿದೆ.

**ಅನುವಾದ–** ನಿನ್ನ ಪೂರ್ವಪಕ್ಷಿಗಳಾದ ಸಾಂಖ್ಯರು ಈ ಎರಡು ವಸ್ತುಗಳನ್ನು ಬುದ್ಧಿ ಜೀವರೆಂದು ಹೇಳುತ್ತಾರೆ. ನೀನಾದರೋ ಹೃದಯದಲ್ಲಿರುವ ಈ ಎರಡು ವಸ್ತುಗಳು ಜೀವ ಮತ್ತು ಪರಮಾತ್ಮನೆಂದು ಸಾಧಿಸುವವನು. ಆದ್ದರಿಂದ ಈ ಎರಡು ಪಕ್ಷಿಗಳು ಜೀವಪರಮಾತ್ಮರೆಂದು ನಿನಗೂ ಮತ್ತು ನನಗೂ ಸಮ್ಮತವಾದುದು. ಅದರಂತೆಯೇ ಈ ಶ್ರುತಿಯು ಜೀವೇಶ್ವರ ಭೇದಬೋಧಕವಾದುದೆಂಬುದು ನಮ್ಮಿಬ್ಬರಿಗೂ ಸಮ್ಮತವಾದುದು.

**ಭಾವವಿಲಾಸಿನೀ–** ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾದಿತಿ ಬ್ರಹ್ಮಸೂತ್ರಾಧಿಕರಣೇ ಕರ್ಮಫಲಭೋಕ್ತಾರೌ ಹೃದಯಗುಹಾಪ್ರವಿಷ್ಟೌ ಬುದ್ಧಿಜೀವಾವಿತಿ ಕಾಪಿಲಮತಂ ಪೂರ್ವ-ಪಕ್ಷೀಕೃತ್ಯ ಜೀವಾತ್ಮಪರಮಾತ್ಮಾನಾವೇವೇತಿ ಮಾಯಿಭಿರೇವ ಸಿದ್ಧಾಂತಿತತ್ವಾತ್ ಜೀವಪರಮಾ-ವೇವೇಮೌ ಸುಪರ್ಣೌ ನಾನ್ಯಾವಿತ್ಯಾಹ – ದ್ವೌ ಬುದ್ಧಿಜೀವಾವಿತ್ಯಾದಿನಾ ॥ ೧೨೦೪ ॥

ತತ್ತಸ್ಮಾದ್ಬುದ್ಧಿಜೀವಪಕ್ಷಸ್ಯ ತ್ವಯೈವ ದೂಷಿತತ್ವಾತ್ । ತಯೋರ್ಜೀವೇಶಯೋರ್ಭೇದಬೋಧಿಕಾ । ವ್ಯಾವಹಾರಿಕಭೇದಪರೇಯಂ ಶ್ರುತಿರಿತಿ ವದತಾ ಪರೇಣಾಪಿ ಭೇದಪ್ರತಿಪಾದಕತ್ವಸ್ಯಾಂಗೀಕೃತತ್ವಾದಿತಿ ಭಾವಃ । ಉಪಲಕ್ಷಣಂ ಚೈತತ್ । ಆತ್ಮಾನಂ ಪರಮಾತ್ಮಾನಂ ಆತ್ಮಾನಂ ಚೇತ್ಯೇತತ್ ಶ್ರುತೇರ್ನಿರುಕ್ತೌ ಜೀವಾತ್ಮಪರಮಾತ್ಮನೋರೇವ ಸ್ಪಷ್ಟಂ ಕಥನಾಚ್ಚೇತ್ಯಪಿ ದ್ರಷ್ಟವ್ಯಮ್ । ಕಿಂಚ ಪರರೀತ್ಯಾ ಭೇದವಾಕ್ಯಸ್ಯಾಸ್ಯ ಬುದ್ಧಿಜೀವವಿಷಯತಾಂ ಕುರ್ವತಾ ಸ್ವರೀತ್ಯೈವ ಸರ್ವಾಣ್ಯಪ್ಯೈಕ್ಯವಾಕ್ಯಾನಿ ಜಹದಜಹಲ್ಲಕ್ಷಣಯಾ ಬ್ರಹ್ಮವಿಶೇಷಣೀಭೂತಾವಿದ್ಯಾಖ್ಯೋಪಾದಾನಸ್ಯ ಜೀವವಿಶೇಷಣೀಭೂತದೇಹಾಂತಃ ಕರಣಾದ್ಯುಪಾದೇಯಸ್ಯ ಚೈಕ್ಯಪರಾಣಿ ಕುತೋ ನ ಕ್ರಿಯಂತೇ । ನಾಗೃಹೀತವಿಶೇಷಣಾನ್ಯಾಯೇನಾಪಿ ವಿಶೇಷಣೈಕ್ಯಸ್ಯಾಸ್ಯ ನ್ಯಾಯ್ಯತ್ವಾತ್ । ಮಯಾಪಿ ಜಗತ್ ಸ್ರಷ್ಟುರ್ಬ್ರಹ್ಮಣಃ ಕರಸ್ಥಪ್ರಕೃತೇರ್ದಂಡವದ್ವಿಶೇಷಣತಾ ವಕ್ತುಂ ಶಕ್ಯತ ಏವ । ಉಪಾದಾನೋಪಾದೇಯಯೋರಭೇದಶ್ಚಾವಯೋಃ ಸಮ್ಮತ ಏವ । ಉಭಯೋರಪಿ ಜಡತಯಾ ಅವಿರುದ್ಧೇ ಅಬಾಧಿತೇ ಉಭಯವಾದಿಸಂಪ್ರತಿಪನ್ನೇ ಚಾಸ್ಮಿನ್ನೈಕ್ಯೇ ಸತಿ ಕಿಮರ್ಥಮನೀದೃಶಮೈಕ್ಯಂ ಪರಿಕಲ್ಪ್ಯತೇ । ಏವಂಚ ತವಾಭಿಲಷಿತಮೈಕ್ಯಂ ವಾಕ್ಯಾಭಾವಾತ್ ಪ್ರಮಾಣಾಂತರಸ್ಯ ಸುತರಾಮಭಾವಾತ್ ವೇದಾರಣ್ಯಕಂ ವಿಹಾಯಾರಣ್ಯಮೇವ ಗಚ್ಛೇತ್ । ಭೇದಸ್ತೂಕ್ತರೀತ್ಯಾ ಸ್ವವಿರೋಧಿಪ್ರಮಾಣಸ್ಯ ನಿರ್ಮೂಲಿತತ್ವೇನ ದ್ವಾಸುಪರ್ಣೇತಿ ಶ್ರುತಾವೇವ ಲಬ್ಧಾವಸರೋ ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾದಿತ್ಯಾದಿವಾಕ್ಯಶತಾನುಗೃಹೀತೋ ವೇದಾರಣ್ಯಕ ಏವ ಸುಖಂ ನಿವಸೇತ್ । ಸಾರ್ವಜನೀನಪ್ರತ್ಯಕ್ಷಾನುಗತೋ ನಗರೇ ವಾ ಪ್ರಚರೇತ್ । ಕಿಂಚ ಏಕಾದಶೇಂದ್ರಿಯಪಂಚಭೂತಾತ್ಮಕಪ್ರಕೃತಿವಿಕಾರವಿಶೇಷಸ್ಯ ದೇಹತಯಾ ವೃಕ್ಷಪದೇನೈವ ಬುದ್ಧೇರ್ಗೃಹೀತತ್ವಾತ್ ತದಾಲಿಂಗನಕರ್ತಾ ಅತ್ತಾ ಅನ್ಯ ಏವ ಭವೇತ್ । ನಹಿ ಸ್ವಯಮೇವ ಸ್ವಾತ್ಮಾನಮಾಲಿಂಗತಿ । ಕಿಂಚ ಬುದ್ಧೇರ್ಜಡ ದೇಹಾಭಿನ್ನತಯಾ ಜೀವಸ್ಯ ಚ ತತೋಽತ್ಯಂತವಿಲಕ್ಷಣತಯಾ ಕಥಮುಭಯೋಃ ಸಮಾನೋಽಯಂ ದೇಹಃ । ಕಥಂ ಚ ಚೇತನಾಸಾಧಾರಣಧರ್ಮಃ ಸಖ್ಯಂ ಜಡಾಜಡಯೋರುಭಯೋಃ । ಅಪಿ ಚ ಭಾಗವತೀಯಸಮಾಖ್ಯಾವಚನೇ ಅತ್ತುಃಸುಪರ್ಣಸ್ಯ ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತ ಇತಿ ಕದಾಚಿನ್ಮುಕ್ತಜೀವತಯಾ ಅನತ್ತುಶ್ಚ ವಿದ್ಯಾಮಯೋ ಯಃ ಸತು ನಿತ್ಯಮುಕ್ತ ಇತಿ ನಿತ್ಯಮುಕ್ತಬ್ರಹ್ಮತಯಾ ಸ್ಪಷ್ಟಂ ನಿರೂಪಣಾಚ್ಚ ಜೀವಪರಮಾವೇವ ಸುಪರ್ಣೌ । ಅಪಿ ಚ ಭವದಾಚಾರ್ಯ ಕೃತಾಥರ್ವಣೋಪನಿಷದ್ಭಾಷ್ಯ ಏವಾವಿದ್ಯಾಂ ಶರೀರದ್ವಯರೂಪಿಣೀಂ ವೃಕ್ಷತ್ವೇನ ಪರಿಕಲ್ಪ್ಯ ತತ್ತ್ವಪದಾರ್ಥೌ ಚ ಪಕ್ಷಿತ್ವೇನಾಸ್ಮಾನ್ಬೋಧಯಿತುಂ ಮಂತ್ರ ಆಹ । ದ್ವಾ ದ್ವೌ ಉಭೌ, ಸುಪರ್ಣಾ ಸುಪರ್ಣೌ ಸುಪ್ಟು ಪರ್ಣೌ ಪಕ್ಷೌ ಯಯೋಸ್ತೌ ಸುಪರ್ಣೌ । ಜೀವಸ್ಯ ಧರ್ಮಾಧರ್ಮೌ ಪಕ್ಷೌ । ಈಶ್ವರಸ್ಯಾವಿದ್ಯಾ ತತ್ಸಂಬಂಧಾವಿತಿ ನಿರೂಪಣಾತ್ ಜೀವಪರಮಾವೇವ ಸುಪರ್ಣೌ ॥ ೧೨೦೫ ॥

**ವಿವರಣೆ—** ಬುದ್ಧಿ ಜೀವ ಪಕ್ಷವನ್ನು ನೀನೇ ನಿರಾಕರಿಸುವುದರಿಂದ ಈ ವಾಕ್ಯವು ಜೀವೇಶ್ವರ ಭೇದವನ್ನೇ ಹೇಳುತ್ತದೆ. ಈ ಜೀವೇಶ್ವರ ಭೇದವು ವ್ಯಾವಹಾರಿಕವೆಂದು

ಹೇಳಿದರೂ ಶ್ರುತಿಯು ಭೇದವನ್ನು ಹೇಳುತ್ತದೆ ಎಂಬ ವಿಷಯದಲ್ಲಿ ನೀನು ವಿವಾದವನ್ನು ಮಾಡುವಂತಿಲ್ಲ. ಈ ಉಭಯಸಮ್ಮತಿಯನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. 'ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್' ಎಂಬ ಸೂತ್ರನಿರುಕ್ತಿಯಲ್ಲಿ ಆತ್ಮಾನಂ ಜೀವನನ್ನು ಮತ್ತು ಆತ್ಮಾನಂ ಪರಮಾತ್ಮನನ್ನು ಎಂದೇ ವ್ಯಾಖ್ಯಾನ ಮಾಡಿರುವುದರಿಂದ ಇಲ್ಲಿ ಜೀವಪರಮಾತ್ಮರೇ ಗ್ರಾಹ್ಯರಾಗುತ್ತಾರೆ. ಅದೂ ಅಲ್ಲದೇ ಈ ಅಧಿಕರಣದಲ್ಲಿ ಪೂರ್ವಪಕ್ಷವನ್ನು ಮಾಡುವಾಗ ಪರರಾದ ಸಾಂಖ್ಯರ ರೀತಿಯನ್ನು ಅವಲಂಬಿಸಿ ಬುದ್ಧಿ ಜೀವ ವಿಷಯತ್ವವನ್ನು ಹೇಳುವುದಕ್ಕಿಂತಲೂ ನಿನ್ನ ರೀತಿಯಿಂದಲೇ ಎಲ್ಲಾ ಐಕ್ಯವಾಕ್ಯಗಳಿಗೂ ಜಹದಜಹಲ್ಲಕ್ಷಣವನ್ನು ಮಾಡಿ ಬ್ರಹ್ಮನಿಗೆ ವಿಶೇಷಣವಾದ ಅಜ್ಞಾನ ರೂಪವಾದ ಉಪಾದಾನಕ್ಕೂ ಮತ್ತು ಜೀವರಿಗೆ ವಿಶೇಷಣವಾದ ದೇಹ ಅಂತಃಕರಣ ರೂಪವಾದ ಉಪಾದೇಯಗಳಿಗೂ ಐಕ್ಯವನ್ನು ಏಕೆ ಹೇಳುವುದಿಲ್ಲ? ನಾಗೃಹೀತ ವಿಶೇಷಣ ಎಂಬ ನ್ಯಾಯದಿಂದ ವಿಶೇಷಣೈಕ್ಯವು ಪ್ರಾಪ್ತವಾಗುವುದಷ್ಟೇ? ಇಂತಹ ಐಕ್ಯವನ್ನು ನಾನು ಒಪ್ಪುತ್ತೇನೆ. ಜಗತ್ತನ್ನು ಸೃಷ್ಟಿಸುವ ಬ್ರಹ್ಮನ ಕೈಯಲ್ಲಿ ಪ್ರಕೃತಿ ಇರುವುದರಿಂದ ದಂಡನಂತೆ ಅದು ವಿಶೇಷಣವಾಗಿದೆ. ಉಪಾದಾನ ಮತ್ತು ಉಪಾದೇಯಗಳಿಗೆ ಅಭೇದವನ್ನು ನಿನ್ನಂತೆ ನಾನೂ ಅಂಗೀಕರಿಸುತ್ತೇನೆ. ಇಲ್ಲಿ ಎರಡೂ ಜಡವಾಗಿರುವುದರಿಂದ ಅಬಾಧಿತವಾದ ಇಂತಹ ಐಕ್ಯವನ್ನು ಹೇಳುವುದನ್ನು ಬಿಟ್ಟು ಜೀವಪರಮಾತ್ಮರ ಐಕ್ಯವನ್ನು ಏಕೆ ಹೇಳುತ್ತೀಯೆ? ಆದ್ದರಿಂದ ನಿನಗೆ ಅಭಿಪ್ರೇತವಾದ ಐಕ್ಯದಲ್ಲಿ ವಾಕ್ಯರೂಪವಾದ ಪ್ರಮಾಣವೂ ಇಲ್ಲ ಪ್ರಮಾಣಾಂತರವೂ ಇಲ್ಲವಾದ್ದರಿಂದ ಅದು ವೇದಾರಣ್ಯಕದಲ್ಲಿ ಒಂದು ಸ್ಥಾನವನ್ನೇ ಪಡೆಯುವುದಿಲ್ಲ. ಭೇದವಾದರೂ ವಿರೋಧಿ ಪ್ರಮಾಣಗಳನ್ನು ನಿರಾಕರಣೆ ಮಾಡಿರುವುದರಿಂದ ದ್ವಾಸುಪರ್ಣಾ ಎಂಬ ಶ್ರುತಿಗಳಲ್ಲಿಯೂ, ಭಿನ್ನೋ ಅಚಿಂತ್ಯಃ 'ಪರಮಃ ಜೀವಸಂಘಾತ್' ಮುಂತಾದ ಶ್ರುತಿಯಲ್ಲಿಯೂ ಅವಕಾಶವನ್ನು ಪಡೆದು ವೇದಾರಣ್ಯವನ್ನು ಪ್ರವೇಶಿಸಿ ಅಲ್ಲಿ ಸುಖವಾಗಿ ವಾಸ ಮಾಡುತ್ತದೆ ಅಥವಾ ಸರ್ವಲೋಕ ಪ್ರತ್ಯಕ್ಷಕ್ಕೆ ಅನುಗುಣವಾಗಿರುವುದರಿಂದ ನಗರದಲ್ಲಿ ಬೇಕಾದರೂ ಸಂಚರಿಸುತ್ತದೆ. ಮತ್ತು ಇಲ್ಲಿ ವೃಕ್ಷ ಪದದಿಂದ ದೇಹವು ಹೇಳಲ್ಪಡುತ್ತದೆ. ಆ ದೇಹವು ಏಕಾದಶೇಂದ್ರಿಯ ಮತ್ತು ಪಂಚಭೂತಾತ್ಮಕವಾದುದು. ಅದು ಪ್ರಕೃತಿ ವಿಕಾರ ವಿಶೇಷ. ಅದನ್ನು ಆಲಿಂಗಿಸುವವನು ಮತ್ತು ಭೋಗಿಸುವವರು ಅದಕ್ಕಿಂತ ಭಿನ್ನನೇ ಆಗಬೇಕು. ತಾನೇ ತನ್ನನ್ನು ಆಲಿಂಗಿಸಿಕೊಳ್ಳಲು ಸಾಧ್ಯವಿಲ್ಲವಷ್ಟೇ? ಬುದ್ಧಿಜೀವ ಎಂದು ಪೂರ್ವಪಕ್ಷವನ್ನು ಮಾಡಿದರೆ ಈ ಶ್ರುತಿಯಲ್ಲಿರುವ ಸಮಾನವೃಕ್ಷಂ ಎಂಬ ಪದದ ವಿರೋಧವು ಉಂಟಾಗುತ್ತದೆ. ಸಮಾನವೃಕ್ಷ ಎಂದರೆ ಸಮಾನ ದೇಹ ಎಂದು ಅರ್ಥವಷ್ಟೇ? ಬುದ್ಧಿಯು ಜಡವಾದ ದೇಹದಿಂದ ಅಭಿನ್ನವಾದುದು. ಜೀವನು ಅದಕ್ಕಿಂತ ಅತ್ಯಂತ ವಿಲಕ್ಷಣನಾದವನು. ಈ ಎರಡು ವಸ್ತುಗಳಿಗೂ ಸಮಾನ ದೇಹವು ಹೇಗೆ ಉಂಟಾಗುತ್ತದೆ? ಮತ್ತು ಬುದ್ಧಿಯು ಜಡ, ಜೀವನು ಚೇತನ. ಈ ಜಡಚೇತನಗಳಿಗೆ ಕೇವಲ ಚೇತನ ಮಾತ್ರದಲ್ಲಿರುವ ಸಖ್ಯವು ಹೇಗೆ ಉಪಪನ್ನವಾಗುತ್ತದೆ.

ಅದೂ ಅಲ್ಲದೇ, ಭಾಗವತದಲ್ಲಿ 'ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತೇ ಬಂಧೋಽಸ್ಯಾವಿದ್ಯಯಾಽನಾದಿಃ ವಿದ್ಯಯಾಚ ತಥೇತರಃ' (11.11.4) ಎಂದು ಅತ್ಯಾವಾದ ಜೀವನಿಗೆ ಎಂದೋ ಒಂದು ದಿನ ಮೋಕ್ಷವು ಉಂಟಾಗುತ್ತದೆ ಎಂದು ಹೇಳಲ್ಪಟ್ಟಿದೆ. ಅನಶನನಾದ ಪರಮಾತ್ಮನಿಗೆ ಮಾತ್ರ 'ಯೋಽವಿದ್ಯಯಾಂಧಃ ಸತುನಿತ್ಯಬದ್ಧಃ ವಿದ್ಯಾಮಯೋ ಯಃ ಸತು ನಿತ್ಯಮುಕ್ತಃ' (11.11.7) ಎಂದು ನಿತ್ಯಮುಕ್ತತ್ವವು ಹೇಳಲ್ಪಟ್ಟಿದೆ. ಇವರಿಬ್ಬರೇ ಈ ಮಂತ್ರದಲ್ಲಿ ಹೇಳಲ್ಪಟ್ಟಿರುವ ಎರಡು ಸುಪರ್ಣಗಳಷ್ಟೇ? ಆದ್ದರಿಂದ ಕದಾಚಿನ್ಮುಕ್ತನಾದ ಜೀವನಿಗೂ ನಿತ್ಯಮುಕ್ತನಾದ ಪರಮಾತ್ಮನಿಗೂ ಹೇಗೆ ಅಭೇದವು ಉಂಟಾಗುತ್ತದೆ? ಅದೂ ಅಲ್ಲದೇ, ನಿಮ್ಮ ಆಚಾರ್ಯರೇ ಅಥರ್ವಣ ಉಪನಿಷತ್ತಿನ ಭಾಷ್ಯದಲ್ಲಿ ಈ ಶರೀರದ್ವಯ ರೂಪವಾದ ಅವಿದ್ಯೆಯನ್ನೇ ವೃಕ್ಷವೆಂದು ಕಲ್ಪಿಸಿ ತತ್ವಂ ಪದಾರ್ಥಗಳನ್ನು ಪಕ್ಷಿಗಳೆಂದು ಬೋಧಿಸುವ ಈ ಮಂತ್ರವು ಪ್ರವೃತ್ತವಾಗಿದೆ ಎಂದು ಹೇಳಿರುವುದರಿಂದ ಈ ಪಕ್ಷಿಗಳು ಜೀವಪರಮಾತ್ಮರೇ ಆಗಬೇಕಾಗುತ್ತದೆ.

ಸುಖದುಃಖಾದ್ಯನುಭವೋ ಜೀವಸಾಕ್ಷೀ ಕಿಲಾವಯೋಃ ।
ಬುದ್ಧಿಸ್ತು ಘಟಪೂರ್ವಾರ್ಥಬುದ್ಧಿರ್ನ ಸುಖದುಃಖಧೀಃ ॥ ೧೨೦೬ ॥

**ಅರ್ಥ–** ಆವಯೋಃ= ನಮ್ಮಿಬ್ಬರ ಮತದಲ್ಲಿ, ಸುಖದುಃಖಾದ್ಯನುಭವಃ= ಸುಖದುಃಖಾದಿ ಅನುಭವವು, ಜೀವಸಾಕ್ಷೀ= ಜೀವಸಾಕ್ಷಿರೂಪವಾದುದಷ್ಟೇ, ಘಟ-ಪೂರ್ವಾರ್ಥಬುದ್ಧಿಃ= ಘಟ ಮೊದಲಾದ ವಿಷಯಗಳ ಬುದ್ಧಿ ಎನಿಸಿಕೊಳ್ಳಲ್ಪಡುವ, ಬುದ್ಧಿಸ್ತು= ಬುದ್ಧಿಯಾದರೂ, ನ ಸುಖದುಃಖಧೀಃ= ಸುಖದುಃಖಾದಿ ಅನುಭವರೂಪವಾದ ಸಾಕ್ಷಿಯಲ್ಲ.

**ಅನುವಾದ–** ಮತ್ತು ನಮ್ಮಿಬ್ಬರ ಮತದಲ್ಲಿ ಸುಖದುಃಖಾನುಭವವು ಸಾಕ್ಷಿರೂಪವಾದುದು. ಬುದ್ಧಿಯಾದರೂ ಘಟಾದಿ ವಿಷಯಕವಾದ ಜಡವಾದ ಬುದ್ಧಿ. ಅದು ಸುಖದುಃಖಾನುಭವ ರೂಪವಾದುದಲ್ಲ.

**ಭಾವವಿಲಾಸಿನೀ–** ಯುಕ್ತ್ಯಾಪಿ ಪಿಪ್ಪಲಂ ಕರ್ಮಫಲಂ ಸುಖದುಃಖಾದಿಕಂ ಸ್ವಾದು ಯಥಾ ಭವತಿ ತಥಾ ಅತ್ತೀತ್ಯುಕ್ತೇ ಅತ್ತಾ ಜೀವ ಏವ ಭವೇದಿತ್ಯಾಹ – **ಸುಖದುಃಖೇತಿ** ॥ ೧೨೦೬ ॥

**ವಿವರಣೆ–** ಯುಕ್ತಿಯಿಂದಲೂ ಸಹ ಪಿಪ್ಪಲ ಎಂದು ಹೇಳಲ್ಪಡುವ ಕರ್ಮಫಲವಾದ ಸುಖದುಃಖಾದಿಗಳನ್ನು ಮಧುರವಾಗಿದೆ ಎಂದು ತಿಳಿದು ಭೋಗಿಸುವವನು ಜೀವನೇ ಆಗಬೇಕೆಂದು ಇಲ್ಲಿ ಉಪಪಾದನೆಯನ್ನು ಮಾಡುತ್ತಾರೆ.

ಅತೋಽತ್ತಾ ಜೀವ ಏವಾತ್ರ ನ ಬುದ್ಧಿರ್ಬುದ್ಧಿಮನ್ಮತೇ ।
ಯತ್ ಪಿಪ್ಪಲಂ ಕರ್ಮಫಲಂ ಸುಖದುಃಖೇ ಚ ತೇ ಸ್ಮೃತೇ ॥ ೧೨೦೭ ॥

**ಅದನಂ ಚ ತಯೋಃ ಸಾಕ್ಷಾದೀಕ್ಷಣಂ ನಿಜಸಾಕ್ಷಿಣಾ ।**
**ಅನಶ್ನನ್ ಪರಮಾತ್ಮೈವ ಯೋಽಭಿತೋಽಪಿ ಪ್ರಕಾಶತೇ ॥ ೧೨೦೮ ॥**

**ಅರ್ಥ–** ಅತಃ= ಆದ್ದರಿಂದ, ಬುದ್ಧಿಮನ್ಮತೇ= ವಿವೇಕಿಗಳ ಮತದಲ್ಲಿ, ಅತ್ರ= ಈ ವಾಕ್ಯದಲ್ಲಿ ಪ್ರತಿಪಾದ್ಯನಾದವನು, ಜೀವ ಏವ= ಜೀವನೇ, ಬುದ್ಧಿಃ ನ= ಬುದ್ಧಿತತ್ವವಲ್ಲ, ಯತ್= ಏಕೆಂದರೆ, ಪಿಪ್ಪಲಂ= ಪಿಪ್ಪಲ ಎಂದರೆ, ಕರ್ಮಫಲಂ= ಕರ್ಮಫಲವೆಂದು ಅರ್ಥ, ತೇ ಚ= ಆ ಕರ್ಮಫಲವಾದರೂ, ಸುಖದುಃಖೇ ಸ್ಮೃತೇ= ಸುಖದುಃಖವಾದುದೆಂದು ಹೇಳಲ್ಪಡುತ್ತದೆ, ಅದನಂ ಚ= ಅದನವೆಂದರೆ, ತಯೋಃ= ಆ ಸುಖದುಃಖಗಳನ್ನು, ನಿಜಸಾಕ್ಷಿಣಾ= ತನ್ನ ಸಾಕ್ಷಿಯಿಂದ, ಸಾಕ್ಷಾದೀಕ್ಷಣಂ= ನೇರವಾಗಿ ನೋಡುವುದು, ಅನಶ್ನನ್= ತಿನ್ನದಿರುವವನು, ಯಃ= ಯಾವನು, ಅಭಿತಃ= ಎಲ್ಲ ಕಡೆಗಳಲ್ಲಿಯೂ, ಪ್ರಕಾಶತೇ= ಪ್ರಕಾಶಿಸುತ್ತಾನೆಯೋ ಅವನು, ಪರಮಾತ್ಮೈವ= ಪರಮಾತ್ಮನೇ.

**ಅನುವಾದ–** ಆದ್ದರಿಂದ ವಿವೇಕಿಗಳ ಮತದಲ್ಲಿ ಈ ವಾಕ್ಯದಲ್ಲಿ ಅತ್ರ ಎಂದು ಹೇಳಲ್ಪಡುವವನು ಜೀವನೇ. ಏಕೆಂದರೆ ಪಿಪ್ಪಲವೆಂದರೆ ಕರ್ಮಫಲ. ಅದು ಸುಖದುಃಖ ರೂಪವಾದುದು. ಅದರ ಅದನ ಎಂದು ಹೇಳಿದರೆ ತನ್ನ ಸಾಕ್ಷಿಯಿಂದ ನೇರವಾಗಿ ನೋಡುವುದು. ಇದು ಜೀವನಿಗೇ ಇದೆ. ಅನಶ್ನನ್ ಎಂದರೆ ಯಾರು ಸರ್ವತಃ ಪ್ರಕಾಶಮಾನನಾಗಿದ್ದಾನೆಯೋ ಅವನು ಪರಮಾತ್ಮನೇ ಎಂದು ಹೇಳಬೇಕು.

**ಭಾವವಿಲಾಸಿನೀ–** ಅತಃ ಬುದ್ಧೇಃ ಸುಖದುಃಖಾನುಭವಾಭಾವಾತ್ । ಪಿಪ್ಪಲಮತ್ತೀತ್ಯನೇನ ಸುಖದುಃಖಾನುಭವ ಏವ ಗ್ರಾಹ್ಯೋ ನ ಘಟಾದ್ಯನುಭವ ಇತ್ಯಾಹ – **ಯದೀತಿ ॥** ಯತ್ ಯಸ್ಮಾತ್ ದೇಹಾಖ್ಯವೃಕ್ಷಫಲರೂಪತ್ವಾತ್ । ಅತೋಽತ್ತಾ ಜೀವ ಏವೇತಿ ಪೂರ್ವೇಣಾನ್ವಯಃ ॥ ೧೨೦೭-೧೨೦೮ ॥

**ವಿವರಣೆ–** ಬುದ್ಧಿಗೆ ಸುಖದುಃಖಾನುಭವಿತೃತ್ವವು ಇಲ್ಲದಿರುವುದರಿಂದ ಪಿಪ್ಪಲ ಮತ್ತಿ ಎಂದು ಹೇಳಿದ ಸುಖದುಃಖಾನುಭವವು ಜೀವನಿಗೇ ಅಂಗೀಕಾರ ಮಾಡಬೇಕಾಗುವುದರಿಂದ ಇಲ್ಲಿ ಜೀವನೇ ಹೇಳಲ್ಪಡುತ್ತಾನೆ ಎಂದು ಅಭಿಪ್ರಾಯ.

**ಸೋಽನಶ್ನನ್ ಪಾರಮಾರ್ಥ್ಯೇನ ಸೋಽತ್ತಿ ಚಾಪರಮಾರ್ಥತಃ ।**
**ಇತಿ ಶಂಕಾಪಿಶಾಚೀಂ ತು ಹಂತಿ ಯುಕ್ತಿನೃಕೇಸರೀ ॥ ೧೨೦೯ ॥**

**ಅರ್ಥ–** ಸಃ= ಅವನು, ಪಾರಮಾರ್ಥ್ಯೇನ= ಪಾರಮಾರ್ಥಿಕವಾಗಿ, ಅನಶ್ನನ್= ಅಶನವನ್ನು ಮಾಡುವವನಲ್ಲ, ಅಪರಮಾರ್ಥತಃ= ಅಪಾರಮಾರ್ಥಿಕವಾಗಿ, ಸಃ= ಅವನು, ಅತ್ತಿ= ಅಶನವನ್ನು ಮಾಡುತ್ತಾನೆ, ಇತಿ= ಎಂಬ, ಶಂಕಾಪಿಶಾಚೀಂ ತು=

ಅದೂ ಅಲ್ಲದೇ, ಭಾಗವತದಲ್ಲಿ 'ಏಕಸ್ಯೈವ ಮಮಾಂಶಸ್ಯ ಜೀವಸ್ಯೈವಂ ಮಹಾಮತೇ ಬಂಧೋಽಸ್ಯಾವಿದ್ಯಯಾಽನಾದಿಃ ವಿದ್ಯಯಾಚ ತಥೇತರಃ' (11.11.4) ಎಂದು ಅತ್ಯವಾದ ಜೀವನಿಗೆ ಎಂದೋ ಒಂದು ದಿನ ಮೋಕ್ಷವು ಉಂಟಾಗುತ್ತದೆ ಎಂದು ಹೇಳಲ್ಪಟ್ಟಿದೆ. ಅನಶನನಾದ ಪರಮಾತ್ಮನಿಗೆ ಮಾತ್ರ 'ಯೋವಿದ್ಯಯಾಂಧಃ ಸತುನಿತ್ಯಬದ್ಧಃ ವಿದ್ಯಾಮಯೋ ಯಃ ಸತು ನಿತ್ಯಮುಕ್ತಃ' (11.11.7) ಎಂದು ನಿತ್ಯಮುಕ್ತತ್ವವು ಹೇಳಲ್ಪಟ್ಟಿದೆ. ಇವರಿಬ್ಬರೇ ಈ ಮಂತ್ರದಲ್ಲಿ ಹೇಳಲ್ಪಟ್ಟಿರುವ ಎರಡು ಸುಪರ್ಣಗಳಷ್ಟೇ? ಆದ್ದರಿಂದ ಕದಾಚಿನ್ಮುಕ್ತನಾದ ಜೀವನಿಗೂ ನಿತ್ಯಮುಕ್ತನಾದ ಪರಮಾತ್ಮನಿಗೂ ಹೇಗೆ ಅಭೇದವು ಉಂಟಾಗುತ್ತದೆ? ಅದೂ ಅಲ್ಲದೇ, ನಿಮ್ಮ ಆಚಾರ್ಯರೇ ಅಥರ್ವಣ ಉಪನಿಷತ್ತಿನ ಭಾಷ್ಯದಲ್ಲಿ ಈ ಶರೀರದ್ವಯ ರೂಪವಾದ ಅವಿದ್ಯೆಯನ್ನೇ ವೃಕ್ಷವೆಂದು ಕಲ್ಪಿಸಿ ತತ್ವಂ ಪದಾರ್ಥಗಳನ್ನು ಪಕ್ಷಿಗಳೆಂದು ಬೋಧಿಸುವ ಈ ಮಂತ್ರವು ಪ್ರವೃತ್ತವಾಗಿದೆ ಎಂದು ಹೇಳಿರುವುದರಿಂದ ಈ ಪಕ್ಷಿಗಳು ಜೀವಪರಮಾತ್ಮರೇ ಆಗಬೇಕಾಗುತ್ತದೆ.

**ಸುಖದುಃಖಾದ್ಯನುಭವೋ ಜೀವಸಾಕ್ಷೀ ಕಿಲಾವಯೋಃ ।**
**ಬುದ್ಧಿಸ್ತು ಘಟಪೂರ್ವಾರ್ಥಬುದ್ಧಿರ್ನ ಸುಖದುಃಖಧೀಃ ॥ ೧೨೦೬ ॥**

**ಅರ್ಥ–** ಆವಯೋಃ= ನಮ್ಮಿಬ್ಬರ ಮತದಲ್ಲಿ, ಸುಖದುಃಖಾದ್ಯನುಭವಃ= ಸುಖದುಃಖಾದಿ ಅನುಭವವು, ಜೀವಸಾಕ್ಷೀ= ಜೀವಸಾಕ್ಷಿರೂಪವಾದುದಷ್ಟೇ, ಘಟ-ಪೂರ್ವಾರ್ಥಬುದ್ಧಿಃ= ಘಟ ಮೊದಲಾದ ವಿಷಯಗಳ ಬುದ್ಧಿ ಎನಿಸಿಕೊಳ್ಳಲ್ಪಡುವ, ಬುದ್ಧಿಸ್ತು= ಬುದ್ಧಿಯಾದರೂ, ನ ಸುಖದುಃಖಧೀಃ= ಸುಖದುಃಖಾದಿ ಅನುಭವರೂಪವಾದ ಸಾಕ್ಷಿಯಲ್ಲ.

**ಅನುವಾದ–** ಮತ್ತು ನಮ್ಮಿಬ್ಬರ ಮತದಲ್ಲಿ ಸುಖದುಃಖಾನುಭವವು ಸಾಕ್ಷಿರೂಪವಾದುದು. ಬುದ್ಧಿಯಾದರೂ ಘಟಾದಿ ವಿಷಯಕವಾದ ಜಡವಾದ ಬುದ್ಧಿ. ಅದು ಸುಖದುಃಖಾನುಭವ ರೂಪವಾದುದಲ್ಲ.

**ಭಾವವಿಲಾಸಿನೀ–** ಯುಕ್ತ್ಯಾಪಿ ಪಿಪ್ಪಲಂ ಕರ್ಮಫಲಂ ಸುಖದುಃಖಾದಿಕಂ ಸ್ವಾದು ಯಥಾ ಭವತಿ ತಥಾ ಅತ್ತೀತ್ಯುಕ್ತೇ ಅತ್ತಾ ಜೀವ ಏವ ಭವೇದಿತ್ಯಾಹ – **ಸುಖದುಃಖೇತಿ** ॥ ೧೨೦೬ ॥

**ವಿವರಣೆ–** ಯುಕ್ತಿಯಿಂದಲೂ ಸಹ ಪಿಪ್ಪಲ ಎಂದು ಹೇಳಲ್ಪಡುವ ಕರ್ಮಫಲವಾದ ಸುಖದುಃಖಾದಿಗಳನ್ನು ಮಧುರವಾಗಿದೆ ಎಂದು ತಿಳಿದು ಭೋಗಿಸುವವನು ಜೀವನೇ ಆಗಬೇಕೆಂದು ಇಲ್ಲಿ ಉಪಪಾದನೆಯನ್ನು ಮಾಡುತ್ತಾರೆ.

**ಅತೋಽತ್ತಾ ಜೀವ ಏವಾತ್ರ ನ ಬುದ್ಧಿರ್ಬುದ್ಧಿಮನ್ಮತೇ ।**
**ಯತ್ ಪಿಪ್ಪಲಂ ಕರ್ಮಫಲಂ ಸುಖದುಃಖೇ ಚ ತೇ ಸ್ಮೃತೇ ॥ ೧೨೦೭ ॥**

**ಅದನಂ ಚ ತಯೋಃ ಸಾಕ್ಷಾದೀಕ್ಷಣಂ ನಿಜಸಾಕ್ಷಿಣಾ ।**
**ಅನಶ್ನನ್ ಪರಮಾತ್ಮೈವ ಯೋಭಿಽತೋಽಪಿ ಪ್ರಕಾಶತೇ ॥ ೧೨೦೮ ॥**

**ಅರ್ಥ–** ಅತಃ= ಆದ್ದರಿಂದ, ಬುದ್ಧಿಮನ್ಮತೇ= ವಿವೇಕಿಗಳ ಮತದಲ್ಲಿ, ಅತ್ರ= ಈ ವಾಕ್ಯದಲ್ಲಿ ಪ್ರತಿಪಾದ್ಯನಾದವನು, ಜೀವ ಏವ= ಜೀವನೇ, ಬುದ್ಧಿಃ ನ= ಬುದ್ಧಿತತ್ವವಲ್ಲ, ಯತ್= ಏಕೆಂದರೆ, ಪಿಪ್ಪಲಂ= ಪಿಪ್ಪಲ ಎಂದರೆ, ಕರ್ಮಫಲಂ= ಕರ್ಮಫಲವೆಂದು ಅರ್ಥ, ತೇ ಚ= ಆ ಕರ್ಮಫಲವಾದರೂ, ಸುಖದುಃಖೇ ಸ್ಮೃತೇ= ಸುಖದುಃಖವಾದುದೆಂದು ಹೇಳಲ್ಪಡುತ್ತದೆ, ಅದನಂ ಚ= ಅದನವೆಂದರೆ, ತಯೋಃ= ಆ ಸುಖದುಃಖಗಳನ್ನು, ನಿಜಸಾಕ್ಷಿಣಾ= ತನ್ನ ಸಾಕ್ಷಿಯಿಂದ, ಸಾಕ್ಷಾದೀಕ್ಷಣಂ= ನೇರವಾಗಿ ನೋಡುವುದು, ಅನಶ್ನನ್= ತಿನ್ನದಿರುವವನು, ಯಃ= ಯಾವನು, ಅಭಿತಃ= ಎಲ್ಲ ಕಡೆಗಳಲ್ಲಿಯೂ, ಪ್ರಕಾಶತೇ= ಪ್ರಕಾಶಿಸುತ್ತಾನೆಯೋ ಅವನು, ಪರಮಾತ್ಮೈವ= ಪರಮಾತ್ಮನೇ.

**ಅನುವಾದ– ಆದ್ದರಿಂದ ವಿವೇಕಿಗಳ ಮತದಲ್ಲಿ ಈ ವಾಕ್ಯದಲ್ಲಿ ಅತ್ರ ಎಂದು ಹೇಳಲ್ಪಡುವವನು ಜೀವನೇ. ಏಕೆಂದರೆ ಪಿಪ್ಪಲವೆಂದರೆ ಕರ್ಮಫಲ. ಅದು ಸುಖದುಃಖ ರೂಪವಾದುದು. ಅದರ ಅದನ ಎಂದು ಹೇಳಿದರೆ ತನ್ನ ಸಾಕ್ಷಿಯಿಂದ ನೇರವಾಗಿ ನೋಡುವುದು. ಇದು ಜೀವನಿಗೇ ಇದೆ. ಅನಶ್ನನ್ ಎಂದರೆ ಯಾರು ಸರ್ವತಃ ಪ್ರಕಾಶಮಾನನಾಗಿದ್ದಾನೆಯೋ ಅವನು ಪರಮಾತ್ಮನೇ ಎಂದು ಹೇಳಬೇಕು.**

**ಭಾವವಿಲಾಸಿನೀ–** ಅತಃ ಬುದ್ಧೇಃ ಸುಖದುಃಖಾನುಭವಾಭಾವಾತ್ । ಪಿಪ್ಪಲಮತ್ತೀತ್ಯನೇನ ಸುಖದುಃಖಾನುಭವ ಏವ ಗ್ರಾಹ್ಯೋ ನ ಘಟಾದ್ಯನುಭವ ಇತ್ಯಾಹ – **ಯದೀತಿ** ॥ ಯತ್ ಯಸ್ಮಾತ್ ದೇಹಾಖ್ಯವೃಕ್ಷಫಲರೂಪತ್ವಾತ್ । ಅತೋಽತ್ತಾ ಜೀವ ಏವೇತಿ ಪೂರ್ವೇಣಾನ್ವಯಃ ॥ ೧೨೦೭-೧೨೦೮ ॥

**ವಿವರಣೆ–** ಬುದ್ಧಿಗೆ ಸುಖದುಃಖಾನುಭವಿತೃತ್ವವು ಇಲ್ಲದಿರುವುದರಿಂದ ಪಿಪ್ಪಲ ಮತ್ತಿ ಎಂದು ಹೇಳಿದ ಸುಖದುಃಖಾನುಭವವು ಜೀವನಿಗೇ ಅಂಗೀಕಾರ ಮಾಡಬೇಕಾಗುವುದರಿಂದ ಇಲ್ಲಿ ಜೀವನೇ ಹೇಳಲ್ಪಡುತ್ತಾನೆ ಎಂದು ಅಭಿಪ್ರಾಯ.

**ಸೋಽನಶ್ನನ್ ಪಾರಮಾರ್ಥ್ಯೇನ ಸೋಽತ್ತಿ ಚಾಪರಮಾರ್ಥತಃ ।**
**ಇತಿ ಶಂಕಾಪಿಶಾಚೀಂ ತು ಹಂತಿ ಯುಕ್ತಿನೃಕೇಸರೀ ॥ ೧೨೦೯ ॥**

**ಅರ್ಥ–** ಸಃ= ಅವನು, ಪಾರಮಾರ್ಥ್ಯೇನ= ಪಾರಮಾರ್ಥಿಕವಾಗಿ, ಅನಶ್ನನ್= ಅಶನವನ್ನು ಮಾಡುವವನಲ್ಲ, ಅಪರಮಾರ್ಥತಃ= ಅಪಾರಮಾರ್ಥಿಕವಾಗಿ, ಸಃ= ಅವನು, ಅತ್ತಿ= ಅಶನವನ್ನು ಮಾಡುತ್ತಾನೆ, ಇತಿ= ಎಂಬ, ಶಂಕಾಪಿಶಾಚೀಂ ತು=

ಶಂಕಾಪಿಶಾಚಿಯನ್ನಾದರೂ, ಯುಕ್ತಿನೃಕೇಸರೀ= ಯುಕ್ತಿಯೆಂಬ ನರಸಿಂಹನು, ಹಂತಿ= ಸಂಹಾರವನ್ನು ಮಾಡುತ್ತಾನೆ,

**ಅನುವಾದ–** ಜೀವನು ಪಾರಮಾರ್ಥಿಕವಾಗಿ ಅತ್ತೃವಲ್ಲ, ಅಪಾರಮಾರ್ಥಿಕವಾಗಿ ಅತ್ತೃ ಎಂಬ ಈ ಶಂಕಾಪಿಶಾಚಿಯನ್ನು ಯುಕ್ತಿಯೆಂಬ ನರಸಿಂಹನು ಸಂಹರಿಸುತ್ತಾನೆ.

**ಭಾವವಿಲಾಸಿನೀ–** ಪರಕೀಯಮಂದಾಶಂಕಾಮಾಶಂಕ್ಯ ನಿಷೇಧತಿ–ಸೋಽನಶ್ನನ್ನಿತಿ ॥೧೨೦೯॥

**ವಿವರಣೆ–** ಆ ಯುಕ್ತಿಯನ್ನು ಮುಂದಿನ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ.

ಯ ಏವಾತ್ತಿ ಸ ಏವಾನಶ್ನಂಶ್ಚೇತಿ ಶ್ರೂಯತೇ ಯದಿ ।
ತದೋತ್ಥಾನಂ ಭವೇದಸ್ಯಾ ನೈವಮಾಹ ಶ್ರುತಿಃ ಸತೀ ॥ ೧೨೧೦ ॥

ಅತ್ತ್ಯನ್ಯೋಽಯಮನಶ್ನಂಶ್ಚ ತಥಾಽನ್ಯ ಇತಿ ಸಾ ಜಗೌ ।
ಅತಸ್ತಚ್ಛ್ರುತಮನ್ಯತ್ರ ಜೀವೇ ತ್ವಶ್ರುತಮೇವ ಹಿ ।
ಅಭೂದನಶನಂ ತೇನ ವದನಂ ಮುದ್ರಿತಂ ತವ ॥ ೧೨೧೧ ॥

**ಅರ್ಥ–** ಯದಿ= ಒಂದು ಪಕ್ಷ, ಸ ಏವಾತ್ತಿ= ಅವನೇ ಅಶನವನ್ನು ಮಾಡುತ್ತಾನೆ, ಸ ಏವ ಅನಶ್ನಚ್ಚಂ= ಅವನೇ ಅಶನವನ್ನು ಮಾಡುವುದಿಲ್ಲ, ಇತಿ ಶ್ರೂಯತೇ= ಎಂದು ಹೇಳಲ್ಪಟ್ಟಿದ್ದರೆ, ತದಾ= ಆಗ, ಅಸ್ಯ= ಈ ಶಂಕಾಪಿಶಾಚಿಗೆ, ಉತ್ಥಾನಂ ಭವೇತ್= ಉತ್ಥಾನವು ಉಂಟಾಗುತ್ತಿದ್ದಿತು, ಸತೀ= ಸಾಧ್ವಿಯಾದ, ಶ್ರುತಿಃ= ಶ್ರುತಿಯು, ಏವಂ= ಈ ರೀತಿಯಾಗಿ, ನ ಆಹ= ಹೇಳಲಿಲ್ಲ, ಸಾ= ಅದಾದರೂ, ಅನ್ಯಃ ಅತ್ತಿ= ಇನ್ನೊಬ್ಬನು ಅಶನ ಮಾಡುತ್ತಾನೆ, ತತಃ= ಹಾಗೆ, ಅನಶ್ನಂಶ್ಚ ಅನ್ಯಃ= ಅಶನ ಮಾಡದಿರುವವನು ಇನ್ನೊಬ್ಬನು, ಇತಿ ಜಗೌ= ಎಂದು ಹೇಳಿದೆ, ಅತಃ= ಆದ್ದರಿಂದ, ತತ್ ಅನಶನಂ= ಆ ಅನಶನವು, ಅನ್ಯತ್ರ= ಬೇರೆ ಕಡೆಯಲ್ಲಿಯೇ, ಶ್ರುತಂ= ಹೇಳಲ್ಪಟ್ಟಿದೆ, ಜೀವೇತು= ಜೀವನಲ್ಲಿಯಾದರೂ, ಅಶ್ರುತಂ= ಹೇಳಲ್ಪಟ್ಟಿಲ್ಲ, ತೇನ= ಆ ಕಾರಣದಿಂದ, ತವ ವದನಂ= ನಿನ್ನ ಮುಖವು, ಮುದ್ರಿತಂ= ಮುದ್ರಿತವಾಗುತ್ತದೆ.

**ಅನುವಾದ–** ಶ್ರುತಿಯು ಒಬ್ಬನೇ ಅಶನವನ್ನು ಮಾಡುತ್ತಾನೆ, ಅವನೇ ಅನಶನವನ್ನೂ ಮಾಡುತ್ತಾನೆ ಎಂದು ಹೇಳಿದ್ದರೆ ಆಗ ನಿನ್ನ ಶಂಕಾಪಿಶಾಚಿಯ ಉತ್ಥಾನ ವಾಗುತ್ತಿದ್ದಿತು. ಆದರೆ ಶ್ರುತಿಯು ಹಾಗೆ ಹೇಳಿಲ್ಲ. ಭಿನ್ನನಾದವನು ಅಶನವನ್ನು ಮಾಡುತ್ತಾನೆ, ಭಿನ್ನನಾದವನು ಅನಶನವನ್ನು ಮಾಡುತ್ತಾನೆ ಎಂದು ಅವರಿಬ್ಬರನ್ನೂ ಭಿನ್ನರೆಂದೇ ಹೇಳಿದೆ. ಆದ್ದರಿಂದ ಆ ಅನಶನವು ಜೀವನನ್ನು ಬಿಟ್ಟು ಬೇರೆ ಕಡೆಯಲ್ಲಿ ಶ್ರುತವಾಗಿದೆ. ಜೀವನಲ್ಲಿ ಶ್ರುತವಾಗಿಲ್ಲ. ಆದ್ದರಿಂದ ನಿನ್ನ ಮುಖವು ಮುದ್ರಿತವಾಗುತ್ತದೆ.

**ಭಾವವಿಲಾಸಿನೀ–** ಅಸ್ಯಾಃ ಶಂಕಾಯಾಃ ॥ ೧೨೧೦ ॥ ಸಾ ಶ್ರುತಿಃ । ಅತಃ ಅನ್ಯೋऽಸೌ ಅನ್ಯೋಽಯಮಿತಿ ವಿವಿಚ್ಯ ಕಥನಾತ್। ತತ್ ಅನಶನಮ್ । ಅನ್ಯತ್ರ ಪರಮಾತ್ಮನಿ । ಹೀತ್ಯನೇನಾ-ಭಿಚಾಕಶೀತೀತ್ಯುಕ್ತಮಭಿತಃ ಪ್ರಕಾಶಮಾನತ್ವಲಿಂಗಂ ಪರಮಾತ್ಮನ ಏವ ಪ್ರಸಿದ್ಧಮಿತಿ ಸೂಚ-ಯತಿ । ಅತೋ ಜೀವೇ ತ್ವಶ್ರುತಮೇವೇತ್ಯುಕ್ತಮ್ । ತೇನ ಅನಶನಸ್ಯ ಜೀವೇ ಅಶ್ರುತತ್ವೇನ ಬ್ರಹ್ಮಣ್ಯೇವ ಶ್ರುತತ್ವೇನ ಚ ಶ್ರುತಹಾನ್ಯಶ್ರುತಗ್ರಹಾಖ್ಯದೋಷದ್ವಯಾಪಾತೇನ ಯದ್ವಾ ತದ್ವಾ ಜಲ್ಪತಸ್ತವ ವದನಂ ಮುದ್ರಿತಮಿತಿ ಭಾವಃ ॥ ೧೨೧೧ ॥

**ವಿವರಣೆ–** ಅನಶನವು ಜೀವನನ್ನು ಬಿಟ್ಟು ಬೇರೆ ಕಡೆಯಲ್ಲಿಯೇ ಶ್ರುತವಾಗಿದೆ. ಅವನನ್ನು ಅಭಿಚಾಕಶೀತಿ ಎಂದು ಹೇಳಿರುವುದರಿಂದ ಆ ಸರ್ವತಃ ಪ್ರಕಾಶಮಾನತ್ವ ರೂಪವಾದ ಲಿಂಗವು ಪರಮಾತ್ಮನಲ್ಲಿಯೇ ಎಂದು ತಿಳಿಯುತ್ತದೆ. ಆದ್ದರಿಂದ ಪರಮಾತ್ಮನಿಗೆ ಶ್ರುತವಾದ ಅನಶನವನ್ನು ಪರಮಾತ್ಮನಿಗೆ ಹೇಳದಿದ್ದರೆ ಶ್ರುತಹಾನಿ. ಜೀವನಲ್ಲಿ ಅಶ್ರುತವಾದ ಅನಶನವನ್ನು ಜೀವನಲ್ಲಿ ಹೇಳಿದರೆ, ಅಶ್ರುತ ಕಲ್ಪನ. ಇವೆರಡು ದೋಷವೂ ನಿನಗೆ ಬರುವುದರಿಂದ ವಿದ್ವದ್ಸಭೆಯಲ್ಲಿ ನೀನು ಮೌನವಾಗಿ ಕುಳಿತಿರಬೇಕಾಗುತ್ತದೆ ಎಂದು ಅಭಿಪ್ರಾಯ.

**ಯದೇತಚ್ಛ್ರುತಮಿಥ್ಯಾತ್ವಮಶ್ರುತಸ್ಯ ಚ ಸತ್ಯತಾಂ ।**
**ವದೇತ್ ತದ್ವೈದಿಕಂಮನ್ಯಸ್ತ್ವದನ್ಯಃ ಕಃ ಸಭಾಂತರೇ ॥ ೧೨೧೨ ॥**

**ಅರ್ಥ–** ವೈದಿಕಂ ಮನ್ಯಃ= ತನ್ನನ್ನು ವೈದಿಕನೆಂದು ತಿಳಿದ ಕಃ ಅನ್ಯಃ=ಯಾವ, ಇನ್ನೊಬ್ಬ ವಾದಿಯು, ತ್ವನ್ನ್ಯಾಯೇನ= ನಿನ್ನ ನ್ಯಾಯದಿಂದಲೇ, ಯದೇತತ್= ಈ ಯಾವ, ಶ್ರುತಮಿಥ್ಯಾತ್ವಮ್= ಶ್ರುತವಾದುದಕ್ಕೆ ಮಿಥ್ಯಾತ್ವವನ್ನು, ಅಶ್ರುತಸ್ಯ ಚ ಸತ್ಯತಾಂ= ಅಶ್ರುತವಾದುದಕ್ಕೆ ಸತ್ಯತ್ವವನ್ನು, ಸಭಾಂತರೇ= ಸಭೆಯ ಮಧ್ಯದಲ್ಲಿ, ವದೇತ್= ಹೇಳುತ್ತಾನೆ?

**ಅನುವಾದ–** ನಿನ್ನ ನ್ಯಾಯವನ್ನೇ ಅನುಸರಿಸಿ ವೈದಿಕಂ ಮನ್ಯನಾದ ಯಾವ ಇನ್ನೊಬ್ಬ ವಾದಿಯು ಶ್ರುತವಾದುದಕ್ಕೆ ಮಿಥ್ಯಾತ್ವವನ್ನೂ, ಅಶ್ರುತವಾದುದಕ್ಕೆ ಸತ್ಯತ್ವವನ್ನೂ ಸಭೆಯ ಮಧ್ಯದಲ್ಲಿ ಹೇಳುತ್ತಾನೆ?

**ಭಾವವಿಲಾಸಿನೀ–** ದೋಷಾಂತರಂ ಚಾಹ – **ಯದೇತದಿತಿ** ॥ ಜೀವ ಏವ ಶ್ರುತಸ್ಯಾಶನಸ್ಯ ಯನ್ಮಿಥ್ಯಾತ್ವಂ ಅಪಾರಮಾರ್ಥ್ಯೇನಾಶನಮಿತಿ ವದತಾ ಪರೇಣಾಂಗೀಕೃತಂ ತದಿತಿ ಸಂಬಂಧಃ । ವೈದಿಕಂಮನ್ಯ ಇತಿ ವಿರೋಧಪ್ರದರ್ಶನಾಯೋಕ್ತಮ್ । ಸಾಕ್ಷಾದ್ವೇದೋಕ್ತಸ್ಯ ಮಿಥ್ಯಾತ್ವಂ ತದನುಕ್ತಸ್ಯ ಚ ಸತ್ಯತ್ವಂ ವದತೋ ವೈದಿಕತ್ವಸ್ಯ ವಿರುದ್ಧತ್ವಾತ್ ॥ ೧೨೧೨ ॥

**ವಿವರಣೆ–** ವೇದದಲ್ಲಿ ಶ್ರುತವಾದುದಕ್ಕೆ ಮಿಥ್ಯಾತ್ವವನ್ನು ಅಶ್ರುತವಾದುದಕ್ಕೆ ಸತ್ಯತ್ವವನ್ನು ನೀನು ಹೇಳುವಂತೆ ಇನ್ನೊಬ್ಬ ವಾದಿಯು ವೇದದಲ್ಲಿ ಶ್ರುತವಾಗಿದೆ ಎಂದು ನೀನು

ಅಂಗೀಕರಿಸುವ ಐಕ್ಯವನ್ನು ಮಿಥ್ಯೆ ಎಂದು ಅಶ್ರುತವೆಂದು ನೀನು ಅಂಗೀಕರಿಸುವ ದ್ವೈತವನ್ನು ಸತ್ಯವೆಂದು ಹೇಳಿದರೆ ಅದನ್ನು ನೀನು ಏಕೆ ಒಪ್ಪಬಾರದು ಎಂದು ಅಭಿಪ್ರಾಯ.

ನ ಚೇಚ್ಛಂಕಾಪಿಶಾಚೀಯಂ ವ್ಯಾಹತಿಪ್ರಮದಾಕುಲಂ ।
ಹನ್ಯಾದನ್ಯಾಯವಾಕ್ ಸಾ ಚ ತ್ವನ್ನ್ಯಾಯೇನ ನ ಕಿಂ ಶುಭಾ ॥ ೧೨೧೩ ॥

**ಅರ್ಥ–** ನ ಚೇತ್= ಆದರೂ ನಿನ್ನ ಪಕ್ಷವನ್ನು ನೀನು ಬಿಡದಿದ್ದರೆ, ಇಯಂ ಶಂಕಾಪಿಶಾಚೀ= ಈ ಶಂಕಾಪಿಶಾಚಿಯು, ವ್ಯಾಹತಿಪ್ರಮದಾಕುಲಂ= ವ್ಯಾಹತಿ ಎಂಬ ವನಿತೆಯರ ಕುಲವನ್ನೇ, ಹನ್ಯಾತ್= ಕೊಲ್ಲುತ್ತದೆ, ಸಾ ಅನ್ಯಾಯವಾಕ್= ಅಂತಹ ವ್ಯಾಹತವಾದ ಮಾತು, ತ್ವನ್ನ್ಯಾಯೇನ= ನಿನ್ನ ನ್ಯಾಯದಿಂದಲೇ, ಶುಭಾ ನ ಕಿಂ= ಏಕೆ ಶುಭವಾಗುವುದಿಲ್ಲ?

**ಅನುವಾದ–** ಹೀಗೆ ದೋಷವಿದ್ದರೂ ನೀನು ನಿನ್ನ ಪಕ್ಷವನ್ನು ಬಿಡದಿದ್ದರೆ ನಿನ್ನ ನ್ಯಾಯದಿಂದಲೇ ವ್ಯಾಹತಿ ಎಂಬ ವನಿತೆಯರ ಕುಲವೇ ನಾಶವನ್ನು ಹೊಂದುತ್ತದೆ. ಅಂತಹ ವ್ಯಾಹತವಾದ ಮಾತುಗಳು ನಿನ್ನ ನ್ಯಾಯದಿಂದಲೇ ಶುಭವಾಗಬೇಕಷ್ಟೇ. ಏಕೆ ಶುಭವಾಗುವುದಿಲ್ಲ?

**ಭಾವವಿಲಾಸಿನೀ–** ನಚೇತ್ ಏವಮಪಿ ಸ್ವೋಕ್ತಂ ನ ಮುಂಚಸಿ ಚೇತ್ । ತ್ವನ್ನ್ಯಾಯೇನ ಏಕಸ್ಯ ಪಾರಮಾರ್ಥ್ಯಮ್ ಅಪರಸ್ಯಾಪಾರಮಾರ್ಥ್ಯಮಿತಿ ವಿರುದ್ಧಯೋರೇಕತ್ರ ಘಟನಾಖ್ಯನ್ಯಾಯೇನ ಅಪರಮಾರ್ಥತೋಮಾತೃತ್ವ ಬ್ರಾಹ್ಮಣತ್ವಾದಿಕಂ ಪರಮಾರ್ಥತೋ ವಂಧ್ಯಾತ್ವಾಬ್ರಾಹ್ಮಣತ್ವಮಿತಿ ಕಲ್ಪನಯಾ ವ್ಯಾಹತಿ ಮಾತ್ರೋಚ್ಛೇದಪ್ರಸಂಗಃ ॥ ೧೨೧೩ ॥

**ವಿವರಣೆ–** ಅಶನ ಮತ್ತು ಅಶನಾಭಾವಗಳಿಗೆ ಮಿಥ್ಯಾತ್ವ ಮತ್ತು ಪಾರಮಾರ್ಥಿಕತ್ವವನ್ನು ಒಪ್ಪಿ ಅರ್ಥವನ್ನು ಹೇಳುವುದಾದರೆ ಪ್ರಪಂಚದಲ್ಲಿ ವ್ಯಾಹತಿ ಎಂಬ ವಸ್ತುವೇ ಇಲ್ಲವೆಂದಾದೀತು. ಮಾತಾವಂಧ್ಯಾ, ಅಹಂ ಮೂಕಃ ಇತ್ಯಾದಿಗಳು ವ್ಯಾಹತಿಗೆ ಉದಾಹರಣೆ. ಅಲ್ಲಿಯೂ ಸಹ ಮಾತೃತ್ವವು ಮಿಥ್ಯಾಭೂತವಾದುದು, ವಂಧ್ಯಾತ್ವವು ಪಾರಮಾರ್ಥಿಕವಾದುದು, ವಕ್ತೃತ್ವವು ಮಿಥ್ಯಾಭೂತವಾದುದು, ವಕ್ತೃತ್ವಾಭಾವವು ಪಾರಮಾರ್ಥಿಕವಾದುದು ಎಂದು ಹೇಳಿ ಎಲ್ಲ ಕಡೆಗಳಲ್ಲಿಯೂ ವಿರೋಧವನ್ನು ಪರಿಹಾರ ಮಾಡಲು ಬರುವುದರಿಂದ ವ್ಯಾಹತಿಯೇ ಇಲ್ಲವೆಂದಾಗಿ ಅಂತಹ ವಚನಗಳೆಲ್ಲವೂ ಗ್ರಾಹ್ಯವಾಗಬೇಕಾದ ಪ್ರಸಂಗವು ಬರುತ್ತದೆ ಎಂದು ಅಭಿಪ್ರಾಯ.

ಕಿಂ ಚಾನಶ್ನನ್ನಿತಿ ಪದಮಶನಾಭಾವವಾಚಕಮ್ ।
ಅಶ್ನನ್ನಿತ್ಯಶನಂ ವಕ್ತಿ ಕಥಮೇಕತ್ರ ತೇ ವದ ॥ ೧೨೧೪ ॥

**ಅರ್ಥ–** ಕಿಂಚ= ಮತ್ತು, ಅನಶ್ನನ್ನಿತಿ ಪದಂ= ಅನಶ್ನನ್ ಎಂಬ ಪದವು, ಅಶನಾಭಾವ ವಾಚಕಂ= ಅಶನಾಭಾವ ವಾಚಕವಾಗಿದೆ, ಅಶ್ನನ್ ಇತಿ= ಅಶ್ನನ್ ಎಂಬ ಪದವು, ಅನಶನಂ= ಅಶನ ಭಾವವನ್ನು, ವಕ್ತಿ= ಹೇಳುತ್ತದೆ, ತೇ= ಅವೆರಡೂ, ಏಕತ್ರ= ಒಂದೇ ಅಧಿಕರಣದಲ್ಲಿ, ಕಥಂ= ಹೇಗೆ ಬರುತ್ತವೆ ಎಂದು, ವದ= ಹೇಳು.

**ಅನುವಾದ–** ಮತ್ತು ಅನಶ್ನನ್ ಎಂಬ ಪದವು ಅಶನಾಭಾವವನ್ನು ಹೇಳುತ್ತದೆ. ಅಶ್ನನ್ ಎಂಬ ಇನ್ನೊಂದು ಪದವು ಅಶನವನ್ನು ಹೇಳುತ್ತದೆ. ಈ ಅನಶನ ಮತ್ತು ಅಶನಗಳು ಒಂದೇ ಅಧಿಕರಣದಲ್ಲಿ ಹೇಗೆ ಬರುತ್ತವೆ ಎಂದು ಹೇಳು.

**ಭಾವವಿಲಾಸಿನೀ– ದೋಷಾಂತರಂ ಚಾಹ – ಕಿಂಚೇತಿ ॥ ತೇ ಅನಶನಾಶನೇ ॥ ೧೨೧೪ ॥**

**ಭಾವಾಭಾವವಿರೋಧಸ್ಯ ನ ಚೇಚ್ಛಾಂತಿರ್ಭವಿಷ್ಯತಿ ।**
**ತತಶ್ಚ ಭಾವರೂಪಂ ತೇ ನೈವಾಜ್ಞಾನಂ ಪ್ರಸಿದ್ಧ್ಯತಿ ॥ ೧೨೧೫ ॥**

**ಅರ್ಥ–** ನ ಚೇತ್= ಅಶನ ಅನಶನಗಳು ಭಿನ್ನ ಭಿನ್ನ ಅಧಿಕರಣದಲ್ಲಿ ಇರುತ್ತವೆ ಎಂದು ಹೇಳದಿದ್ದರೆ, ಭಾವಾಭಾವವಿರೋಧಸ್ಯ= ಭಾವಾಭಾವವಿರೋಧಕ್ಕೆ, ಶಾಂತಿಃ= ವಿನಾಶವು, ಭವಿಷ್ಯತಿ= ಉಂಟಾಗುತ್ತವೆ, ತತಶ್ಚ= ಮತ್ತು ಆ ಕಾರಣದಿಂದ, ತೇ= ನಿನ್ನ, ಭಾವರೂಪಂ ಅಜ್ಞಾನಂ= ಭಾವರೂಪವಾದ ಅಜ್ಞಾನವು, ನೈವ ಪ್ರಸಿದ್ಧ್ಯತಿ= ಸಿದ್ಧವಾಗುವುದೇ ಇಲ್ಲ.

**ಅನುವಾದ–** ಅಶನ ಮತ್ತು ಅನಶನಗಳು ವ್ಯಧಿಕರಣವೆಂದು ಒಪ್ಪದಿದ್ದರೆ ಭಾವಾಭಾವ ವಿರೋಧವೇ ಇಲ್ಲವೆಂದಾಗುತ್ತದೆ ಮತ್ತು ಆ ಕಾರಣದಿಂದ ನಿನಗೆ ಅಭಿಮತವಾದ ಭಾವರೂಪವಾದ ಅಜ್ಞಾನವು ಸಿದ್ಧಿಸುವುದೇ ಇಲ್ಲ.

**ಭಾವವಿಲಾಸಿನೀ– ನಚೇತ್ ಅನಶನಾಶನೇ ಭಿನ್ನಭಿನ್ನಸ್ಥಲೇ ನಚೇತ್ । ಅಸ್ತು ಭಾವಾಭಾವಯೋ-ರ್ವಿರೋಧಶಾಂತಿಃ । ತಥಾಪಿ ಮಮ ಕಾ ಹಾನಿರಿತ್ಯತ ಆಹ – ತತಶ್ಚೇತಿ ॥ ತತಃ ಭಾವಾಭಾವ-ವಿರೋಧಾಭಾವೇನ ಪ್ರತಿಯೋಗಿಜ್ಞಾನೇ ಸತ್ಯೇವ ಜ್ಞಾನಾಭಾವಸ್ಯಾಪಿ ವಕ್ತುಂ ಶಕ್ಯತ್ವಾತ್। ತೇ ಮತೇ ॥ ೧೨೧೫ ॥**

**ವಿವರಣೆ–** ಅಹಮಜ್ಞಃ ಎನ್ನುವ ಪ್ರತೀತಿಯಿಂದ ಅಭಾವರೂಪವಾದ ಅಜ್ಞಾನವು ಏಕೆ ಸಿದ್ಧವಾಗುವುದಿಲ್ಲ ಎಂಬ ನಮ್ಮ ಪ್ರಶ್ನೆಗೆ ಅದ್ವೈತಿಗಳು ಹೇಳುವ ಉತ್ತರ ಹೀಗೆ :- ಈ ಜ್ಞಾನವು ಅಭಾವರೂಪವಾದ ಅಜ್ಞಾನದ ಜ್ಞಾನವಾದರೆ ಅಭಾವ ಜ್ಞಾನ ಬರಬೇಕಾದರೆ ಧರ್ಮಿ ಮತ್ತು ಪ್ರತಿಯೋಗಿಗಳ ಜ್ಞಾನವು ಅವಶ್ಯಕವಾದುದರಿಂದ ಅಹಮಜ್ಞ ಎಂದು ಹೇಳುವ ಜ್ಞಾನಸಾಮಾನ್ಯಾಭಾವಕ್ಕೆ ಧರ್ಮಿಜ್ಞಾನ ಮತ್ತು ಪ್ರತಿಯೋಗಿ ಜ್ಞಾನಗಳು ವಿರೋಧಿಯಾದ್ದರಿಂದ ಧರ್ಮಿ ಪ್ರತಿಯೋಗಿ ಜ್ಞಾನವು ಇರುವಾಗ ವಿರೋಧಿಯು ಇರುವುದರಿಂದ ಅಭಾವ ಜ್ಞಾನವು ಬರುವುದಿಲ್ಲ. ಧರ್ಮಪ್ರತಿಯೋಗಿಗಳ ಜ್ಞಾನವಿಲ್ಲದಿದ್ದರೆ

ಅಂಗೀಕರಿಸುವ ಐಕ್ಯವನ್ನು ಮಿಥ್ಯೆ ಎಂದು ಅಶ್ರುತವೆಂದು ನೀನು ಅಂಗೀಕರಿಸುವ ದ್ವೈತವನ್ನು ಸತ್ಯವೆಂದು ಹೇಳಿದರೆ ಅದನ್ನು ನೀನು ಏಕೆ ಒಪ್ಪಬಾರದು ಎಂದು ಅಭಿಪ್ರಾಯ.

**ನ ಚೇಚ್ಛಂಕಾಪಿಶಾಚೀಯಂ ವ್ಯಾಹತಿಪ್ರಮದಾಕುಲಂ ।**
**ಹನ್ಯಾದನ್ಯಾಯವಾಕ್ ಸಾ ಚ ತ್ವನ್ನ್ಯಾಯೇನ ನ ಕಿಂ ಶುಭಾ ॥ ೧೨೧೩ ॥**

**ಅರ್ಥ–** ನ ಚೇತ್= ಆದರೂ ನಿನ್ನ ಪಕ್ಷವನ್ನು ನೀನು ಬಿಡದಿದ್ದರೆ, ಇಯಂ ಶಂಕಾಪಿಶಾಚೀ= ಈ ಶಂಕಾಪಿಶಾಚಿಯು, ವ್ಯಾಹತಿಪ್ರಮದಾಕುಲಂ= ವ್ಯಾಹತಿ ಎಂಬ ವನಿತೆಯರ ಕುಲವನ್ನೇ, ಹನ್ಯಾತ್= ಕೊಲ್ಲುತ್ತದೆ, ಸಾ ಅನ್ಯಾಯವಾಕ್= ಅಂತಹ ವ್ಯಾಹತವಾದ ಮಾತು, ತ್ವನ್ನ್ಯಾಯೇನ= ನಿನ್ನ ನ್ಯಾಯದಿಂದಲೇ, ಶುಭಾ ನ ಕಿಂ= ಏಕೆ ಶುಭವಾಗುವುದಿಲ್ಲ?

**ಅನುವಾದ–** ಹೀಗೆ ದೋಷವಿದ್ದರೂ ನೀನು ನಿನ್ನ ಪಕ್ಷವನ್ನು ಬಿಡದಿದ್ದರೆ ನಿನ್ನ ನ್ಯಾಯದಿಂದಲೇ ವ್ಯಾಹತಿ ಎಂಬ ವನಿತೆಯರ ಕುಲವೇ ನಾಶವನ್ನು ಹೊಂದುತ್ತದೆ. ಅಂತಹ ವ್ಯಾಹತವಾದ ಮಾತುಗಳು ನಿನ್ನ ನ್ಯಾಯದಿಂದಲೇ ಶುಭವಾಗಬೇಕಷ್ಟೇ. ಏಕೆ ಶುಭವಾಗುವುದಿಲ್ಲ?

**ಭಾವವಿಲಾಸಿನೀ–** ನಚೇತ್ ಏವಮಪಿ ಸ್ವೋಕ್ತಂ ನ ಮುಂಚಸಿ ಚೇತ್ । ತ್ವನ್ನ್ಯಾಯೇನ ಏಕಸ್ಯ ಪಾರಮಾರ್ಥ್ಯಮ್ ಅಪರಸ್ಯಾಪಾರಮಾರ್ಥ್ಯಮಿತಿ ವಿರುದ್ಧಯೋರೇಕತ್ರ ಘಟನಾಖ್ಯನ್ಯಾಯೇನ ಅಪರಮಾರ್ಥತೋಮಾತೃತ್ವ ಬ್ರಾಹ್ಮಣತ್ವಾದಿಕಂ ಪರಮಾರ್ಥತೋ ವಂಧ್ಯಾತ್ವಾಬ್ರಾಹ್ಮಣತ್ವಮಿತಿ ಕಲ್ಪನಯಾ ವ್ಯಾಹತಿ ಮಾತ್ರೋಚ್ಛೇದಪ್ರಸಂಗಃ ॥ ೧೨೧೩ ॥

**ವಿವರಣೆ–** ಅಶನ ಮತ್ತು ಅಶನಾಭಾವಗಳಿಗೆ ಮಿಥ್ಯಾತ್ವ ಮತ್ತು ಪಾರಮಾರ್ಥಿಕತ್ವವನ್ನು ಒಪ್ಪಿ ಅರ್ಥವನ್ನು ಹೇಳುವುದಾದರೆ ಪ್ರಪಂಚದಲ್ಲಿ ವ್ಯಾಹತಿ ಎಂಬ ವಸ್ತುವೇ ಇಲ್ಲವೆಂದಾದೀತು. ಮಾತಾವಂಧ್ಯಾ, ಅಹಂ ಮೂಕಃ ಇತ್ಯಾದಿಗಳು ವ್ಯಾಹತಿಗೆ ಉದಾಹರಣೆ. ಅಲ್ಲಿಯೂ ಸಹ ಮಾತೃತ್ವವು ಮಿಥ್ಯಾಭೂತವಾದುದು, ವಂಧ್ಯಾತ್ವವು ಪಾರಮಾರ್ಥಿಕವಾದುದು, ವಕ್ತೃತ್ವವು ಮಿಥ್ಯಾಭೂತವಾದುದು, ವಕ್ತೃತ್ವಾಭಾವವು ಪಾರಮಾರ್ಥಿಕವಾದುದು ಎಂದು ಹೇಳಿ ಎಲ್ಲ ಕಡೆಗಳಲ್ಲಿಯೂ ವಿರೋಧವನ್ನು ಪರಿಹಾರ ಮಾಡಲು ಬರುವುದರಿಂದ ವ್ಯಾಹತಿಯೇ ಇಲ್ಲವೆಂದಾಗಿ ಅಂತಹ ವಚನಗಳೆಲ್ಲವೂ ಗ್ರಾಹ್ಯವಾಗಬೇಕಾದ ಪ್ರಸಂಗವು ಬರುತ್ತದೆ ಎಂದು ಅಭಿಪ್ರಾಯ.

**ಕಿಂ ಚಾನಶ್ನನ್ನಿತಿ ಪದಮಶನಾಭಾವವಾಚಕಮ್ ।**
**ಅಶ್ನನ್ನಿತ್ಯಶನಂ ವಕ್ತಿ ಕಥಮೇಕತ್ರ ತೇ ವದ ॥ ೧೨೧೪ ॥**

**ಅರ್ಥ–** ಕಿಂಚ= ಮತ್ತು, ಅನಶ್ನನ್ನಿತಿ ಪದಂ= ಅನಶ್ನನ್ ಎಂಬ ಪದವು, ಅಶನಾಭಾವ ವಾಚಕಂ= ಅಶನಾಭಾವ ವಾಚಕವಾಗಿದೆ, ಅಶ್ನನ್ ಇತಿ= ಅಶ್ನನ್ ಎಂಬ ಪದವು, ಅನಶನಂ= ಅಶನ ಭಾವವನ್ನು, ವಕ್ತಿ= ಹೇಳುತ್ತದೆ, ತೇ= ಅವೆರಡೂ, ಏಕತ್ರ= ಒಂದೇ ಅಧಿಕರಣದಲ್ಲಿ, ಕಥಂ= ಹೇಗೆ ಬರುತ್ತವೆ ಎಂದು, ವದ= ಹೇಳು.

**ಅನುವಾದ–** ಮತ್ತು ಅನಶ್ನನ್ ಎಂಬ ಪದವು ಅಶನಾಭಾವವನ್ನು ಹೇಳುತ್ತದೆ. ಅತ್ತಿ ಎಂಬ ಇನ್ನೊಂದು ಪದವು ಅಶನವನ್ನು ಹೇಳುತ್ತದೆ. ಈ ಅನಶನ ಮತ್ತು ಅಶನಗಳು ಒಂದೇ ಅಧಿಕರಣದಲ್ಲಿ ಹೇಗೆ ಬರುತ್ತವೆ ಎಂದು ಹೇಳು.

**ಭಾವವಿಲಾಸಿನೀ– ದೋಷಾಂತರಂ ಚಾಹ – ಕಿಂಚೇತಿ** ॥ ತೇ ಅನಶನಾಶನೇ ॥ ೧೨೧೪ ॥

**ಭಾವಾಭಾವವಿರೋಧಸ್ಯ ನ ಚೇಚ್ಛಾಂತಿರ್ಭವಿಷ್ಯತಿ ।**
**ತತಶ್ಚ ಭಾವರೂಪಂ ತೇ ನೈವಾಜ್ಞಾನಂ ಪ್ರಸಿದ್ಧ್ಯತಿ ॥ ೧೨೧೫ ॥**

**ಅರ್ಥ–** ನ ಚೇತ್= ಅಶನ ಅನಶನಗಳು ಭಿನ್ನ ಭಿನ್ನ ಅಧಿಕರಣದಲ್ಲಿ ಇರುತ್ತವೆ ಎಂದು ಹೇಳದಿದ್ದರೆ, ಭಾವಾಭಾವವಿರೋಧಸ್ಯ= ಭಾವಾಭಾವವಿರೋಧಕ್ಕೆ, ಶಾಂತಿಃ= ವಿನಾಶವು, ಭವಿಷ್ಯತಿ= ಉಂಟಾಗುತ್ತವೆ, ತತಶ್ಚ= ಮತ್ತು ಆ ಕಾರಣದಿಂದ, ತೇ= ನಿನ್ನ, ಭಾವರೂಪಂ ಅಜ್ಞಾನಂ= ಭಾವರೂಪವಾದ ಅಜ್ಞಾನವು, ನೈವ ಪ್ರಸಿದ್ಧ್ಯತಿ= ಸಿದ್ಧವಾಗುವುದೇ ಇಲ್ಲ.

**ಅನುವಾದ–** ಅಶನ ಮತ್ತು ಅನಶನಗಳು ವ್ಯಧಿಕರಣವೆಂದು ಒಪ್ಪದಿದ್ದರೆ ಭಾವಾಭಾವ ವಿರೋಧವೇ ಇಲ್ಲವೆಂದಾಗುತ್ತದೆ ಮತ್ತು ಆ ಕಾರಣದಿಂದ ನಿನಗೆ ಅಭಿಮತವಾದ ಭಾವರೂಪವಾದ ಅಜ್ಞಾನವು ಸಿದ್ಧಿಸುವುದೇ ಇಲ್ಲ.

**ಭಾವವಿಲಾಸಿನೀ– ನಚೇತ್ ಅನಶನಾಶನೇ ಭಿನ್ನಭಿನ್ನಸ್ಥಲೇ ನಚೇತ್ । ಅಸ್ತು ಭಾವಾಭಾವಯೋ-ರ್ವಿರೋಧಶಾಂತಿಃ । ತಥಾಪಿ ಮಮ ಕಾ ಹಾನಿರಿತ್ಯತ ಆಹ – ತತಶ್ಚೇತಿ ॥ ತತಃ ಭಾವಾಭಾವ-ವಿರೋಧಾಭಾವೇನ ಪ್ರತಿಯೋಗಿಜ್ಞಾನೇ ಸತ್ಯೇವ ಜ್ಞಾನಾಭಾವಸ್ಯಾಪಿ ವಕ್ತುಂ ಶಕ್ಯತ್ವಾತ್। ತೇ ಮತೇ** ॥ ೧೨೧೫ ॥

**ವಿವರಣೆ–** ಅಹಮಜ್ಞಃ ಎನ್ನುವ ಪ್ರತೀತಿಯಿಂದ ಅಭಾವರೂಪವಾದ ಅಜ್ಞಾನವು ಏಕೆ ಸಿದ್ಧವಾಗುವುದಿಲ್ಲ ಎಂಬ ನಮ್ಮ ಪ್ರಶ್ನೆಗೆ ಅದ್ವೈತಿಗಳು ಹೇಳುವ ಉತ್ತರ ಹೀಗೆ :- ಈ ಜ್ಞಾನವು ಅಭಾವರೂಪವಾದ ಅಜ್ಞಾನದ ಜ್ಞಾನವಾದರೆ ಅಭಾವ ಜ್ಞಾನ ಬರಬೇಕಾದರೆ ಧರ್ಮಿ ಮತ್ತು ಪ್ರತಿಯೋಗಿಗಳ ಜ್ಞಾನವು ಅವಶ್ಯಕವಾದುದರಿಂದ ಅಹಮಜ್ಞ ಎಂದು ಹೇಳುವ ಜ್ಞಾನಸಾಮಾನ್ಯಾಭಾವಕ್ಕೆ ಧರ್ಮಿಜ್ಞಾನ ಮತ್ತು ಪ್ರತಿಯೋಗಿ ಜ್ಞಾನಗಳು ವಿರೋಧಿಯಾದ್ದರಿಂದ ಧರ್ಮಿ ಪ್ರತಿಯೋಗಿ ಜ್ಞಾನವು ಇರುವಾಗ ವಿರೋಧಿಯು ಇರುವುದರಿಂದ ಅಭಾವ ಜ್ಞಾನವು ಬರುವುದಿಲ್ಲ. ಧರ್ಮಿಪ್ರತಿಯೋಗಿಗಳ ಜ್ಞಾನವಿಲ್ಲದಿದ್ದರೆ

ಕಾರಣವೇ ಇಲ್ಲದಿರುವುದರಿಂದ ಅಭಾವಜ್ಞಾನವು ಬರುವುದಿಲ್ಲ ಎಂದು ಹೇಳಿ, ಆದ್ದರಿಂದ ಇಲ್ಲಿ ತೋರುವ ಅಜ್ಞಾನವು ಭಾವರೂಪವಾದುದು ಎಂದು ಹೇಳುತ್ತಾರೆ. ಈಗ ಭಾವಾಭಾವ ವಿರೋಧವೇ ಇಲ್ಲವೆಂದಾದರೆ ಧರ್ಮಿಪ್ರತಿಯೋಗಿ ಜ್ಞಾನವಿದ್ದಾಗಲೂ ಅಭಾವಜ್ಞಾನವು ಬರಬಹುದಾದ್ದರಿಂದ, ಅಹಮಜ್ಞ ಎಂಬ ಪ್ರತೀತಿಯಲ್ಲಿ ತೋರುವ ಅಜ್ಞಾನವು ಜ್ಞಾನಾಭಾವವೆಂದೇ ಸಿದ್ಧವಾಗುವುದರಿಂದ ಭಾವರೂಪ ಅಜ್ಞಾನವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಅಭಾವಾಜ್ಞಾನವಾದೋ ಹಿ ಭಾವಾಭಾವವಿರೋಧತಃ ।**
**ನಿವಾರ್ಯತೇ ತ್ವಯಾ ತಸ್ಯಾಭಾವೇಽಸೌ ಕೇನ ವಾರ್ಯತೇ ॥ ೧೨೧೬ ॥**

**ಅರ್ಥ–** ತ್ವಯಾ= ನಿನ್ನಿಂದ, ಭಾವಾಭಾವವಿರೋಧತಃ= ಭಾವಾಭಾವಗಳಿಗೆ ವಿರೋಧವಿರುವುದರಿಂದ, ಅಭಾವಾಜ್ಞಾನವಾದಃ= ಜ್ಞಾನಾಭಾವರೂಪವಾದ ಅಜ್ಞಾನದ ವಾದವು, ನಿವಾರ್ಯತೇ ಹಿ= ನಿರಾಕರಿಸಲ್ಪಡುತ್ತದೆಯಷ್ಟೇ, ತಸ್ಯಾಭಾವೇ= ಭಾವಾಭಾವ ವಿರೋಧವೇ ಇಲ್ಲದಿದ್ದರೆ, ಅಸೌ= ಈ ಜ್ಞಾನಾಭಾವರೂಪವಾದ ಅಜ್ಞಾನವು, ಕೇನ ವಾರ್ಯತೇ= ಹೇಗೆ ನಿರಾಕರಿಸಲ್ಪಡುತ್ತದೆ?

**ಅನುವಾದ–** ಭಾವಾಭಾವಗಳಿಗೆ ವಿರೋಧವಿರುವ ಕಾರಣದಿಂದಲೇ ನೀನು ಅಭಾವರೂಪವಾದ ಅಜ್ಞಾನವಾದವನ್ನು ನಿರಾಕರಿಸುತ್ತೀಯಷ್ಟೇ? ಭಾವಾಭಾವ ವಿರೋಧವೇ ಇಲ್ಲದಿದ್ದರೆ ಅಭಾವರೂಪವಾದ ಅಜ್ಞಾನವನ್ನು ಹೇಗೆ ನಿರಾಕರಿಸುತ್ತೀಯೇ?

**ಭಾವವಿಲಾಸಿನೀ–** ಭಾವಾಭಾವವಿರೋಧತಃ ಪ್ರತಿಯೋಗಿಜ್ಞಾನಸ್ಯ ತದಭಾವಸ್ಯ ಚೈಕತ್ರ ವಿರೋಧಾತ್ । ತಸ್ಯ ಭಾವಾಭಾವವಿರೋಧಸ್ಯಭಾವರೂಪಾಜ್ಞಾನಮತೇ ಪ್ರತಿಯೋಗಿಜ್ಞಾನೇ ಸತ್ಯೇವ ಭಾವರೂಪಂ ತದಜ್ಞಾನಂ ವಕ್ತುಂ ಶಕ್ಯತೇ । ಭಾವಯೋರ್ವಿರೋಧಾಭಾವಾತ್ । ಅಭಾವರೂಪಮಜ್ಞಾನಂ ತು ನ ವಕ್ತುಂ ಶಕ್ಯಮ್ । ಭಾವಾಭಾವಯೋರೇಕತ್ರ ವಿರೋಧಾದಿತಿ ಹಿ ಪರಸ್ಯ ಮತಮ್ । ತದ್ಗತಮಿತಿ ಭಾವಃ ॥

**ಜಗಚ್ಚ ಬ್ರಹ್ಮಣಿ ಸದಾ ಸದೇವ ಸ್ಯಾದಖಂಡಿತಂ ।**
**ತದಭಾವಾಖ್ಯಬಾಧೋಽಪಿ ಸ್ಯಾತ್ ತಯೋರವಿರೋಧತಃ ॥ ೧೨೧೭ ॥**

**ಅರ್ಥ–** ಬ್ರಹ್ಮಣಿ= ಬ್ರಹ್ಮನಲ್ಲಿ, ಸದಾ= ಯಾವಾಗಲೂ, ಜಗಚ್ಚ= ಜಗತ್ತೂ ಸಹ, ಅಖಂಡಿತಂ= ಅನಿಷೇಧ್ಯವಾಗಿ, ಸ್ಯಾತ್= ಇರಲಿ, ತಯೋರವಿರೋಧತಃ= ಜಗತ್ತು ಮತ್ತು ಜಗತ್ತಿನ ಅಭಾವಗಳಿಗೆ ವಿರೋಧವಿಲ್ಲದಿರುವುದರಿಂದ, ತದಭಾವಾಖ್ಯಬಾಧೋಽಪಿ= ಜಗದಭಾವ ರೂಪವಾದ ಬಾಧವೂ ಸಹ, ಸ್ಯಾತ್= ಇರಲಿ.

**ಅನುವಾದ–** ಬ್ರಹ್ಮನಲ್ಲಿ ಜಗತ್ತು ನಿಷೇಧ್ಯವಾಗದೆ ಸದಾ ಸತ್ಯವಾಗಿಯೇ ಇರಲಿ. ಭಾವಾಭಾವಗಳಿಗೆ ವಿರೋಧವು ಇಲ್ಲದಿರುವುದರಿಂದ ಜಗದಭಾವರೂಪವಾದ ಬಾಧವೂ ಸಹ ಇರಲಿ.

**ಭಾವವಿಲಾಸಿನೀ–** ಅನಿಷ್ಟಾಂತರಂ ಚಾಹ – ಜಗಚ್ಚೇತಿ ॥ ತಯೋಃ ಜಗದ್‌ಭಾವಾಭಾವಯೋಃ ॥ ೧೨೧೭ ॥

**ವಿವರಣೆ–** ಭಾವಾಭಾವಗಳಿಗೆ ವಿರೋಧವನ್ನು ಒಪ್ಪದಿದ್ದರೆ ಭಾವರೂಪ ಅಜ್ಞಾನವು ಸಿದ್ಧವಾಗುವುದಿಲ್ಲ ಎಂಬ ದೋಷವನ್ನು ಹಿಂದಿನ ಶ್ಲೋಕದಲ್ಲಿ ಹೇಳಿ ಇಲ್ಲಿ ಜಗತ್ತಿಗೆ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂಬ ಇನ್ನೊಂದು ದೋಷವನ್ನು ಹೇಳುತ್ತಾರೆ.

**ಭಾವಾಭಾವವಿರೋಧೋಽತೋ ವಾಚ್ಯಃ ಸರ್ವಾತ್ಮನಾ ತ್ವಯಾ ।**
**ಅಭಾವೇನ ಸಹ ಸ್ಥಿತ್ಯಾ ಮಿಥ್ಯಾತ್ವಾಶಾಪ್ಯತೋ ಗತಾ ॥ ೧೨೧೮ ॥**

**ಅರ್ಥ–** ಅತಃ= ಆದ್ದರಿಂದ, ತ್ವಯಾ= ನಿನ್ನಿಂದ, ಸರ್ವಾತ್ಮನಾ= ಎಲ್ಲ ರೀತಿಯಿಂದಲೂ, ಭಾವಾಭಾವವಿರೋಧಃ= ಭಾವಾಭಾವ ವಿರೋಧವು, ವಾಚ್ಯಃ= ಅಂಗೀಕರಿಸಲ್ಪಡಬೇಕು, ಅತಃ= ಆದ್ದರಿಂದ, ಅಭಾವೇನ ಸಹ ಸ್ಥಿತ್ಯಾ= ಅಭಾವದ ಸಾಮಾನಾಧಿಕರಣ್ಯವು ಇರುವುದರಿಂದ, ಮಿಥ್ಯಾತ್ವಾಶಾ= ಮಿಥ್ಯಾತ್ವದ ಆಶೆಯೇ, ಗತಾ= ಹೊರಟು ಹೋಗುತ್ತದೆ.

**ಅನುವಾದ–** ಆದ್ದರಿಂದ ನೀನಾದರೂ ಭಾವಾಭಾವಗಳಿಗೆ ವಿರೋಧಗಳನ್ನು ಸರ್ವಥಾ ಹೇಳಲೇಬೇಕು. ಇಲ್ಲದಿದ್ದರೆ ಭಾವಾಭಾವಗಳಿಗೆ ಸಾಮಾನಾಧಿಕರಣ್ಯವು ಇರಬಹುದಾದ್ದರಿಂದ ನಿನ್ನ ಮಿಥ್ಯಾತ್ವ ಆಸೆಯು ಹೊರಟುಹೋಗುತ್ತದೆ.

**ಭಾವವಿಲಾಸಿನೀ–** ಅತಃ ಪೂರ್ವೋಕ್ತಬಾಧಕದ್ವಯಾತ್ । ಅಭಾವೇನ ಸಹಸ್ಥಿತ್ಯಾ ಸ್ವಾತ್ಯಂತಾ-ಭಾವಸಾಮಾನಾಧಿಕರಣ್ಯೇನೇತ್ಯರ್ಥಃ । ಅತಃ ಭಾವಾಭಾವವಿರೋಧಸ್ಯಾವಶ್ಯಕತ್ವಾತ್ ॥

**ವಿವರಣೆ–** ಅದ್ವೈತಿಗಳು ಸತ್, ಅಸತ್ ಎಂಬ ಎರಡು ಪ್ರಕಾರವನ್ನು ಒಪ್ಪುತ್ತಾರೆ. ಸದಸತ್ ಎಂಬ ಮೂರನೇ ಪ್ರಕಾರವನ್ನು ಏಕೆ ಒಪ್ಪುವುದಿಲ್ಲ ಎಂದು ಕೇಳಿದರೆ, ಅದು ವಿರುದ್ಧವಾದುದರಿಂದ ಅದನ್ನು ಒಪ್ಪಲು ಸಾಧ್ಯವಿಲ್ಲ ಎಂದು ಹೇಳಿ, ಸದಸತ್ ವಿಲಕ್ಷಣ ಎಂಬ ನಾಲ್ಕನೆಯ ಪ್ರಕಾರವನ್ನು ಒಪ್ಪುತ್ತಾರೆ. ಅದರಂತೆಯೇ ಭಾವ ಮತ್ತು ಅಭಾವ ಎಂಬ ಎರಡು ಪ್ರಕಾರಗಳು. ಒಂದೇ ವಸ್ತುವನ್ನು ಭಾವಾಭಾವರೂಪವೆಂದು ಒಪ್ಪಲು ಬರುವುದಿಲ್ಲ, ಏಕೆಂದರೆ ವಿರೋಧವಿದೆ. ಆದ್ದರಿಂದ ಭಾವಾಭಾವವಿಲಕ್ಷಣ ಎಂಬ ಇನ್ನೊಂದು ಪ್ರಕಾರವನ್ನು ಒಪ್ಪುತ್ತಾರೆ. ಸದಸದ್ವಿಲಕ್ಷಣವೆಂದರೂ, ಭಾವಾಭಾವ ವಿಲಕ್ಷಣವೆಂದರೂ ಒಂದೇ, ಇದೇ ಮಿಥ್ಯಾತ್ವ. ಈಗ ಭಾವಾಭಾವಗಳಿಗೆ ವಿರೋಧ ವಿಲ್ಲದಿರುವುದರಿಂದ ಭಾವಾಭಾವರೂಪವಾದ ಮೂರನೆಯ ಪ್ರಕಾರವನ್ನೇ ಅಂಗೀಕರಿಸಬಹುದು. ಆಗ

ಭಾವಾಭಾವವಿಲಕ್ಷಣತ್ವ ರೂಪವಾದ ನಾಲ್ಕನೆಯ ಪ್ರಕಾರವನ್ನು ಅಂಗೀಕರಿಸುವ ಅವಶ್ಯಕತೆ ಇಲ್ಲದಿರುವುದರಿಂದ ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ವಿರೋಧೇಽಪ್ಯವಿರೋಧೇಽಪಿ ತತಃ ಸಾ ಘಟತೇ ನ ತೇ ॥ ೧೨೧೯ ॥**

**ಅರ್ಥ–** ವಿರೋಧೇಪಿ= ಭಾವಾಭಾವಗಳಿಗೆ ವಿರೋಧವಿದ್ದರೂ, ಅವಿರೋಧೇಪಿ= ಅಥವಾ ವಿರೋಧವಿಲ್ಲದಿದ್ದರೂ, ತತಃ= ಆ ಕಾರಣದಿಂದ, ತೇ= ನಿನ್ನ, ಸಾ= ಮಿಥ್ಯಾತ್ವದ ಆಶೆಯು, ನ ಘಟತೇ= ಕೂಡುವುದಿಲ್ಲ.

**ಅನುವಾದ– ಆದ್ದರಿಂದ ಭಾವಾಭಾವಗಳಿಗೆ ವಿರೋಧವಿದ್ದರೂ ಅಥವಾ ವಿರೋಧವಿಲ್ಲದಿದ್ದರೂ ನಿನ್ನ ಮಿಥ್ಯಾತ್ವದ ಆಶೆಯು ಉಪಪನ್ನವಾಗುವುದಿಲ್ಲ.**

**ಭಾವವಿಲಾಸಿನೀ– ಏವಂಚ ಪರಸ್ಯೋಭಯತಃ ಪಾಶಾರಜ್ಜುರೇವೇತ್ಯಾಹ – ವಿರೋಧ ಇತಿ ॥ ಸಾ ಮಿಥ್ಯಾತ್ವಾಶಾ ॥ ೧೨೧೯ ॥**

**ವಿವರಣೆ–** ಈ ಮಿಥ್ಯಾತ್ವದ ಆಸೆಯ ಅಘಟನೆಯನ್ನು ಮುಂದಿನ ಶ್ಲೋಕದಲ್ಲಿ ವಿವರಿಸುತ್ತಾರೆ.

**ಭಾವಾಭಾವವಿರೋಧೇ ಹಿ ಸ್ವೋಕ್ತಮಿಥ್ಯಾತ್ವವಾಗ್ ಗತಾ ।**
**ಸ್ವಾಭಾವೇನ ಸಹ ಸ್ಥಿತ್ಯಾ ಯತೋ ಮಿಥ್ಯಾತ್ವಮುಚ್ಯತೇ ॥ ೧೨೨೦ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಸ್ವಾಭಾವೇನ ಸಹ ಸ್ಥಿತ್ಯಾ= ತನ್ನ ಅಭಾವದ ಜೊತೆಯಲ್ಲಿ ತಾನು ಇರುವುದರಿಂದ, ಮಿಥ್ಯಾತ್ವ= ಮಿಥ್ಯಾತ್ವವು, ಉಚ್ಯತೇ= ನಿನ್ನಿಂದ ಹೇಳಲ್ಪಡುತ್ತದೆಯೋ, ಆ ಕಾರಣದಿಂದ, ಭಾವಾಭಾವವಿರೋಧೇ ಹಿ= ಭಾವಾಭಾವ ವಿರೋಧವು ಇದ್ದರೆ, ಸ್ವೋಕ್ತಮಿಥ್ಯಾತ್ವವಾಕ್= ನೀನು ಹೇಳಿದ ಮಿಥ್ಯಾತ್ವ ವಚನವು, ಗತಾ= ಹೊರಟು ಹೋಯಿತು.

**ಅನುವಾದ– ಯಾವ ಕಾರಣದಿಂದ ನೀನು ಸ್ವಾತ್ಯಂತಾಭಾವ ಸಾಮಾನಾಧಿಕರಣ್ಯವನ್ನು ಮಿಥ್ಯಾತ್ವವೆಂದು ಹೇಳುತ್ತೀಯೋ ಆ ಕಾರಣದಿಂದ ಭಾವಾಭಾವಗಳಿಗೆ ವಿರೋಧವಿಲ್ಲದಿದ್ದರೆ ನೀನು ಹೇಳುವ ಮಿಥ್ಯಾತ್ವ ವಚನವು ಹೊರಟು ಹೋಯಿತು.**

**ಭಾವವಿಲಾಸಿನೀ– ಕಥಮಿತ್ಯತ ಆಹ – ಭಾವಾಭಾವೇತಿ ॥ ಕಸ್ಮಾಮಿಥ್ಯಾತ್ವವಾಗ್ಗತೇತ್ಯತ ಆಹ – ಸ್ವಾಭಾವೇನೇತಿ ॥ ತತೋ ಗತೇತಿ ಪೂರ್ವೇಣಾನ್ವಯಃ ॥ ೧೨೨೦ ॥**

**ವಿವರಣೆ–** ಭಾವಾಭಾವಗಳ ವಿರೋಧವಿದ್ದರೆ ಭಾವವು ಮಾತ್ರ ಇರುತ್ತದೆ, ಅಥವಾ ಅಭಾವವು ಮಾತ್ರ ಇರುತ್ತದೆ. ಭಾವಾಭಾವಗಳು ಒಟ್ಟಿಗೆ ಇರುವುದಿಲ್ಲ. ಆದ್ದರಿಂದ ತಾನೂ ತನ್ನ ಅಭಾವವು ಜೊತೆಯಲ್ಲಿದೆ ಎಂದು ಹೇಳಿ ಅಂಗೀಕರಿಸುವ ಮಿಥ್ಯಾತ್ವವು ಅನುಪಪನ್ನವಾಗುತ್ತದೆ ಎಂದು ಅಭಿಪ್ರಾಯ.

**ಅವಿರೋಧೇ ಜಗತ್ ಸತ್ ಸ್ಯಾದ್ ಭಾವಾಜ್ಞಾನಂ ಚ ಭರ್ಜಿತಂ ॥ ೧೨೨೧ ॥**

**ಅರ್ಥ–** ಅವಿರೋಧೇ= ಭಾವಾಭಾವಗಳಿಗೆ ವಿರೋಧವಿಲ್ಲದಿದ್ದರೆ, ಜಗತ್= ಜಗತ್ತು, ಸತ್ ಸ್ಯಾತ್= ಸತ್ಯವಾಗಿ ಇರುತ್ತದೆ, ಚ= ಮತ್ತು, ಭಾವಾಜ್ಞಾನಂ= ಭಾವರೂಪ ಅಜ್ಞಾನವು, ಭರ್ಜಿತಂ= ನಾಶವನ್ನು ಹೊಂದುತ್ತದೆ.

**ಅನುವಾದ–** ಭಾವಾಭಾವಗಳಿಗೆ ವಿರೋಧವಿಲ್ಲವೆಂದು ಹೇಳಿದರೆ ಆಗ ಜಗತ್ತು ಸತ್ಯವಾಗುತ್ತದೆ ಮತ್ತು ಭಾವರೂಪ ಅಜ್ಞಾನವು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ–** ಅವಿರೋಧೇಽಪಿ ಮಿಥ್ಯಾತ್ವಾಶಾಗಮನಪ್ರಕಾರಮಾಹ –**ಅವಿರೋಧ ಇತಿ** ॥ ಜಗದಭಾವಾಖ್ಯಾಭಾವೇಽಪಿ ಜಗತೋ ಭಾವಸಂಭವಾತ್ ಜಗತ್ ಸತ್ಸ್ಯಾತ್ । ಅತೋಽಪಿ ಮಿಥ್ಯಾತ್ವಾಶಾ ಗತೇತಿ ಭಾವಃ । ರಜ್ಜ್ವಂತರಂ ಚಾಹ – **ಭಾವೇತಿ** ॥ ೧೨೨೧ ॥

**ವಿವರಣೆ–** ಭಾವಾಭಾವಗಳಿಗೆ ವಿರೋಧವಿಲ್ಲದಿದ್ದರೆ ಜಗದಭಾವವಿದ್ದರೂ ಜಗತ್ತು ಇರಬಹುದು. ಹೀಗೆ ಜಗತ್ಸತ್ಯತ್ವಕ್ಕೆ ವಿರೋಧಿಯಲ್ಲದ ಜಗದಭಾವವನ್ನು ಒಪ್ಪಿದರೆ ಅದನ್ನು ಬಾಧವೆಂದು ಹೇಳಿದರೆ ಆ ಬಾಧವು ಜಗತ್ಸತ್ಯತ್ವಕ್ಕೆ ವಿರೋಧಿಯಲ್ಲವಾದುದರಿಂದ ಪಾರಿಭಾಷಿಕವೆಂದಾಯಿತು. ಆದರಿಂದ ನಮಗೆ ಯಾವ ಬಾಧಕವೂ ಇಲ್ಲ ಎಂಬುದು ಒಂದು ದೋಷ. ಹಿಂದೆ ಹೇಳಿದಂತೆ ಭಾವರೂಪಾಜ್ಞಾನವೇ ಸಿದ್ಧವಾಗುವುದಿಲ್ಲ ಎಂಬುದು ಇನ್ನೊಂದು ದೋಷ.

**ತಥಾಪಿ ಲೋಕತೋ ಭೀತ್ಯಾ ಭಾವಾಜ್ಞಾನರಿರಕ್ಷಯಾ ।**
**ವಿರೋಧ ಏವ ಶ್ಲಾಘ್ಯಸ್ತೇ ಯೋ ಯೋಗ್ಯೋ ಬುಧಸಂಸದಿ ॥ ೧೨೨೨ ॥**

**ಅರ್ಥ–** ತಥಾಪಿ= ಆದರೂ ಕೂಡ, ಲೋಕತೋ ಭೀತ್ಯಾ= ಲೋಕಾನುಭವಕ್ಕೆ ಹೆದರಿ ಮತ್ತು, ಭಾವಾಜ್ಞಾನರಿರಕ್ಷಯಾ= ಭಾವರೂಪವಾದ ಅಜ್ಞಾನವನ್ನು ಸಂರಕ್ಷಣೆ ಮಾಡಿಕೊಳ್ಳಲು, ತೇ= ನಿನಗೆ, ಯಃ= ಯಾವ, ವಿರೋಧ= ವಿರೋಧವು, ಬುಧಸಂಸದಿ= ಜ್ಞಾನಿಗಳ ಸಭೆಯಲ್ಲಿ, ಯೋಗ್ಯಃ= ಯೋಗ್ಯವೋ, ವಿರೋಧ ಏವ= ವಿರೋಧವೇ, ತೇ= ನಿನಗೆ, ಶ್ಲಾಘ್ಯಃ= ಶ್ಲಾಘ್ಯವಾದುದು.

**ಅನುವಾದ–** ಆದರೂ ಕೂಡ ಲೋಕಾನುಭವಕ್ಕೆ ಹೆದರಿ ಮತ್ತು ಭಾವರೂಪವಾದ ಅಜ್ಞಾನವನ್ನು ಸಾಧಿಸುವ ಪ್ರಯೋಜನವನ್ನು ಉದ್ದೇಶಿಸಿ ನೀನು ಜ್ಞಾನಿಗಳ

ಸಭೆಯಲ್ಲಿ ಅಂಗೀಕರಿಸಲು ಯೋಗ್ಯವಾದ ಭಾವಾಭಾವ ವಿರೋಧವನ್ನು ಅಂಗೀಕರಿಸುವುದೇ ಶ್ರೇಷ್ಠವಾದುದು.

**ಭಾವವಿಲಾಸಿನೀ–** ತಥಾಪಿ ಪಕ್ಷದ್ವಯೇ ದೋಷಪ್ರಸಂಗೇಽಪಿ । ವಿರೋಧ ಏವ ಭಾವಾಭಾವವಿರೋಧ ಏವ ॥ ೧೨೨೨॥

**ವಿವರಣೆ–** ಭಾವಾಭಾವಗಳಿಗೆ ವಿರೋಧವನ್ನು ಅಂಗೀಕರಿಸಿದರೂ ದೋಷವನ್ನು ಹೇಳಿದ್ದೇವೆ. ವಿರೋಧವನ್ನು ಅಂಗೀಕರಿಸದಿದ್ದರೂ ದೋಷವನ್ನು ಹೇಳುತ್ತೇವೆ. ಆದರೂ ನೀನು ವಿರೋಧವನ್ನು ಅಂಗೀಕರಿಸುವುದೇ ಒಳ್ಳೆಯದು. ಇಲ್ಲದಿದ್ದರೆ ಲೋಕಾನುಭವ ವಿರೋಧವು ಬರುತ್ತದೆ ಮತ್ತು ಭಾವರೂಪ ಅಜ್ಞಾನದ ಸಿದ್ಧಿಯೂ ಆಗುವುದಿಲ್ಲ ಎಂದು ಅಭಿಪ್ರಾಯ.

ಅತೋ ಧರ್ಮದ್ವಯಸ್ಯಾಸ್ಯ ಭಿದ್ಯೇತೇ ಧರ್ಮಿಣಾವಪಿ ॥ ೧೨೨೩ ॥

**ಅರ್ಥ–** ಅತಃ= ಆದ್ದರಿಂದ, ಅಸ್ಯ ಧರ್ಮದ್ವಯಸ್ಯ= ಅಶನ ಮತ್ತು ಅನಶನ ರೂಪವಾದ ಈ ಎರಡು ಧರ್ಮಗಳಿಗೆ, ಧರ್ಮಿಣಾವಪಿ= ಧರ್ಮಿಗಳೂ ಕೂಡ, ಭಿದ್ಯೇತೇ= ಭಿನ್ನ ಭಿನ್ನವಾಗುತ್ತವೆ.

**ಅನುವಾದ–** ಆದ್ದರಿಂದ ಅಶನ ಮತ್ತು ಅನಶನ ರೂಪವಾದ ಎರಡು ಧರ್ಮಗಳಿಗೆ ಧರ್ಮಿಗಳು ಕೂಡ ಭಿನ್ನ ಭಿನ್ನವಾಗುತ್ತವೆ.

**ಭಾವವಿಲಾಸಿನೀ–** ಅತಃ ಭಾವಾಭಾವವಿರೋಧಸ್ಯೈವ ಶ್ಲಾಘ್ಯತ್ವಾತ್ ॥ ೧೨೨೩ ॥

**ವಿವರಣೆ–** ಒಂದೇ ಧರ್ಮಿಯಲ್ಲಿ ಪಾರಮಾರ್ಥಿಕವಾದ ಅನಶನವನ್ನು, ಅಪಾರ-ಮಾರ್ಥಿಕವಾದ ಅಶನವನ್ನು ಶ್ರುತಿಯು ಹೇಳುತ್ತಿಲ್ಲವಾದ ಕಾರಣ ಹಾಗೆ ಅಂಗೀಕಾರ ಮಾಡಬಾರದು ಎಂದು ಅಭಿಪ್ರಾಯ.

ಯಥಾಸ್ಥಿತಪದಸ್ಯಾರ್ಥಾಯೋಗೇಽಧ್ಯಾಹಾರ ಇಷ್ಯತೇ ।
ಜೀವೇಶಯೋರ್ದ್ವಯೋಃ ಸತ್ವಾದರ್ಥೋ ಯುಕ್ತತರೋಽಭವತ್ ।
ಅತೋಽಧ್ಯಾಹಾರ ಏವೈಷ ದೋಷಾಧ್ಯಾಹಾರ ಏವ ತೇ ॥ ೧೨೨೪ ॥

**ಅರ್ಥ–** ಯಥಾಸ್ಥಿತಪದಸ್ಯಾರ್ಥಾಯೋಗೇ= ಪದವು ಯಥಾಸ್ಥಿತಿವಾಗಿ ಹೇಳುವ ಅರ್ಥಕ್ಕೆ ಅಸಂಭವವಿದ್ದರೆ ಮಾತ್ರ, ಅಧ್ಯಾಹಾರಃ= ಅಧ್ಯಾಹಾರವು, ಇಷ್ಯತೇ= ಸ್ವೀಕರಿಸಲ್ಪಡುತ್ತದೆ, ಪ್ರಕೃತದಲ್ಲಿ, ಜೀವೇಶಯೋಃ ದ್ವಯೋಃ= ಜೀವ ಮತ್ತು ಈಶ್ವರ ಎಂಬ ಎರಡು ಪದಾರ್ಥಗಳು, ಸತ್ವಾತ್= ಇರುವುದರಿಂದ, ಅರ್ಥಃ= ಶ್ರುತ್ಯರ್ಥವು, ಯುಕ್ತತರಃ=

ಅತ್ಯಂತ ಯುಕ್ತವಾಗಿಯೇ, ಅಭವತ್= ಆಗಿದೆ, ಅತಃ= ಆದ್ದರಿಂದ, ಏಷ ಅಧ್ಯಾಹಾರಃ= ಈ ಅಧ್ಯಾಹಾರವು, ತೇ= ನಿನಗೆ, ದೋಷಾಧ್ಯಾಹಾರ ಏವ= ದೋಷಾಧ್ಯಾಹಾರವೇ ಆಗುತ್ತದೆ.

**ಅನುವಾದ–** ಪದಗಳ ಯಥಾಶ್ರುತವಾದ ಅರ್ಥವು ಅನುಪಪನ್ನವಾದಾಗ ಮಾತ್ರ ಅದನ್ನು ಕೂಡಿಸುವುದಕ್ಕೆ ಅಧ್ಯಾಹಾರವು ಸ್ವೀಕರಿಸಲ್ಪಡುತ್ತದೆ. ಪ್ರಕೃತ ಶ್ರುತಿಯಲ್ಲಿ ಜೀವ ಮತ್ತು ಈಶ್ವರ ಎಂಬ ಎರಡು ಪದಾರ್ಥಗಳು ಇರುವುದರಿಂದ ಅರ್ಥವು ಅತ್ಯಂತ ಯುಕ್ತವಾಗಿದೆ (ಅರ್ಥದಲ್ಲಿ ಯಾವ ಅಸಂಭಾವನೆಯೂ ಅಥವಾ ಅನುಪಪತ್ತಿಯೂ ಇಲ್ಲ). ಆದ್ದರಿಂದ ಇಲ್ಲಿ ನೀನು ಪಾರಮಾರ್ಥಿಕವಾಗಿ ಮತ್ತು ಅಪಾರಮಾರ್ಥಿಕವಾಗಿ ಎಂಬ ಪದವನ್ನು ಅಧ್ಯಾಹಾರ ಮಾಡಿದರೆ ಅದು ನಿನಗೆ ದೋಷವನ್ನೇ ತಂದುಕೊಡುತ್ತದೆ.

**ಭಾವವಿಲಾಸಿನೀ– ದೋಷಾಂತರಂ ಚಾಹ – ಯಥಾಸ್ಥಿತೇತಿ** ॥ ೧೨೨೪ ॥

**ವಿವರಣೆ–** ಶ್ರುತಿಯು ಜೀವನಲ್ಲಿ ಅಶನವನ್ನು, ಈಶ್ವರನಲ್ಲಿ ಅನಶನವನ್ನು ಹೇಳುತ್ತಿರುವುದರಿಂದ ಅರ್ಥದಲ್ಲಿ ಯಾವ ಅನುಪಪತ್ತಿಯೂ ಇಲ್ಲ. ಅನುಪಪತ್ತಿ ಇದ್ದಿದ್ದರೆ ಅದರ ಪರಿಹಾರಕ್ಕಾಗಿ ಪಾರಮಾರ್ಥಿಕವಾಗಿ ಮತ್ತು ಅಪಾರಮಾರ್ಥಿಕವಾಗಿ ಎಂದು ಎರಡು ಪದಗಳನ್ನು ಅಧ್ಯಾಹಾರ ಮಾಡಿ ಅನುಪಪತ್ತಿಯನ್ನು ಪರಿಹಾರ ಮಾಡಬೇಕಾಗಿದ್ದಿತು. ಈಗ ಅದಕ್ಕೆ ಅವಕಾಶವೇ ಇಲ್ಲದಿರುವುದರಿಂದ ವ್ಯರ್ಥವಾಗಿ ಅಧ್ಯಾಹಾರ ಮಾಡಿದರೆ ನಿನಗೆ ದೋಷವೇ ಉಂಟಾಗುತ್ತದೆ ಎಂದು ಅಭಿಪ್ರಾಯ.

ಯದ್ಯೇವಮಪಿ ತೇ ಪ್ರೀತಿರಧ್ಯಾಹಾರೇ ಮಹೀಯಸೀ ।
ತದಾಧ್ಯಾಹರಭಾವಾರ್ಥಪದಮೇಕಂ ಹಿ ಲಾಘವಾತ್ ॥ ೧೨೨೫ ॥

**ಅರ್ಥ–** ಯದಿ= ಒಂದು ಪಕ್ಷ, ಏವಮಪಿ= ಹೀಗಿದ್ದರೂ ಕೂಡ, ತೇ= ನಿನಗೆ, ಅಧ್ಯಾಹಾರೇ= ಅಧ್ಯಾಹಾರ ಮಾಡುವುದರಲ್ಲಿಯೇ, ಮಹೀಯಸೀ= ಬಹಳವಾದ ಪ್ರೀತಿಃ= ಪ್ರೀತಿ ಇದ್ದರೆ, ತದಾ= ಆಗ, ಲಾಘವಾತ್ ಹಿ= ಲಾಘವವು ಇರುವ ಕಾರಣದಿಂದಲೇ, ಭಾವಾರ್ಥಪರಂ= ಭಾವಾರ್ಥಕವಾದ, ಏಕಂ= ಪರಮಾರ್ಥತಃ ಎಂಬ ಒಂದು ಪದವನ್ನು, ಅಧ್ಯಾಹರ= ಅಧ್ಯಾಹಾರವನ್ನು ಮಾಡು.

**ಅನುವಾದ–** ಹೀಗಿದ್ದರೂ ನಿನಗೆ ಅಧ್ಯಾಹಾರವನ್ನು ಮಾಡುವುದರಲ್ಲಿಯೇ ಬಹಳ ಪ್ರೀತಿ ಇರುವುದಾದರೆ ಲಾಘವ ಇರುವ ಕಾರಣದಿಂದಲೇ ಭಾವಾರ್ಥಕವಾದ ಪರಮಾರ್ಥತಃ (ಪಾರಮಾರ್ಥಿಕವಾಗಿ) ಎಂಬ ಒಂದು ಪದವನ್ನು ಅಧ್ಯಾಹಾರ ಮಾಡು.

**ಭಾವವಿಲಾಸಿನೀ– ಲಾಘವಾತ್ ಏಕಸ್ಯೈವ ಭಾವಸ್ಯೈವ ಚಾಧ್ಯಾಹಾರೇಣ ಲಘುತ್ವಾದಿತ್ಯರ್ಥಃ** ॥ ೧೨೨೫ ॥

**ವಿವರಣೆ–** ಎರಡು ಪದಗಳನ್ನು ಅಧ್ಯಾಹಾರ ಮಾಡುವುದಕ್ಕಿಂತ ಒಂದು ಪದವನ್ನು ಅಧ್ಯಾಹಾರ ಮಾಡುವುದರಲ್ಲಿ ಲಾಘವವು ಇರುವುದರಿಂದ ಪರಮಾರ್ಥತಃ ಎಂಬ ಒಂದೇ ಪದವನ್ನು ಅಧ್ಯಾಹಾರ ಮಾಡು ಎಂದು ಅಭಿಪ್ರಾಯ. ಅಧ್ಯಾಹಾರ ಮಾಡಿದರೆ ಸಿದ್ಧವಾಗುವ ಅರ್ಥವನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ.

ತತಶ್ಚ ಪಾರಮಾರ್ಥ್ಯೇನ ತೌ ಧರ್ಮೌ ಧರ್ಮಿಣೋರ್ದ್ವಯೋಃ ।
ಧರ್ಮಭೂತೌ ತಯೋರ್ಭೇದಂ ಸ್ಥಿರೀಕುರುತ ಏವ ಹಿ ॥ ೧೨೨೬ ॥

**ಅರ್ಥ–** ತತಶ್ಚ= ಹಾಗೆ ಅಧ್ಯಾಹಾರ ಮಾಡುವುದರಿಂದ, ತೌ ಧರ್ಮೌ= ಅಶನ ಮತ್ತು ಅನಶನ ರೂಪವಾದ ಎರಡು ಧರ್ಮಗಳು, ದ್ವಯೋಃ ಧರ್ಮಿಣೋಃ= ಜೀವ ಮತ್ತು ಈಶ್ವರ ಎಂಬ ಎರಡು ಧರ್ಮಿಗಳಲ್ಲಿ, ಪಾರಮಾರ್ಥ್ಯೇನ= ಪಾರಮಾರ್ಥಿಕವಾಗಿ, ಧರ್ಮಭೂತೌ= ಧರ್ಮಗಳಾಗಿ, ತಯೋಃ ಭೇದಂ= ಆ ಧರ್ಮಿಗಳ ಭೇದವನ್ನು, ಸ್ಥಿರೀಕುರುತ ಏವ ಹಿ= ಸ್ಥಿರವಾಗಿಯೇ ಸಾಧಿಸುವುವಷ್ಟೇ.

**ಅನುವಾದ–** ಅಧ್ಯಾಹಾರ ಮಾಡುವುದರಿಂದ ಅಶನ, ಅನಶನ ರೂಪವಾದ ಎರಡು ಧರ್ಮಗಳು ಜೀವ ಮತ್ತು ಈಶ್ವರ ರೂಪವಾದ ಎರಡು ಧರ್ಮಿಗಳಲ್ಲಿ ಧರ್ಮಗಳಾಗಿದ್ದು ಜೀವೇಶ್ವರರ ಭೇದವನ್ನು ದೃಢವಾಗಿಯೇ ಸಾಧನೆ ಮಾಡಿಕೊಡುವವಷ್ಟೇ?

**ಭಾವವಿಲಾಸಿನೀ–**ತದೇವ ಪದಂ ಸೂಚಯನ್ ಫಲಿತಮಾಹ–**ತತಶ್ಚೇತಿ**॥ ತತಃ ಅಧ್ಯಾಹಾರಾತ್। ಅನೇನ ಪಾರಮಾರ್ಥ್ಯೇನೇತಿ ಪದಸ್ಯಾಧ್ಯಾಹಾರಃ ಸೂಚಿತೋ ಭವತಿ । ತೌ ಧರ್ಮೌ ಅಶನಾನಶನರೂಪೌ। ತಯೋರ್ಧರ್ಮಿಣೋಃ । ಉಭಯತ್ರಾಪಿ ಪಾರಮಾರ್ಥ್ಯೇನೇತಿ ಪದಾಧ್ಯಾಹಾರೇ ದ್ವಯೋರಪಿ ವಿರುದ್ಧಧರ್ಮಯೋಃ ಸ್ಥಿರತ್ವಾತ್ ಭೇದಸ್ಯಾಪಿ ಸ್ಥೈರ್ಯಮಿತಿ ಭಾವಃ ॥ ೧೨೨೬ ॥

**ವಿವರಣೆ–** ಪರಮಾರ್ಥತಃ ಎಂಬ ಒಂದೇ ಪದವನ್ನು ಅಧ್ಯಾಹಾರ ಮಾಡಿದರೆ ಅಶನವು ಪಾರಮಾರ್ಥಿಕವೆಂದೂ, ಅನಶನವೂ ಪಾರಮಾರ್ಥಿಕವೆಂದೂ ಸಿದ್ಧವಾಗುತ್ತದೆ. ಇಂತಹ ಸತ್ಯವಾದ ಮತ್ತು ವಿರುದ್ಧ ಧರ್ಮಗಳಿಗೆ ಆಶ್ರಯವಾದ ಜೀವೇಶ್ವರ ರೂಪವಾದ ಎರಡು ಧರ್ಮಿಗಳು ಭಿನ್ನವಾದವುಗಳೆಂದು ದೃಢವಾಗಿ ಸಿದ್ಧವಾಗುತ್ತವೆ.

ಮುಕ್ತೋಽಪಿ ಬ್ರಹ್ಮಣಾ ಸಾಕಂ ಸರ್ವಾನ್ ಕಾಮಾನ್ ಕಿಲಾಶ್ನುತೇ ।
ಪಾರಮಾರ್ಥ್ಯಂ ತದಶನೇ ಯುಕ್ತಂ ನಾಪರಮಾರ್ಥತಾ ॥ ೧೨೨೭ ॥

**ಅರ್ಥ–** ಮುಕ್ತೋಽಪಿ= ಮುಕ್ತನೂ ಸಹ, ಬ್ರಹ್ಮಣಾ ಸಾಕಂ= ಬ್ರಹ್ಮನ ಜೊತೆಯಲ್ಲಿ, ಸರ್ವಾನ್ ಕಾಮಾನ್= ಎಲ್ಲ ಕಾಮಗಳನ್ನು, ಅಶ್ನುತೇ ಕಿಲ= ಬೋಗಿಸುತ್ತಾನಷ್ಟೇ, ತತ್=

ಆದ್ದರಿಂದ, ಅಶನೇ= ಅಶನದಲ್ಲಿ, ಪಾರಮಾರ್ಥ್ಯಂ ಚ= ಪಾರಮಾರ್ಥಿಕತ್ವವೇ, ಯುಕ್ತಂ= ಯೋಗ್ಯವಾಗುತ್ತದೆ, ಅಪರಮಾರ್ಥತಾ= ಅಪಾರಮಾರ್ಥಿಕತ್ವವು, ನ= ಯೋಗ್ಯ ವಾಗುವುದಿಲ್ಲ.

**ಅನುವಾದ–** ಮುಕ್ತನೂ ಸಹ ಬ್ರಹ್ಮದೇವರ ಜೊತೆಯಲ್ಲಿ ಎಲ್ಲ ಭೋಗಗಳನ್ನು ಅನುಭವಿಸುತ್ತಾನಷ್ಟೇ? ಆದ್ದರಿಂದ ಅಶನದಲ್ಲಿ ಪಾರಮಾರ್ಥಿಕತ್ವವೇ ಯುಕ್ತವಾದುದು, ಅಪಾರಮಾರ್ಥಿಕತ್ವವು ಅಲ್ಲ.

**ಭಾವವಿಲಾಸಿನೀ– ಅಶನೇ ಪರಾಧ್ಯಾಹೃತಪದಸ್ಯ ದೂಷಣಾಂತರಂ ಚಾಹ – ಮುಕ್ತ ಇತಿ ॥ ಕಿಲೇತ್ಯನೇನ ಸೋಶ್ನುತೇ ಸರ್ವಾನ್‌ಕಾಮಾನಿತಿ ಶ್ರುತಿಂ ಸೂಚಯತಿ । ತತ್ತಸ್ಮಾತ್ ಅಶನಸ್ಯ ಮುಕ್ತಿಕಾಲೀನತ್ವಾತ್ ॥ ೧೨೨೭ ॥**

**ವಿವರಣೆ–** ಪರಮಾರ್ಥತಃ ಎಂಬ ಪದವನ್ನೇ ಅಧ್ಯಾಹಾರ ಮಾಡಬೇಕೆಂದು ಇಲ್ಲಿ ಉಪಪಾದಿಸುತ್ತಾರೆ. 'ಸರ್ವಾನ್ ಕಾಮಾನ್ ಸಮಶ್ನುತೇ' ಎಂಬ ಶ್ರುತಿಯು ಮುಕ್ತಿ ಕಾಲದಲ್ಲಿಯೂ ಜೀವನಿಗೆ ಅಶನವನ್ನು ಹೇಳುತ್ತದೆ. ಮುಕ್ತಿ ಕಾಲದಲ್ಲಿ ಅವಿದ್ಯೆಯು ನಿವೃತ್ತಿಯನ್ನು ಹೊಂದಿರುವುದರಿಂದ ಅಪಾರಮಾರ್ಥಿಕವಾದುದು ಯಾವುದೂ ಇಲ್ಲ. ಆದ್ದರಿಂದ ಮುಕ್ತಿ ಕಾಲದಲ್ಲಿ ಇರುವ ಅಶನವು ಪಾರಮಾರ್ಥಿಕವೆಂದೇ ಸಿದ್ಧವಾಗುತ್ತದೆ. ಆ ಕಾರಣದಿಂದ ಪರಮಾರ್ಥತಃ ಎಂದು ಅಧ್ಯಾಹಾರ ಮಾಡುವುದೇ ಶ್ರೇಷ್ಠವೆಂದು ಅಭಿಪ್ರಾಯ.

**ಅತೋ ಜೀವೇಶಯೋರ್ಭೇದಃ ಶ್ರುತ್ಯರ್ಥಃ ಸುತರಾಮಭೂತ್ ।**
**ಶ್ರುತೇಃ ಪ್ರಚ್ಯಾವನಂ ತಸ್ಮಾಚ್ಛ್ರುತಪ್ರಚ್ಯಾವನಂ ತವ ॥ ೧೨೨೮ ॥**

**ಅರ್ಥ–** ಅತಃ= ಆದ್ದರಿಂದ, ಜೀವೇಶಯೋರ್ಭೇದಃ= ಜೀವೇಶ್ವರರ ಭೇದವು, ಸುತರಾಮ್= ನಿರ್ವಿವಾದವಾಗಿ, ಶ್ರುತ್ಯರ್ಥಃ ಅಭೂತ್= ಶ್ರುತ್ಯರ್ಥವಾಯಿತು, ತಸ್ಮಾತ್= ಆ ಅರ್ಥದಿಂದ, ಶ್ರುತೇಃ ಪ್ರಚ್ಯಾವನಂ= ಶ್ರುತಿಯನ್ನು ಅಪಕರ್ಷಣವನ್ನು ಮಾಡುವುದು (ಬಿಟ್ಟು ಬೇರೆ ಕಡೆಗೆ ಎಳೆಯುವುದು), ತವ= ನಿನಗೆ, ಶ್ರುತ ಪ್ರಚ್ಯಾವನಂ= ಶ್ರವಣ ರಾಹಿತ್ಯವೇ ಆಗುತ್ತದೆ.

**ಅನುವಾದ–** ಆದ್ದರಿಂದ ಜೀವೇಶ್ವರ ಭೇದವು ನಿರ್ವಿವಾದವಾಗಿ ಶ್ರುತ್ಯರ್ಥವಾಯಿತು. ಶ್ರುತಿಯನ್ನು ಆ ಅರ್ಥದಿಂದ ಬಿಟ್ಟು ಬೇರೆ ಕಡೆ ಎಳೆಯುವುದು ನಿನ್ನ ಶ್ರವಣರಾಹಿತ್ಯವನ್ನೇ ತೋರಿಸುತ್ತದೆ.

**ಭಾವವಿಲಾಸಿನೀ– ಏವಂ ಚಾತ್ತಾ ಜೀವ ಏವಾಭೂತ್ । ನತು ಬುದ್ಧಿರಿತ್ಯಾಹ – ಅತ ಇತಿ ॥ ಅಶನಸ್ಯ ಮುಕ್ತಿಕಾಲೀನತ್ವಾತ್ ಬುದ್ಧೇಶ್ಚ ಪರಮತೇ ಮುಕ್ತಾವಭಾವಾತ್ ಜೀವ ಏವಾತ್ತೇತಿ**

ಜೀವೇಶಯೋರೇವಾಯಂ ಶ್ರುತ್ಯುಕ್ತೋ ಭೇದೋ ನ ಬುದ್ಧಿಜೀವಯೋರಿತಿ ಭಾವಃ । ಪ್ರಚ್ಯಾವನಂ ಜೀವೇಶಯೋರನ್ಯತ್ರಾಪಕರ್ಷಣಮ್ । ತಸ್ಮಾದ್ಬುದ್ಧೇರತ್ತೃತ್ವಕಥನಾತ್ । ಶ್ರುತಪ್ರಚ್ಯಾವನಂ ಮೋಕ್ಷಪರವೇದಾಂತವಾಕ್ಯಶ್ರವಣಸ್ಯೈವ ಪ್ರಚ್ಯಾವನಮ್ ॥ ೧೨೨೮ ॥

**ವಿವರಣೆ–** ಮುಕ್ತಿ ಕಾಲದಲ್ಲಿಯೂ ಅಶನವಿರುವುದರಿಂದ ಮುಕ್ತಿ ಕಾಲದಲ್ಲಿ ನಿನ್ನ ಮತದಲ್ಲಿ ಬುದ್ಧಿ ಇಲ್ಲದಿರುವುದರಿಂದ ಜೀವನೇ ಅತ್ತ ಎಂದು ಸಿದ್ಧವಾಗುತ್ತದೆ. ಮುಕ್ತಿ ಕಾಲದಲ್ಲಿಯೂ ಭೇದವಿರುವುದರಿಂದ ಜೀವೇಶ್ವರಭೇದವು ಅಬಾಧಿತವಾಗಿ ಸಿದ್ಧವಾಗುತ್ತದೆ. ನೀನು ಶ್ರುತಿಗೆ ಬೇರೆ ಅರ್ಥವನ್ನು ಹೇಳಿದರೆ ನೀನು ಗುರುಮುಖದಿಂದ ಶ್ರವಣವನ್ನು ಮಾಡಿಲ್ಲ ಎಂದು ಅರ್ಥವಾಗುತ್ತದೆ. ಆದ್ದರಿಂದ ಶ್ರವಣ ರಾಹಿತ್ಯವನ್ನೇ ತೋರಿಸುತ್ತದೆ ಎಂದು ಅಭಿಪ್ರಾಯ. ಯದ್ಯಪಿ ಮಾಯಾವಾದಿಗಳು ಈ ಅಧಿಕರಣದಲ್ಲಿ ಹೃದಯ ಗುಹೆಯಲ್ಲಿರುವವರು ಬುದ್ಧಿ ಜೀವರು ಎಂದು ಸಾಂಖ್ಯರೀತಿಯಲ್ಲಿ ಪೂರ್ವಪಕ್ಷವನ್ನು ಮಾಡಿ ಜೀವೇಶ್ವರರು ಎಂದು ಸಮರ್ಥಿಸಿದ್ದಾರೆ. ಆದರೂ ಅಶ್ನಾತಿ ಎಂದು ಹೇಳಿದ ಅತ್ತೃತ್ವವು ಬುದ್ಧಿಯಲ್ಲಿಯೇ ಇದೆ. ಏಕೆಂದರೆ ಅದು ಕರ್ತೃತ್ವ ರೂಪವಾದುದು. ಚೇತನನು ಕರ್ತೃತ್ವ ಭೋಕ್ತೃತ್ವಾದಿ ಧರ್ಮರಹಿತನು ಎಂದು ಹೇಳಿ ಬುದ್ಧಿಯಲ್ಲಿರುವ ಕರ್ತೃತ್ವವು ಜೀವನಲ್ಲಿ ಆರೋಪಿತವಾಗುತ್ತದೆ ಎಂದು ಹೇಳುತ್ತಾರೆ. ಆದ್ದರಿಂದ ಈ ಪ್ರಕರಣದಲ್ಲಿ ಕರ್ತೃತ್ವವು ಜೀವನಲ್ಲೇ ಇರುವ ಧರ್ಮ. ಜಡವಾದ ಬುದ್ಧಿಯಲ್ಲಿ ಕರ್ತೃತ್ವವಿಲ್ಲ. ಆದ್ದರಿಂದ ಅತ್ತಿ ಎಂದು ಹೇಳಿದ ಅತ್ತೃತ್ವವು ಜೀವನಿಗೇ ಕೂಡುತ್ತದೆ. ಈಶ್ವರನಿಗೆ ಅನಶನವನ್ನು ಹೇಳಿರುವುದರಿಂದ ಜೀವೇಶ್ವರ ಭೇದವು ಸಿದ್ಧವಾಗುತ್ತದೆ ಎಂದು ಗ್ರಂಥಕಾರರು ಉಪಪಾದನೆ ಮಾಡುತ್ತಾರೆ.

**ಅತೋ ಯಥಾಶ್ರುತಶ್ರುತ್ಯಾ ತವಾನರ್ಥಃ ಸ್ಥಿರೋಽಭವತ್ ।**
**ಅಧ್ಯಾಹಾರೇ ತು ಸೋಽನರ್ಥೋ ಹ್ಯನಿವರ್ತ್ಯೋ ಭವೇತ್ ತವ ॥ ೧೨೨೯॥**

**ಅರ್ಥ–** ಅತಃ= ಆದ್ದರಿಂದ, ಯಥಾಶ್ರುತಶ್ರುತ್ಯಾ= ಯಥಾಶ್ರುತವಾದ ಶ್ರುತಿಯಿಂದ, ತವ ಅನರ್ಥಃ= ನಿನಗೆ ಅನರ್ಥವು, ಸ್ಥಿರಃ ಅಭೂತ್= ಸ್ಥಿರವಾಯಿತು, ಅಧ್ಯಾಹಾರೇ ತು= ಅಧ್ಯಾಹಾರ ಮಾಡಿದರೆ, ಸಃ ಅನರ್ಥಃ= ಆ ಅನರ್ಥವು, ತವ= ನಿನಗೆ, ಅನಿವರ್ತ್ಯಃ ಭವೇತ್ ಹಿ= ನಿವಾರಣೆಯನ್ನು ಮಾಡಲು ಸಾಧ್ಯವಿಲ್ಲವಾಗಿ ಆಗುತ್ತದೆಯಷ್ಟೇ.

**ಅನುವಾದ–** ಹಿಂದೆ ಹೇಳಿದಂತೆ ಅಭ್ಯಾಸ ಮತ್ತು ಉಪಪತ್ತಿಗಳಿಂದ ಯಥಾಶ್ರುತವಾಗಿ ಜೀವೇಶ್ವರ ಭೇದವು ಸಿದ್ಧವಾಗುತ್ತದೆ. ಇನ್ನು ಪರಮಾರ್ಥತಃ ಎಂಬ ಪದವನ್ನು ಅಧ್ಯಾಹಾರ ಮಾಡಿದರಂತೂ ಆ ಭೇದಕ್ಕೆ ಮೋಕ್ಷಕಾಲೀನತ್ವವು ಸಿದ್ಧವಾಗುವುದರಿಂದ ಅದಕ್ಕೆ ಎಂದೂ ನಾಶವಿಲ್ಲ ಎಂದೂ ಸಿದ್ಧವಾಗುತ್ತದೆ.

**ಕಥಂ ದ್ವಿತ್ವೈಕದೈಕತ್ರ ವೃಥೈವಮಪಿ ಕಲ್ಪನೇ ।**
**ಕಿಮೇಕಸ್ಮಿನ್ನಪಿ ಘಟೇ ಧರ್ಮದ್ವಿತ್ವಾದ್ ದ್ವಿತೋಚ್ಯತೇ ॥ ೧೨೩೦ ॥**

**ಅರ್ಥ–** ಏಕತ್ರ= ಒಂದೇ ವಸ್ತುವಿನಲ್ಲಿ, ಏಕದಾ= ಒಂದೇ ಸಮಯದಲ್ಲಿ, ದ್ವಿತಾ= ದ್ವಿತ್ವವು, ಕಥಂ= ಹೇಗೆ ಉಂಟಾಗುತ್ತದೆ, ಏವಂ ಅಪಿ= ಆದರೂ ಕೂಡ, ವೃಥಾ= ವ್ಯರ್ಥವಾಗಿ, ಕಲ್ಪನೇ= ದ್ವಿತ್ವವನ್ನು ಕಲ್ಪನೆ ಮಾಡುವುದಾದರೆ, ಏಕಸ್ಮಿನ್ನಪಿ ಘಟೇ= ಒಂದೇ ಘಟದಲ್ಲಿ, ಧರ್ಮದ್ವಿತ್ವಾತ್= ಎರಡು ಧರ್ಮಗಳಿರುವ ಕಾರಣದಿಂದ, ದ್ವಿತಾ= ದ್ವಿತ್ವವು, ಉಚ್ಯತೇ ಕಿಂ= ಹೇಳಲ್ಪಡುತ್ತದೆಯೇನು?

**ಅನುವಾದ–** ಒಂದೇ ವಸ್ತುವಿನಲ್ಲಿ ಒಂದೇ ಕಾಲದಲ್ಲಿ ಹೇಗೆ ದ್ವಿತ್ವವು ಉಂಟಾಗುತ್ತದೆ? ಆದರೂ ವ್ಯರ್ಥವಾಗಿ ದ್ವಿತ್ವವನ್ನು ಕಲ್ಪನೆ ಮಾಡುವುದಾದರೆ ಒಂದೇ ಘಟದಲ್ಲಿ ರೂಪರಸಾತ್ಮಕವಾದ ಎರಡು ಧರ್ಮಗಳು ಇರುವುದರಿಂದ ದ್ವಿತ್ವವು ಅಂಗೀಕರಿಸಲ್ಪಡುತ್ತದೆಯೇ?

**ಭಾವವಿಲಾಸಿನೀ–** ಅತಃ ಯಥಾಶ್ರುತಸ್ಯಾನರ್ಥರೂಪತ್ವಾತ್ । ಅಧ್ಯಾಹಾರೇಪ್ಯನರ್ಥೋಕ್ತೇಃ । ಪ್ರಬಲಂ ದೋಷಾಂತರಂ ಚಾಹ – **ಕಥಮಿತಿ** ॥. ದ್ವಿತಾ ದ್ವಾವಿತಿ ದ್ವಿವಚನಮಿತ್ಯರ್ಥಃ । ಏವಂ ಕಲ್ಪನೇ ಪಾರಮಾರ್ಥ್ಯಾಪಾರಮಾರ್ಥ್ಯಾಭ್ಯಾಂ ಜೀವಸ್ಯೈವಾಶನಾನಶನೇ ಇತಿ ಕಲ್ಪನೇ । ಕುತೋನ ಘಟತ ಇತ್ಯತ ಆಹ – **ಕಿಮೇಕಸ್ಮಿನ್ನಿತಿ** ॥ ರೂಪರಸಾಖ್ಯಧರ್ಮಭೇದೇಪಿ ಏಕಸ್ಮಿನ್ ಘಟೇ ದ್ವಾವಿತಿ ಪ್ರಯೋಗಾದರ್ಶನಾತ್ ಯಥಾ ಕಥಂಚಿತ್ ಜೀವಸ್ಯೈವ ಗ್ರಹಣೇ ದ್ವಿವಚನಾಯೋಗಾತ್ । ನಹಿ ದಂಡಕುಂಡಲಭೇದೇಪ್ಯೇಕಸ್ಮಿನ್ನೇವ ದೇವದತ್ತೇ ದ್ವಾವಿಮೌ ದಂಡಕುಂಡಲಿನಾವಿತಿ ಪ್ರಯೋಗೋಪಿ ದೃಶ್ಯತ ಇತಿ ಭಾವಃ ॥ ೧೨೨೯-೧೨೩೦ ॥

**ವಿವರಣೆ–** 'ದ್ವಾಸುಪರ್ಣಾ' ಎಂಬಲ್ಲಿ ದ್ವಾ ಎಂಬ ಪದವು ದ್ವಿತ್ವವನ್ನು ಹೇಳುತ್ತದೆ. ಅದು ಒಂದೇ ವಸ್ತುವಿನಲ್ಲಿ ಒಂದೇ ಕಾಲದಲ್ಲಿ ಕೂಡುವುದಿಲ್ಲ. ಆದ್ದರಿಂದ ಎರಡು ಧರ್ಮಿಗಳನ್ನು ಅಂಗೀಕರಿಸಬೇಕು ಎಂದು ಉಪಪಾದನೆ ಮಾಡುತ್ತಾರೆ.

**ಕಿಂತು ರೂಪರಸಾದೀನಾಂ ಬಹುತ್ವೇ ದ್ವಿತ್ವ ಏವ ಚ ।**
**ರಸವಾನ್ ರೂಪವಾಂಶ್ಚೈಕೋ ಘಟ ಇತ್ಯೇವ ಕೀರ್ತ್ಯತೇ ॥ ೧೨೩೧ ॥**

**ಅರ್ಥ–** ಕಿಂತು= ಆದರೆ, ರೂಪರಸಾದೀನಾಂ= ರೂಪರಸಾದಿಗಳಿಗೆ, ಬಹುತ್ವೇ= ಬಹುತ್ವವಿದ್ದರೂ, ದ್ವಿತ್ವ ಏವ ಚ= ಅಥವಾ ದ್ವಿತ್ವವಿದ್ದರೂ, ರಸವಾನ್ ರೂಪವಾಂಶ್ಚ= ರಸವನ್ನು ಮತ್ತು ರೂಪವನ್ನು ಉಳ್ಳ, ಘಟಃ= ಘಟವು, ಏಕಃ= ಒಂದೇ, ಇತ್ಯೇವ= ಎಂದೇ, ಕೀರ್ತ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಆದರೆ ರೂಪರಸಾದಿಗಳಿಗೆ ದ್ವಿತ್ವವಿದ್ದರೂ ಅಥವಾ ಬಹುತ್ವವಿದ್ದರೂ ರೂಪವನ್ನು ಮತ್ತು ರಸವನ್ನು ಹೊಂದಿದ ಘಟವು ಒಂದು ಎಂದೇ ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಕಥಂ ತರ್ಹಿ ಪ್ರಯೋಗ ಇತ್ಯತ ಆಹ – **ಕಿಂತ್ವಿತಿ** ॥ ೧೨೩೧ ॥

**ವಿವರಣೆ–** ವಿರುದ್ಧವಾದ ಧರ್ಮಿಗಳಿಗೆ ಧರ್ಮಭೇದವು ಅವಶ್ಯಕ. ಅವಿರುದ್ಧವಾದ ಧರ್ಮಗಳಿಗೆ ಧರ್ಮಿಭೇದದ ಅವಶ್ಯಕತೆ ಇಲ್ಲವೆಂದು ಉದಾಹರಣೆ ಮೂಲಕ ತಿಳಿಸುತ್ತಿದ್ದಾರೆ.

ನಚೇತ್ ಸೌಂದರ್ಯಧೈರ್ಯಾಭ್ಯಾಂ ಭಾರ್ಯೇ ದ್ವೇ ಭವತಸ್ತವ ।
ಅತಃ ಪುನರ್ವಿವಾಹಾರ್ಥಮಪುತ್ರಸ್ಯ ವೃಥಾ ಶ್ರಮಃ ॥ ೧೨೩೨ ॥

**ಅರ್ಥ–** ನಚೇತ್= ಹಾಗಿಲ್ಲದಿದ್ದರೆ, ತವ= ನಿನಗೆ, ಸೌಂದರ್ಯ ಧೈರ್ಯಾಭ್ಯಾಂ= ಸೌಂದರ್ಯ ಮತ್ತು ಧೈರ್ಯರೂಪ ಎರಡು ಧರ್ಮಗಳಿಂದ, ದ್ವೇ ಭಾರ್ಯೇ= ಇಬ್ಬರು ಭಾರ್ಯೆಯರು, ಭವತಃ= ಆಗುತ್ತಾರೆ, ಅತಃ= ಆದ್ದರಿಂದ, ಅಪುತ್ರಸ್ಯ= ಪುತ್ರ ಹೀನನಾದ ನಿನಗೆ, ಪುನರ್ವಿವಾಹಾರ್ಥಂ= ಪುನಃ ಮದುವೆ ಮಾಡಿಕೊಳ್ಳುವುದಕ್ಕೋಸ್ಕರ, ಶ್ರಮಃ= ಶ್ರಮವು, ವೃಥಾ= ವ್ಯರ್ಥವಾಗುತ್ತದೆ.

**ಅನುವಾದ–** ಹಾಗಿಲ್ಲದಿದ್ದರೆ ಸೌಂದರ್ಯ ಮತ್ತು ಧೈರ್ಯರೂಪ ಧರ್ಮಭೇದದಿಂದ ನಿನಗೆ ಹೆಂಡತಿಯರೂ ಇಬ್ಬರಾಗುತ್ತಾರೆ. ಆದ್ದರಿಂದ ಮಕ್ಕಳಿಲ್ಲದ ನಿನ್ನ ಪುನರ್ವಿವಾಹವನ್ನು ಮಾಡಿಕೊಳ್ಳುವ ಪ್ರಯತ್ನವು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ವಿಪಕ್ಷೇ ಬಾಧಕಂ ವದನ್ ಪರಪಕ್ಷಮುಪಹಸತಿ ॥ **ನಚೇದಿತಿ** ॥ ನಚೇತ್ ಧರ್ಮದ್ವಿತ್ವೇಪ್ಯೇಕಸ್ಯೈಕತಾನಚೇತ್ । ದ್ವೇ ಭವತಃ ಏಕೈವಭಾರ್ಯಾದ್ವೇ ಭವತ ಇತ್ಯರ್ಥಃ ॥೧೨೩೨॥

**ವಿವರಣೆ–** ಅವಿರುದ್ಧವಾದ ಧರ್ಮಗಳಿಗೆ ಧರ್ಮಿಭೇದದ ಅವಶ್ಯಕತೆ ಇಲ್ಲ ಎಂದು ಹೇಳಿದುದನ್ನು ಒಪ್ಪದೇ ಅಲ್ಲಿಯೂ ಧರ್ಮಿಭೇದವನ್ನು ಹೇಳಿದರೆ ಇಲ್ಲಿ ಪರನನ್ನು ಅಪಹಾಸ ಮಾಡುತ್ತಾರೆ. ಒಬ್ಬ ಹೆಂಡತಿಯಲ್ಲಿ ಮಕ್ಕಳನ್ನು ಪಡೆಯದಿದ್ದವನು ಇನ್ನೊಂದು ಮದುವೆಯನ್ನು ಮಾಡಿಕೊಳ್ಳುತ್ತಾನೆ. ಆದರೆ ಸೌಂದರ್ಯ ಮತ್ತು ಧೈರ್ಯರೂಪವಾದ ಭೇದದಿಂದ ಒಬ್ಬ ಹೆಂಡತಿಯೇ ಇಬ್ಬರು ಹೆಂಡತಿಯರಾಗುವಾಗ ಅವನಿಗೆ ಮೊದಲೇ ಎರಡನೇ ಹೆಂಡತಿ ಇದ್ದಾಳೆ. ಆದ್ದರಿಂದ ಪುನರ್ವಿವಾಹದ ಪ್ರಯತ್ನವು ವ್ಯರ್ಥವೆಂದು ಅಪಹಾಸ.

ವಿದ್ಯಾಮಯೋ ನಿತ್ಯಮುಕ್ತೋ ವೇದಾತ್ಮಾನಂ ಕಿಲ ಪ್ರಭುಃ ।
ಪಿಪ್ಪಲಾದಂ ಸ್ವತೋಽನ್ಯಂ ಸ ವೇದಾವಿದ್ಯಾಂಧಚಕ್ಷುಷಂ ॥ ೧೨೩೩ ॥

**ಅರ್ಥ–** ವಿದ್ಯಾಮಯಃ= ಜ್ಞಾನಸ್ವರೂಪನೂ, ನಿತ್ಯಮುಕ್ತಃ= ನಿತ್ಯಮುಕ್ತನೂ ಆದ, ಪ್ರಭುಃ= ಈಶ್ವರನು, ಆತ್ಮಾನಂ= ತನ್ನನ್ನು, ವೇದ ಕಿಲ= ತಿಳಿದಿದ್ದಾನಷ್ಟೇ, ಸಃ= ಅವನು, ಸ್ವತಃ ಅನ್ಯಂ= ತನಗಿಂತ ಭಿನ್ನನಾದ, ಪಿಪ್ಪಲಾದಂ= ಕರ್ಮಫಲವನ್ನು ಭೋಗಿಸುವ, ಅವಿದ್ಯಾಂಧ-ಚಕ್ಷುಷಂ= ಅವಿದ್ಯೆಯಿಂದ ಆವೃತವಾದ ಜ್ಞಾನವುಳ್ಳ ಜೀವನನ್ನೂ, ವೇದ= ತಿಳಿದಿದ್ದಾನಷ್ಟೇ.

**ಅನುವಾದ–** ಜ್ಞಾನಸ್ವರೂಪನೂ, ನಿತ್ಯಮುಕ್ತನೂ, ಪ್ರಭುವೂ ಆದ ಈಶ್ವರನು ತನ್ನನ್ನು ಮತ್ತು ತನಗಿಂತ ಭಿನ್ನನಾದ ಕರ್ಮಫಲವನ್ನು ಭೋಗಿಸುವ ಅವಿದ್ಯೆಯಿಂದ ಬದ್ಧನಾದ, ಆದ್ದರಿಂದಲೇ ಜ್ಞಾನಶೂನ್ಯನಾದ ಜೀವನನ್ನೂ ತಿಳಿದಿದ್ದಾನಷ್ಟೇ?

**ಭಾವವಿಲಾಸಿನೀ–** ಆತ್ಮಾನಮನ್ಯಂ ಚ ಸವೇದವಿದ್ವಾನಪಿಪ್ಪಲಾದೋ ನತು ಪಿಪ್ಪಲಾದಃ । ಯೋಽವಿದ್ಯಯಾಂಧಸ್ಸತುನಿತ್ಯಬದ್ಧೋ ವಿದ್ಯಾಮಯೋಯಸ್ಸತುನಿತ್ಯಮುಕ್ತ ಇತ್ಯೇತಚ್ಛ್ರುತಿ ಸಮಾಖ್ಯಾರೂಪಭಾಗವತ ವಚನಾಲ್ಲಬ್ಧಮರ್ಥಮಾಹ – **ವಿದ್ಯಾಮಯ ಇತ್ಯಾದಿನಾ** ॥ ಅತ್ತಿ ಅನಶ್ನನ್ನಿತ್ಯನೇನಾವಿದ್ಯಾಮಯತ್ವಂ ಬದ್ಧತ್ವಂ ಜೀವಸ್ಯ, ವಿದ್ಯಾಮಯತ್ವಂ ನಿತ್ಯಮುಕ್ತತ್ವಂ ಚ ಭಗವತಃ ಸೂಚಿತಮ್ । ತದೇವ ಸ್ಮೃತ್ಯಾಸ್ಪಷ್ಟೀಕೃತಮಿತಿ ಜ್ಞಾತವ್ಯಮ್ । ಅನುಮಾ ಜೀವೇಶಯೋಃ ಪಾರಮಾರ್ಥಿಕಭೇದಾನುಮಾ । ಆಗಮಾನುಗಾ ಅನುಮತೇತಿ ಸಂಬಂಧಃ ॥ ೧೨೩೩ ॥

**ವಿವರಣೆ–** ಈಗ ಈ ಶ್ರುತಿಗೆ ಸಮಾಖ್ಯಾರೂಪವಾಗಿರುವ ಭಾಗವತ ಶ್ಲೋಕದಿಂದಲೂ ಈ ಶ್ರುತಿಯ ಅರ್ಥವನ್ನು ಸಾಧಿಸುತ್ತಾರೆ. ಭಾಗವತದ ಶ್ಲೋಕ ಹೀಗಿದೆ :-

ಆತ್ಮಾನಂ ಅನ್ಯಂ ಚ ಸವೇದ ವಿದ್ವಾನ್
ಅಪಿಪ್ಪಲಾದೋ ನ ತು ಪಿಪ್ಪಲಾದಃ
ಯೋಽವಿದ್ಯಯಾಽಂಧಃ ಸತು ನಿತ್ಯಬದ್ಧೋ
ವಿದ್ಯಾಮಯೋ ಯಃ ಸತು ನಿತ್ಯಮುಕ್ತಃ (೧೧.೧೧.೭)

ಗ್ರಂಥಕಾರರು ಈ ಶ್ಲೋಕವನ್ನು ಅರ್ಥತಃ ಅನುವಾದ ಮಾಡಿ ಜೀವೇಶ್ವರ ಭೇದವನ್ನು ಸಾಧಿಸುತ್ತಾರೆ.

**ಇತಿ ಭಾಗವತೋಕ್ತಿಃ ಸಾ ಯತೋ ವಕ್ತಿ ತತೋನುಮಾ ।**
**ಕಿಮತೋ ಜೀವಪರಯೋರ್ಭೇದೋಽಯಂ ಪರಮಾರ್ಥಸನ್ ॥೧೨೩೪॥**

ಸಂಸಾರೋನ್ಮುಕ್ತಚೈತನ್ಯೋಲ್ಲೇಖ್ಯತ್ವಾನ್ಮೌಕ್ತಸೌಖ್ಯವತ್ ।
ಇತಿ ಜೀವಬ್ರಹ್ಮಭೇದಂ ಸಾಧಯತ್ಯಾಗಮಾನುಗಾ ॥ ೧೨೩೫ ॥

**ಅರ್ಥ–** ಇತಿ= ಈ ರೀತಿಯಾಗಿ, ಭಾಗವತೋಕ್ತಿಃ= ಭಾಗವತ ವಚನವು, ಯತಃ= ಯಾವ ಕಾರಣದಿಂದ, ವಕ್ತಿ= ಹೇಳುತ್ತದೆಯೋ, ತತಃ= ಆ ಕಾರಣದಿಂದ, ವಿಮತಃ= ವಿವಾದಗ್ರಸ್ತವಾದ, ಅಯಂ ಜೀವಪರಯೋರ್ಭೇದಃ= ಈ ಜೀವೇಶ್ವರ ಭೇದವು,

ಪರಮಾರ್ಥಸನ್= ಪರಮಾರ್ಥ ಸತ್ಯವಾಗಿದೆ, ಸಂಸಾರೋನ್ಮುಕ್ತಚೈತನ್ಯೋಲ್ಲೇಖಿತ್ವಾತ್= ಮುಕ್ತಚೇತನ ಸಂಬಂಧಿಯಾದುದರಿಂದ, ಮೌಕ್ತಸೌಖ್ಯವತ್= ಮೋಕ್ಷಕಾಲಿನ ಸುಖದಂತೆ, ಇತಿ= ಎಂಬ, ಆಗಮಾನುಗಾ= ಆಗಮಾನುಸಾರಿಯಾದ, ಅನುಮಾ= ಅನುಮಾನವೂ ಸಹ, ಜೀವಬ್ರಹ್ಮಭೇದಂ= ಜೀವಬ್ರಹ್ಮಭೇದವನ್ನು, ಸಾಧಯತಿ= ಸಾಧಿಸುತ್ತದೆ.

**ಅನುವಾದ–** **ಹೀಗೆ ಭಾಗವತೋಕ್ತಿಯು ಇರುವುದರಿಂದ ವಿವಾದಗ್ರಸ್ತವಾದ ಈ ಜೀವೇಶ್ವರ ಭೇದವು ಪರಮಾರ್ಥ ಸತ್ಯವಾಗಿದೆ. ಮುಕ್ತಚೇತನ ಸಂಬಂಧಿಯಾದುದರಿಂದ. ಮೋಕ್ಷಸುಖದಂತೆ ಎಂಬ ಆಗಮಾನುಗೃಹೀತ ಅನುಮಾನವೂ ಜೀವೇಶ್ವರ ಭೇದವನ್ನು ಸಾಧಿಸುತ್ತದೆ.**

**ವಿವರಣೆ–** 'ವಿಮತಃ ಜೀವೇಶ್ವರಭೇದಃ ಪರಮಾರ್ಥಸನ್ ಮುಕ್ತಚೈತನ್ಯಸಂಬಂಧಿತ್ವಾತ್ ಮೌಕ್ತಸುಖವತ್' ಎಂಬುದು ಅನುಮಾನದ ಆಕಾರ.

**ತರ್ಕಂ ಚ ಕರ್ಕಶಂ ಸಾ ವಾಗ್ ವೈಲಕ್ಷಣ್ಯಮಲಕ್ಷಯತ್ ।**
**ಯತ್ರ ತ್ವಸ್ಯೇತಿ ವಾಕ್ಯಸ್ಯಾಪ್ಯಾಪಾತಾರ್ಥಮಪಾಕರೋತ್ ॥ ೧೨೩೬ ॥**

**ಅರ್ಥ–** ಸಾ ವಾಕ್= ಆ ವಾಕ್ಯವು, ವೈಲಕ್ಷಣ್ಯಂ= ವಿರುದ್ಧ ಧರ್ಮಾಧಿಕರಣತ್ವರೂಪವಾದ, ಕರ್ಕಶಂ ತರ್ಕಂ= ಕ್ರೂರವಾದ ತರ್ಕವನ್ನು, ಅಲಕ್ಷಯತ್= ಸೂಚಿಸಿತು, ಯತ್ರತ್ವಸ್ಯೇತಿ ವಾಕ್ಯಸ್ಯಾಪಿ= ಯತ್ರತ್ವಸ್ಯ ಎಂಬ ವಾಕ್ಯಕ್ಕೂ ಸಹ, ಆಪಾತಾರ್ಥಂ = ಮೇಲುನೋಟಕ್ಕೆ ತೋರುವ ಅರ್ಥವನ್ನು, ಅಪಾಕರೋತ್= ನಿರಾಕರಿಸಿತು.

**ಅನುವಾದ–** **ಅದೇ ಭಾಗವತ ವಾಕ್ಯವು ವಿರುದ್ಧ ಧರ್ಮಾಧಿಕರಣತ್ವರೂಪವಾದ ಕ್ರೂರವಾದ ತರ್ಕವನ್ನು ಸೂಚಿಸಿದೆ ಮತ್ತು ಯತ್ರತ್ವಸ್ಯ ಎಂಬ ಶ್ರುತಿಗೆ ಆಪಾತತಃ ತೋರುವ ಜ್ಞಾನಸಾಮಾನ್ಯಾಭಾವರೂಪವಾದ ಅರ್ಥವನ್ನೂ ನಿರಾಕರಿಸಿದೆ.**

**ಭಾವವಿಲಾಸಿನೀ–** ವೈಲಕ್ಷಣ್ಯಂ ಅತೃತ್ವಾನತೃತ್ವಾವಿದ್ಯಾಂಧತ್ವವಿದ್ಯಾಮಯತ್ವಬದ್ಧತ್ವ- ಮುಕ್ತತ್ವಾಖ್ಯ-ವಿರುದ್ಧಲಕ್ಷಣಭರಿತತ್ವಮ್ । ಆಪಾತಾರ್ಥಃ ಸರ್ವಥಾಜ್ಞಾನಶೂನ್ಯತ್ವಾರ್ಥಃ । ಆತ್ಮಾನಮನ್ಯಂ ಚ ಸ ವೇದೇತಿ ಮುಕ್ತಸ್ಯ ಸ್ವಪರಜ್ಞಾನಕಥನಾತ್ । ವಿಜ್ಞಾತಾರಮರೇ ಕೇನ ವಿಜಾನೀಯಾದಿ-ತ್ಯಾದಿಶ್ರುತೇಃ ಸ್ವಪರಜ್ಞಾನಾಭಾವೋ ನಾರ್ಥ ಇತಿ ಸಿದ್ಧಮಿತಿ ಭಾವಃ ॥ ೧೨೩೬ ॥

**ವಿವರಣೆ–** ಮೇಲೆ ಉದಾಹರಿಸಿದ ಭಾಗವತ ಶ್ಲೋಕವು ಪಿಪ್ಪಲಾದ ಮತ್ತು ಅಪಿಪ್ಪಲಾದ ಎಂದು ವಿರುದ್ಧ ಧರ್ಮಗಳನ್ನು, ವಿದ್ಯಾಮಯ ಮತ್ತು ಅವಿದ್ಯಾಂಧ ಎಂಬ ವಿರುದ್ಧ ಧರ್ಮಗಳನ್ನು, ನಿತ್ಯಬದ್ಧ ಮತ್ತು ನಿತ್ಯಮುಕ್ತ ಎಂಬ ವಿರುದ್ಧ ಧರ್ಮಗಳನ್ನು ಹೇಳಿ ಅಭೇದವನ್ನು ಹೇಳುವವರಿಗೆ ಕ್ರೂರವಾದ ಶಸ್ತ್ರದಂತಿದೆ. ಏಕೆಂದರೆ ವಿರುದ್ಧ ಧರ್ಮಾಧಿಕರಣತ್ವದಿಂದ ಭೇದವೇ ಸಿದ್ಧವಾಗುತ್ತದೆ. ಅಷ್ಟೇ ಅಲ್ಲದೇ, ಮೋಕ್ಷ ಕಾಲದಲ್ಲಿ

ಅದ್ವೈತಿಗಳು ಒಪ್ಪುವ ಜ್ಞಾನಸಾಮಾನ್ಯಾಭಾವವನ್ನು ನಿರಾಕರಿಸಿದೆ. ನಿತ್ಯಮುಕ್ತನಾದ ಪರಮಾತ್ಮನು ತನ್ನನ್ನು ಮತ್ತು ಜೀವನನ್ನು ತಿಳಿದಿದ್ದಾನೆ ಎಂದು ಹೇಳಿರುವುದರಿಂದ ಮುಕ್ತ ಚೇತನನಿಗೆ ಜ್ಞಾನವಿದೆ ಎಂದು ಸಿದ್ಧವಾಯಿತು. ಆದ್ದರಿಂದ ಜ್ಞಾನಸಾಮಾನ್ಯಾಭಾವವು ನಿರಾಕೃತವಾಯಿತು ಎಂದು ಅಭಿಪ್ರಾಯ.

**ತಸ್ಮಾದ್ ದ್ವಿತ್ವಾಖ್ಯಯುಕ್ತೇಶ್ಚ ಭೋಗಾಭೋಗಾಖ್ಯಯುಕ್ತಿತಃ ।**
**ಅನ್ಯತ್ವಶ್ರುತಿತಶ್ಚಾಭೂದನ್ಯೋನ್ಯಾಭಾವವಾಗಿಯಮ್ ॥ ೧೨೩೭ ॥**

**ಅರ್ಥ–** ತಸ್ಮಾತ್= ಆದ್ದರಿಂದ, ದ್ವಿತ್ವಾಖ್ಯಯುಕ್ತೇಶ್ಚ= ದ್ವಿತ್ವ ರೂಪವಾದ ಯುಕ್ತಿಯಿಂದಲೂ, ಭೋಗಾಭೋಗಾಖ್ಯಯುಕ್ತಿತಃ= ಮತ್ತು ಭೋಗತದಭಾವರೂಪ ಯುಕ್ತಿಯಿಂದಲೂ, ಚ= ಮತ್ತು, ಅನ್ಯತ್ವಶ್ರುತಿತಃ= ಅನ್ಯ ಎಂಬ ಶ್ರುತಿಯಿಂದಲೂ, ಇಯಂ= ಇದು, ಅನ್ಯೋನ್ಯಾಭಾವ ವಾಕ್= ಭೇದವನ್ನು ಹೇಳುವ ವಾಕ್ಯವೇ, ಅಭೂತ್= ಆಯಿತು.

**ಅನುವಾದ– ಆದ್ದರಿಂದ ದ್ವಿತ್ವರೂಪವಾದ ಯುಕ್ತಿಯಿಂದಲೂ ಭೋಗತದಭಾವ ಯುಕ್ತಿಯಿಂದಲೂ ಮತ್ತು ಅನ್ಯತ್ವ ಶ್ರುತಿಯಿಂದಲೂ ಸಹ ಈ ಉಪನಿಷದ್ವಾಕ್ಯವು ಭೇದವಚನವೇ ಆಯಿತು.**

**ನ ಕೇವಲಂ ಸ್ಥಾನಬುದ್ಧಿಭೇದಮಾತ್ರೇಣ ಭಿನ್ನತಾ ।**
**ಕಿಂತು ಸ್ವರೂಪಭೇದೋಽಯಮಿತಿ ಸಾಧಯಿತುಂ ಶ್ರುತಿಃ ।**
**ಸಖಾಯೌ ಸಯುಜೌ ಚೇತಿ ಪದದ್ವಯಮುದಾಹರತ್ ॥ ೧೨೩೮ ॥**

**ಅರ್ಥ–** ಶ್ರುತಿಃ= ಈ ಶ್ರುತಿಯು, ಕೇವಲಂ ಸ್ಥಾನಬುದ್ಧಿಭೇದಮಾತ್ರೇಣ= ಕೇವಲ ಸ್ಥಾನಭೇದದಿಂದ ಅಥವಾ ಕೇವಲ ಬುದ್ಧಿಭೇದದಿಂದ, ಭಿನ್ನತಾ ನ= ಭೇದವಲ್ಲ, ಕಿಂತು= ಆದರೆ, ಅಯಂ= ಇದು, ಸ್ವರೂಪಭೇದಃ= ಸ್ವಾಭಾವಿಕವಾದ ಭೇದ, ಇತಿ ಸಾಧಯಿತುಂ= ಎಂದು ಸಾಧಿಸಲು, ಸಖಾಯೌ= ಸ್ನೇಹಿತರು, ಸಯುಜೌ ಚ= ಮತ್ತು ಜೊತೆಯಲ್ಲಿರುವವರು, ಇತಿ= ಎಂದು, ಪದದ್ವಯಮ್= ಸಖಾಯೌ, ಸಯುಜೌ ಎಂಬ ಎರಡು ಪದಗಳನ್ನು, ಉದಾಹರತ್= ಹೇಳಿತು.

**ಅನುವಾದ– ಈ ಭೇದವು ಸ್ಥಾನಭೇದದಿಂದ ಮತ್ತು ಬುದ್ಧಿ ಭೇದದಿಂದ ಉಪಚರಿತವಾದ ಭೇದವಲ್ಲ. ಆದರೆ ಸ್ವಾಭಾವಿಕವಾದ ಭೇದವೇ ಎಂದು ಸಾಧಿಸಲು ಶ್ರುತಿಯು ಸಯುಜೌ, ಸಖಾಯೌ ಎಂಬ ಎರಡು ಪದಗಳಿಂದ ಸ್ನೇಹಿತರು ಮತ್ತು ಜೊತೆಯಲ್ಲಿರುವವರು ಎಂದು ಹೇಳಿತು.**

**ಭಾವವಿಲಾಸಿನೀ**–ಸ್ಥಾನಭೇದೇನ ಮತಿಭೇದೇನ ವಾ ಜೀವೇಶ್ವರಯೋರ್ಭೇದೋಕ್ತಿರಿಯಮಸ್ತು। ಸ್ವರೂಪಭೇದಃ ಕಿಮರ್ಥಂ ವಾಚ್ಯ ಇತಿ ಶಂಕಾಯಾ ಮತ್ಯೈಕ್ಯಸ್ಥಾನೈಕ್ಯಪ್ರತಿಪಾದಕ- ಪದಾಭ್ಯಾಂ ನಿವಾರಿತತ್ವಾತ್ ಸ್ವರೂಪಭೇದಪರ್ಯವೇಯಂ ಶ್ರುತಿರಿತ್ಯಾಹ – ನ ಕೇವಲಮಿತಿ ॥ ೧೨೩೮ ॥

**ವಿವರಣೆ**– ಸ್ಥಾನೈಕ್ಯದಿಂದ ಮತ್ತು ಮತ್ಯೈಕ್ಯದಿಂದ ನೀವು ಐಕ್ಯವಾಕ್ಯಗಳನ್ನು ಕೂಡಿಸಿದಂತೆ ನಾವೂ ಸಹ ಸ್ಥಾನಭೇದ ಮತ್ತು ಮತಿಭೇದದಿಂದ ಭೇದವಾಕ್ಯವನ್ನು ಸಾವಕಾಶವಾಗಿ ಮಾಡುತ್ತೇವೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಸಖಾಯೌ ಎಂದರೆ ಸ್ನೇಹಿತರು. ಸ್ನೇಹಿತರು ಎಂದರೆ ಬುದ್ಧಿಭೇದವಿಲ್ಲದವರು ಎಂದು ಅರ್ಥ. ಸಯುಜೌ ಎಂದರೆ ಜೊತೆಯಲ್ಲಿರುವವರು. ಎಂದರೆ ಸ್ಥಾನಭೇದವಿಲ್ಲದವರು, ಒಂದೇ ಸ್ಥಾನದಲ್ಲಿರುವವರು ಎಂದು ಅರ್ಥ. ಆದ್ದರಿಂದ ಸಯುಜೌ, ಸಖಾಯೌ ಎಂಬ ಈ ಎರಡು ಶಬ್ದಗಳು, ಸ್ಥಾನಭೇದವನ್ನು ಮತ್ತು ಮತಿಭೇದವನ್ನು ನಿರಾಕರಿಸುವುದರಿಂದ ಈ ಶ್ರುತಿಯಲ್ಲಿ ಹೇಳಿದ ಭೇದವು ಮುಖ್ಯವಾದ ಸ್ವಾಭಾವಿಕ ಭೇದವೆಂದೇ ತಿಳಿಯುತ್ತದೆ.

**ತೌ ಚೇತನೌ ಸ್ಥಿರೀಕರ್ತುಂ ಸುಪರ್ಣಾವಿತ್ಯರೂರುಪತ್ ।**
**ಸ್ವತೋ ಭಿಕಾಶನೋಕ್ತ್ಯಾ ಚ ತತ್ರೈಕಮಕರೋತ್ ಪ್ರಭುಂ ॥ ೧೨೩೯ ॥**

**ಅರ್ಥ**– ತೌ= ಅವೆರಡು, ಚೇತನೌ= ಚೇತನರು ಎಂದು, ಸ್ಥಿರೀಕರ್ತುಂ= ನಿರ್ಣಯವನ್ನು ಮಾಡಲು, ಸುಪರ್ಣಾಮಿತಿ= ಸುಪರ್ಣಗಳು, ಪಕ್ಷಿಗಳು ಎಂದು, ಅರೂರುಪತ್= ರೂಪಣೆಯನ್ನು ಮಾಡಿತು, ಸ್ವತೋಭಿಕಾಶನೋಕ್ತ್ಯಾ ಚ= ಮತ್ತು ಸ್ವತಃ ಪ್ರಕಾಶಮಾನತ್ವ ವಚನದಿಂದ, ತತ್ರ= ಅವೆರಡರಲ್ಲಿ, ಏಕಂ= ಒಂದು ಪಕ್ಷಿಯನ್ನು, ಪ್ರಭುಂ ಅಕರೋತ್= ಪ್ರಭುವನ್ನಾಗಿ ಮಾಡಿತು.

**ಅನುವಾದ**– ಆ ಎರಡು ವಸ್ತುಗಳು ಚೇತನವೆಂದು ತಿಳಿಸಲು ಶ್ರುತಿಯು ಸುಪರ್ಣೌ ಎಂದು ಪಕ್ಷಿಗಳಾಗಿ ರೂಪಣೆ ಮಾಡಿತು. ಮತ್ತು ಸ್ವಯಂಪ್ರಕಾಶಮಾನನಾಗಿದ್ದಾನೆ ಎಂದು ಹೇಳಿ ಆ ಎರಡು ಪಕ್ಷಿಗಳಲ್ಲಿ ಒಂದನ್ನು ಪ್ರಭುವನ್ನಾಗಿ ಮಾಡಿತು.

**ಭಾವವಿಲಾಸಿನೀ**– ಸುಪರ್ಣಪದಸ್ಯ ಚೇತನವಾಚಕತ್ವಾತ್ ಬುದ್ಧಿಜೀವಾವಿಮಾವಿತಿ ಶಂಕಾಪಿ ಶ್ರುತ್ಯೈವ ನಿರಾಕೃತ್ಯೇತ್ಯಾಹ – ತೌ ಚೇತನಾವಿತಿ ॥ ಘಟಪಟಯೋರ್ಭೇದ ಇವ ನ ಜೀವೇಶ್ವರ- ಯೋರ್ಭೇದಮಾತ್ರಮತ್ರಾಭಿಪ್ರೇತಂ ಕಿಂತು ಹರೇಃ ಪ್ರಭುತ್ವಂ ಚಾಭಿಪ್ರೇತಮಿತ್ಯಾಹ – ಸ್ವತ ಇತಿ ॥ ಅಶನಾದಿಕಮನಪೇಕ್ಷ್ಯ ಸ್ವಾಭಾವಿಕಸಾಮರ್ಥ್ಯೇನೇತ್ಯರ್ಥಃ । ಉಪಲಕ್ಷಣಂ ಚೈತತ್ । ಸಮಾಖ್ಯಾಸ್ಸ್ಯತೌ ವಿದ್ಯಾಮಯತ್ವನಿತ್ಯಮುಕ್ತತ್ವಕಥನಾಚ್ಚೇತ್ಯಪಿ ದ್ರಷ್ಟವ್ಯಮ್ ॥ ೧೨೩೯ ॥

ವಿವರಣೆ– ಪಕ್ಷಿಗಳು ಎಂದು ಹೇಳಿದ ಮೇಲೆ ಅವು ಚೇತನಗಳೇ ಎಂಬ ಅರ್ಥವು ದೊರೆಯುವುದರಿಂದ, ಬುದ್ಧಿಜೀವರು ಎಂಬ ಅರ್ಥವು ನಿರಾಕೃತವಾಗುತ್ತದೆ. ಏಕೆಂದರೆ

ಬುದ್ಧಿಯು ಚೇತನವಲ್ಲ. ಈ ಜೀವೇಶ್ವರ ಭೇದವು ಘಟಪಟ ಭೇದದಂತೆ ಸಾಮಾನ್ಯವಾದುದಲ್ಲ. ಆದರೆ ಇಲ್ಲಿ ಒಂದು ವಸ್ತುವಾದ ಈಶ್ವರನು ಪ್ರಭುವಾಗಿದ್ದಾನೆ ಎಂಬ ವಿಶೇಷವು ಈ ಶ್ರುತಿಯಿಂದ ತಿಳಿದು ಬರುತ್ತದೆ. ಕೇವಲ ಅನಶನದಿಂದಲೇ ಪ್ರಭುತ್ವ ತಿಳಿಯುವುದಲ್ಲ. ವಿದ್ಯಾಮಯತ್ವ ಮತ್ತು ನಿತ್ಯಮುಕ್ತತ್ವದಿಂದಲೂ ಅವನಿಗೆ ಪ್ರಭುತ್ವ ತಿಳಿಯುತ್ತದೆ. ಆದ್ದರಿಂದ ಇಂತಹ ಭೇದಜ್ಞಾನವು ಪರಮಾತ್ಮನ ಮಹಿಮೆಯಲ್ಲಿ ಪರ್ಯವಸಾನವನ್ನು ಹೊಂದುವುದರಿಂದ ಈ ಭೇದವು ಬಹಳ ಪ್ರಶಸ್ತವಾದುದು ಎಂದು ಅಭಿಪ್ರಾಯ.

**ಯದಿಮೌ ದ್ವೌ ಚ ಸಂಯೋಗಾತ್ ಸಯುಜಾವಿತಿ ಶಬ್ದಿತೌ ।**
**ಅತೋಽಂತೇ ಯದ್ಧಿ ಸಾಯುಜ್ಯಂ ತಚ್ಚ ಯೋಗಾತ್ಮಕಂ ಜಗೌ ॥ ೧೨೪೦ ॥**

**ಅರ್ಥ–** ಯತ್= ಯಾವ ಕಾರಣದಿಂದ, ಇಮೌ ದ್ವೌ= ಈ ಎರಡು ಪಕ್ಷಿಗಳು, ಸಂಯೋಗಾತ್= ಪರಸ್ಪರ ಸಂಬಂಧವಿರುವ ಕಾರಣ, ಸಯುಜಾವಿತಿ= ಸಯುಜರು ಎಂದು, ಶಬ್ದಿತೌ= ಹೇಳಲ್ಪಡುತ್ತವೆಯೋ, ಅತಃ= ಆದ್ದರಿಂದ, ಅಂತೇ= ಕೊನೆಯಲ್ಲಿ, ಯತ್ ಸಾಯುಜ್ಯಂ= ಯಾವ ಸಾಯುಜ್ಯರೂಪವಾದ ಮೋಕ್ಷವಿದೆಯೋ, ತಚ್ಚ= ಅದೂ ಸಹ, ಯೋಗಾತ್ಮಕಂ= ಸಂಬಂಧರೂಪವಾದುದೇ ಎಂದು, ಜಗೌ= ಹೇಳಿತು.

**ಅನುವಾದ–** ಯಾವ ಕಾರಣದಿಂದ ಎರಡು ಪಕ್ಷಿಗಳು ಸಂಯೋಗವನ್ನು ಹೊಂದಿರುವುದರಿಂದ ಈ ಶ್ರುತಿಯು ಅವರನ್ನು ಸಯುಜೌ ಎಂಬ ಪದವನ್ನು ಹೇಳಿತೋ, ಅದೇ ಕಾರಣದಿಂದ ಕೊನೆಯಲ್ಲಿ ಉಂಟಾಗುವ ಸಾಯುಜ್ಯ-ರೂಪವಾದ ಮುಕ್ತಿಯೂ ಸಹ ಸಂಬಂಧ ರೂಪವಾದದ್ದೇ ಎಂದು ಹೇಳಿತು.

**ಭಾವವಿಲಾಸಿನೀ–** ಏಕದೇಹೇ ಉಭಯೋಃ ಪ್ರವಿಷ್ಟತ್ವೇನ ಸಯುಜಾವಿತಿ ಸಾಯುಜ್ಯವಾಚಕ-ಪದಪ್ರಯೋಗಾತ್ ಮುಕ್ತಾವಪಿ ಸಾಯುಜ್ಯಮೀದೃಶಮೇವ ನ ಸ್ವರೂಪೈಕ್ಯಮಿತಿ ಲಬ್ಧಮಿತ್ಯಾಹ **– ಯದಿಮಾವಿತಿ ॥ ಯೋಗಾತ್ಮಕಂ ಪರಸ್ಪರ ಸಂಯೋಗಾತ್ಮಕಮ್ ॥ ೧೨೪೦ ॥**

**ವಿವರಣೆ–** ಒಂದೇ ದೇಹದಲ್ಲಿರುವ ಉಭಯ ಪಕ್ಷಿಗಳಿಗೆ ಸಾಯುಜ್ಯವೆಂದರೆ ಸಂಬಂಧ ಎಂದಿಷ್ಟೇ ಅರ್ಥ. ಆದರಂತೆ ಮೋಕ್ಷದಲ್ಲಿ ಸಾಯುಜ್ಯವಿದೆ ಎಂದರೆ ಈ ಒಂದು ದೇಹದಲ್ಲಿ ಈ ಎರಡು ಪಕ್ಷಿಗಳಿಗೆ ಸಂಬಂಧವಿರುವಂತೆ ಮೋಕ್ಷದಲ್ಲಿಯೂ ಸಂಬಂಧವಿರುತ್ತದೆ ಎಂದೇ ಅರ್ಥ. ಹೊರತಾಗಿ ಅಭೇದ ಎಂದು ಅರ್ಥವಲ್ಲ.

**ಅತಃ ಶಂಕಾಪಿಶಾಚೀಃ ಸಾ ಶ್ರುತಿರೇವ ನ್ಯವಾರಯತ್ ॥ ೧೨೪೧ ॥**

**ಅರ್ಥ–** ಅತಃ= ಆದ್ದರಿಂದ, ಶಂಕಾಪಿಶಾಚೀಃ= ಶಂಕಾಪಿಶಾಚಿಗಳನ್ನು, ಸಾ ಶ್ರುತಿರೇವ= ಆ ಶ್ರುತಿಯೇ, ನ್ಯವಾರಯತ್= ನಿರಾಕರಿಸಿತು.

**ಅನುವಾದ–** ಸಮಾಖ್ಯಾ ಶ್ರುತಿಯ ಬಲದಿಂದಲೂ ಮತ್ತು ಹಿಂದೆ ಹೇಳಿದ ಹೇತುಗರ್ಭ ವಿಶೇಷಣ ಬಲದಿಂದಲೂ ಮುಕ್ತಿಯಲ್ಲಿ ಜ್ಞಾನವೇ ಇಲ್ಲ ಎಂಬುವ ಶಂಕೆಯಾಗಲೀ ಅಥವಾ ಮುಕ್ತಿಯಲ್ಲಿ ಇರುವ ಭೇದವು ವ್ಯಾವಹಾರಿಕವೆಂಬ ಶಂಕೆಯಾಗಲೀ ಬರಲು ಸಾಧ್ಯವಿಲ್ಲವಾದ್ದರಿಂದ ಈ ಶ್ರುತಿಯೇ ಆ ಎಲ್ಲ ಶಂಕೆಗಳನ್ನೂ ನಿವಾರಿಸುತ್ತದೆ.

**ಭಾವವಿಲಾಸಿನೀ–** ಅತಃ ಸಮಾಖ್ಯಾಸಮೇತತ್ವಾತ್ ಹೇತುಗರ್ಭವಿಶೇಷಣಭರಿತತ್ವಾಚ್ಚ । ಶಂಕಾಪಿಶಾಚೀಃ ಮುಕ್ತೌ ಜ್ಞಾನಾಭಾವವ್ಯಾವಹಾರಿಕಭೇದಪರತ್ವಾದಿಶಂಕಾಪಿಶಾಚೀಃ ॥ ೧೨೪೧ ॥

ಏಕಂ ಭಾವಿ ಭವಚ್ಚೈಕಮಿತ್ಯಾಶಾಂ ಹಂತಿ ಲಡ್‌ದ್ವಯಮ್ ।
ಮುಕ್ತಸ್ಯಾಪ್ಯತೃತೋಕ್ತೇಶ್ಚ ನೈರಾಶ್ಯಂ ಪರಮಂ ಸುಖಮ್ ॥ ೧೨೪೨ ॥

**ಅರ್ಥ–** ಏಕಂ ಭಾವಿ= ಒಂದು ಭವಿಷ್ಯತ್ ಕಾಲದಲ್ಲಿ ಉಂಟಾಗುವುದು, ಏಕಂ ಚ ಭವತ್= ಮತ್ತು ಇನ್ನೊಂದು ವರ್ತಮಾನಕಾಲದಲ್ಲಿ ಇರುವುದು, ಇತ್ಯಾಶಾಂ= ಎಂಬ ನಿನ್ನ ಆಸೆಯನ್ನು, ಲಡ್‌ದ್ವಯಂ= ಎರಡು ಲಟ್ ಲಕಾರಗಳು, ಹಂತಿ= ಕೊಲ್ಲುತ್ತವೆ, ಮುಕ್ತಸ್ಯಾಪಿ= ಮುಕ್ತನಿಗೂ ಕೂಡ, ಅತೃತೋಕ್ತೇಶ್ಚ= ಅತೃತ್ವವನ್ನು ಹೇಳಿರುವುದರಿಂದ, ನೈರಾಶ್ಯಂ= ನಿರಾಶೆಯೇ, ಪರಮಂ ಸುಖಂ= ಪರಮ ಸುಖವೆಂದು ತೋರುತ್ತದೆ.

**ಅನುವಾದ–** ಅವುಗಳಲ್ಲಿ ಒಂದಾದ ಅನಶನವು ಭವಿಷ್ಯತ್ ಕಾಲೀನವಾದುದು. ಇನ್ನೊಂದಾದ ಅಶನವು ವರ್ತಮಾನ ಕಾಲೀನವಾದುದು ಎಂಬ ನಿನ್ನ ಆಶೆಯನ್ನು ಎರಡು ಲಟ್ ಲಕಾರಗಳು ವಿನಾಶ ಮಾಡುತ್ತವೆ. ಮತ್ತು ಮುಕ್ತನಿಗೂ ಸಹ ಅತೃತ್ವವನ್ನು ಹೇಳಿರುವುದರಿಂದ ನಿರಾಶೆಯೇ ಪರಮ ಸುಖವೆಂದು ತೋರುತ್ತದೆ.

**ಭಾವವಿಲಾಸಿನೀ–** ಏಕಂ ಅನಶನಂ ಭಾವಿ । ಏಕಂ ಅಶನಂ ಚ ಭವದ್ವರ್ತಮಾನಮ್ । ಲಡ್‌ದ್ವಯಂ ಅನಶ್ನನ್ನಿತಿ ಶತ್ರಂತಪದಸ್ಯಾಪಿ ಲಡರ್ಥತ್ವಾತ್ ಲಡ್‌ದ್ವಯಮಿತ್ಯುಕ್ತಮ್ । ಸೋಶ್ನುತ ಇತಿ ಮುಕ್ತಸ್ಯಾಪ್ಯತೃತೋಕ್ತೇಶ್ಚ ಏಕಂ ವರ್ತಮಾನಮಿತ್ಯಾಶಾ ನಿರಸ್ತಾ । ತೇನ ಪರಸ್ಯ ಶಂಕಾಮಾತ್ರಸ್ಯಾನವಕಾಶಾನ್ನೈರಾಶ್ಯಮೇವ ಸುಖಮ್ । ನೈರಾಶ್ಯಂ ಪರಮಂ ಸುಖಮಿತಿ ಭಾಗವತವಾಕ್ಯಮಪಿ ಮಾಯಿನಾಂ ಪರಿಹಾಸಾರ್ಥಮೇವ ಪ್ರವೃತ್ತಮಿತಿ ಧ್ವನಿಂ ಸೂಚಯಿತುಂ ತದೇವ ವಾಕ್ಯಮುದಾಹೃತಮ್ ॥ ೧೨೪೨ ॥

**ವಿವರಣೆ–** ಅತ್ತಿ ಎಂಬುದು ಲಟ್ ಲಕಾರ. ಅತ್ತ್ರ ಎಂಬಲ್ಲಿ ಯದ್ಯಪಿ ಶತೃ ಪ್ರತ್ಯಯವಿದೆ. ಆದರೂ ಅದು ಲಟ್ ಲಕಾರಕ್ಕೆ ಆದೇಶವಾಗಿ ಬಂದಿರುವುದರಿಂದ ಅದನ್ನು ಲಟ್ ಎಂದೇ ಪರಿಗಣಿಸಬೇಕು. ಆದ್ದರಿಂದ ಯಾವ ಕಾಲದಲ್ಲಿ ಅಶನವಿದೆಯೋ, ಅದೇ ಕಾಲದಲ್ಲಿ ಅನಶನವಿದೆ ಎಂದು ತಿಳಿಯುವುದರಿಂದ ಒಂದನ್ನು ವರ್ತಮಾನ ಕಾಲದಲ್ಲಿ ಇರುವುದೆಂದು ಇನ್ನೊಂದನ್ನು ಭವಿಷ್ಯತ್ಕಾಲದಲ್ಲಿ ಉಂಟಾಗುವುದೆಂದು ಹೇಳಿ ವಿರೋಧವನ್ನು ಪರಿಹಾರ

ಮಾಡಲು ಸಾಧ್ಯವಿಲ್ಲ. ಆದ್ದರಿಂದ ಪರರು ತಮ್ಮ ಸಿದ್ಧಾಂತವನ್ನು ಸಮರ್ಥಿಸಲು ಯಾವ ಶಂಕೆಯನ್ನೂ ಮಾಡಲು ಸಾಧ್ಯವಿಲ್ಲವಾದ್ದರಿಂದ ನಿರಾಶೆಯನ್ನು ಮಾಡುವುದೇ ಒಳ್ಳೆಯದು. ಹೀಗೆ ಹೇಳಿ ಭಾಗವತದಲ್ಲಿ ಪಿಂಗಳೆಯ ಪ್ರಕರಣದಲ್ಲಿ ಬಂದಿರುವ 'ನೈರಾಶ್ಯಂ ಪರಮ ಸುಖಂ' ಎಂಬ ವಾಕ್ಯವನ್ನು ಮಾಯಾವಾದಿಗಳಿಗೆ ಅನ್ವಯಿಸಿ, ಇಲ್ಲಿ ಅವರನ್ನು ಅಪಹಾಸ ಮಾಡುತ್ತಾರೆ.

ಸ್ಯಾದ್ ರಕ್ತಿಮೇತಿ ಶ್ಯಾಮತ್ವದಶಾಯಾಮಪಿ ಕಿಂ ಘಟಃ ।
ರಕ್ತ ಇತ್ಯುಚ್ಯತೇ ಸದ್ಭಿಸ್ತತೋऽಪ್ಯೇತದಪಾರ್ಥಕಂ ॥ ೧೨೪೩ ॥

**ಅರ್ಥ–** ರಕ್ತಿಮಾ= ರಕ್ತವರ್ಣವು, ಸ್ಯಾತ್= ಭವಿಷ್ಯತ್ಕಾಲದಲ್ಲಿ ಉಂಟಾಗುವುದು ಎಂಬ ಕಾರಣದಿಂದ, ಶ್ಯಾಮತ್ವದಶಾಯಾಮಪಿ= ಕಪ್ಪಾಗಿರುವ ಕಾಲದಲ್ಲೂ, ಘಟಃ= ಘಟವು, ರಕ್ತ ಇತಿ= ಕೆಂಪಾಗಿದೆ ಎಂದು, ಸದ್ಭಿ= ಸಜ್ಜನರಿಂದ, ಉಚ್ಯತೇ ಕಿಂ= ಹೇಳಲ್ಪಡುವುದೇನು, ತತೋಽಪಿ= ಆ ಕಾರಣದಿಂದಲೂ, ಏತತ್= ನೀನು ಹೇಳಿದ ಅರ್ಥವು, ಅಪಾರ್ಥಕಂ= ಅಪಾರ್ಥವೇ ಆಗಿದೆ.

**ಅನುವಾದ–** ಘಟವು ಶ್ಯಾಮವಾಗಿರುವಾಗಲೂ ಮುಂದೆ ರಕ್ತವರ್ಣವು ಉಂಟಾಗುತ್ತದೆ ಎಂಬ ಕಾರಣದಿಂದ ಸಜ್ಜನರು ಅದನ್ನು ರಕ್ತವೆಂದು ಹೇಳುತ್ತಾರೇನು? ಆದ್ದರಿಂದ ನಿನ್ನ ಅರ್ಥವು ಅಪಾರ್ಥವಾದುದು.

**ಭಾವವಿಲಾಸಿನೀ–** ಭಾವ್ಯನಶನಮಪೇಕ್ಷ್ಯೇದಾನೀಮನಶ್ನನ್ನಿತಿ ಪ್ರಯೋಗೋ ನೋಚಿತ ಇತ್ಯತ್ರ ದೃಷ್ಟಾಂತಮಾಹ – **ಸ್ಯಾದಿತಿ** ॥ ೧೨೪೩ ॥

**ವಿವರಣೆ–** ಅತ್ತಿ ಮತ್ತು ಅನಶ್ನನ್ ಈ ಎರಡು ಶಬ್ದಗಳು ಹೇಳಿದ ಅಶನ ಮತ್ತು ಅನಶನಗಳನ್ನು ಕಾಲಭೇದದಿಂದ ಉಪಪಾದನೆ ಮಾಡಲು ಬರುವುದಿಲ್ಲ ಎಂಬ ವಿಷಯದಲ್ಲಿ ಇಲ್ಲಿ ಇನ್ನೊಂದು ಬಾಧಕವನ್ನು ಹೇಳುತ್ತಾರೆ. ಒಂದೇ ಕ್ಷಣದಲ್ಲಿ ಹೇಗೆ ಘಟದಲ್ಲಿ ಶ್ಯಾಮತ್ವ ಮತ್ತು ರಕ್ತತ್ವವು ಉಪಪನ್ನವಾಗುವುದಿಲ್ಲವೋ, ಅದರಂತೆ ಒಂದೇ ಕಾಲದಲ್ಲಿ ಅಶನ ಮತ್ತು ಅನಶನಗಳು ಒಂದೇ ಚೇತನನಲ್ಲಿ ಉಪಪನ್ನವಾಗುವುದಿಲ್ಲವಾದ್ದರಿಂದ ಅಲ್ಲಿ ಎರಡು ಘಟಗಳನ್ನು ಮತ್ತು ಇಲ್ಲಿ ಎರಡು ಚೇತನರನ್ನು ಅಂಗೀಕರಿಸಬೇಕೆಂದು ತಾತ್ಪರ್ಯ.

ಕಿಂಚೈಕ್ಯವಾಕ್ಯಪ್ರಾಬಲ್ಯೇ ವೃಥೈವಂ ಕ್ಲಿಷ್ಟಕಲ್ಪನಾ ।
ಶ್ರೌತಸ್ಯೈವಾತ್ಮಭೇದಸ್ಯ ತದ್ಬಲಾದ್ ಬಾಧಸಂಭವಾತ್ ॥ ೧೨೪೪ ॥

ದೌರ್ಬಲ್ಯೇ ಚೈಕ್ಯವಾಕ್ಯಸ್ಯ ವೃಥೈವಂ ಕ್ಲಿಷ್ಟಕಲ್ಪನಾ ।
ಋಜ್ವೋರ್ಯಥಾಶ್ರುತಾರ್ಥಸ್ಯ ತ್ಯಾಗೇ ಹೇತೋರಭಾವತಃ ॥ ೧೨೪೫ ॥

**ಅರ್ಥ–** ಕಿಂಚ= ಮತ್ತು, ಐಕ್ಯವಾಕ್ಯಪ್ರಾಬಲ್ಯೇ= ಐಕ್ಯವಾಕ್ಯವು ಪ್ರಬಲವಾದರೆ, ತದ್ಬಲಾತ್= ಅದರ ಬಲದಿಂದ, ಶ್ರೌತಸ್ಯೈವಾತ್ಮಭೇದಸ್ಯ= ಶ್ರುತವಾದ ಆತ್ಮಭೇದಕ್ಕೇ, ಬಾಧ ಸಂಭವಾತ್= ಬಾಧವು ಕೂಡುವುದಿಲ್ಲ, ಏವಂ ಕ್ಲಿಷ್ಟಕಲ್ಪನಾ= ಹೀಗೆ ಕ್ಲಿಷ್ಟ ಕಲ್ಪನೆಯನ್ನು ಮಾಡುವುದು, ವೃಥಾ= ವ್ಯರ್ಥವೇ ಸರಿ, ಚ= ಮತ್ತು, ಐಕ್ಯವಾಕ್ಯಸ್ಯ ದೌರ್ಬಲ್ಯೇ= ಐಕ್ಯವಾಕ್ಯವು ದುರ್ಬಲವಾದರೆ, ಋಜೋಃ= ಸರಳವಾದ, ಯಥಾಶ್ರುತಾರ್ಥಸ್ಯ= ಭೇದವಾಕ್ಯದ ಯಥಾಶ್ರುತಾರ್ಥವನ್ನು, ತ್ಯಾಗೇ= ಪರಿತ್ಯಾಗ ಮಾಡಲು, ಹೇತೋರಭಾವತಃ= ಕಾರಣವಿಲ್ಲದಿರುವುದರಿಂದ, ಏವಂ ಕ್ಲಿಷ್ಟಕಲ್ಪನಾ= ಹೀಗೆ ಕ್ಲಿಷ್ಟ ಕಲ್ಪನೆಯನ್ನು ಮಾಡಲು, ವೃಥಾ= ವ್ಯರ್ಥವಾಗುತ್ತದೆ.

**ಅನುವಾದ–** ಮತ್ತು ಐಕ್ಯವಾಕ್ಯವು ಪ್ರಬಲವಾದರೆ ಅದರ ಬಲದಿಂದ ಶ್ರುತಿಯಲ್ಲಿ ಹೇಳಿದ ಆತ್ಮಭೇದವೇ ಬಾಧಿತವಾಗುವುದರಿಂದ ಈ ಕ್ಲಿಷ್ಟ ಕಲ್ಪನೆಯು ವ್ಯರ್ಥವಾಗುತ್ತದೆ. ಐಕ್ಯವಾಕ್ಯಗಳು ದುರ್ಬಲವೆಂದರೂ ಸಹ ಭೇದವಾಕ್ಯಗಳ ಸರಳವಾದ ಯಥಾಶ್ರುತಾರ್ಥವನ್ನು ಪರಿತ್ಯಾಗ ಮಾಡಲು ಕಾರಣವಿಲ್ಲದಿರುವುದರಿಂದ ಈ ಕ್ಲಿಷ್ಟ ಕಲ್ಪನೆಯು ವ್ಯರ್ಥವೆಂದಾಗುತ್ತದೆ.

**ಭಾವವಿಲಾಸಿನೀ–** ಅಪಿ ಚಾಸ್ಯ ವಾಕ್ಯಸ್ಯ ಬುದ್ಧಿಜೀವವಿಷಯತ್ವಕಲ್ಪನಮವಸ್ಥಾಭೇದೇನ ಜೀವಮಾತ್ರವಿಷಯತ್ವಕಲ್ಪನಂ ಚ ಪ್ರಕಾರದ್ವಯೇನಾಪಿ ಮಾಯಾವಾದಿನಾಂ ವ್ಯರ್ಥಮಿತ್ಯಾಹ **– ಕಿಂಚೇತಿ ॥** ಐಕ್ಯವಾಕ್ಯಸ್ಯ ಪ್ರಾಬಲ್ಯೇ ಸಾಕ್ಷಾತ್ ಜೀವೇಶ್ವರಭೇದಪರತ್ವೇಽಪ್ಯಸ್ಯಾಃ ಶ್ರುತೇರ್ಬಾಧಿತುಂ ಶಕ್ಯತ್ವಾತ್ ಕ್ಲಿಷ್ಟಕಲ್ಪನಾ ವ್ಯರ್ಥಾ ॥ ೧೨೪೪ ॥

ಐಕ್ಯಶ್ರುತೇರ್ದೌರ್ಬಲ್ಯೇ ಬಾಧಕಾಭಾವೇನ ಯಥಾ ಶ್ರುತಾರ್ಥಸ್ಯೈವಾಂಗೀಕರ್ತುಂ ಶಕ್ಯತ್ವಾತ್ ಕ್ಲಿಷ್ಟಕಲ್ಪನಾವೈಯರ್ಥ್ಯಮೇವೇತಿ ಭಾವಃ ॥ ೧೨೪೫ ॥

**ವಿವರಣೆ–** ಈ ಕ್ಲಿಷ್ಟ ಕಲ್ಪನೆ ಎಂದರೆ ಅಶನ ಮತ್ತು ಅನಶನಗಳನ್ನು ಕಾಲಭೇದದಿಂದ ಕೂಡಿಸುವುದು ಅಥವಾ ಪಾರಮಾರ್ಥಿಕತ್ವ ಮತ್ತು ಅಪಾರಮಾರ್ಥಿಕತ್ವದಿಂದ ಕೂಡಿಸುವುದು. ಈಗ ಐಕ್ಯವಾಕ್ಯಗಳು ಪ್ರಬಲವೇ, ಅಲ್ಲವೇ ಎಂಬ ಪ್ರಶ್ನೆ. ಪ್ರಬಲವಾದರೆ ದ್ವಾಸುಪರ್ಣಾ ಎಂಬ ಶ್ರುತಿಯು ಸರಳವಾಗಿ ಭೇದವನ್ನೇ ಹೇಳಿದರೂ ಅದನ್ನು ಬಾಧಿಸುವ ಸಾಮರ್ಥ್ಯವು ಐಕ್ಯವಾಕ್ಯಕ್ಕೆ ಇರುವುದರಿಂದ ದ್ವಾಸುಪರ್ಣಾ ಶ್ರುತಿಗೆ ಸಹಜವಾದ ಭೇದಾರ್ಥತ್ವವನ್ನೇ ಅಂಗೀಕಾರ ಮಾಡು. ಬಾಧಿತವಾಗಬೇಕಾದ ಭೇದಶ್ರುತಿಗೆ ಕಾಲಭೇದಾದಿ ಉಪಪತ್ತಿಗಳನ್ನು ಹೇಳಿ ಅದನ್ನು ಏಕೆ ಸಮರ್ಥನೆ ಮಾಡುವುದಕ್ಕೆ ಪ್ರಯತ್ನ ಪಡುತ್ತಿದ್ದೀಯೇ? ಈ ನಿನ್ನ ಪ್ರಯತ್ನ ವ್ಯರ್ಥ. ಒಂದು ಪಕ್ಷ ಐಕ್ಯವಾಕ್ಯಗಳು ದುರ್ಬಲವಾದರೆ ಭೇದವಾಕ್ಯಗಳು ಪ್ರಬಲವಾಗುವುದರಿಂದ ಮತ್ತು ಭೇದವಾಕ್ಯಗಳಿಗೆ ಬಾಧಕವಿಲ್ಲದಿರುವುದರಿಂದ ಜೀವೇಶ್ವರ ಭೇದವೇ ಸಿದ್ಧವಾಗುತ್ತದೆ. ಆಗ ಅಶನ ಮತ್ತು ಅನಶನಗಳನ್ನು ಈ ರೀತಿಯಾಗಿ ಕೂಡಿಸಬೇಕಾದ ಪ್ರಸಂಗವೇ ಇಲ್ಲ. ಆದ್ದರಿಂದ

ಐಕ್ಯವಾಕ್ಯಗಳು ಪ್ರಬಲವಾದರೂ ಅಥವಾ ದುರ್ಬಲವಾದರೂ ನಿನ್ನ ಈ ಕಲ್ಪನೆಯು ಕ್ಲಿಷ್ಟವಾದುದು ಮತ್ತು ವ್ಯರ್ಥವಾದುದು ಎಂದು ಅಭಿಪ್ರಾಯ.

**ವ್ಯಾವಹಾರಿಕಭೇದಂ ತೇ ಕಾ ವಾ ವಕ್ತಿ ಶ್ರುತಿಸ್ತಯೋಃ ।**
**ವಾಕ್ಯಸ್ಯಾಸ್ಯ ಕುಸೃಷ್ಟ್ಯೈವಮನ್ಯಥಾಕರಣೇ ವದ ॥ ೧೨೪೬ ॥**

**ಅರ್ಥ–** ಅಸ್ಯ ವಾಕ್ಯಸ್ಯ= ಈ ದ್ವಾಸುಪರ್ಣಾ ವಾಕ್ಯಕ್ಕೆ, ಕುಸೃಷ್ಟ್ಯಾ= ಕೆಟ್ಟ ಕಲ್ಪನೆಯಿಂದ, ಏವಂ= ಈ ರೀತಿಯಾಗಿ, ಅನ್ಯಥಾಕರಣೇ= ಅನ್ಯಾರ್ಥವನ್ನು ಹೇಳುವುದಕ್ಕೆ, ತಯೋಃ= ಆ ಜೀವೇಶ್ವರಗಳಿಗೆ, ಕಾ ವಾ ಶ್ರುತಿಃ= ಯಾವ ಶ್ರುತಿಯು ತಾನೇ, ತೇ= ನಿನಗೆ, ವ್ಯಾವಹಾರಿಕಭೇದಂ ವಕ್ತಿ= ವ್ಯಾವಹಾರಿಕ ಭೇದವನ್ನು ಹೇಳುತ್ತದೆ, ಎಂದು, ವದ= ಹೇಳು.

**ಅನುವಾದ–** **ಇಂತಹ ಕುಕಲ್ಪನೆಯನ್ನು ಮಾಡಿ ದ್ವಾಸುಪರ್ಣಾ ಶ್ರುತಿಗೆ ನೀನು ಅನ್ಯಾರ್ಥವನ್ನು ಹೇಳಲು ನಿನಗೆ ಯಾವ ಶ್ರುತಿಯು ಜೀವೇಶ್ವರರಿಗೆ ವ್ಯಾವಹಾರಿಕ ಭೇದವನ್ನು ಹೇಳುತ್ತದೆ ಎಂದು ಹೇಳು.**

**ಭಾವವಿಲಾಸಿನೀ–** ಕ್ಲಿಷ್ಟಕಲ್ಪನಾಯಾಂ ಬಾಧಕಾಂತರಂ ಚಾಹ – **ವ್ಯಾವಹಾರಿಕೇತಿ** ॥ ತಯೋರ್ಜೀವಪರಮಯೋಃ। ಅಸ್ಯಾಃ ಶ್ರುತೇರ್ಬುದ್ಧಿಜೀವಪರತ್ವೇ ಯಥಾಕಥಂಚಿತ್ ಜೀವಮಾತ್ರಪರತ್ವೇ ಚಾಂಗೀಕೃತೇ ಸ್ವಗ್ರಂಥೇಽಸ್ಯಾಃ ಶ್ರುತೇರ್ವ್ಯಾವಹಾರಿಕ ಜೀವೇಶ್ವರಭೇದಪರತ್ವಾಂಗೀಕಾರವಿರೋಧಶ್ಚೇತಿ ಭಾವಃ ॥ ೧೨೪೬ ॥

**ವಿವರಣೆ–** ಜೀವೇಶ್ವರರಿಗೆ ವ್ಯಾವಹಾರಿಕ ಭೇದವನ್ನು ಹೇಳುವ ಶ್ರುತಿಯಿದ್ದರೆ ಆಗ ಈ ಅಶನ, ಅನಶನಗಳನ್ನು ವ್ಯಾವಹಾರಿಕ ಪಾರಮಾರ್ಥಿಕತ್ವಾದಿ ಕಲ್ಪನೆಯಿಂದ ಅವಿರುದ್ಧವನ್ನಾಗಿ ಮಾಡಬೇಕು. ಆದರೆ ಅಂತಹ ಶ್ರುತಿ ಇಲ್ಲದಿರುವಾಗ ನಿನ್ನ ಕಲ್ಪನೆಯು ನಿರ್ಮೂಲವಾದುದು ಎಂದು ಅಭಿಪ್ರಾಯ.

**ಸಿದ್ಧಭೇದಾನುವಾದಶ್ಚ ಕಸ್ಮಿನ್ ವಾಕ್ಯೇ ಪ್ರಕಥ್ಯತೇ ।**
**ಭೇದೋಪಾಸ್ತೇಶ್ಚ ಕಿಂ ಮೂಲಮತಶ್ಚಾಯಂ ವೃಥಾಶ್ರಮಃ ॥ ೧೨೪೭ ॥**

**ಅರ್ಥ–** ಸಿದ್ಧಭೇದಾನುವಾದಶ್ಚ= ಇದು ಸಿದ್ಧವಾದ ಭೇದದ ಅನುವಾದವೆಂದು, ಕಸ್ಮಿನ್ ವಾಕ್ಯೇ= ಯಾವ ವಾಕ್ಯದಲ್ಲಿ, ಪ್ರಕಥ್ಯತೇ= ಹೇಳಲ್ಪಡುತ್ತದೆ, ಚ= ಮತ್ತು, ಭೇದೋಪಾಸ್ತೇಃ= ಭೇದದ ಉಪಾಸನೆಗೆ, ಕಿಂ ಮೂಲಂ= ಏನು ಮೂಲ? ಅತಶ್ಚ= ಆದ್ದರಿಂದಲೂ, ಅಯಂ ಶ್ರಮಃ= ಈ ನಿನ್ನ ಶ್ರಮವು, ವೃಥಾ= ವ್ಯರ್ಥವಾದುದು.

**ಅನುವಾದ–** **ಶ್ರುತಿಯು ಯಾವ ವಾಕ್ಯದಲ್ಲಿ ತಾನು ಭೇದವನ್ನು ಅನುವಾದ ಮಾಡುತ್ತಿದ್ದೇನೆ ಎಂದು ಹೇಳುತ್ತದೆ? ಶ್ರುತಿಯು ಭೇದವನ್ನು ಹೇಳದಿದ್ದರೆ**

ಭೇದೋಪಾಸನೆಗೆ ಮೂಲವಾದರೂ ಯಾವುದು? ಆದ್ದರಿಂದಲೂ ಈ ನಿನ್ನ ಶ್ರಮ ವ್ಯರ್ಥವಾದುದು.

**ಭಾವವಿಲಾಸಿನೀ–** ಪುನರಪಿ ವಿರೋಧದ್ವಯಮಾಹ – **ಸಿದ್ಧೇತಿ** ॥ ವಾದಾಭಾವೇಽನುವಾದಾಯೋಗಾತ್ ಶ್ರುತೌ ಸರ್ವಥಾ ಜೀವೇಶ್ವರಭೇದಾಕಥನೇ ಉಪಾಸನಾರ್ಥಂ ಭೇದೋಕ್ತಿರಿತಿ ಪರಿಹಾರಾಯೋಗಾಚ್ಚೇತಿ ಭಾವಃ ॥ ೧೨೪೭ ॥

**ವಿವರಣೆ–** ಶ್ರುತಿಗಳು ಭೇದವನ್ನು ಹೇಳುತ್ತವೆಯೇ ಹೊರತಾಗಿ ಭೇದವನ್ನು ಅನುವಾದವೆಂದು ಹೇಳುವುದಿಲ್ಲ. ಆದ್ದರಿಂದ ಇದು ಅನುವಾದವಾದ್ದರಿಂದ ಶ್ರುತಿಗೆ ಭೇದದಲ್ಲಿ ತಾತ್ಪರ್ಯವಿಲ್ಲ ಎಂದು ಹೇಳಲು ಬರುವುದಿಲ್ಲ. ಅಷ್ಟೇ ಅಲ್ಲದೇ, ವೇದದಲ್ಲಿ ಹೇಳಿದ ಜೀವೇಶ್ವರ ಭೇದವು ಕೇವಲ ಉಪಾಸನೆಗಾಗಿ ಎಂದು ನಿನ್ನ ಮತ. ಆದ್ದರಿಂದ ಅಂತಹ ಭೇದವಾಕ್ಯಗಳು ಭೇದೋಪಾಸನೆಗೆ ಮೂಲವಾದವು. ಈಗ ಭೇದವಾಕ್ಯಗಳೇ ಇಲ್ಲದಿದ್ದರೆ ಭೇದೋಪಾಸನೆ ನಿರ್ಮೂಲವೆಂದಾಗುತ್ತದೆ. ಇದು ಇನ್ನೊಂದು ದೋಷ. ಹೀಗೆ ಈ ಶ್ಲೋಕದಲ್ಲಿ ಇನ್ನೂ ಎರಡು ದೋಷಗಳನ್ನು ಹೇಳುತ್ತಾರೆ.

**ಪರಪ್ರಯೋಜನಾರ್ಥಂ ಹಿ ಪರಮಾತ್ಮಾ ಪ್ರವರ್ತತೇ ।**
**ಸುರಾಂ ಸುಧಾಂ ಚ ದುಃಸಾಧ್ಯಾಂ ಕಿಂ ಸಂಸಾಧ್ಯ ಸ್ವಯಂ ಪಪೌ ।**
**ಅಸುರಾಂಶ್ಚ ಸುರಾಂಶ್ಚೈವ ಯಥಾಯೋಗ್ಯಮಪಾಯಯತ್॥ ೧೨೪೮ ॥**

**ಅರ್ಥ–** ಪರಮಾತ್ಮಾ= ಪರಮಾತ್ಮನು, ಪರಪ್ರಯೋಜನಾರ್ಥಂ= ಇನ್ನೊಬ್ಬರ ಪ್ರಯೋಜನಕ್ಕೋಸ್ಕರವಾಗಿ, ಪ್ರವರ್ತತೇ ಹಿ= ಕ್ರಿಯೆಯನ್ನು ಮಾಡುವನಷ್ಟೇ, ದುಃಸಾಧ್ಯಾಂ= ದುರ್ಲಭವಾದ, ಸುರಾಂ ಸುಧಾಂ ಚ= ಸುರೆಯನ್ನು ಮತ್ತು ಸುಧೆಯನ್ನು, ಸಂಸಾಧ್ಯ= ಸಂಪಾದಿಸಿ, ಸ್ವಯಂ= ತಾನೇ, ಪಪೌ ಕಿಂ= ಕುಡಿದನೇನು, ಯಥಾಯೋಗ್ಯಂ= ಅವರವರಿಗೆ ಯೋಗ್ಯವಾದ ರೀತಿಯಲ್ಲಿ, ಅಸುರಾಂಶ್ಚ ಸುರಾಂಶ್ಚೈವ= ಅಸುರರಿಗೂ ಮತ್ತು ಸುರರಿಗೂ, ಅಪಾಯಯತ್= ಕುಡಿಸಿದನು.

**ಅನುವಾದ–** ಪರಮಾತ್ಮನು ಇನ್ನೊಬ್ಬರ ಪ್ರಯೋಜನಕ್ಕೋಸ್ಕರವಾಗಿಯೇ ಪ್ರವೃತ್ತನಾಗುತ್ತಾನಷ್ಟೇ. ದುರ್ಲಭವಾದ ಸುರೆಯನ್ನು ಮತ್ತು ಅಮೃತವನ್ನು ಸಾಧಿಸಿ ತಾನೇ ಕುಡಿದನೇನು? ಯಥಾ ಯೋಗ್ಯವಾಗಿ ಅಸುರರಿಗೂ ಮತ್ತು ದೇವತೆಗಳಿಗೂ ಕುಡಿಸಿದನಷ್ಟೇ?

**ಭಾವವಿಲಾಸಿನೀ–** ಅಮೃತಮಥನಕಥಯಾ ಚ ಭಗವತ ಏವಾನಶನಂ ಜೀವದೇಹೇಷ್ವಾವಿಷ್ಟತಯಾ ಪೃಥಗೇವ ವರ್ತನಂ ಚ ಸಂಭಾವಿತಮಿತ್ಯಾಹ – **ಪರಪ್ರಯೋಜನೇತಿ** ॥ ೧೨೪೮ ॥

**ವಿವರಣೆ–** ಭಾಗವತದಲ್ಲಿ ಹೇಳಿದ ಅಮೃತಮಥನ ಪ್ರಸಂಗದಿಂದಲೂ ಸಹ ಪರಮಾತ್ಮನು ಅನಶನವನ್ನು ಹೊಂದಿದವನು ಎಂದೂ ಜೀವರ ದೇಹದಲ್ಲಿ ಆವಿಷ್ಟನಾಗಿ

ಜೀವರಿಗಿಂತ ಭಿನ್ನನಾಗಿ ಇರುತ್ತಾನೆಂದೂ ತಿಳಿದುಬರುತ್ತದೆ ಎಂದು ಇಲ್ಲಿ ಉಪಪಾದಿಸುತ್ತಾರೆ.

ಸ ಹಿ ಸರ್ವಂ ಜಗದಿದಂ ವ್ಯಾಪ್ಯ ನಾರಾಯಣಃ ಸ್ಥಿತಃ ।
ತತ್ರೈವ ದೇವದೈತ್ಯಾದಿಷ್ವಾವೇಶಸ್ಯ ಪ್ರಕೀರ್ತನಾತ್ ॥ ೧೨೪೯ ॥

ಸೋಽನಶ್ನನ್ ದೇಹಿನಾಂ ದೇಹೇಷ್ವಶ್ನಂಶ್ಚಾನ್ಯಸ್ತಥೈವ ಹಿ ।
ಪ್ರೇರಕಪ್ರೇರ್ಯರೂಪೌ ತೌ ಕಥಂ ನ ದ್ವೌ ತನೌ ತನೌ ॥ ೧೨೫೦ ॥

**ಅರ್ಥ–** ತತ್ರೈವ= ಅಮೃತ ಮಥನ ಪ್ರಸಂಗದಲ್ಲಿಯೇ, ದೇವದೈತ್ಯಾದಿಷು= ದೇವತೆಗಳಲ್ಲಿ ದೈತ್ಯರಲ್ಲಿ ಮತ್ತು ವಾಸುಕಿಯಲ್ಲಿ, ಆವೇಶಸ್ಯ= ಪರಮಾತ್ಮನ ಪ್ರವೇಶವನ್ನು, ಪ್ರಕೀರ್ತನಾತ್= ಹೇಳಿರುವುದರಿಂದ, ಸಃ ನಾರಾಯಣಃ= ಆ ನಾರಾಯಣನು, ಇದಂ ಸರ್ವಂ ಜಗತ್= ಈ ಎಲ್ಲ ಜಗತ್ತನ್ನು, ವ್ಯಾಪ್ಯ= ವ್ಯಾಪಿಸಿ, ಸ್ಥಿತಃ ಹಿ= ಇರುವುವನಷ್ಟೇ, ದೇಹಿನಾಂ ದೇಹೇ= ದೇಹಿಗಳ ದೇಹದಲ್ಲಿ, ಸಃ= ಅವನು, ಅನಶ್ನನ್= ಭೋಗಿಸದೇ ಇರುವವನು, ತಥೈವ= ಹಾಗೆಯೇ, ಅಶ್ನಂಶ್ಚ= ಭೋಗಿಸುವವನು, ಅನ್ಯಃ= ಇನ್ನೊಬ್ಬನಾದವನು, ತೌ= ಅವರು, ಪ್ರೇರಕಪ್ರೇರ್ಯರೂಪೌ= ಪ್ರೇರಕ ಮತ್ತು ಪ್ರೇರ್ಯರಾದವರು, ತೌ= ಅವರು, ತನೌ ತನೌ= ಪ್ರತಿಯೊಂದು ಶರೀರದಲ್ಲಿಯೂ, ದ್ವೌ= ಇಬ್ಬರಾಗಿ, ಕಥಂ ನ= ಹೇಗೆ ಇರುವುದಿಲ್ಲ.

**ಅನುವಾದ–** ಅಮೃತ ಮಥನ ಪ್ರಸಂಗದಲ್ಲಿಯೇ ದೇವತೆಗಳಲ್ಲಿ, ದೈತ್ಯರಲ್ಲಿ ಮತ್ತು ವಾಸುಕಿಯಲ್ಲಿ ಪರಮಾತ್ಮನ ಪ್ರವೇಶವನ್ನು ಹೇಳಿರುವುದರಿಂದ ಆ ನಾರಾಯಣನೇ ಈ ಎಲ್ಲ ಜಗತ್ತನ್ನು ವ್ಯಾಪಿಸಿ ಇರುವವನಷ್ಟೇ? ದೇಹಿಗಳ ದೇಹದಲ್ಲಿ ಅವನು ಭೋಗಿಸದೇ ಇರುವವನು. ಆ ದೇಹದಲ್ಲಿ ಭೋಗಿಸುವವನು ಇನ್ನೊಬ್ಬನೇ ಇದ್ದಾನೆ. ಅವರಲ್ಲಿ ಪರಮಾತ್ಮನು ಪ್ರೇರಕನಾದವನು, ಜೀವನು ಪ್ರೇರ್ಯ-ನಾದವನು. ಪ್ರತಿ ಶರೀರದಲ್ಲಿಯೂ ಆ ಇಬ್ಬರನ್ನು ಹೇಗೆ ಒಪ್ಪದೇ ಇರಲು ಸಾಧ್ಯ?

**ಭಾವವಿಲಾಸಿನೀ–** ತತ್ರೈವ ಅಮೃತಮಥನ ಏವ । ತಥಾಽಸುರಾನಾವಿಶದಾಸುರೇಣ ರೂಪೇಣ ತೇಷಾಂ ಬಲವೀರ್ಯಮೀರಯನ್ । ಉದ್ದೀಪಯನ್ ದೇವಗಣಾಂಶ್ಚ ವಿಷ್ಣುರ್ದೈವೇನ ನಾಗೇಂದ್ರಮಥಾಪರೇಣೇತಿ ಶ್ಲೋಕೇನ ಕೀರ್ತನಾತ್, ವ್ಯಾಪ್ಯ ನಾರಾಯಣಃ ಸ್ಥಿತ ಇತಿ ಸಂಬಂಧಃ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತ ಇತಿ ಶ್ರುತಿಂ ಚ ಸೂಚಯಿತುಮೇವಂ ಸಾಧ್ಯನಿರ್ದೇಶಃ ॥ ೧೨೪೯-೧೨೫೦ ॥

**ವಿವರಣೆ–** 'ತಥಾಸುರಾನ್ ಆವಿಶದಾಸುರೇಣ' ಎಂದು ಹಿಂದೆ ಉದಾಹರಿಸಿದ ಶ್ಲೋಕದಲ್ಲಿ ಪರಮಾತ್ಮನಿಗೆ ಅಮೃತ ಮಥನ ಕಾಲದಲ್ಲಿ ದೇವಾದಿಗಳಲ್ಲಿ ಪ್ರವೇಶವು

ಹೇಳಲ್ಪಡುತ್ತವೆ. ಜೊತೆಗೆ ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಥಿತಃ' ಎಂಬ ಶ್ರುತಿಯಲ್ಲಿಯೂ ಸರ್ವತ್ರ ಎಂದರೆ ಜೀವನ ದೇಹದಲ್ಲಿಯೂ ಪರಮಾತ್ಮನು ವ್ಯಾಪ್ತನಾಗಿದ್ದಾನೆ ಎಂದು ಸಿದ್ಧವಾಗುತ್ತದೆ.

**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥೧೨೫೧॥**

**ಅರ್ಥ–** ಅರ್ಜುನ= ಎಲೈ ಅರ್ಜುನನೇ!, ಈಶ್ವರಃ= ಈಶ್ವರನು, ಸರ್ವಭೂತಾನಾಂ= ಎಲ್ಲಾ ಜೀವರ, ಹೃದ್ದೇಶೇ= ಹೃದಯ ದೇಶದಲ್ಲಿ, ಸರ್ವಭೂತಾನಿ= ಎಲ್ಲ ಜೀವರನ್ನು, ಮಾಯಯಾ= ತನ್ನ ಇಚ್ಛೆಯಿಂದ, ಯಂತ್ರಾರೂಢಾನಿ= ಯಂತ್ರಕ್ಕೆ ಸಿಲುಕಿದವರಂತೆ, ಭ್ರಾಮಯನ್= ತಿರುಗಿಸುತ್ತಾ, ತಿಷ್ಠತಿ= ಇರುತ್ತಾನೆ.

**ಅನುವಾದ–** ಎಲೈ ಅರ್ಜುನನೇ! ಈಶ್ವರನು ಎಲ್ಲ ಜೀವರ ಹೃದಯ ಪ್ರದೇಶದಲ್ಲಿ ಎಲ್ಲ ಜೀವರನ್ನೂ ಯಂತ್ರಕ್ಕೆ ವಶವಾದವರಂತೆ ತನ್ನ ಇಚ್ಛೆಯಿಂದ ತಿರುಗಿಸುತ್ತಾ ಇರುತ್ತಾನೆ.

**ಭಾವವಿಲಾಸಿನೀ–** ಗೀತಾವಾಕ್ಯೇನಾಪಿ ಹರೇರ್ದೇಹಿದೇಹೇಷು ಸ್ಥಿತಿಂ ದುಃಖಾಶನಹೇತುಭೂತ ಕರ್ಮಾಭಾವೇನ ಕರ್ಮಫಲಸ್ಪೃಹಾಭಾವೇನ ಅನಶನಂ ಚ ಸಂಭಾವಯತಿ ॥ ಈಶ್ವರ ಇತ್ಯಾದಿನಾ ॥ ೧೨೫೧ ॥

**ವಿವರಣೆ–** ಇದು ಗೀತಾವಾಕ್ಯ. ಇದರಿಂದಲೂ ಜೀವನ ಶರೀರದಲ್ಲಿ ಪರಮಾತ್ಮನ ಸ್ಥಿತಿಯು ತಿಳಿದುಬರುತ್ತದೆ.

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಗೀತಾಸು ಹರಿಣಾ ಗೀತಾಂ ಗಾಥಾಮನುಸ್ಮರ ॥ ೧೨೫೨ ॥**

**ಅರ್ಥ–** ಕರ್ಮಾಣಿ= ಕರ್ಮಗಳು, ಮಾಂ= ನನ್ನನ್ನು, ನ ಲಿಂಪಂತಿ= ಲೇಪಿಸುವುದಿಲ್ಲ, ಕರ್ಮಫಲೇ= ಕರ್ಮಜನ್ಯವಾದ ಫಲದಲ್ಲಿ, ಮೇ= ನನಗೆ, ಸ್ಪೃಹಾ ನ= ಆಸೆಯಿಲ್ಲ, ಇತಿ= ಎಂದು, ಗೀತಾಸು= ಭಗವದ್ಗೀತೆಯಲ್ಲಿ, ಹರಿಣಾ ಗೀತಾಂ= ಹರಿಯಿಂದ ಹೇಳಲ್ಪಟ್ಟ, ಗಾಥಾಂ= ಮಾತನ್ನು, ಅನುಸ್ಮರ= ಸ್ಮರಿಸು.

**ಅನುವಾದ–** ನನಗೆ ಕರ್ಮಫಲದ ಲೇಪವಿಲ್ಲ. ನನಗೆ ಕರ್ಮಜನ್ಯ ಫಲದ ಆಸೆಯೂ ಇಲ್ಲ ಎಂದು ಗೀತೆಯಲ್ಲಿ ಹೇಳಿದ ಹರಿಯ ಮಾತುಗಳನ್ನು ಸ್ಮರಿಸಿಕೋ.

**ವಿವರಣೆ–** ಹಿಂದೆ ಉದಾಹರಿಸಿದ ಶ್ಲೋಕದಿಂದ ಜೀವರ ದೇಹದಲ್ಲಿ ಪರಮಾತ್ಮನ ಸ್ಥಿತಿಯನ್ನು ಉಪಪಾದಿಸಿ ಜೀವನೇ ಕರ್ಮಫಲ ಭೋಕ್ತೃವೆಂದು ಹೇಳಲು ಈ ಶ್ಲೋಕದಲ್ಲಿ

ಕರ್ಮಫಲ ಭೋಗಕ್ಕೆ ಕಾರಣವಾದ ಕರ್ಮಲೇಪವನ್ನು ಕೃಷ್ಣನು ಗೀತೆಯಲ್ಲಿ ಈ ಮಾತುಗಳಿಂದ ನಿರೂಪಿಸುತ್ತಿದ್ದಾನೆ.

**ಅಂತೇ ಸಂಹೃತ್ಯ ಯೋಽನೇಕಾನ್ ವಿಪ್ರರ್ಷಿವಿಬುಧಾದಿಕಾನ್ ।**
**ನ ಲಿಪ್ಯತೇ ಪಾಪಕೇನ ಕನೀಯಾನ್ ನ ಸ ಕರ್ಮಣಾ ॥ ೧೨೫೩ ॥**

**ಅರ್ಥ–** ಯಃ= ಯಾವ ಪರಮಾತ್ಮನು, ಅಂತೇ= ಕೊನೆಯಲ್ಲಿ ಪ್ರಳಯಕಾಲದಲ್ಲಿ, ಅನೇಕಾನ್= ಅನೇಕರಾದ, ವಿಪ್ರರ್ಷಿವಿಬುಧಾದಿಕಾನ್= ಬ್ರಾಹ್ಮಣರನ್ನು, ಋಷಿಗಳನ್ನು ಮತ್ತು ದೇವತೆಗಳನ್ನು, ಸಂಹೃತ್ಯ= ಸಂಹರಿಸಿ (ಸಂಹರಿಸಿದರೂ ಕೂಡ), ಪಾಪಕೇನ= ಪಾಪದಿಂದ, ನ ಲಿಪ್ಯತೇ= ಲೇಪಿಸಲ್ಪಡುವುದಿಲ್ಲವೋ, ಸಃ= ಅವನು, ಕರ್ಮಣಾ= ಕರ್ಮದಿಂದ, ನ ಕನೀಯಾನ್= ಯಾವ ನೀಚತ್ವವನ್ನೂ ಹೊಂದುವುದಿಲ್ಲ.

**ಅನುವಾದ– ಯಾವ ಪರಮಾತ್ಮನು ಪ್ರಳಯ ಕಾಲದಲ್ಲಿ ಅನೇಕ ಬ್ರಾಹ್ಮಣರನ್ನು, ಋಷಿಗಳನ್ನು, ದೇವತೆಗಳನ್ನು ಸಂಹರಿಸಿದರೂ ಪಾಪ ಲೇಪವನ್ನು ಹೊಂದುವುದಿಲ್ಲವೋ, ಅವನು ಯಾವ ಕರ್ಮದಿಂದಲೂ ಹಾನಿಯನ್ನು ಹೊಂದುವುದಿಲ್ಲ.**

**ಭಾವವಿಲಾಸಿನೀ– ಹರೇರ್ದುಃಖಮೂಲಪಾಪಲೇಪಾಭಾವೇ ಯುಕ್ತಿಂ ವದನ್ ಶ್ರುತೇಶ್ಚ ಸೂಚನಾಯ ಶ್ರೌತಪದೇನ ಫಲಿತಮಾಹ – ಅಂತ ಇತಿ ॥ ಅನೇನ ನ ಕರ್ಮಣಾ ಲಿಪ್ಯತೇ ಪಾಪಕೇನ, ನ ಕರ್ಮಣಾ ವರ್ಧತೇ ನೋ ಕನೀಯಾನಿತಿ ಶ್ರುತಿದ್ವಯಂ ಸೂಚಯತಿ ॥೧೨೫೩॥**

**ವಿವರಣೆ–** ದುಃಖಕ್ಕೆ ಮೂಲವಾದುದು ಪಾಪಲೇಪ. ಹರಿಗೆ ಆ ಪಾಪಲೇಪವಿಲ್ಲವೆಂಬುದನ್ನು ಎರಡು ಶ್ರುತಿವಾಕ್ಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಶ್ಲೋಕದಲ್ಲಿ ನಿರೂಪಿಸುತ್ತಾರೆ. 'ನ ಕರ್ಮಣಾ ಲಿಪ್ಯತೇ ಪಾಪಕೇನ' ಎಂಬುದು ಒಂದು ಶ್ರುತಿ. ಅವನಿಗೆ ಪಾಪ ಕರ್ಮದ ಲೇಪವಿಲ್ಲ ಎಂಬುದು ಅದರ ಅರ್ಥ. 'ನ ಕರ್ಮಣಾ ವರ್ಧತೇ ನೋಕನೀಯಾನ್' ಎಂಬುದು ಇನ್ನೊಂದು ಶ್ರುತಿ. ಅವನು ಸತ್ಕರ್ಮದಿಂದ ವೃದ್ಧಿಯನ್ನೂ ಹೊಂದುವುದಿಲ್ಲ, ದುಷ್ಕರ್ಮದಿಂದ ಅವನತಿಯನ್ನೂ ಹೊಂದುವುದಿಲ್ಲ ಎಂದು ಅದರ ಅರ್ಥ. ಹೀಗೆ ಈ ಎರಡು ಶ್ರುತಿಗಳು ಪರಮಾತ್ಮನಿಗೆ ಕರ್ಮಲೇಪ ಇಲ್ಲವೆಂದು ಹೇಳುತ್ತವೆ.

**ಯೋಽಸಕ್ತಃ ಸನ್ ವಿವಿಕ್ತಶ್ಚ ಸಾಕ್ಷೀ ಕಿಲ ನೃಣಾಂ ಹೃದಿ ।**
**ಸ ಪಾಪಮೂಲದುಃಖಾನಿ ನೈವ ಭುಂಕ್ತ ಇತಿ ಸ್ಮೃತೇಃ ॥ ೧೨೫೪ ॥**

**ಅರ್ಥ–** ಯಃ= ಯಾವ ಪರಮಾತ್ಮನು, ಅಸಕ್ತಃ= ಸಂಬಂಧ್ಧನಾಗಿದ್ದರೂ ಸ್ನೇಹರಹಿತನಾಗಿ, ವಿವಿಕ್ತಶ್ಚ= ಭಿನ್ನನಾಗಿ (ವಿವಿಕ್ತನಾಗಿ), ನೃಣಾಂ ಹೃದಿ= ಜೀವರ ಹೃದಯದಲ್ಲಿ, ಸಾಕ್ಷೀ=

ಸಾಕ್ಷಿಯಾಗಿರುತ್ತಾನೆಯೋ, ಅವನು, ಪಾಪಮೂಲದುಃಖಾನಿ ನೈವ ಭುಂಕ್ತೇ= ಪಾಪ ನಿಮಿತ್ತವಾದ ದುಃಖವನ್ನು ಭೋಗಿಸುವುದಿಲ್ಲ, ಇತಿ ಸ್ಮೃತೇಃ= ಎಂದು ಸ್ಮೃತಿ ಇರುವುದರಿಂದ (ಅವನಿಗೆ ಪಾಪಲೇಪವಿಲ್ಲ, ಪಾಪಲೇಪ ನಿಮಿತ್ತವಾದ ದುಃಖವೂ ಇಲ್ಲ).

**ಅನುವಾದ–** ಯಾವ ಪರಮಾತ್ಮನು ಸರ್ವಜೀವರ ಸಂಬಂಧವನ್ನು ಹೊಂದಿದ್ದರೂ ಅವರಿಗಿಂತ ಭಿನ್ನನಾಗಿ ಅವರ ಹೃದಯದಲ್ಲಿ ಸಾಕ್ಷಿಯಾಗಿದ್ದಾನೆಯೋ ಅವನು ಪಾಪ ಮೂಲಕವಾದ ದುಃಖವನ್ನು ಅನುಭವಿಸುವುದಿಲ್ಲ ಎಂಬ ಸ್ಮೃತಿ ಇದೆ.

**ಭಾವವಿಲಾಸಿನೀ–** ಉಕ್ತಾರ್ಥೇ ಸ್ಮೃತಿಂ ಚ ಸೂಚಯತಿ ॥ **ಯೋಽಸಕ್ತ ಇತಿ** ॥ ಅನೇನ ದ್ರಷ್ಟುರ್ನದೃಶ್ಯಸ್ಯ ಗುಣೈರ್ವಿಷಜ್ಯತೇ ತಸ್ಮೈ ನಮೋಽಸಕ್ತವಿವಿಕ್ತಸಾಕ್ಷಿಣೇ ಇತಿ ಭಾಗವತವಾಕ್ಯಂ ಗೃಹ್ಣಾತಿ । ಉತ್ತರಾರ್ಧೇನ ಚ ನ ವೈ ಸ ಆತ್ಮಾತ್ಮವತಾಮಧೀಶ್ವರೋ ಭುಂಕ್ತೇ ಹಿ ದುಃಖಂ ಭಗವಾನ್ ವಾಸುದೇವ ಇತಿ ವಾಕ್ಯಂ ಗೃಹ್ಣಾತಿ । ಸ್ಮೃತೇಃ ಗೀತಾಭಾಗವತರೂಪಸ್ಮೃತೇಃ ॥ ೧೨೫೪ ॥

**ವಿವರಣೆ–** 'ನವೈಸ ಆತ್ಮಾತ್ಮವತಾಮಧೀಶ್ವರೋ ಭುಂಕ್ತೇ ಹಿ ದುಃಖಂ ಭಗವಾನ್ ವಾಸುದೇವಃ' ಎಂಬ ಭಾಗವತ ನವಮ ಸ್ಕಂದ ರಾಮಾಯಣ ಪ್ರಸಂಗದಲ್ಲಿನ ಶ್ಲೋಕವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಪರಮಾತ್ಮನಿಗೆ ಪಾಪಲೇಪವೂ ದುಃಖವೂ ಇಲ್ಲ ಎಂದು ಈ ಶ್ಲೋಕದಲ್ಲಿ ಸಮರ್ಥಿಸುತ್ತಿದ್ದಾರೆ.

**ಶ್ರುತೇಶ್ಚ ಯುಕ್ತಿತಶ್ಚೇಶಃ ಸಿದ್ಧೋ ವಿದ್ವಜ್ಜನಪ್ರಿಯಃ ।**
**ಯಶ್ಚ ಸ್ವಕೃತಪಾಪೋಘೈರ್ನರಕಾನನುಗಚ್ಛತಿ ॥ ೧೨೫೫ ॥**

**ಆಧಿನಾ ವ್ಯಾಧಿನಾ ದೇಹೇಽಪ್ಯನೀಶಃ ಕ್ಲೇಶಭಾಕ್ ಸದಾ ।**
**ಉಭಾವಶ್ನದನಶ್ನಂತೌ ಕಥಂ ನೇಮೌ ತನೌ ತನೌ ॥ ೧೨೫೬ ॥**

**ಅರ್ಥ–** ಶ್ರುತೇಶ್ಚ= ಶ್ರುತಿಯಿಂದಲೂ, ಯುಕ್ತಿತಶ್ಚ= ಮತ್ತು ಯುಕ್ತಿಯಿಂದಲೂ, ವಿದ್ವಜ್ಜನ ಪ್ರಿಯಃ= ವಿದ್ವಜ್ಜನರಿಗೆ ಪ್ರಿಯನಾದ, ಈಶಃ= ಪರಮಾತ್ಮನು, ಸಿದ್ಧಃ= ಸಿದ್ಧನಾಗುತ್ತಾನೆ, ಯಶ್ಚ= ಮತ್ತು ಯಾವನು, ಸ್ವಕೃತಪಾಪೋಘೈಃ= ತಾನು ಮಾಡಿದ ಪಾಪದ ಸಮೂಹದಿಂದ, ನರಕಾನನುಗಚ್ಛತಿ= ನರಕಗಳಿಗೆ ಹೋಗುತ್ತಾನೆಯೋ, ದೇಹೇಪಿ= ಈ ದೇಹದಲ್ಲಿಯೂ ಕೂಡ, ಆಧಿನಾ ವ್ಯಾಧಿನಾ= ಮನೋರೋಗದಿಂದಲೂ ಮತ್ತು ದೇಹದ ರೋಗದಿಂದಲೂ, ಅನೀಶಃ= ಅಸಮರ್ಥನಾಗಿದ್ದಾನೆಯೋ, ಸದಾ= ಯಾವಾಗಲೂ, ಕ್ಲೇಶಭಾಕ್= ಕ್ಲೇಶಭಾಜನನಾಗಿದ್ದಾನೆಯೋ, ಅಂತಹ, ಅಶ್ನದನಶ್ನಂತೌ= ಭೋಗಿಸುವ ಮತ್ತು ಭೋಗಿಸದಿರುವ, ಇಮೌ ಉಭೌ= ಜೀವ ಪರಮಾತ್ಮರಿಬ್ಬರು, ತನೌ ತನೌ= ಪ್ರತಿಯೊಂದು ದೇಹದಲ್ಲಿಯೂ, ಕಥಂ ನ= ಹೇಗೆ ಇರುವುದಿಲ್ಲ?

**ಅನುವಾದ–** ಶ್ರುತಿಯಿಂದಲೂ ಮತ್ತು ಯುಕ್ತಿಗಳಿಂದಲೂ ವಿದ್ವಜ್ಜನಪ್ರಿಯನಾದ ಈಶ್ವರನು ಸಿದ್ಧನಾಗುತ್ತಾನೆ ಮತ್ತು ಯಾವ ಜೀವನು ತಾನು ಮಾಡಿದ ಪಾಪದ

ಸಮೂಹಕ್ಕೆ ಅನುಗುಣವಾಗಿ ನರಕಗಳನ್ನು ಹೊಂದುತ್ತಾನೆಯೋ, ಇಲ್ಲಿರುವ ಶರೀರದಲ್ಲಿಯೂ ಮನೋರೋಗ ಮತ್ತು ದೇಹರೋಗದಿಂದ ಗ್ರಸ್ತನಾಗಿ ಅಸಮರ್ಥನಾಗಿದ್ದಾನೆಯೋ ಮತ್ತು ಯಾವಾಗಲೂ ಕ್ಲೇಶಭಾಜನ-ನಾಗಿದ್ದಾನೆಯೋ ಅಂತಹ ದುಃಖವನ್ನು ಭೋಗಿಸುವ ಮತ್ತು ಭೋಗಿಸದಿರುವ ಈ ಇಬ್ಬರು ಜೀವಪರಮಾತ್ಮರು ಪ್ರತಿಯೊಂದು ದೇಹದಲ್ಲಿಯೂ ಹೇಗೆ ಭಿನ್ನರಾಗಿರುವುದಿಲ್ಲ?

**ಭಾವವಿಲಾಸಿನೀ–** ಶ್ರುತೇಃ ಪ್ರಾಕ್ಸೂಚಿತಾಯಾಃ । ಯುಕ್ತಿತಃ ಪ್ರಾಗುಕ್ತಯುಕ್ತೇಃ । ಸಿದ್ಧಃ ಅನಶ್ನನ್ ಸಿದ್ಧಃ । ಶ್ರುತಿಸ್ಮೃತ್ಯುಕ್ತಜೀವಸ್ವಭಾವದರ್ಶನೇ ಸತಿ ಅತ್ತಾ ಚ ಜೀವ ಏವೇತ್ಯಾಹ – **ಯಶ್ಚೇತಿ** ॥ ಇಮೌ ಜೀವಪರಮೌ ॥ ೧೨೫೫-೧೨೫೬ ॥

**ಉದ್ಗತೇ ಸತಿ ಜೀವಾಖ್ಯಚೈತನ್ಯಾಂಶೇ ಕಲೇವರಾತ್ ।**
**ದೇಹವ್ಯಾಪಿ ತದಾಪ್ಯನ್ಯಚೈತನ್ಯಂ ಕಿಲ ತೇ ಮತೇ ॥ ೧೨೫೭ ॥**

**ಅರ್ಥ–** ಕಲೇವರಾತ್= ದೇಹದಿಂದ, ಜೀವಾಖ್ಯಚೈತನ್ಯಾಂಶೇ= ಜೀವ ಎಂಬ ಚೈತನ್ಯಾಂಶವು, ಉದ್ಗತೇ ಸತಿ= ಹೊರಗೆ ಹೋದರೂ ಕೂಡ, ತದಾಪಿ= ಆಗಲೂ ಕೂಡ, ತೇ ಮತೇ= ನಿನ್ನ ಮತದಲ್ಲಿ, ದೇಹವ್ಯಾಪಿ= ದೇಹವ್ಯಾಪಿಯಾದ, ಅನ್ಯಚೈತನ್ಯಂ= ಇನ್ನೊಂದು ಚೈತನ್ಯವು, ಅಸ್ತಿ ಕಿಲ= ಇರುವುದಷ್ಟೇ.

**ಅನುವಾದ–** ಜೀವ ಎಂಬ ಚೈತನ್ಯಾಂಶವು ದೇಹವನ್ನು ಬಿಟ್ಟು ಹೊರಟು ಹೋದರೂ ಸರ್ವತ್ರ ವ್ಯಾಪ್ತನಾದ್ದರಿಂದ ದೇಹವ್ಯಾಪ್ತನಾದ ಬ್ರಹ್ಮರೂಪವಾದ ಇನ್ನೊಂದು ಚೈತನ್ಯವನ್ನು ಆ ದೇಹದಲ್ಲಿ ನಿನ್ನ ಮತದಲ್ಲೂ ಅಂಗೀಕರಿಸುವಿಯಷ್ಟೇ?

**ಭಾವವಿಲಾಸಿನೀ–**ಪರರೀತ್ಯಾಪಿ ಜೀವದೇಹೇ ಚೈತನ್ಯದ್ವಯಂ ಸಾಧಯತಿ- **ಉದ್ಗತ ಇತಿ** ॥೧೨೫೭॥

**ವಿವರಣೆ–** ದೇಹದಿಂದ ಜೀವನು ಹೊರಟು ಹೋದರೂ ವ್ಯಾಪ್ತವಾದ ಬ್ರಹ್ಮಚೈತನ್ಯವು ಎಲ್ಲಿಯೋ ಹೋಗುವುದಲ್ಲವಾದ್ದರಿಂದ ಪ್ರತಿಯೊಂದು ದೇಹದಲ್ಲಿಯೂ ಜೀವ ಚೈತನ್ಯ ಮತ್ತು ಬ್ರಹ್ಮಚೈತನ್ಯವೆಂಬ ಎರಡು ಚೈತನ್ಯಗಳನ್ನು ಇಲ್ಲಿ ಉಪಪಾದನೆ ಮಾಡುತ್ತಾರೆ.

**ನ ಚೇದನಾರೋಪಿತೋಽಸೌ ದೇಹಃ ಸ್ಯಾತ್ ಪತಿತೋ ಭುವಿ ।**
**ನಾಧಿಷ್ಠಾನಂ ವಿನಾಽಧ್ಯಾಸೋ ನ ಚೈತನ್ಯಂ ವಿನಾ ಚ ತತ್ ॥ ೧೨೫೮ ॥**

**ಅರ್ಥ–** ನ ಚೇತ್= ಅಂತಹ ವ್ಯಾಪ್ತವಾದ ಚೈತನ್ಯವು ಇಲ್ಲದಿದ್ದರೆ, ಭುವಿ ಪತಿತಃ= ಭೂಮಿಯಲ್ಲಿ ಬಿದ್ದ, ಅಸೌ ದೇಹಃ= ಆ ದೇಹವು, ಅನಾರೋಪಿತಃ ಸ್ಯಾತ್=

ಅನಾರೋಪಿತವಾಗಿ ಸತ್ಯವಾದೀತು, ಅಧಿಷ್ಠಾನಂ ವಿನಾ= ಅಧಿಷ್ಠಾನವಿಲ್ಲದೇ, ಅಧ್ಯಾಸೋ ನ= ಆರೋಪವಿಲ್ಲ, ಚೈತನ್ಯಂ ವಿನಾ= ಚೈತನ್ಯವನ್ನು ಬಿಟ್ಟು, ತತ್ ನ= ಬೇರೆ ಅಧಿಷ್ಠಾನವು ಇಲ್ಲ.

**ಅನುವಾದ–** ದೇಹದಲ್ಲಿ ವ್ಯಾಪ್ತವಾದ ಚೈತನ್ಯವನ್ನು ಒಪ್ಪದಿದ್ದರೆ ಅಥವಾ ಅದೂ ಹೊರಟು ಹೋದರೆ ಭೂಮಿಯಲ್ಲಿ ದೇಹವು ಅನಾರೋಪಿತವಾಗುವುದರಿಂದ ದೇಹವು ಸತ್ಯವಾಗಲಿ. ಏಕೆಂದರೆ ಅಧಿಷ್ಠಾನವಿಲ್ಲದೇ ಆರೋಪವಿಲ್ಲ. ಚೈತನ್ಯವನ್ನು ಬಿಟ್ಟು ಬೇರೆ ಅಧಿಷ್ಠಾನವಿಲ್ಲ.

**ಭಾವವಿಲಾಸಿನೀ–** ನಚೇತ್ ಚೈತನ್ಯಾಂಶೋ ನಚೇತ್ । ತದಧಿಷ್ಠಾನಮ್ ॥ ೧೨೫೮ ॥

**ವಿವರಣೆ–** ಅದ್ವೈತ ಮತದಂತೆ ಭೂಮಿಯಲ್ಲಿ ಬಿದ್ದ ದೇಹವೂ ಸಹ ಆರೋಪಿತವಾದುದೇ. ಆರೋಪವನ್ನು ಮಾಡಬೇಕಾದರೆ ಒಂದು ಅಧಿಷ್ಠಾನವು ಬೇಕು, ಅದು ಚೈತನ್ಯವೇ ಆಗಬೇಕು. ಭೂಮಿಯಲ್ಲಿ ಬಿದ್ದ ದೇಹದಲ್ಲಿ ವ್ಯಾಪ್ತವಾದ ಚೈತನ್ಯವೇ ಇಲ್ಲದಿದ್ದರೆ ಅಧಿಷ್ಠಾನವೇ ಇಲ್ಲವೆಂದಂತಾಯಿತು. ಅಧಿಷ್ಠಾನವಿಲ್ಲದೇ ಆರೋಪವು ಕೂಡುವುದಿಲ್ಲ. ಆದ್ದರಿಂದ ದೇಹವು ಅನಾರೋಪಿತವಾಗಿ ಸತ್ಯವೆಂದು ಅಂಗೀಕರಿಸಬೇಕಾದ ಪ್ರಸಂಗವು ಬರುತ್ತದೆ. ಅದನ್ನು ಪರಿಹಾರ ಮಾಡಿಕೊಳ್ಳಲು ದೇಹದಲ್ಲಿ ವ್ಯಾಪ್ತ ಚೈತನ್ಯವನ್ನು ಒಪ್ಪಿದರೆ ದೇಹದಲ್ಲಿ ಎರಡು ಚೇತನಗಳ ಸ್ಥಿತಿಯು ಸಿದ್ಧವಾಗುತ್ತವೆ ಎಂದು ಅಭಿಪ್ರಾಯ.

**ಏವಂ ಚಾಶ್ನದನಶ್ನಂತೌ ಚಿದಂಶೌ ದ್ವೌ ಯತೋ ಬಲಾತ್ ।**
**ತಚ್ಛ್ರುತಿಸ್ತತ್ಪರೈವಾಸ್ತು ಕಿಮರ್ಥಾ ಕ್ಲಿಷ್ಟಕಲ್ಪನಾ ॥ ೧೨೫೯ ॥**

**ಅರ್ಥ–** ಏವಂ ಚ= ಈ ರೀತಿಯಾಗಿ, ಯತಃ= ಯಾವ ಕಾರಣದಿಂದ, ಅಶ್ನದನಶ್ನಂತೌ= ಭೋಗಿಸುವ ಮತ್ತು ಭೋಗಿಸದಿರುವ, ಚಿದಂಶೌ= ಚೈತನ್ಯಾಂಶಗಳು, ಬಲಾತ್= ಯುಕ್ತಿ ಶ್ರುತಿ ಬಲದಿಂದ, ದ್ವೌ= ಎರಡು ಎಂದು ಸಿದ್ಧವಾಗುತ್ತವೆಯೋ, ತತ್= ಆ ಕಾರಣದಿಂದ, ಶ್ರುತಿಃ= ದ್ವಾಸುಪರ್ಣಾ ಶ್ರುತಿ, ತತ್ಪರೈವಾಸ್ತು= ಅಂತಹ ಜೀವೇಶ್ವರ ಪರವೇ ಆಗಲಿ, ಕ್ಲಿಷ್ಟಕಲ್ಪನಾ= ಕ್ಲಿಷ್ಟ ಕಲ್ಪನೆಯು, ಕಿಮರ್ಥಾ= ಏತಕ್ಕೋಸ್ಕರವಾಗಿ?

**ಅನುವಾದ–** ಆದ್ದರಿಂದ ಶ್ರುತಿ-ಯುಕ್ತಿಗಳ ಬಲದಿಂದ ಭೋಗಿಸುವ ಮತ್ತು ಭೋಗಿಸದಿರುವ ಚೈತನ್ಯಾಂಶಗಳು ಎರಡು ಎಂದು ಸಿದ್ಧವಾಗುವುದರಿಂದ ದ್ವಾಸುಪರ್ಣಾ ಶ್ರುತಿಯು ಅಂತಹ ಜೀವೇಶ್ವರ ಪರವೆಂದೇ ಅಂಗೀಕರಿಸು. ಏತಕ್ಕೆ ಕ್ಲಿಷ್ಟ ಕಲ್ಪನೆಯನ್ನು ಮಾಡುತ್ತೀಯೇ.

**ಭಾವವಿಲಾಸಿನೀ–** ತತ್ತಸ್ಮಾತ್ ಅಶ್ನದಶ್ನತೋಶ್ಚಿದಂಶಯೋರಾವಶ್ಯಕತ್ವಾತ್ ॥ ೧೨೫೯ ॥

ಶ್ರಾವಯಂತೀ ಭಿದಾಂ ತಸ್ಯಾ ವ್ಯಾವಹಾರಿಕತಾದಿಕಂ ।
ಕಪೋಲಕ್ಲೃಪ್ತಮಶ್ರೌತಂ ಧಿಕ್ಕೃತ್ಯೈವ ಶ್ರುತಿರ್ದ್ವಯೋಃ ॥ ೧೨೬೦ ॥

ಸಾಯುಜ್ಯಸಖ್ಯಸಾದೃಶ್ಯಸ್ವಾತಂತ್ರ್ಯಾದಿವಿಶೇಷಣೈಃ ।
ಉಪಸರ್ಗೇಣ ಚ ವ್ಯಾಪ್ತಿಂ ಪ್ರಬೋಧ್ಯೈಕ್ಯಗಿರಾಂ ಗತಿಂ ॥ ೧೨೬೧ ॥

ಸಗುಣತ್ವಂ ಚ ಸಂಸಾಧ್ಯ ಲಿಟಾ ಮಿಥ್ಯಾಶ್ರುತೇರ್ಗತಿಂ ।
ಲಟಾ ತದ್ಬಾಧಕಂ ಚೋಕ್ತ್ವಾ ಮಾಧ್ವರಾದ್ಧಾಂತಮುದ್ದಧೇ ॥ ೧೨೬೨ ॥

**ಅರ್ಥ–** ಶ್ರುತಿಃ= ದ್ವಾಸುಪರ್ಣಾ ಶ್ರುತಿಯು, ದ್ವಯೋಃ= ಜೀವಪರಮಾತ್ಮರಿಗೆ, ಭಿದಾಂ= ಭೇದವನ್ನು, ಶ್ರಾವಯಂತೀ= ಹೇಳುತ್ತಾ, ತಸ್ಯಾ= ಆ ಭೇದಕ್ಕೆ, ಕಪೋಲಕ್ಲೃಪ್ತ= ಸ್ವಕಪೋಲ ಕಲ್ಪಿತವಾದ, ಅಶ್ರೌತಂ= ಶ್ರುತಿಯಲ್ಲಿ ಹೇಳಲ್ಪಡದ, ವ್ಯಾವಹಾರಿಕತಾದಿಕಂ= ವ್ಯಾವಹಾರಿಕತ್ವ ಮೊದಲಾದವುಗಳನ್ನು, ಧಿಕ್ಕೃತ್ಯೈವ= ಸ್ಪಷ್ಟವಾಗಿ ನಿರಾಕರಿಸಿ, ವಿಶೇಷಣೈಃ= ಸಯುಜೌ, ಸಖಾಯೌ, ಪರಿಷಸ್ವಜಾತೇ, ಅನಶ್ನನ್ ಅನ್ಯಃ, ಅಭಿಚಾಕಶೀತಿ ಎಂಬ ವಿಶೇಷಣಗಳಿಂದ, ಸಾಯುಜ್ಯಸಖ್ಯಸಾದೃಶ್ಯಸ್ವಾತಂತ್ರ್ಯಾದಿ= ಸಾಯುಜ್ಯ, ಸಖ್ಯ, ಸಾದೃಶ್ಯ, ಸ್ವಾತಂತ್ರ್ಯ ಮೊದಲಾದ ಧರ್ಮಗಳನ್ನು, ಪ್ರಬೋಧ್ಯ= ಪ್ರತಿಪಾದಿಸಿ, ಉಪಸರ್ಗೇಣ= ಅಭಿ ಎಂಬ ಉಪಸರ್ಗದಿಂದ, ವ್ಯಾಪ್ತಿಂ ಚ= ವ್ಯಾಪ್ತತ್ವವನ್ನೂ, ಪ್ರಬೋಧ್ಯ= ತಿಳಿಸಿ, ಐಕ್ಯಗಿರಾಂ= ಐಕ್ಯವಾಕ್ಯಗಳಿಗೆ, ಗತಿಂ= ಗತಿಯನ್ನು, ಪ್ರಬೋಧ್ಯ= ತಿಳಿಸಿ, ಸಗುಣತ್ವಂ ಚ= ಸಗುಣತ್ವವನ್ನು, ಸಂಸಾಧ್ಯ= ಚೆನ್ನಾಗಿ ಸಾಧಿಸಿ, ಲಿಟಾ= ಪರಿಷಸ್ವಜಾತೇ ಎಂಬಲ್ಲಿರುವ ಲಿಟ್ ಪ್ರಯೋಗದಿಂದ, ಮಿಥ್ಯಾಶ್ರುತೇಃ= ಮಿಥ್ಯಾಶ್ರುತಿಗೆ, ಗತಿಂ= ಅನಿತ್ಯತ್ವರೂಪವಾದ ಅರ್ಥವನ್ನೂ ಲಟಾ= ಅಶ್ನನ್ ಅನಶ್ನನ್ ಎಂಬಲ್ಲಿರುವ ಲಟ್ ಪ್ರಯೋಗದಿಂದ, ತದ್ಬಾಧಕಂ ಚ= ಮಿಥ್ಯಾತ್ವಕ್ಕೆ ಬಾಧಕವನ್ನೂ ಸಹ, ಉಕ್ತ್ವಾ= ಹೇಳಿ, ಮಾಧ್ವರಾದ್ಧಾಂತ= ಮಾಧ್ವ ಸಿದ್ಧಾಂತವನ್ನು, ಉದ್ದಧೇ= ಎತ್ತಿ ಹಿಡಿಯಿತು.

**ಅನುವಾದ–** ದ್ವಾಸುಪರ್ಣಾ ಶ್ರುತಿಯು ಜೀವಪರಮಾತ್ಮರಿಗೆ ಭೇದವನ್ನು ಹೇಳಿ ಸ್ವಕಪೋಲ ಕಲ್ಪಿತವಾದ ಮತ್ತು ಶ್ರುತಿಯಲ್ಲಿ ಹೇಳಲ್ಪಡದ ಭೇದದ ವ್ಯಾವಹಾರಿಕತ್ವವನ್ನು ಸ್ಪಷ್ಟವಾಗಿ ನಿರಾಕರಿಸಿ ಸಯುಜೌ, ಸಖಾಯೌ ಪರಿಷಸ್ವಜಾತೇ ಅನಶ್ನನ್ ಅನ್ಯಃ ಅಭಿಚಾಕಶೀತಿ ಮೊದಲಾದ ವಿಶೇಷಣಗಳಿಂದ ಸಾಯುಜ್ಯ, ಸಖ್ಯ, ಸಾದೃಶ್ಯ, ಸ್ವಾತಂತ್ರ್ಯ ಮೊದಲಾದ ಗುಣಗಳನ್ನು ಹೇಳಿ ಅಭಿಚಾಕಶೀತಿ ಎಂಬಲ್ಲಿ ಅಭಿ ಎಂಬ ಉಪಸರ್ಗದಿಂದ ವ್ಯಾಪ್ತತ್ವವನ್ನು ಹೇಳಿ ಐಕ್ಯವಾಕ್ಯಗಳಿಗೆ ಗತಿಯನ್ನು ಹೇಳಿ ಸಗುಣತ್ವವನ್ನು ಚೆನ್ನಾಗಿ ಸಾಧಿಸಿ ಪರಿಷಸ್ವಜಾತೇ ಎಂಬಲ್ಲಿರುವ ಲಿಟ್ ಪ್ರಯೋಗದಿಂದ ಮಿಥ್ಯಾಶ್ರುತಿಗೆ ಅನಿತ್ಯ ಎಂಬ ಅರ್ಥವನ್ನು ತೋರಿಸಿ ಅತ್ತಿ

ಅನಶ್ನನ್ ಎಂಬಲ್ಲಿರುವ ಲಟ್ ಪ್ರತ್ಯಯದಿಂದ ಮಿಥ್ಯಾತ್ವಕ್ಕೆ ಬಾಧಕವನ್ನೂ ಸಹ ತಿಳಿಸಿ ಮಾಧ್ವಸಿದ್ಧಾಂತವನ್ನು ಎತ್ತಿ ಹಿಡಿಯಿತು.

**ಭಾವವಿಲಾಸಿನೀ–** ಏವಂ ಜೀವೇಶಯೋರೇವೈ ತತ್‌ಶ್ರುತಿಪ್ರತಿಪಾದ್ಯತ್ವಂ ಸಂಸಾಧ್ಯ ಶ್ರೌತ-ಪದಮಹಿಮ್ನಾ ಇಯಮೇವ ಶ್ರುತಿಃ ಸಕಲಮಾಧ್ವರಾದ್ಧಾಂತರಹಸ್ಯ ಸಾಧಿಕೇತ್ಯಾಹ – **ಶ್ರಾವಯಂತೀತಿ** ॥ ದ್ವಯೋಃ ಜೀವೇಶಯೋರ್ಭಿದಾಮಿತಿ ಸಂಬಂಧಃ । ತಸ್ಯಾಃ ಭಿದಾಯಾಃ । ಆದಿಪದೇನೌಪಾಧಿಕತ್ವಾದಿಕಂ ಗೃಹ್ಯತೇ । ಕಪೋಲಕ್ಲೃಪ್ತಂ ಸ್ವಕಪೋಲಕ್ಲೃಪ್ತಮ್ । ಅಶ್ರೌತಂ ಶ್ರುತೌ ಕುತ್ರಾಪ್ಯನುದಿತಮ್ । ಇದಂ ಚ ಧಿಕ್ಕಾರೇ ಹೇತುಗರ್ಭಂ ವಿಶೇಷಣದ್ವಯಮ್ । ಜೀವೇಶ್ವರಭೇದವ್ಯಾವಹಾರಿಕತ್ವಾದೇಃ ಶ್ರುತೌ ಕುತ್ರಾಪ್ಯಪ್ರತಿಪಾದಿತತ್ವಾತ್ ಕೇವಲಂ ಸ್ವಕಪೋಲಕಲ್ಪನಾಮಾತ್ರಸ್ಯ ವಿದುಷಾಂ ಸಂಸದಿ ಉಪನ್ಯಾಸಾನರ್ಹತ್ವಾದಿತಿ ಭಾವಃ । ವಿಶೇಷಣೈಃ ಸಯುಜೌ ಸಖಾಯೌ ಸಮಾನಂ ವೃಕ್ಷಂ ಪರಿಷಸ್ವಜಾತೇ। ಅನಶ್ನನ್ನನ್ಯೋ ಅಭಿಚಾಕಶೀತೀತಿ ವಿಶೇಷಣೈಃ । ಕ್ರಿಯಾಪದಸ್ಯಾಪಿ ವಿಶೇಷ್ಯಗುಣಪ್ರತಿಪಾದಕತ್ವೇನ ವಿಶಿನಷ್ಟಿ ವಿಶೇಷ್ಯಮಿತಿ ವ್ಯುತ್ಪತ್ತ್ಯಾ ವಿಶೇಷಣತ್ವಮಸ್ತ್ಯೇವೇತಿ ಭಾವಃ । ಸಾಯುಜ್ಯಸಖ್ಯಸಾದೃಶ್ಯಸ್ವತಂತ್ರ್ಯಾದಿ ಪ್ರಬೋಧ್ಯೇತಿ ಸಂಬಂಧಃ । ಆದಿಪದೇನ ನಿತ್ಯಮುಕ್ತತ್ವಾದಿಕಂ ಗೃಹ್ಯತೇ । ಅಭಿತಸ್ಸರ್ವತ ಇತಿ ವ್ಯುತ್ಪತ್ತ್ಯಾ ವ್ಯಾಪ್ತ್ಯರ್ಥಕಾಭೀತ್ಯುಪಸರ್ಗೇಣ ವ್ಯಾಪ್ತಿಂ ಚ ಪ್ರಬೋಧ್ಯ ಐಕ್ಯಗಿರಾಂ ಗತಿಂ ಭಗವತಃ ಸಗುಣತ್ವಂ ಚ ಸಂಸಾಧ್ಯ । ಐಕ್ಯವಾಕ್ಯಾನಾಂ ಸ್ಥಾನೈಕ್ಯಮತ್ಯೈಕ್ಯಸಾದೃಶ್ಯೈಕ್ಯವ್ಯಾಪ್ತ್ಯೈಕ್ಯಪರತ್ವಾಖ್ಯಗತೇಃ ಶ್ರೌತಪದಮಹಿಮ್ನಾ ಪ್ರದರ್ಶಿತತ್ವಾತ್ ಸಕಲಜೀವದೇಹಗತತ್ವಸಖಿತ್ವಾದಿ- ಭಗವದ್ಗುಣಾ-ನಾಮಪಿ ಪ್ರದರ್ಶಿತತ್ವಾದಿತಿ ಭಾವಃ॥ ಲಿಟಾ ಸಸ್ವಜಾತೇ ಇತಿ ದೇಹಾಲಿಂಗನಸ್ಯಾತೀತತ್ವ ಪ್ರತಿಪಾದಕಲಿಟಾ । ಮಿಥ್ಯಾಶ್ರುತೇಃ ಮಿಥ್ಯಾತ್ವಪ್ರತಿಪಾದಕಶ್ರುತೇಃ । ಗತಿಂ ಅನಿತ್ಯತ್ವೇನೈವ ಮಿಥ್ಯಾತ್ವೋಕ್ತಿರಿತಿ ಗತಿಮ್ । ಲಟಾ ಅತ್ತಿ ಅನಶ್ನನ್ನಿತಿ ಅಶನಾದೀನಾಂ ವರ್ತಮಾನತ್ವ-ಪ್ರತಿಪಾದಕಲಟಾ । ತದ್ಬಾಧಕಂ ತ್ರಿಕಾಲಾಸತ್ತ್ವರೂಪಮಿಥ್ಯಾತ್ವಬಾಧಕಂ ಮಾಧ್ವರಾದ್ಧಾಂತಂ ಉದ್ದಧೇ । ಉಕ್ತವಿಧಯಾ ಭೇದಜಗತ್‌ಸತ್ಯತ್ವಸಗುಣತ್ವಾನಾಂ ಸಾಧನಾತ್ ಅಭೇದ-ಮಿಥ್ಯಾತ್ವನಿರ್ಗುಣತ್ವಾನಾಂ ಬಾಧನಾಚ್ಚ ಇಯಮೇಕೈವ ಶ್ರುತಿಃ ಸಕಲಮಧ್ವಮತರಹಸ್ಯ ಸಾಧಿಕೇತಿ ಭಾವಃ ॥ ೧೨೬೦–೧೨೬೨ ॥

**ವಿವರಣೆ–** ಹೀಗೆ ಜೀವೇಶ್ವರರೇ ದ್ವಾಸುಪರ್ಣಾ ಶ್ರುತಿ ಪ್ರತಿಪಾದ್ಯರಾದವರು ಎಂದು ತಿಳಿಸಿ ಆ ಶ್ರುತಿಗಳಲ್ಲಿರುವ ಪದದ ಮಹಿಮೆಗಳಿಂದಲೇ ಮಾಧ್ವ ಸಿದ್ಧಾಂತದ ಎಲ್ಲ ಪ್ರಮೇಯಗಳು ಸಿದ್ಧವಾಗುತ್ತವೆ ಎಂದು ಇಲ್ಲಿ ತಿಳಿಸುತ್ತಾರೆ. ಭೇದಕ್ಕೆ ವ್ಯಾವಹಾರಿಕತ್ವ ಅಥವಾ ಔಪಾಧಿಕತ್ವವು ಕೇವಲ ಸ್ವಕಪೋಲಕಲ್ಪಿತವಾದುದು. ಯಾವ ಶ್ರುತಿಯಲ್ಲಿಯೂ ಅದು ಹೇಳಲ್ಪಟ್ಟಿಲ್ಲ. ಸಯುಜೌ, ಸಖಾಯೌ ಮೊದಲಾದ ವಿಶೇಷಣಗಳು ಪರಮಾತ್ಮನಲ್ಲಿ ಸಾದೃಶ್ಯ, ಸಖ್ಯ ಮೊದಲಾದ ಗುಣಗಳನ್ನು ಅನಶ್ನನ್ ಎಂಬ ವಿಶೇಷಣವು ಪರಮಾತ್ಮನ ಸ್ವಾತಂತ್ರ್ಯವನ್ನು ಅಭಿತಃ ಎಂಬ ಉಪಸರ್ಗವು ಪರಮಾತ್ಮನ ವ್ಯಾಪ್ತಿಯನ್ನು ತೋರಿಸುತ್ತದೆ.

ಕ್ರಿಯಾಪದವೂ ಸಹ ಭಗವಂತನ ಒಂದು ಧರ್ಮವನ್ನೇ ಹೇಳುವುದರಿಂದ ಅದೂ ಸಹ ವಿಶೇಷಣ ವಾಚಕಪದವಾಗುತ್ತದೆ. ಅಭಿಚಾಕಶೀತಿ ಎಂಬಲ್ಲಿ ಅಭಿ ಎಂಬ ಉಪಸರ್ಗವು ವ್ಯಾಪ್ತಿಯನ್ನು ಹೇಳುವುದರಿಂದ ಸರ್ವಂ ಸಮಾಪ್ನೋಷಿ ತತೋಸಿ ಸರ್ವಃ ಎಂದು ಗೀತೆಯಲ್ಲಿ ಹೇಳಿದಂತೆ ಐಕ್ಯವಾಕ್ಯಗಳಿಗೆ ಸರ್ವವ್ಯಾಪ್ತಿರೂಪವಾದ ಅರ್ಥದ ಮಾರ್ಗವನ್ನು ಪ್ರದರ್ಶನ ಮಾಡುತ್ತದೆ. ಅದರಂತೆ ಸ್ಥಾನೈಕ್ಯ, ಮತ್ಯೈಕ್ಯ, ಸಾದೃಶ್ಯೈಕ್ಯ, ವ್ಯಾಪ್ತ್ಯೈಕ್ಯ ಮುಂತಾದವುಗಳಲ್ಲಿ ಐಕ್ಯವಾಕ್ಯವು ಅವಕಾಶವನ್ನು ಪಡೆಯುತ್ತದೆ ಎಂದು ಸಯುಜೌ ಮುಂತಾದ ಪದಗಳಿಂದ ತಿಳಿದುಬರುತ್ತದೆ. ಪರಿಷಸ್ವಜಾತೇ ಎಂಬ ಲಿಟ್ ಪ್ರಯೋಗದಿಂದ ದೇಹಾಲಿಂಗನವು ಅತೀತವಾದುದು ಎಂದರೆ ಈ ದೇಹಾಲಿಂಗನವು ಸಂಸಾರಾವಸ್ಥೆಯಲ್ಲಿ ಮಾತ್ರ ಇರುವಂತಹದು ಎಂಬ ಅರ್ಥವು ತಿಳಿಸಲ್ಪಡುತ್ತದೆ. ಅತ್ತಿ ಅನಶ್ನನ್ ಎಂಬ ಕ್ರಿಯಾಪದಗಳು ವರ್ತಮಾನ ಕಾಲದಲ್ಲಿರುವ ಅಶನ ಮತ್ತು ಅನಶನಗಳನ್ನು ಹೇಳುತ್ತದೆ. ಮಿಥ್ಯಾತ್ವವೆಂದರೆ ಕಾಲತ್ರಯದಲ್ಲಿಯೂ ಅಸತ್ತ್ವರೂಪವಾದುದು. ವರ್ತಮಾನಕಾಲದಲ್ಲಿ ಇರುವ ಪದಾರ್ಥಗಳಿಗೆ ಕಾಲತ್ರಯದಲ್ಲಿ ಅಸತ್ತ್ವವು ಇರಲು ಸಾಧ್ಯವಿಲ್ಲವಾದ ಕಾರಣ ಲಟ್ ಪ್ರಯೋಗವು ಮಿಥ್ಯಾತ್ವಕ್ಕೆ ಬಾಧಕವನ್ನು ಸೂಚಿಸುತ್ತದೆ. ಹೀಗೆ ನಮ್ಮ ಸಿದ್ಧಾಂತದ ಎಲ್ಲಾ ಪ್ರಮೇಯಗಳೂ ದ್ವಾಸುಪರ್ಣಾ ಶ್ರುತಿಯ ಪದಮಹಿಮೆಯಿಂದಲೇ ಸಿದ್ಧವಾಗುತ್ತವೆ ಎಂದು ಶ್ರೀಗ್ರಂಥಕಾರರು ಇಲ್ಲಿ ತಿಳಿಸುತ್ತಾರೆ.

**ವ್ಯಾವಹಾರಿಕಭೇದಸ್ಯ ಸಾಧಿಕಾ ಭೇದವಾಗ್ ಯದಿ ।**
**ತವೈಕ್ಯವಾಕ್ಯಂ ಕಿಂ ನ ಸ್ಯಾತ್ ತಾದೃಗರ್ಥಪರಂ ತದಾ ॥ ೧೨೬೩ ॥**

**ಅರ್ಥ–** ಭೇದವಾಕ್= ಭೇದವಾಕ್ಯವು, ಯದಿ= ಒಂದು ಪಕ್ಷ, ವ್ಯಾವಹಾರಿಕಭೇದಸ್ಯ= ವ್ಯಾವಹಾರಿಕ ಭೇದವನ್ನು, ಸಾಧಿಕಾ= ಸಾಧಿಸುವುದಾದರೆ, ತದಾ= ಆಗ, ತವೈಕ್ಯವಾಕ್ಯಂ= ನಿನ್ನ ಐಕ್ಯವಾಕ್ಯವು, ತಾದೃಗರ್ಥಪರಂ= ಅಂತಹ ವ್ಯಾವಹಾರಿಕಾರ್ಥ ಪರವಾಗಿ, ಕಿಂ ನ ಸ್ಯಾತ್= ಏಕೆ ಆಗುವುದಿಲ್ಲ.

**ಅನುವಾದ–** ಭೇದವಾಕ್ಯವು ವ್ಯಾವಹಾರಿಕ ಭೇದವನ್ನು ಪ್ರತಿಪಾದನೆ ಮಾಡುತ್ತದೆ ಎಂದು ಹೇಳಿದರೆ ಐಕ್ಯವಾಕ್ಯವು ಏಕೆ ವ್ಯಾವಹಾರಿಕ ಐಕ್ಯವನ್ನು ಪ್ರತಿಪಾದನೆ ಮಾಡುವುದಿಲ್ಲ?

**ಭಾವವಿಲಾಸಿನೀ–** ಸ್ವಕಪೋಲಕಲ್ಪನಾಮಾತ್ರಮೂಲತ್ವೇನ ಪರಿಹೃತಾಮಪಿ ಶ್ರುತೇ-ರ್ವ್ಯಾವಹಾರಿಕಭೇದಪರತ್ವಶಂಕಾಂ ಐಕ್ಯಪ್ರತಿಬಂದ್ಯಾ ಚ ಪರಿಹರತಿ– **ವ್ಯಾವಹಾರಿಕೇತಿ ॥** ತಾದೃಗರ್ಥಪರಂ ವ್ಯಾವಹಾರಿಕೈಕ್ಯಪರಮ್ ॥ ೧೨೬೩ ॥

**ವಿವರಣೆ–** ವೇದದಲ್ಲಿ ಅಶ್ರುತವಾದ ಸ್ವಕಪೋಲಕಲ್ಪಿತವಾದ ವ್ಯಾವಹಾರಿಕತ್ವವನ್ನು ಭೇದಕ್ಕೆ ಒಪ್ಪಿದರೆ ಐಕ್ಯಕ್ಕೂ ಅದನ್ನೇ ಒಪ್ಪು ಎಂದು ಇಲ್ಲಿ ಪ್ರತಿಬಂದಿಯನ್ನು ಹೇಳುತ್ತಾರೆ.

ನ ಚೇತ್ ಪ್ರತ್ಯಕ್ಷಸಾಹಿತ್ಯಬಾಧಾಭ್ಯಾಂ ಕಿಂ ವಿಧೀಯತಾಂ ।
ಮೃತಸ್ಯ ಪ್ರೇತಕರ್ಮ ಸ್ಯಾಜ್ಜೀವತಸ್ತು ಕಥಂ ವದ ॥ ೧೨೬೪ ॥

**ಅರ್ಥ–** ನ ಚೇತ್= ಐಕ್ಯವೇ ವ್ಯಾವಹಾರಿಕವೆಂದು ಒಪ್ಪದಿದ್ದರೆ, ಪ್ರತ್ಯಕ್ಷಸಾಹಿತ್ಯ-ಬಾಧಾಭ್ಯಾಂ= ಪ್ರತ್ಯಕ್ಷ ಸಾಹಿತ್ಯದಿಂದಲೂ ಮತ್ತು ಪ್ರತ್ಯಕ್ಷ ಬಾಧದಿಂದಲೂ, ಕಿಂ ವಿಧಿ ೀಯತಾಂ= ಏನು ಸಿದ್ಧವಾಗುತ್ತದೆ, ಮೃತಸ್ಯ= ಮೃತನಾದವನಿಗೆ ಮಾತ್ರ, ಪ್ರೇತಕರ್ಮ ಸ್ಯಾತ್= ಪ್ರೇತ ಕರ್ಮವು ಉಂಟಾಗುವುದಷ್ಟೇ, ಜೀವತಸ್ತು= ಬದುಕಿರುವವನಿಗೆ, ಪ್ರೇತಕರ್ಮವು, ಕಥಂ= ಹೇಗೆ ಸಾಧ್ಯ ಎಂದು, ವದ= ಹೇಳು.

**ಅನುವಾದ–** ಐಕ್ಯವಾಕ್ಯಕ್ಕೆ ವ್ಯಾವಹಾರಿಕ ಐಕ್ಯಪರತ್ವವನ್ನು ಹೇಳದಿದ್ದರೆ ಪ್ರತ್ಯಕ್ಷ-ಸಂವಾದದಿಂದಲೂ ಮತ್ತು ಪ್ರತ್ಯಕ್ಷಬಾಧದಿಂದಲೂ ಯಾವ ಪ್ರಯೋಜನವು ಸಿದ್ಧವಾಗುತ್ತದೆ? ಮೃತನಾದವನಿಗೆ ಪ್ರೇತಕರ್ಮವಷ್ಟೇ? ಬದುಕಿರುವವನಿಗೆ ಹೇಗೆ ಪ್ರೇತಕರ್ಮ ಉಂಟಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ಐಕ್ಯಸ್ಯೈವ ವ್ಯಾವಹಾರಿಕತ್ವಮುಚಿತಮಿತ್ಯಾಹ – **ನಚೇದಿತಿ** ॥ ನಚೇತ್ ಐಕ್ಯಸ್ಯೈವ ವ್ಯಾವಹಾರಿಕತ್ವಂ ನಚೇತ್ । ಪ್ರತ್ಯಕ್ಷಸ್ಯ ಸಾಹಿತ್ಯಂ ಬಾಧಶ್ಚ ತಾಭ್ಯಾಂ ಪ್ರತ್ಯಕ್ಷಬಾಧಾದೈಕ್ಯಸ್ಯೈವ ವ್ಯಾವಹಾರಿಕತ್ವಮುಚಿತಂ ನತು ಭೇದಸ್ಯ । ತಸ್ಯ ಶ್ರುತಿಪ್ರತ್ಯಕ್ಷಾಖ್ಯಪ್ರಮಾಣದ್ವಯಸಿದ್ಧಸ್ಯ ಪಾರಮಾರ್ಥ್ಯಮೇವೋಚಿತಮಿತಿ ಭಾವಃ । ತತ್ರ ದೃಷ್ಟಾಂತಮಾಹ – **ಮೃತಸ್ಯೇತಿ** ॥ ಪ್ರತ್ಯಕ್ಷಬಾಧಿತತ್ವಾದೈಕ್ಯಂ ಮೃತಂ ತತ್ಸಾಧಿತತ್ವಾದ್ಭೇದೋ ಜೀವನ್ನಿತಿ ಭಾವಃ ॥ ೧೨೬೪ ॥

**ವಿವರಣೆ–** ಐಕ್ಯಕ್ಕೆ ಪ್ರತ್ಯಕ್ಷದಿಂದಲೂ ಮತ್ತು ಶ್ರುತಿಯಿಂದಲೂ ಬಾಧವಿರುವುದರಿಂದ ಐಕ್ಯವನ್ನೇ ವ್ಯಾವಹಾರಿಕವೆಂದು ಹೇಳುವುದು ಉಚಿತ. ಭೇದವು ಪ್ರತ್ಯಕ್ಷದಿಂದಲೂ ಮತ್ತು ಶ್ರುತಿಯಿಂದಲೂ ಸಿದ್ಧವಾಗುವುದರಿಂದ ಭೇದವು ಪಾರಮಾರ್ಥಿಕವೆಂದೇ ಹೇಳಬೇಕು. ಐಕ್ಯವು ಪ್ರಮಾಣ ವಿರೋಧದಿಂದ ಮೃತವಾಗಿರುವುದರಿಂದ ಬಾಧರೂಪವಾದ ಪ್ರೇತಕರ್ಮವು ಅದಕ್ಕೇ ಕೂಡುತ್ತದೆ. ಭೇದವು ಪ್ರತ್ಯಕ್ಷ ಆಗಮ ಸಹಾಯದಿಂದ ಜೀವಿಸಿರುವುದರಿಂದ ಅದಕ್ಕೆ ಬಾಧರೂಪವಾದ ಪ್ರೇತಕರ್ಮವಿಲ್ಲ ಎಂದು ಅಭಿಪ್ರಾಯ.

ಯದಿ ಬ್ರಹ್ಮಪ್ರಮಾಮಾತ್ರಬಾಧ್ಯೋ ಭೇದಸ್ತತಃ ಪುರಾ ।
ವ್ಯವಹಾರಪದಂ ಪ್ರಾಪ್ತೋ ವ್ಯಾವಹಾರಿಕ ಇಷ್ಯತೇ ॥ ೧೨೬೫ ॥

ತರ್ಹಿ ನಾಹಂ ಸರ್ವವೇತ್ತಾ ನ ಸರ್ವೇಶೋಽಹಮಿತ್ಯಪಿ ।
ಪ್ರತ್ಯಕ್ಷಬಾಧಾದಧುನಾ ಸ್ಯಾದೈಕ್ಯಂ ಪ್ರಾತಿಭಾಸಿಕಂ ॥ ೧೨೬೬ ॥

**ಅರ್ಥ–** ಯದಿ= ಒಂದು ಪಕ್ಷ, ಭೇದಃ= ಭೇದವು, ಬ್ರಹ್ಮಪ್ರಮಾಮಾತ್ರಬಾಧ್ಯಃ= ಕೇವಲ ಬ್ರಹ್ಮ ಪ್ರಮೆಯಿಂದಲೇ ಬಾಧ್ಯವಾಗಿ, ತತಃ ಪುರಾ= ಅದಕ್ಕಿಂತ ಮೊದಲು, ವ್ಯವಹಾರ ಪದಂ

ಪ್ರಾಪ್ತಃ= ವ್ಯವಹಾರ ವಿಷಯತ್ವವನ್ನು ಹೊಂದುವುದಾಗಿ, ವ್ಯಾವಹಾರಿಕ ಇಷ್ಯತೇ= ವ್ಯಾವಹಾರಿಕ ಎಂದು ಹೇಳಲ್ಪಡುವುದಾದರೆ, ತರ್ಹಿ= ಆಗ, ನಾಹಂ ಸರ್ವವೇತ್ತಾ= ನಾನು ಸರ್ವಜ್ಞನಲ್ಲ, ನಾಹಂ ಸರ್ವೇಶಃ= ನಾನು ಸರ್ವೇಶ್ವರನಲ್ಲ, ಇತ್ಯಪಿ= ಎಂಬಂತಹ, ಅಧುನಾ= ಈಗಲೇ ಇರುವ, ಪ್ರತ್ಯಕ್ಷಬಾಧಾತ್= ಪ್ರತ್ಯಕ್ಷಬಾಧದಿಂದ, ಐಕ್ಯಂ= ಐಕ್ಯವು, ಪ್ರಾತಿಭಾಸಿಕಂ ಸ್ಯಾತ್= ಪ್ರಾತಿಭಾಸಿಕವಾಗಲಿ.

**ಅನುವಾದ–** ಭೇದವು ವ್ಯಾವಹಾರಿಕ ಎಂದರೆ ಬ್ರಹ್ಮಪ್ರಮಾ ಮಾತ್ರ ಬಾಧ್ಯವಾದುದು ಎಂದು ಅರ್ಥ. ಅದಕ್ಕಿಂತ ಮೊದಲು ಭೇದವು ವ್ಯವಹಾರಕ್ಕೆ ವಿಷಯವಾಗಿರುತ್ತದೆ ಎಂದು ಒಪ್ಪುವುದಾದರೆ ನಾನು ಸರ್ವಜ್ಞನಲ್ಲ, ನಾನು ಸರ್ವೇಶ್ವರನಲ್ಲ ಎಂಬ ಪ್ರತ್ಯಕ್ಷಬಾಧವು ಈಗಲೇ ಐಕ್ಯಕ್ಕೆ ಇರುವುದರಿಂದ ಐಕ್ಯವು ಪ್ರಾತಿಭಾಸಿಕವಾಗಲಿ.

**ಭಾವವಿಲಾಸಿನೀ–** ನನು ಭೇದಸ್ಯ ಬ್ರಹ್ಮಪ್ರಮಾನ್ಯಾಬಾಧ್ಯತ್ವೇ ಸತಿ ಬ್ರಹ್ಮಪ್ರಮೈಕ ಬಾಧ್ಯತ್ವಾದ್ವ್ಯಾವಹಾರಿಕತ್ವಮುಚಿತಮ್ । ಐಕ್ಯಸ್ಯ ತು ಬ್ರಹ್ಮಪ್ರಮಾಯಾಮಪ್ಯಬಾಧ್ಯಸ್ಯ ಕಥಂ ವ್ಯಾವಹಾರಿಕತ್ವಮಿತಿ ಚೇತ್ । ನ । ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮಿತಿ ಶ್ರುತೌ ಕರ್ತೃತಯಾ ಈಶತಯಾ ಚ ಬ್ರಹ್ಮಣೋ ದರ್ಶನೋಕ್ತೇಃ ಕಾರ್ಯಭೂತಾದನೀಶಾಚ್ಚ ಜೀವಾತ್ ಬ್ರಹ್ಮಣಿ ಭೇದಸ್ಯೈವ ಪ್ರತೀಯಮಾನತ್ವೇನ ತಸ್ಯ ಬಾಧಾಭಾವಾತ್ । ಪ್ರತ್ಯುತ ಏತಾದೃಶದರ್ಶನೇ ಐಕ್ಯಸ್ಯೈವ ಬಾಧದರ್ಶನಾಚ್ಚ । ಪರರೀತ್ಯೈವ ದೂಷಣಾಂತರಂ ಚಾಹ – ಯದೀತಿ ॥ ಅಧುನಾ ಸಂಸಾರದಶಾಯಾಮ್ ॥೧೨೬೫-೧೨೬೬॥

**ವಿವರಣೆ–** ಬ್ರಹ್ಮಪ್ರಮೆಯನ್ನು ಬಿಟ್ಟು ಬೇರೆ ಪ್ರಮೆಯಿಂದ ಬಾಧ್ಯವಾಗದ ಬ್ರಹ್ಮಪ್ರಮೆಯಿಂದಲೇ ಬಾಧ್ಯವಾಗುವ ಭೇದಕ್ಕೆ ವ್ಯಾವಹಾರಿಕತ್ವವು ಉಚಿತವಾದುದು. ಅಭೇದವಾದರೋ ಬ್ರಹ್ಮಪ್ರಮೆಯಿಂದಲೂ ಬಾಧಿತವಾಗುವುದಿಲ್ಲವಾದ್ದರಿಂದ ಅದಕ್ಕೆ ಹೇಗೆ ವ್ಯಾವಹಾರಿಕತ್ವವನ್ನು ಅಂಗೀಕರಿಸುವುದು ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ' ಎಂಬ ಶ್ರುತಿಯು ಪರಮಾತ್ಮನನ್ನು ಕರ್ತೃವೆಂದು, ಈಶ್ವರನೆಂದು ಮತ್ತು ಜೀವನನ್ನು ಕಾರ್ಯನೆಂದು, ಅನೀಶ್ವರನೆಂದು ಹೇಳುವುದರಿಂದ ಜೀವಬ್ರಹ್ಮ ಭೇದವೇ ಪ್ರಾಪ್ತವಾಗುತ್ತದೆ. ಅದಕ್ಕೆ ಬಾಧವಿಲ್ಲ. ಪ್ರತ್ಯುತ ಇಂತಹ ವಿರೋಧಿ ದರ್ಶನದಿಂದ ಐಕ್ಯವೇ ಬಾಧಿತವಾಗುತ್ತದೆ. ಆದ್ದರಿಂದ ಸಂಸಾರ ದಶೆಯಲ್ಲೇ ಬಾಧಿತವಾದ ಐಕ್ಯವೇ ಪ್ರಾತಿಭಾಸಿಕವಾಗಲಿ ಎಂಬ ಆಪಾದನೆಯು ಉಚಿತವಾಗಿದೆ ಎಂದು ಅಭಿಪ್ರಾಯ.

ಬ್ರಹ್ಮಪ್ರಮಾನ್ಯಬಾಧ್ಯಂ ಯತ್ ತದ್ಧಿ ತೇ ಪ್ರಾತಿಭಾಸಿಕಂ ।
ನ ಚೇತ್ ರಜ್ಜುಭುಜಂಗಾದ್ಯಂ ಕಥಂ ಸ್ಯಾತ್ ಪ್ರಾತಿಭಾಸಿಕಮ್॥ ೧೨೬೭ ॥

ರಜ್ಜು ಪ್ರತ್ಯಕ್ಷವದ್ ಭೇದಪ್ರತ್ಯಕ್ಷಂ ಕಿಂ ನ ಬಾಧಕಮ್ ॥ ೧೨೬೮ ॥

**ಅರ್ಥ–** ಯತ್= ಯಾವುದು, ಬ್ರಹ್ಮಪ್ರಮಾನ್ಯಬಾಧ್ಯಂ= ಬ್ರಹ್ಮಪ್ರಮಾ ಭಿನ್ನದಿಂದ ಬಾಧ್ಯವಾಗುತ್ತದೆಯೋ, ತತ್= ಅದೇ, ತೇ= ನಿನಗೆ, ಪ್ರಾತಿಭಾಸಿಕಂ ಹಿ= ಪ್ರಾತಿಭಾಸಿಕವಷ್ಟೇ, ನ ಚೇತ್= ಇಲ್ಲದಿದ್ದರೆ, ರಜ್ಜುಭುಜಂಗಾದ್ಯಂ= ರಜ್ಜು ಸರ್ಪಾದಿಯು, ಕಥಂ= ಹೇಗೆ, ಪ್ರಾತಿಭಾಸಿಕಂ ಸ್ಯಾತ್= ಪ್ರಾತಿಭಾಸಿಕವಾಗುತ್ತದೆ, ರಜ್ಜು ಪ್ರತ್ಯಕ್ಷವತ್= ರಜ್ಜು ಪ್ರತ್ಯಕ್ಷದಂತೆ, ಭೇದಪ್ರತ್ಯಕ್ಷಂ= ಭೇದಪ್ರತ್ಯಕ್ಷವೂ ಸಹ, ಬಾಧಕಂ ಕಿಂ ನ= ಬಾಧಕವಲ್ಲವೇ?

**ಅನುವಾದ–** ಬ್ರಹ್ಮಪ್ರಮಾಭಿನ್ನದಿಂದ ಯಾವುದು ಬಾಧ್ಯವೋ ಅದು ಪ್ರಾತಿಭಾಸಿಕವಾದುದು ಎಂದು ನಿನ್ನ ಮತ. ಇಲ್ಲದಿದ್ದರೆ ರಜ್ಜು ಸರ್ಪವು ಹೇಗೆ ಪ್ರಾತಿಭಾಸಿಕವಾಗುತ್ತದೆ. ರಜ್ಜು ಪ್ರತ್ಯಕ್ಷದಂತೆ ಭೇದ ಪ್ರತ್ಯಕ್ಷವೂ ಸಹ ಏಕೆ ಬಾಧಕವಾಗುವುದಿಲ್ಲ?

**ಭಾವವಿಲಾಸಿನೀ–** ನನು ಸಂಸಾರದಶಾಯಾಮೇವ ಬಾಧ್ಯತ್ವೇಽಪ್ಯೈಕ್ಯಸ್ಯ ಕುತಃ ಪ್ರಾತಿಭಾಸಿಕತ್ವಮಿತ್ಯತ ಆಹ – **ಬ್ರಹ್ಮಪ್ರಮಾನ್ಯೇತಿ** ॥ ತೇ ಮತೇ । ಏತದೇವ ವಿಪಕ್ಷೇಬಾಧಕಪ್ರದರ್ಶನೇನೋಪಪಾದಯತಿ - **ನಚೇದಿತಿ** ॥ ಭೇದಪ್ರತ್ಯಕ್ಷಸ್ಯಾಬಾಧಕತ್ವಶಂಕಾಮಪಿ ಪ್ರತಿಬಂದ್ಯೈವ ಪರಿಹರತಿ – **ರಜ್ಜ್ವಿತಿ** ॥ ೧೨೬೭-೧೨೬೮ ॥

**ವಿವರಣೆ–** ಸಂಸಾರದೆಶೆಯಲ್ಲಿಯೇ ರಜ್ಜು ಪ್ರತ್ಯಕ್ಷದಿಂದ ರಜ್ಜು ಸರ್ಪಕ್ಕೆ ಬಾಧವು ಬರುವುದರಿಂದ ರಜ್ಜು ಸರ್ಪವನ್ನು ಪ್ರಾತಿಭಾಸಿಕವೆಂದು ಅಂಗೀಕರಿಸುತ್ತಾರೆ. ಅದರಂತೆಯೇ, ಐಕ್ಯ ಶ್ರುತಿಗೂ ಸಹ ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರತ್ಯಕ್ಷದಿಂದ ಸಂಸಾರಾವಸ್ಥೆಯಲ್ಲಿಯೇ ಬಾಧ ಬರುತ್ತದೆ. ಆದ್ದರಿಂದ ಐಕ್ಯವನ್ನು ಪ್ರಾತಿಭಾಸಿಕವೆಂದೇ ಅಂಗೀಕರಿಸಬೇಕು. ರಜ್ಜು ಸರ್ಪಕ್ಕೂ, ಐಕ್ಯಕ್ಕೂ ವ್ಯತ್ಯಾಸವನ್ನು ಮಾಡಲು ಏನೂ ಕಾರಣವಿಲ್ಲ ಎಂದು ಅಭಿಪ್ರಾಯ.

**ಅತೋ ವೃಶ್ಚಿಕತೋ ಭೀತ್ಯಾ ಪಲಾಯನಪರಸ್ಯ ತೇ ।**
**ಮಹೋರಗಬಿಲೇ ಸ್ಥೂಲೇ ಪಾತೋ ಜಾತೋ ವಿಚಾರಯ ।**
**ಯದ್ ಭೇದಸಾಮ್ಯತೋ ಭೀತಸ್ಯಾಸೀದೈಕ್ಯೇಽತಿನೀಚತಾ ॥ ೧೨೬೯ ॥**

**ಅರ್ಥ–** ಅತಃ= ಆದ್ದರಿಂದ, ವೃಶ್ಚಿಕತೋ ಭೀತ್ಯಾ= ಚೇಳಿಗೆ ಹೆದರಿ, ಪಲಾಯನಪರಸ್ಯ ತೇ= ಓಡಿಹೋಗುವ ನಿನಗೆ, ಸ್ಥೂಲೇ= ದೊಡ್ಡದಾದ, ಮಹೋರಗಬಿಲೇ= ದೊಡ್ಡ ಸರ್ಪದ ಬಿಲದಲ್ಲಿ, ಪಾತಃ ಜಾತಃ= ಪಾತವು ಉಂಟಾಯಿತು, ವಿಚಾರಯ= ನೀನೇ ವಿಚಾರ ಮಾಡು, ಯತ್= ಏಕೆಂದರೆ, ಭೇದಸಾಮ್ಯತಃ ಭೀತಸ್ಯ= ಐಕ್ಯಕ್ಕೆ ಭೇದಸಾಮ್ಯವು ಉಂಟಾಗಬಾರದೆಂದು ಹೆದರುವ ನಿನಗೆ, ಐಕ್ಯೇ= ಐಕ್ಯದಲ್ಲಿ, ಅತಿನೀಚತಾ= ಭೇದಕ್ಕಿಂತಲೂ ಬಹಳ ನೀಚತ್ವವು, ಆಸೀತ್= ಉಂಟಾಯಿತು.

**ಅನುವಾದ–** ನಿನ್ನ ವರ್ತನೆಯು ಚೇಳಿಗೆ ಹೆದರಿ ಓಡಿಹೋಗುವವನು ದೊಡ್ಡ ಹಾವಿನ ಮುಖದಲ್ಲಿ ಬಿದ್ದನು ಎಂಬ ಗಾದೆಗೆ ಅನುಗುಣವಾಗಿದೆ. ಏಕೆಂದರೆ ಐಕ್ಯಕ್ಕೆ ಭೇದ

ಸಾಮ್ಯವನ್ನೂ ಅಂಗೀಕರಿಸಲು ಒಪ್ಪದಿದ್ದ ನೀನು ಈಗ ಐಕ್ಯಕ್ಕೆ ಅತಿ ನೀಚವಾದ ಪ್ರಾತಿಭಾಸಿಕತ್ವವನ್ನು ಒಪ್ಪಬೇಕಾಗುತ್ತದೆ.

**ಭಾವವಿಲಾಸಿನೀ–** ಏವಂ ಚ ವೃಶ್ಚಿಕಭಯಾತ್ಪಲಾಯಮಾನಸ್ಯಾಶೀವಿಷಮುಖೇ ನಿಪಾತ ಇತಿ ಲೌಕಿಕಾಭಾಣಕಂ ತ್ವಮೇವಾನುಕರೋಷೀತ್ಯಾಹ – **ಅತ ಇತಿ** ॥ ಭೇದೈಕ್ಯಯೋಃಸಾಮ್ಯಾದ್ವಿತಸ್ಯ ಪರಸ್ಯ ಸ್ವಾಭಿಮತೈಕ್ಯೇ ಪ್ರಾತಿಭಾಸಿಕತ್ವಾಖ್ಯಾತಿನೀಚದಶಾಪ್ರಾಪ್ತೇರಿತ್ಯರ್ಥಃ ॥ ೧೨೬ ॥

**ವಿವರಣೆ–** ಭೇದದಂತೆ ಐಕ್ಯವೂ ವ್ಯಾವಹಾರಿಕವಾಗಲಿ ಎಂದು ನಾವು ಹೇಳಿದರೂ ನಿನಗೆ ಸಹನೆಯಿಲ್ಲ. ಈಗ ಸಂಸಾರಾವಸ್ಥೆಯಲ್ಲೇ ಬಾಧಿತವಾಗುವುದರಿಂದ ಐಕ್ಯಕ್ಕೆ ಪ್ರಾತಿಭಾಸಿಕತ್ವವೇ ಬರಲಿ ಎಂಬ ಆಪತ್ತಿಯನ್ನು ಕೊಡುತ್ತಿದ್ದೇವೆ. ಆದ್ದರಿಂದ ಐಕ್ಯಕ್ಕೆ ಭೇದಕ್ಕಿಂತ ಅತ್ಯಂತ ನೀಚತ್ವವೇ ಉಂಟಾಯಿತು ಎಂದು ಅಭಿಪ್ರಾಯ.

ವ್ಯಾವಹಾರಿಕಮಾನಂ ಹಿ ಪ್ರಾತಿಭಾಸಿಕಮಾನತಃ ।
ಬಲವತ್ ತೇ ಮತೇ ತಸ್ಮಾದೈಕ್ಯಂ ಸ್ಯಾದ್ಧಿ ಬಹಿಷ್ಕೃತಂ ॥ ೧೨೭ ॥

**ಅರ್ಥ–** ವ್ಯಾವಹಾರಿಕಮಾನಂ= ವ್ಯಾವಹಾರಿಕ ವಿಷಯದ ಪ್ರಮಾಣವು, ಪ್ರಾತಿಭಾಸಿಕ ಮಾನತಃ= ಪ್ರಾತಿಭಾಸಿಕ ವಿಷಯ ಪ್ರಮಾಣಕ್ಕಿಂತಲೂ, ತೇ ಮತೇ= ನಿನ್ನ ಮತದಲ್ಲಿ, ಬಲವತ್ ಹಿ= ಬಲಿಷ್ಠವಾದುದಷ್ಟೇ, ತಸ್ಮಾತ್= ಆದ್ದರಿಂದ, ಐಕ್ಯಂ= ಐಕ್ಯವು, ಬಹಿಷ್ಕೃತಂ ಸ್ಯಾದ್ಧಿ= ಬಹಿಷ್ಕೃತವಾಗುತ್ತದೆ.

**ಅನುವಾದ–** ನಿನ್ನ ಮತದಲ್ಲಿ ಪ್ರಾತಿಭಾಸಿಕ ಪ್ರಮಾಣಕ್ಕಿಂತಲೂ ವ್ಯಾವಹಾರಿಕ ವಿಷಯ ಪ್ರಮಾಣವು ಪ್ರಬಲವಾದುದು. ಆದ್ದರಿಂದ ಐಕ್ಯವು ಬಹಿಷ್ಕಾರವನ್ನು ಪಡೆಯುತ್ತದೆ.

**ಭಾವವಿಲಾಸಿನೀ–** ಏವಂಚ ವ್ಯಾವಹಾರಿಕಭೇದಪರಾತ್ ಭೇದಪ್ರಮಾಣಾತ್ ಪ್ರಾತಿಭಾಸಿಕಾರ್ಥಕಂ ತವೈಕ್ಯಪ್ರಮಾಣಮೇವ ದುರ್ಬಲಮಾಸೀದಿತ್ಯಾಹ – **ವ್ಯಾವಹಾರಿಕೇತಿ** ॥ ೧೨೭ ॥

**ವಿವರಣೆ–** ಭೇದವು ವ್ಯಾವಹಾರಿಕ. ಭೇದವನ್ನು ಹೇಳುವ ಪ್ರಮಾಣವು ವ್ಯಾವಹಾರಿಕ ಪ್ರಮಾಣ ಎಂದು ನೀನು ಒಪ್ಪುತ್ತೀಯೆ. ಈಗ ನಾವು ಐಕ್ಯವು ಪ್ರಾತಿಭಾಸಿಕವೆಂದೂ, ಐಕ್ಯವನ್ನು ಹೇಳುವ ಪ್ರಮಾಣವು ಪ್ರಾತಿಭಾಸಿಕ ಪ್ರಮಾಣವೆಂದೂ, ಆದ್ದರಿಂದಲೇ ಅದು ವ್ಯಾವಹಾರಿಕ ವಿಷಯ ಪ್ರಮಾಣಕ್ಕಿಂತಲೂ ದುರ್ಬಲವೆಂದು ಹೇಳಿದ್ದೇವೆ. ಆದ್ದರಿಂದ ಆ ದುರ್ಬಲವಾದ ಐಕ್ಯಪ್ರಮಾಣಕ್ಕೆ ಈಗಲೇ ಬಾಧವುಂಟಾಗಿ ನಿನ್ನ ಐಕ್ಯವು ಶಾಸ್ತ್ರದಿಂದ ಹೊರಗೆ ಹೋಗಲಿ ಎಂದು ಅಭಿಪ್ರಾಯ.

ವ್ಯಾವಹಾರಿಕತಾಯಾಂ ಚ ಬಾಧಾಭಾವೋ ಯದೀಷ್ಯತೇ ।
ಸಿದ್ಧಂ ಸಮೀಹಿತಂ ತರ್ಹಿ ನ ಚೇದತಿವಿಗರ್ಹಿತಂ ॥ ೧೨೮ ॥

**ಅತತ್ತ್ವಾವೇದಕತ್ವಾಪ್ತ್ಯಾ ಯಚ್ಛ್ರುತೇರ್ಮಾನತಾ ಗತಾ ।**
**ಇದಂ ಬೌದ್ಧರಾದ್ಧಾಂತವಾರ್ಧಿಮಧ್ಯಪ್ರವೇಶನಂ ॥ ೧೨೭೨ ॥**

**ಅರ್ಥ–** ಯದಿ= ಒಂದು ಪಕ್ಷ, ವ್ಯಾವಹಾರಿಕತಾಯಾಂ= ವ್ಯಾವಹಾರಿಕತ್ವವೆಂದರೆ, ಬಾಧಾಭಾವಃ= ಬಾಧಾಭಾವವೆಂದು, ಇಷ್ಯತೇ= ಸ್ವೀಕರಿಸಲ್ಪಡುವುದಾದರೆ, ತರ್ಹಿ= ಆಗ, ಸಮೀಹಿತಂ= ನಮ್ಮ ಇಷ್ಟವು, ಸಿದ್ಧಂ= ಸಿದ್ಧವಾಯಿತು, ನ ಚೇತ್= ಬಾಧಾಭಾವವು ಇಲ್ಲ ಎಂದರೆ ಬಾಧವೇ ಇದೆ ಎಂದು ಅಂಗೀಕರಿಸಿದರೆ, ಅತಿವಿಗರ್ಹಿತಂ= ಅತ್ಯಂತ ವಿಗರ್ಹಿತವಾದ ದೋಷವು ಪ್ರಾಪ್ತವಾಯಿತು, ಯತ್= ಏಕೆಂದರೆ, ಶ್ರುತೇಃ= ವೇದಕ್ಕೆ, ಅತತ್ತ್ವಾವೇದಕತ್ವಾಪ್ತ್ಯಾ= ಅತತ್ತ್ವಾವೇದಕತ್ವವು ಬರುವುದರಿಂದ, ಮಾನತಾ= ಪ್ರಾಮಾಣ್ಯವು, ಗತಾ= ಹೊರಟು ಹೋಗುತ್ತದೆ, ಇದಂ ಚ= ವೇದಕ ಪ್ರಾಮಾಣ್ಯಚ್ಯುತಿಯಾದರೂ, ಬೌದ್ಧರಾದ್ಧಾಂತವಾರ್ಧಿಮಧ್ಯಪ್ರವೇಶನಂ= ಬೌದ್ಧ ಸಿದ್ಧಾಂತ ಸಾಗರದ ಮಧ್ಯದಲ್ಲಿ ಮುಳುಗುವುದೇ ಆಗಿದೆ.

**ಅನುವಾದ–** ವ್ಯಾವಹಾರಿಕವೆಂದರೆ ಬಾಧಾಭಾವವೆಂಬ ಅರ್ಥವನ್ನು ಅಂಗೀಕರಿಸಿದರೆ ಆಗ ನಮ್ಮ ಅಭೀಷ್ಟವು ಸಿದ್ಧವಾಗುತ್ತದೆ. ಅದನ್ನು ಬಿಟ್ಟು ವ್ಯಾವಹಾರಿಕವೆಂದರೆ ಬಾಧ್ಯವಾದುದು ಎಂಬ ಅರ್ಥವನ್ನು ಅಂಗೀಕರಿಸಿದರೆ ಅತ್ಯಂತ ವಿಗರ್ಹಿತವಾದ ದೋಷವು ಪ್ರಾಪ್ತವಾಗುತ್ತದೆ. ಅದೇನೆಂದರೆ ವೇದಗಳಿಗೆ ಅತತ್ತ್ವಾವೇದಕತ್ವವು ಉಂಟಾಗುವುದರಿಂದ ವೇದಗಳ ಪ್ರಾಮಾಣ್ಯವೇ ಹೊರಟು ಹೋಗುತ್ತದೆ. ವೇದಪ್ರಾಮಾಣ್ಯ ನಾಶವೆಂದರೆ ಬೌದ್ಧಸಿದ್ಧಾಂತ ಸಾಗರದ ಮಧ್ಯದಲ್ಲಿ ಮುಳುಗಿದಂತೆಯೇ ಸರಿ.

**ಭಾವವಿಲಾಸಿನೀ–** ವ್ಯಾವಹಾರಿಕತ್ವಪಕ್ಷೇ ದೋಷಾಂತರಂ ಚಾಹ – **ವ್ಯಾವಹಾರಿಕತಾಯಾ-ಮಿತಿ** ॥ ನಚೇತ್ ಬಾಧಾಭಾವೋ ನಚೇತ್ ಅತಿವಿಗರ್ಹಿತಂ ತವ ಮತಮಾಸೀದಿತ್ಯರ್ಥಃ ॥ ಕಥಮಿತ್ಯತ ಆಹ – **ಅತತ್ತ್ವೇತಿ** ॥ ಯತ್ ಯಸ್ಮಾತ್ । ಇದಂ ಶ್ರುತೇರಮಾನತ್ವಪ್ರಾಪಣಮ್ ॥ ೧೨೭೧- ೧೨೭೨ ॥

**ವಿವರಣೆ–** ಭೇದವು ವ್ಯಾವಹಾರಿಕ ಎಂದರೆ ಭೇದಕ್ಕೆ ಬಾಧವಿಲ್ಲ ಎಂಬ ಅರ್ಥವನ್ನು ನೀನು ಅಂಗೀಕರಿಸುವುದಾದರೆ ನಮಗೂ ಅದೇ ಇಷ್ಟವಾದುದು. ಭೇದಸತ್ಯತ್ವವು ಸಿದ್ಧವಾಗುತ್ತದೆ. ವ್ಯಾವಹಾರಿಕತ್ವವೆಂದರೆ ಬಾಧ್ಯತ್ವ ಎಂದು ಹೇಳುವುದಾದರೆ ಮಾತ್ರ, ಹಿಂದಿನ ಶ್ಲೋಕದಲ್ಲಿ ಐಕ್ಯವು ಬಾಧಿತವೆಂದು ಉಪಪಾದನೆ ಮಾಡಿರುವುದರಿಂದ ಅಂತಹ ಬಾಧಿತವಾದ ಐಕ್ಯವನ್ನು ಹೇಳುವ ವೇದವು ಅತತ್ತ್ವಾವೇದಕವಾಗುತ್ತದೆ. ಅತತ್ತ್ವಾ-ವೇದಕತ್ವ ಎಂದರೆ ಅದು ಪ್ರಾಮಾಣ್ಯನಾಶವೇ. ವೇದಪ್ರಾಮಾಣ್ಯವನ್ನು ಅಂಗೀಕರಿಸದಿರುವ ಬೌದ್ಧ ಸಿದ್ಧಾಂತದಲ್ಲೇ ಪ್ರವೇಶಿಸಿದಂತಾಯಿತು ಎಂದು ಅಭಿಪ್ರಾಯ.

**ಉಭಯೋರ್ಮಾನತಾಸಿದ್ಧ್ಯೈ ಯೋ ಯತೇತ ಸ ವೈದಿಕಃ ।**
**ಅತೋ ಮುಖ್ಯಾಮುಖ್ಯವೃತ್ತ್ಯಾ ವಯಂ ಗುಪ್ತ್ಯೈ ಯತೇಮಹಿ ।**
**ನ ಚೇದ್ ವೇದಘ್ನ ಏವಾಸೌ ಗವೋರೇಕಘ್ನಗೋಘ್ನವತ್ ॥ ೧೨೭೩ ॥**

**ಅರ್ಥ–** ಯಃ= ಯಾವನು, ಉಭಯೋರ್ಮಾನತಾಸಿದ್ಧ್ಯೈ= ಎರಡು ವಾಕ್ಯಗಳ ಪ್ರಾಮಾಣ್ಯ ರಕ್ಷಣೆಗೂ, ಯತೇತ= ಪ್ರಯತ್ನಿಸುತ್ತಾನೆಯೋ, ಸಃ= ಅವನೇ, ವೈದಿಕಃ= ವೈದಿಕನಾದವನು, ಅತಃ= ಆದ್ದರಿಂದ, ವಯಂ= ನಾವು, ಮುಖ್ಯಾಮುಖ್ಯವೃತ್ತ್ಯಾ= ಮುಖ್ಯವೃತ್ತಿ ಮತ್ತು ಅಮುಖ್ಯವೃತ್ತಿಗಳಿಂದ, ಗುಪ್ತ್ಯೈ= ವಾಕ್ಯದ್ವಯ ಪ್ರಾಮಾಣ್ಯವನ್ನು ಸಂರಕ್ಷಣೆ ಮಾಡಲು, ಯತೇಮಹಿ= ಪ್ರಯತ್ನಿಸುತ್ತೇವೆ, ನ ಚೇತ್= ಇಲ್ಲದಿದ್ದರೆ, ಅಸೌ= ಅಂತಹವನು, ಗವೋಃ= ಎರಡು ಹಸುಗಳಲ್ಲಿ, ಏಕಘ್ನಗೋಘ್ನವತ್= ಒಂದನ್ನು ಕೊಲ್ಲುವ ಗೋಘ್ನನಂತೆ, ವೇದಘ್ನ ಏವ= ಅವನು ವೇದವನ್ನು ಕೊಲ್ಲುವವನೇ ಆಗುತ್ತಾನೆ.

**ಅನುವಾದ– ಯಾವನು ಎರಡು ವಾಕ್ಯಗಳ ಪ್ರಾಮಾಣ್ಯ ರಕ್ಷಣೆಗಾಗಿ ಪ್ರಯತ್ನಪಡುತ್ತಾನೆಯೋ ಅವನೇ ವೈದಿಕನಾದವನು. ನಾವು ಮುಖ್ಯಾಮುಖ್ಯ-ವೃತ್ತಿಗಳನ್ನು ಅವಲಂಬಿಸಿ ಎರಡು ವಾಕ್ಯಗಳ ಪ್ರಾಮಾಣ್ಯ ರಕ್ಷಣೆಗಾಗಿ ಪ್ರಯತ್ನ ಮಾಡುತ್ತೇವೆ. ಇಲ್ಲದಿದ್ದರೆ ಹೋರಾಡುವ ಎರಡು ಹಸುಗಳಲ್ಲಿ ಒಂದನ್ನು ಕೊಂದು ಗೋಹತ್ಯೆಯನ್ನು ಮಾಡುವಂತಹವನಂತೆ ಅವನು ವೇದಘ್ನನೇ ಆಗುತ್ತಾನೆ.**

**ಭಾವವಿಲಾಸಿನೀ– ಉಭಯೋರ್ವೈದಿಕವಾಕ್ಯಯೋಃ। ಗುಪ್ತ್ಯೈ ವಾಕ್ಯದ್ವಯರಕ್ಷಣಾಯ। ನಚೇತ್ ವಾಕ್ಯದ್ವಯರಕ್ಷಕೋ ನಚೇತ್ । ಗವೋಃ ಗೋದ್ವಯಸ್ಯ ಮಧ್ಯೇ ॥ ೧೨೭೩ ॥**

**ವಿವರಣೆ–** ವೇದದಲ್ಲಿ ಯಾವ ವಾಕ್ಯಕ್ಕೂ ಅಪ್ರಾಮಾಣ್ಯವಿಲ್ಲ. ಅದ್ವೈತಿಗಳ ರೀತಿಯಲ್ಲಿ ಭೇದವಾಕ್ಯಗಳಿಗೆ ಬಾಧವನ್ನು ಹೇಳಿದರೆ ಭೇದವಾಕ್ಯಗಳು ಅಪ್ರಮಾಣವೆಂದಾಗುತ್ತದೆ. ಹಾಗೆ ಅಂಗೀಕರಿಸಿದರೆ ಅದು ವೇದವನ್ನು ಕೊಂದಂತೆಯೇ ಸರಿ. ನಾವು ಮಾತ್ರ ಯಾವ ವಾಕ್ಯಕ್ಕೂ ಅಪ್ರಾಮಾಣ್ಯವನ್ನು ಹೇಳದೇ ಒಂದು ವಾಕ್ಯಕ್ಕೆ ಅರ್ಥಾಂತರವನ್ನು ಹೇಳಿ ವಿರೋಧವನ್ನು ಪರಿಹಾರ ಮಾಡಿ ಎರಡೂ ವಾಕ್ಯಗಳ ಪ್ರಾಮಾಣ್ಯವನ್ನು ರಕ್ಷಣೆ ಮಾಡುತ್ತೇವೆ ಎಂದು ಅಭಿಪ್ರಾಯ.

**ಯದ್ಯಮಾನತ್ವಮೇಕಸ್ಯಾ ವಕ್ತುಂ ಯುಕ್ತಂ ಶ್ರುತಾವಪಿ ।**
**ತರ್ಹಿ ಮೀಮಾಂಸಕಾಚಾರ್ಯಾಃ ಪುರ್ಯಾಃ ಕಾರ್ಯಾಸ್ತ್ವಯಾ ಬಹಿಃ ॥**

**ಅರ್ಥ–** ಯದಿ= ಒಂದು ಪಕ್ಷ, ಶ್ರುತಾವಪಿ= ವೇದದಲ್ಲಿಯೂ ಕೂಡ, ಏಕಸ್ಯಾಃ= ಒಂದು ವಾಕ್ಯಕ್ಕೆ, ಅಮಾನತ್ವಂ ವಕ್ತುಂ= ಅಪ್ರಾಮಾಣ್ಯವನ್ನು ಹೇಳುವುದು, ಯುಕ್ತಂ= ಯೋಗ್ಯವಾದರೆ, ತರ್ಹಿ= ಆಗ, ಮೀಮಾಂಸಕಾಚಾರ್ಯಾಃ= ಮೀಮಾಂಸೆಯನ್ನು

ಮಾಡುವ ಗುರುಗಳೆಲ್ಲರೂ, ತ್ವಯಾ= ನಿನ್ನಿಂದ, ಪುರ್ಯಾಃ= ನಗರದಿಂದ, ಬಹಿಃ ಕಾರ್ಯಾಃ= ಹೊರಗೆ ಕಳುಹಿಸಲ್ಪಡಬೇಕಾಗುತ್ತದೆ.

**ಅನುವಾದ–** ಒಂದು ಪಕ್ಷ ವೇದದಲ್ಲಿಯೂ ಸಹ ಒಂದು ವಾಕ್ಯಕ್ಕೆ ಅಪ್ರಾಮಾಣ್ಯವನ್ನು ಹೇಳಬಹುದಾದರೆ ಆಗ ಮೀಮಾಂಸಾ ಉಪದೇಶಕರಾದ ಗುರುಗಳನ್ನೆಲ್ಲಾ ನೀನು ಊರಿನಿಂದ ಹೊರಗೆ ಕಳುಹಿಸಬೇಕಾಗುತ್ತದೆ.

**ಭಾವವಿಲಾಸಿನೀ–** ಶ್ರುತ್ಯೋಃ ಪರಸ್ಪರವಿರೋಧೇ ಏಕಸ್ಯಾ ಅಪ್ರಾಮಾಣ್ಯಂ ವದತೋ ದೋಷಾಂತರಂ ಚಾಹ – ಯದೀತಿ ॥ ತರ್ಹ್ಯವಿರುದ್ಧಾರ್ಥಕಥನರೂಪಮೀಮಾಂಸಾ-ವೈಯರ್ಥ್ಯಮಿತಿ ಭಾವಃ ॥ ೧೨೭೪ ॥

**ವಿವರಣೆ–** ವೇದದಲ್ಲಿ ಎರಡು ವಾಕ್ಯಗಳಿಗೆ ವಿರೋಧವಿಲ್ಲದಿದ್ದಾಗ ಅರ್ಥವನ್ನು ಮಾಡುವುದಕ್ಕೆ ಯಾವ ಕ್ಲೇಶವೂ ಇರುವುದಿಲ್ಲ. ವಿರೋಧವಿದ್ದಾಗ ಮಾತ್ರ ಯಾವ ಅರ್ಥವನ್ನು ಸ್ವೀಕರಿಸಬೇಕು ಎಂಬುದಕ್ಕೆ ವಿಮರ್ಶೆಯನ್ನು ಮಾಡಬೇಕಾಗುತ್ತದೆ. ಅದಕ್ಕಾಗಿಯೇ ಮೀಮಾಂಸಾಶಾಸ್ತ್ರವು ಪ್ರವೃತ್ತವಾಗುತ್ತದೆ. ಆದರೆ ವಿರೋಧವು ಬಂದಾಗ ಒಂದು ವಾಕ್ಯವನ್ನು ಅಪ್ರಮಾಣವೆಂದು ಹೇಳಬಹುದಾದರೆ ಅದು ಸುಲಭವಾದ ಮಾರ್ಗ. ಇನ್ನೊಂದು ವಾಕ್ಯವು ತನ್ನ ಅರ್ಥವನ್ನು ತಾನೇ ಹೇಳುತ್ತದೆ. ಆದ್ದರಿಂದ ಮೀಮಾಂಸೆಯೇ ವ್ಯರ್ಥವಾಗುತ್ತದೆ. ಆಗ ಮೀಮಾಂಸೋಪದೇಶಕರಾದ ಗುರುಗಳಿಗೆ ಯಾವ ಕಾರ್ಯವೂ ಇಲ್ಲ ಎಂದು ಅಪಹಾಸಪೂರ್ವಕವಾಗಿ ಹೇಳುತ್ತಾರೆ.

**ಪೌರುಷೇಯೇಷು ಪುರುಷವಿಪ್ರಲಿಪ್ಸಾದಿಕಾರಣಾತ್ ।**
**ಯುಕ್ತಾ ದ್ವಿವಿಧತಾ ಬುದ್ಧಾದ್ಯುಕ್ತಾವಿವ ನ ಸಾ ಶ್ರುತೌ ॥ ೧೨೭೫ ॥**

**ಅರ್ಥ–** ಪೌರುಷೇಯೇಷು= ಪುರುಷನಿರ್ಮಿತವಾದ ವಾಕ್ಯಗಳಲ್ಲಿ, ಪುರುಷವಿಪ್ರಲಿಪ್ಸಾದಿ ಕಾರಣಾತ್= ಪುರುಷನ ವಿಪ್ರಲಂಭ ಮೊದಲಾದ ಕಾರಣದಿಂದ, ಬುದ್ಧಾದ್ಯುಕ್ತಾವಿವ= ಬುದ್ಧ ಮೊದಲಾದವರ ವಚನದಲ್ಲಿದ್ದಂತೆ, ದ್ವಿವಿಧತಾ= ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯ ಎಂಬ ಎರಡು ಪ್ರಕಾರಗಳು, ಯುಕ್ತಾ= ಯುಕ್ತವಾಗುತ್ತವೆ, ಸಾ= ಅಂತಹ ಎರಡು ಪ್ರಕಾರಗಳು, ಶ್ರುತೌ= ವೇದಗಳಲ್ಲಿ, ನ= ಯುಕ್ತವಾಗುವುದಿಲ್ಲ.

**ಅನುವಾದ–** ಪೌರುಷೇಯ ಗ್ರಂಥಗಳಲ್ಲಿ ಪುರುಷನ ವಿಪ್ರಲಿಪ್ಸಾ ಮಿಥ್ಯಾಜ್ಞಾನ ಅಥವಾ ಕರಣ ಪಾಟವದ ಅಭಾವ ಮೊದಲಾದ ಕಾರಣಗಳಿಂದ ವಾಕ್ಯವು ಪ್ರಮಾಣ ಮತ್ತು ಅಪ್ರಮಾಣವೆಂದು ಎರಡು ಪ್ರಕಾರವಾಗಿ ಇರಬಹುದು. ಆದರೆ ವೇದದಲ್ಲಿ ಮಾತ್ರ ಪ್ರಕಾರದ್ವಯುವು ಯುಕ್ತವಾದುದಲ್ಲ.

**ಭಾವವಿಲಾಸಿನೀ–** ಪುರಾಣಯೋರ್ಮಿಥೋ ವಿರೋಧೇ ಏಕಾಪ್ರಾಮಾಣ್ಯವದಿದಮಪಿ ಕುತೋ ನ ಸ್ಯಾದಿತ್ಯತ ಆಹ – **ಪೌರುಷೇಯೇಷ್ವಿತಿ** ॥ ಆದಿಪದೇನ ಭ್ರಮಪ್ರಮಾದಾದಿಕಂ ಗೃಹ್ಯತೇ । ಸಾ ದ್ವಿವಿಧತಾ ॥ ೧೨೭೫ ॥

**ವಿವರಣೆ–** ಪುರಾಣಗಳಿಗೆ ವಿರೋಧ ಬಂದರೆ ಒಂದು ಪುರಾಣ ವಾಕ್ಯಕ್ಕೆ ಅಪ್ರಾಮಾಣ್ಯವನ್ನು ಹೇಳುವಂತೆ ವೇದವಾಕ್ಯಗಳಲ್ಲಿ ವಿರೋಧ ಬಂದಾಗ, ಒಂದು ವಾಕ್ಯಕ್ಕೆ ಏಕೆ ಅಪ್ರಾಮಾಣ್ಯವನ್ನು ಹೇಳಬಾರದು ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಪೌರುಷೇಯ ಗ್ರಂಥಗಳು ದೋಷ ಸಂಭಾವನೆಯುಳ್ಳವು. ಪುರುಷದೋಷಗಳು ಅವನಿಂದ ರಚಿತವಾದ ವಾಕ್ಯಗಳಲ್ಲಿಯೂ ಬರುತ್ತವೆ. ಆದರೆ ಅಪೌರುಷೇಯವಾದ ವೇದದಲ್ಲಿ ಪುರುಷ ದೋಷಗಳ ಪ್ರಸಕ್ತಿಯೇ ಇಲ್ಲದಿರುವುದರಿಂದ ಮತ್ತು ಪ್ರಾಮಾಣ್ಯ ಸ್ವತತ್ರವನ್ನು ಇಬ್ಬರೂ ಅಂಗೀಕರಿಸಿರುವುದರಿಂದ ಅಂತಹ ದ್ವೈವಿಧ್ಯಕ್ಕೆ ಅವಕಾಶವಿಲ್ಲ ಎಂದು ಅಭಿಪ್ರಾಯ.

**ವಿಪ್ರಲಿಪ್ಸಾ ಪ್ರಮಾದಶ್ಚ ಭ್ರಮಶ್ಚ ಸ್ಯಾದ್ಧಿ ಪುಂಸು ಯತ್ ।**
**ಅಪೌರುಷೇಯವಚನೇ ಮುಖ್ಯಾಮುಖ್ಯಾರ್ಥತೈವ ತತ್ ॥ ೧೨೭೬ ॥**

**ಅರ್ಥ–** ಯತ್= ಯಾವ ಕಾರಣದಿಂದ, ವಿಪ್ರಲಿಪ್ಸಾ= ವಂಚನೆ, ಪ್ರಮಾದ= ವಿಸ್ಮೃತಿ, ಭ್ರಮಶ್ಚ= ಮತ್ತು ವಿಪರೀತ ಜ್ಞಾನ ಇವು, ಪುಂಸು= ಪುರುಷರಲ್ಲಿಯೇ, ಸ್ಯಾದ್ಧಿ= ಇರುತ್ತವೆಯೋ, ಆ ಕಾರಣದಿಂದ (ಪೌರುಷೇಯ ವಾಕ್ಯವು ಅಪ್ರಮಾಣವಾಗಬಹುದು), ತತ್= ಪುರುಷನಿಲ್ಲದಿರುವುದರಿಂದ, ಅಪೌರುಷೇಯವಚನೇ= ಅಪೌರುಷೇಯ ವಚನವಾದ ವೇದದಲ್ಲಿ, ಮುಖ್ಯಾಮುಖ್ಯಾರ್ಥತೈವ= ಮುಖ್ಯವೃತ್ತಿ ಮತ್ತು ಅಮುಖ್ಯ-ವೃತ್ತಿಗಳನ್ನೇ ಅವಲಂಬಿಸಬೇಕು.

**ಅನುವಾದ–** ವಿಪ್ರಲಂಬ, ವಿಸ್ಮೃತಿ, ಭ್ರಾಂತಿ ಮೊದಲಾದ ದೋಷಗಳು ಪುರುಷರಲ್ಲಿಯೇ ಸಂಭಾವಿತವಾದುದರಿಂದ ಪೌರುಷೇಯ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಹೇಳಬಹುದು. ಆದರೆ ಅಪೌರುಷೇಯವಾದ ವೇದದಲ್ಲಿ ಪುರುಷ ದೋಷದಿಂದ ಉಂಟಾದ ದೋಷದ ಪ್ರಸಕ್ತಿಯೇ ಇಲ್ಲದಿರುವುದರಿಂದ ಮುಖ್ಯಾಮುಖ್ಯವೃತ್ತಿಗಳನ್ನೇ ಅವಲಂಬಿಸಿಯೇ ವಿರೋಧವನ್ನು ಪರಿಹಾರ ಮಾಡಬೇಕು.

**ಭಾವವಿಲಾಸಿನೀ–** ತದೇವೋಪಪಾದಯತಿ ॥ **ವಿಪ್ರಲಿಪ್ಸೇತಿ** ॥ ಯತ್ ಯಸ್ಮಾತ್ । ತತ್ ಪುರುಷಾಭಾವಾತ್ ॥ ೧೨೭೬ ॥

**ಕಿಂಚ ತ್ವಚ್ಛ್ರುತಿಬಾಧಾತ್ ಸಾ ವ್ಯಾವಹಾರಿಕವಾಗ್ ಭವೇತ್ ।**
**ವ್ಯಾವಹಾರಿಕವಾಕ್ ಚೇತ್ ಸಾ ತ್ವಚ್ಛ್ರುತಿಃ ಸ್ಯಾತ್ ತವ ಶ್ರುತಿಃ ॥ ೧೨೭೭ ॥**

**ಅರ್ಥ–** ಕಿಂಚ= ಮತ್ತು, ಸಾ= ಆ ಭೇದವಾಕ್ಯವು, ತ್ವಚ್ಛ್ರುತಿಬಾಧಾತ್= ನಿನ್ನ ಐಕ್ಯಶ್ರುತಿಯಿಂದ ಬಾಧಿತವಾದರೆ, ವ್ಯಾವಹಾರಿಕವಾಕ್= ವ್ಯಾವಹಾರಿಕ ಭೇದವಿಷಯಕ ವಚನವಾಗಿ, ಭವೇತ್= ಆಗುತ್ತದೆ, ಸಾ= ಭೇದ ಶ್ರುತಿಯು, ವ್ಯಾವಹಾರಿಕ್ ಚೇತ್= ವ್ಯಾವಹಾರಿಕ ವಾಕ್ಯವೆಂದಾದರೆ, ತ್ವಚ್ಛ್ರುತಿಃ= ನಿನ್ನ ಶ್ರುತಿಯು, ತವ ಶ್ರುತಿಃ ಸ್ಯಾತ್= ನಿನ್ನ ಐಕ್ಯಶ್ರುತಿಯಾಗುತ್ತದೆ.

**ಅನುವಾದ–** ಮತ್ತು ನಿನ್ನ ಐಕ್ಯಶ್ರುತಿಯಿಂದ ಬಾಧಬಂದರೆ ಭೇದವಾಕ್ಯವು ವ್ಯಾವಹಾರಿಕ ಭೇದಪರವಾಗುತ್ತದೆ. ಭೇದವಾಕ್ಯವು ವ್ಯಾವಹಾರಿಕ ವಿಷಯವೆಂದಾದರೆ ನಿನ್ನ ಶ್ರುತಿಯು ಐಕ್ಯವನ್ನು ಪ್ರತಿಪಾದಿಸುತ್ತದೆ.

**ಭಾವವಿಲಾಸಿನೀ–** ಐಕ್ಯಶ್ರುತಿಬಾಧಾತ್ ಭೇದಶ್ರುತೇರ್ಬಾಧಿತಾರ್ಥತ್ವಮಿತಿ ಚೇತ್ ತರ್ಹ್ಯನ್ಯೋನ್ಯಾಶ್ರಯ ಇತ್ಯಾಹ – **ಕಿಂಚೇತಿ** ॥ ಸಾ ಭೇದಶ್ರುತಿಃ । ಸಾ ವ್ಯಾವಹಾರಿಕವಾಕ್ ಬಾಧಿತಾರ್ಥಕವಾಕ್ ಚೇತ್ । ತತ್‌ಶ್ರುತಿಃ ತ್ವದಭಿಮತಾ ಶ್ರುತಿಃ ತವ ಶ್ರುತಿಃ ತವಾಪೇಕ್ಷಿತೈಕ್ಯ ಶ್ರುತಿಃ । ಪ್ರಾಬಲ್ಯೇನ ಬಾಧಕತ್ವಸಿದ್ಧೌ ಭೇದಶ್ರುತೇರ್ವ್ಯಾವಹಾರಿಕಾರ್ಥಪರತ್ವಸಿದ್ಧಿಃ । ತತ್ ಸಿದ್ಧೌ ಚ ತತ್ಪ್ರಾವೇದಕತಯಾ ಐಕ್ಯಶ್ರುತೇಸ್ತತೋಽಪಿ ಪ್ರಬಲತಯಾ ಬಾಧಕತ್ವಸಿದ್ಧಿರಿತ್ಯನ್ಯೋನ್ಯಾಶ್ರಯ ಇತಿ ಭಾವಃ ॥ ೧೨೭೭ ॥

**ವಿವರಣೆ–** ಐಕ್ಯಶ್ರುತಿಯಿಂದ ಬಾಧವು ಉಂಟಾದರೆ ಭೇದವಾಕ್ಯವು ವ್ಯಾವಹಾರಿಕ ಭೇದಪರವೆಂದು ಸಿದ್ಧವಾಗುತ್ತದೆ. ಭೇದವಾಕ್ಯವು ವ್ಯಾವಹಾರಿಕ ಭೇದ ಪರವೆಂದು ಸಿದ್ಧವಾದರೆ ಐಕ್ಯಶ್ರುತಿಗೆ ಬಾಧಕವಿಲ್ಲದಿರುವುದರಿಂದ ಐಕ್ಯಶ್ರುತಿಯಿಂದ ಐಕ್ಯವು ಸಿದ್ಧವಾಗುತ್ತದೆ. ಹೀಗೆ ಐಕ್ಯವು ಸಿದ್ಧವಾದರೆ ಭೇದಶ್ರುತಿಗೆ ಬಾಧ ಸಿದ್ಧಿ. ಭೇದಶ್ರುತಿಗೆ ಬಾಧವು ಸಿದ್ಧವಾದರೆ ಐಕ್ಯಶ್ರುತಿಯಿಂದ ಐಕ್ಯಸಿದ್ಧಿ ಎಂದು ಅನ್ಯೋನ್ಯಾಶ್ರಯವು ಬರುತ್ತದೆ ಎಂದು ಅಭಿಪ್ರಾಯ.

**ವ್ಯಾವಹಾರಿಕತಾ ಚೇಯಂ ನ ಯುಕ್ತಾ ಯಾ ತ್ವಯೋದಿತಾ ॥ ೧೨೭೮ ॥**

**ಅರ್ಥ–** ತ್ವಯೋದಿತಾ= ನಿನ್ನಿಂದ ಹೇಳಲ್ಪಟ್ಟ, ಯಾ ವ್ಯಾವಹಾರಿಕತಾ= ಯಾವ ವ್ಯಾವಹಾರಿಕತ್ವವಿದೆಯೋ, ಇಯಂ= ಅಂತಹ ಈ ವ್ಯಾವಹಾರಿಕತ್ವವು, ನ ಯುಕ್ತಾ= ಯುಕ್ತವಾದುದಲ್ಲ.

**ಅನುವಾದ–** ಆದ್ದರಿಂದ ನೀನು ಹೇಳಿದ ಬಾಧ್ಯತ್ವರೂಪವಾದ ವ್ಯಾವಹಾರಿಕತ್ವವು ಅಯುಕ್ತವಾದುದು.

**ಭಾವವಿಲಾಸಿನೀ–** ವ್ಯಾವಹಾರಿಕತಾಮೇವ ವಿಕಲ್ಪ್ಯ ದೂಷಯತಿ– **ವ್ಯಾವಹಾರಿಕತೇತಿ** ॥೧೨೭೮॥

**ಬ್ರಹ್ಮಜ್ಞಾನೇತರಜ್ಞಾನಾಬಾಧ್ಯತ್ವೇ ಸತಿ ತದ್ಧಿಯಾ ।**
**ಯದ್ ಬಾಧ್ಯಂ ತಸ್ಯ ಭಾವೋ ಹಿ ವ್ಯಾವಹಾರಿಕತಾ ತವ ॥ ೧೨೭೯ ॥**

**ಅರ್ಥ–** ಬ್ರಹ್ಮಜ್ಞಾನೇತರಜ್ಞಾನಾಬಾಧ್ಯತ್ವೇ ಸತಿ= ಬ್ರಹ್ಮಜ್ಞಾನ ಇತರ ಜ್ಞಾನದಿಂದ ಅಬಾಧ್ಯವಾಗದೇ, ತದ್ಧಿಯಾ= ಬ್ರಹ್ಮಜ್ಞಾನದಿಂದ, ಯದ್ಬಾಧ್ಯಂ= ಯಾವುದು ಬಾಧ್ಯವಾಗುತ್ತದೆಯೋ, ತಸ್ಯ ಭಾವಃ= ಆ ವಸ್ತುವಿನ ಧರ್ಮವು, ತವ= ನಿನ್ನ ರೀತಿಯಲ್ಲಿ ವ್ಯಾವಹಾರಿಕತಾ ಹಿ= ವ್ಯಾವಹಾರಿಕತ್ವವಷ್ಟೇ.

**ಅನುವಾದ–** 'ಬ್ರಹ್ಮಜ್ಞಾನ ಇತರ ಜ್ಞಾನ ಅಬಾಧ್ಯತ್ವೇ ಸತಿ ಬ್ರಹ್ಮಜ್ಞಾನ ಬಾಧ್ಯತ್ವಂ' ಎಂಬುದು ನಿನಗೆ ವ್ಯಾವಹಾರಿಕದ ಲಕ್ಷಣವಷ್ಟೇ.

**ಭಾವವಿಲಾಸಿನೀ–** ತದ್ಧಿಯಾ ಬ್ರಹ್ಮಜ್ಞಾನೇನ ॥ ೧೨೭೯ ॥

**ಯತೋ ಸತ್ತ್ವಾಸ್ಥಿರತ್ವಾದಿ ಬ್ರಹ್ಮಣಃ ಪ್ರಮಯೈವ ಹಿ ।**
**ಬ್ರಹ್ಮಣ್ಯಾರೋಪಿತಂ ಬಾಧ್ಯಂ ತಚ್ಚ ತೇ ಪ್ರಾತಿಭಾಸಿಕಂ ॥ ೧೨೮೦ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಬ್ರಹ್ಮಣ್ಯಾರೋಪಿತಂ= ಬ್ರಹ್ಮನಲ್ಲಿ ಆರೋಪಿತವಾದ, ಅಸತ್ತ್ವಾ ಅಸ್ಥಿರತ್ವಾದಿ= ಅಸತ್ತ್ವ ಮತ್ತು ಕ್ಷಣಿಕತ್ವಾದಿಗಳು, ಬ್ರಹ್ಮಣಃ ಪ್ರಮಯೈವ= ಬ್ರಹ್ಮನ ಸತ್ಯತ್ವ ನಿತ್ಯತ್ವ ಪ್ರಮೆಯಿಂದಲೇ ಬಾಧ್ಯವಾಗುತ್ತದೆಯೋ, ತಚ್ಚ= ಆ ಅಸತ್ತ್ವ ಮತ್ತು ಅಸ್ಥಿರತ್ವಗಳಾದರೂ, ತೇ= ನಿನಗೆ, ಪ್ರಾತಿಭಾಸಿಕಂ= ಪ್ರಾತಿಭಾಸಿಕ-ವಾಗಿದೆಯೋ (ಆದ್ದರಿಂದ ನೀನು ಹೇಳಿರುವ ಲಕ್ಷಣವು ಸರಿಯಲ್ಲ).

**ಅನುವಾದ–** ಬ್ರಹ್ಮನಲ್ಲಿ ಆರೋಪಿತವಾದ ಅಸತ್ಯತ್ವ ಮತ್ತು ಅಸ್ಥಿರತ್ವವು ಬ್ರಹ್ಮನ ಸತ್ಯತ್ವ ಮತ್ತು ಬ್ರಹ್ಮನ ನಿತ್ಯತ್ವ ಪ್ರಮೆಯಿಂದಲೇ ಬಾಧಿತವಾಗುತ್ತವೆ. ಅದನ್ನಾದರೂ ನೀನು ಪ್ರಾತಿಭಾಸಿಕವೆಂದು ಅಂಗೀಕರಿಸಿದ್ದೀಯೆ.

**ಭಾವವಿಲಾಸಿನೀ–** ಅಸತ್ತ್ವಾಸ್ಥಿರತ್ವಾದಿಕಂ ತೇ ಮತೇ ॥ ೧೨೮೦ ॥

**ವಿವರಣೆ–** ಹೀಗೆ ಲಕ್ಷಣವನ್ನು ಹೇಳಿದರೆ ಈ ಲಕ್ಷಣಕ್ಕೆ ಪ್ರಾತಿಭಾಸಿಕದಲ್ಲಿ ಅತಿವ್ಯಾಪ್ತಿಯು ಬರುತ್ತದೆ. ಹೇಗೆಂದರೆ ಬ್ರಹ್ಮನಲ್ಲಿ ಆರೋಪಿತವಾದ ಅಸತ್ಯತ್ವಾದಿಗಳು ಬ್ರಹ್ಮ ಪ್ರಮೆಯಿಂದಲೇ ಬಾಧ್ಯವಾಗುತ್ತವೆ, ಬ್ರಹ್ಮಪ್ರಮಾಭಿನ್ನದಿಂದ ಬಾಧ್ಯವಾಗುವುದಿಲ್ಲ. ಆದ್ದರಿಂದ ಬ್ರಹ್ಮಜ್ಞಾನೇತರಜ್ಞಾನ ಅಬಾಧ್ಯತ್ವವು ಬ್ರಹ್ಮಜ್ಞಾನಬಾಧ್ಯತ್ವವು ಬರುವುದರಿಂದ ಪ್ರಾತಿಭಾಸಿಕವಾದ ಆ ವಸ್ತುಗಳಲ್ಲಿ ವ್ಯಾವಹಾರಿಕ ಲಕ್ಷಣಕ್ಕೆ ಅತಿವ್ಯಾಪ್ತಿಯು ಬರುತ್ತದೆ.

**ಪ್ರಮಾಪದಪ್ರವೇಶೇಪಿ ನೋಕ್ತದೋಷಪ್ರತಿಕ್ರಿಯಾ ।**
**ಪ್ರಮಾ ಯಥಾರ್ಥಧೀರೇವಂ ನೋಚೇದ್ ವ್ಯರ್ಥಂ ವಿಶೇಷಣಂ ॥೧೨೮೧॥**

ಶುಕ್ತಿ ತನ ಲೇಖವ ನಿತ್ಯವಾದದಲ್ಲ.

**ಅರ್ಥ–** ಪ್ರಮಾಪದಪ್ರವೇಶೇಽಪಿ= ಪ್ರಮಾಪದವನ್ನು ಪ್ರವೇಶ ಮಾಡಿಸಿದರೂ, ಉಕ್ತದೋಷ ಪ್ರತಿಕ್ರಿಯಾ= ಹೇಳಿದ ದೋಷಕ್ಕೆ ಪರಿಹಾರವು, ನ= ಇರುವುದಿಲ್ಲ, ಪ್ರಮಾ= ಪ್ರಮೆಯೆಂದರೆ, ಯಥಾರ್ಥಧೀಃ= ಯಥಾರ್ಥ ಜ್ಞಾನವಷ್ಟೇ, ನೋಚೇತ್= ಇಲ್ಲದಿದ್ದರೆ, ವಿಶೇಷಣಂ= ವಿಶೇಷಣವು, ವ್ಯರ್ಥಂ= ವ್ಯರ್ಥವಾಗುತ್ತದೆ.

**ಅನುವಾದ–** ಜ್ಞಾನಪದ ಸ್ಥಾನದಲ್ಲಿ ಪ್ರಮಾ ಪದವನ್ನು ಸೇರಿಸಿ 'ಬ್ರಹ್ಮಪ್ರಮೇತರ ಪ್ರಮಾ ಅಬಾಧ್ಯತ್ವೇ ಸತಿ ಬ್ರಹ್ಮಪ್ರಮಾ ಬಾಧ್ಯತ್ವಂ' ಎಂಬ ಲಕ್ಷಣವನ್ನು ಹೇಳಿದರೂ ಹಿಂದೆ ಹೇಳಿದ ದೋಷಕ್ಕೆ ಪರಿಹಾರವಿಲ್ಲ. ಯಥಾರ್ಥ ಜ್ಞಾನವೇ ಪ್ರಮೆಯಾದ್ದರಿಂದ ಬ್ರಹ್ಮನ ಸತ್ಯತ್ವ ಜ್ಞಾನವು ಮತ್ತು ನಿತ್ಯತ್ವ ಜ್ಞಾನವು ಪ್ರಮೆಯಾಗಿದೆ. ಹಾಗೆ ಅಂಗೀಕರಿಸದಿದ್ದರೆ ಬ್ರಹ್ಮಪ್ರಮೇತರ ಪ್ರಮಾ ಅಬಾಧ್ಯತ್ವ ರೂಪ ವಿಶೇಷಣವು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ಪ್ರಮಾಪದಪ್ರವೇಶೇ ಜ್ಞಾನಪದಸ್ಥಾನೇ ಪ್ರಮಾಪದಪ್ರವೇಶ ಇತ್ಯರ್ಥಃ। ಉಕ್ತದೋಷಃ ಬ್ರಹ್ಮಣ್ಯಾರೋಹಿತಾಸತ್ತ್ವಾದಾವತಿವ್ಯಾಪ್ತಿಃ। ತಸ್ಯ ಪ್ರತಿಕ್ರಿಯಾ ಪರಿಹಾರಃ। ನನು ವೇದಾಂತಜನ್ಯಬ್ರಹ್ಮಜ್ಞಾನಮೇವ ಪ್ರಮಾ। ಇದಂ ತು ಜ್ಞಾನಂ ನ ಪ್ರಮಾ। ಅತೋ ನೋಕ್ತ-ದೋಷ ಇತ್ಯತ ಆಹ – **ಪ್ರಮೇತಿ** ॥ ನೋ ಚೇತ್ ಯಥಾರ್ಥಜ್ಞಾನಂ ಪ್ರಮಾ ನೋಚೇತ್। ನಿರ್ವಿಕಲ್ಪಕಜ್ಞಾನಮೇವ ಪ್ರಮಾ ಚೇದಿತ್ಯರ್ಥಃ। ಬ್ರಹ್ಮಪ್ರಮೇತರಶುಕ್ತಿಪ್ರಮಯಾಽಬಾಧ್ಯೇ ಸರ್ವಬಾಧಕತಯಾಂಽಗೀಕೃತಚರಮಪ್ರಮಯಾ ಚಾಬಾಧ್ಯೇ ಶುಕ್ತಿರಜತಾದಾವತಿವ್ಯಾಪ್ತಿ-ಪರಿಹಾರಾಯ ಹಿ ತದ್ವಿಶೇಷಣವ್। ಶುಕ್ತಿಜ್ಞಾನಾದೇರಪ್ರಮಾತ್ವೇ ತಸ್ಯಾಪಿ ಬ್ರಹ್ಮಪ್ರಮಾನ್ಯಪ್ರಮಯಾಽಬಾಧ್ಯತ್ವಸ್ಯೈವ ಸತ್ತ್ವೇನಾತಿವ್ಯಾಪ್ತಿಪರಿಹಾರಕತ್ವಾಯೋಗಾತ್ ವ್ಯರ್ಥಂ ವಿಶೇಷಣಮ್। ಮಧ್ಯೇ ಪ್ರಮಾಪದಸ್ಯ ಪರಿತ್ಯಾಗೇ ಬ್ರಹ್ಮಪ್ರಮಾನ್ಯೇನ ಮುದ್ಗರಾದಿನಾ ಬಾಧ್ಯೇ ಘಟಾದಾವವ್ಯಾಪ್ತಿಃ। ನನು ಚಾಭಾವಮಾತ್ರಂ ನ ಬಾಧಃ ಕಿಂ ತ್ವತ್ಯಂತಾಭಾವ ಏವೇತಿ ಚೇನ್ನ। ತಸ್ಯಾಪಿ ಸ್ವತಃಸಿದ್ಧತ್ವೇನ ಪ್ರಮಾಪ್ರಯೋಜ್ಯತ್ವಾಯೋಗಾತ್। ತದುಲ್ಲೇಖಸ್ಯ ಚ ತವ ಮತೇ ನಿಷ್ಪ್ರಕಾರಕಪ್ರಮಾಯಾ ಅಸಂಭವಾತ್। ನಚ ಪುನಃಪ್ರಮಾನುತ್ಪಾದೋ ಬಾಧಃ। ಜೀವನ್ಮುಕ್ತಾನಾಮಪಿ ಭಿಕ್ಷಾಟನಾದಿಭ್ರಮದರ್ಶನೇನ ಪುನರಸಂಭವಾತ್। ಶುಕ್ತಿಜ್ಞಾನಸ್ಯಾ-ಪ್ರಮಾತ್ವೇ ಬಾಧ್ಯಬಾಧಕಭಾವಸ್ಯೈವಾಯೋಗೇನ ಬ್ರಹ್ಮಪ್ರಮಾನ್ಯಾಬಾಧ್ಯತ್ವಸ್ಯ ಶುಕ್ತಿರಜತಾ-ದಾವಪಿ ಸತ್ತ್ವೇನ ಪುನರ್ವಿಶೇಷಣವೈಯರ್ಥ್ಯಂ ನಿರ್ವಿಕಲ್ಪಕಜ್ಞಾನಸ್ಯ ಬಾಧಕತ್ವಾಯೋಗೇನಾ-ಸಂಭವಶ್ಚೇತ್ಯಪಿ ದ್ರಷ್ಟವ್ಯಮ್ ॥ ೧೨೮೧ ॥

**ವಿವರಣೆ–** ಪ್ರಮೆ ಎಂದರೆ ಯಥಾರ್ಥ ಜ್ಞಾನ. ಬ್ರಹ್ಮನಿತ್ಯಂ, ಬ್ರಹ್ಮಸತ್ಯಂ ಎಂಬುದು ಯಥಾರ್ಥ ಜ್ಞಾನವಾಗಿರುವುದರಿಂದ ಪ್ರಮೆಯಾಗಿದೆ. ಈ ಜ್ಞಾನದಿಂದ ಬ್ರಹ್ಮ ಅಸತ್ಯಂ, ಬ್ರಹ್ಮ ಅನಿತ್ಯಂ ಎಂಬ ಜ್ಞಾನವು ಬಾಧಿತವಾಗುವುದರಿಂದ ಅಸತ್ಯತ್ವ ಮತ್ತು ಅನಿತ್ಯತ್ವಗಳಿಗೆ ಬ್ರಹ್ಮಪ್ರಮೇತರ ಪ್ರಮಾ ಅಬಾಧ್ಯತ್ವವು ಬರುತ್ತದೆ. ಆದ್ದರಿಂದ ಪ್ರಾತಿಭಾಸಿಕವಾದ ಈ

ವಸ್ತುಗಳಲ್ಲಿ ಅತಿವ್ಯಾಪ್ತಿಯು ಬರುತ್ತದೆ. ಬ್ರಹ್ಮಪ್ರಮಾ ಎಂದರೆ ಬ್ರಹ್ಮನಿತ್ಯಂ ಮುಂತಾದ ಜ್ಞಾನವಲ್ಲ, ಕೊನೆಯಲ್ಲಿ ಉಂಟಾಗುವ ನಿಷ್ಪ್ರಕಾರಕ ಜ್ಞಾನವೇ ಬ್ರಹ್ಮಪ್ರಮಾ ಎಂದು ಹೇಳಿದರೆ ಆಗ ಬ್ರಹ್ಮಪ್ರಮೇತರ ಪ್ರಮಾ ಅಬಾಧ್ಯತ್ವರೂಪವಾದ ವಿಶೇಷಣವು ವ್ಯರ್ಥವಾಗುತ್ತದೆ. ಕೇವಲ ಬ್ರಹ್ಮಪ್ರಮಾ ಬಾಧ್ಯತ್ವಂ ಎಂಬುದೇ ಲಕ್ಷಣವೆಂದು ಹೇಳಿದರೆ ಶುಕ್ತಿರಜತದಲ್ಲಿ ಬ್ರಹ್ಮಪ್ರಮಾಬಾಧ್ಯತ್ವವು ಬರುತ್ತದೆ. ಏಕೆಂದರೆ ಆ ಚರಮ ಪ್ರಮೆಯನ್ನು ಸರ್ವಬಾಧಕವೆಂದು ನೀನು ಅಂಗೀಕರಿಸಿದ್ದೀಯೇ. ಪ್ರಾತಿಭಾಸಿಕದಲ್ಲಿ ಬಂದ ಅತಿವ್ಯಾಪ್ತಿಯನ್ನು ಪರಿಹರಿಸುವುದಕ್ಕೋಸ್ಕರ ನೀನು ಬ್ರಹ್ಮಪ್ರಮಾನ್ಯ ಪ್ರಮಾ ಅಬಾಧ್ಯತ್ವೇ ಸತಿ ಎಂದು ವಿಶೇಷಣವನ್ನು ಕೊಡಬೇಕು. ಆದರೆ ಹಾಗೆ ವಿಶೇಷಣವನ್ನು ಕೊಟ್ಟಿದುದರಿಂದ ಅತಿವ್ಯಾಪ್ತಿಯು ಪರಿಹಾರವಾಗುವುದಿಲ್ಲ. ಏಕೆಂದರೆ ನೇದಂ ರಜತಂ ಎಂಬ ಬಾಧಕ ಜ್ಞಾನವು ಬ್ರಹ್ಮಪ್ರಮಾ ಭಿನ್ನವಾದರೂ ಅದು ನಿರ್ವಿಕಲ್ಪ- ವಾಗದಿರುವುದರಿಂದ ಅದಕ್ಕೆ ಪ್ರಮಾತ್ವವೇ ಇಲ್ಲ. ಆದ್ದರಿಂದ ಬ್ರಹ್ಮಪ್ರಮಾಭಿನ್ನ ಪ್ರಮೆಯಿಂದ ಅಬಾಧ್ಯತ್ವವು ಶುಕ್ತಿ ರಜತಕ್ಕೆ ಬರುತ್ತದೆ.

ಈ ಅತಿ ವ್ಯಾಪ್ತಿಯನ್ನು ಪರಿಹಾರ ಮಾಡುವುದಕ್ಕೋಸ್ಕರ ಬ್ರಹ್ಮಪ್ರಮಾ, ನ್ಯಪ್ರಮಾ ಅಬಾಧ್ಯತ್ವೇ ಸತಿ ಬ್ರಹ್ಮಪ್ರಮಾ ಬಾಧ್ಯತ್ವಂ ಎಂದು ಹೇಳಿದರೂ ಹಿಂದೆ ಹೇಳಿದ ಅತಿವ್ಯಾಪ್ತಿ ದೋಷವು ಪರಿಹಾರವಾಗುವುದಿಲ್ಲ. ಏಕೆಂದರೆ ಹಿಂದೆ ಹೇಳಿದ ಅಸತ್ಯತ್ವ ಮತ್ತು ಅನಿತ್ಯತ್ವಗಳಲ್ಲಿ ಅತಿವ್ಯಾಪ್ತಿಯು ಬಂದೇ ಬರುತ್ತದೆ. ಬ್ರಹ್ಮ ಅಸತ್ಯಂ ಮೊದಲಾದ ಜ್ಞಾನವು ಪ್ರಮೆಯೇ ಅಲ್ಲ, ಚರಮನಿಷ್ಪ್ರಕಾರಕಜ್ಞಾನವೇ ಪ್ರಮೆ ಎಂದು ಹೇಳಿದರೆ ಆಗಲೂ ದೋಷವು ಪರಿಹಾರವಾಗುವುದಿಲ್ಲ. ಕೇವಲ ಬ್ರಹ್ಮಪ್ರಮಾ ಬಾಧ್ಯತ್ವಂ ಎಂದು ಹೇಳಿದರೆ ಶುಕ್ತಿರಜತದಲ್ಲಿ ಅತಿವ್ಯಾಪ್ತಿಯು ಬರುವುದರಿಂದ, ಆ ಅತಿವ್ಯಾಪ್ತಿಯ ಪರಿಹಾರಕ್ಕಾಗಿ ಬ್ರಹ್ಮಪ್ರಮೇತರಪ್ರಮಾ ಅಬಾಧ್ಯತ್ವಂ ಎಂದು ಹೇಳಿದ್ದೀಯೆ. ಈಗ ಶುಕ್ತಿ ಜ್ಞಾನವು ಪ್ರಮೆಯಲ್ಲ ಎಂದು ಹೇಳಿದರೆ ಬ್ರಹ್ಮ ಪ್ರಮೇತರ ಪ್ರಮಾಬಾಧ್ಯತ್ವವು ಶುಕ್ತಿರಜತದಲ್ಲಿ ಬರುವುದಿಲ್ಲವಾದ್ದರಿಂದ ಅಬಾಧ್ಯತ್ವರೂಪವಾದ ವಿಶೇಷಣ ದಳವು ಶುಕ್ತಿ ರಜತದಲ್ಲಿ ಬಂದೇ ಬರುತ್ತದೆ. ಆದ್ದರಿಂದ ಅತಿವ್ಯಾಪ್ತಿಯು ಪರಿಹಾರವಾಗುವುದಿಲ್ಲ. ಮಧ್ಯದಲ್ಲಿ ಇರುವ ಪ್ರಮಾ ಪದವನ್ನು ತೆಗೆದರೆ, ಎಂದರೆ 'ಬ್ರಹ್ಮಪ್ರಮಾ ಅನ್ಯೇನ ಅಬಾಧ್ಯತ್ವವೇ ಸತಿ ಬ್ರಹ್ಮಪ್ರಮಾ ಬಾಧ್ಯತ್ವಂ' ಎಂದು ಹೇಳಿದರೆ ಮುದ್ಗರ ಪ್ರಹಾರದಿಂದ ನಷ್ಟವಾಗುವ ಘಟದಲ್ಲಿ ಬ್ರಹ್ಮಜ್ಞಾನೇತರ ಮುದ್ಗರಾದಿ ಬಾಧ್ಯತ್ವವೇ ಬರುವುದರಿಂದ ಅವ್ಯಾಪ್ತಿಯು ಬರುತ್ತದೆ. ಬಾಧ ಎಂದರೆ ಕೇವಲ ಅಭಾವವಲ್ಲ, ಅತ್ಯಂತಾಭಾವ ರೂಪವಾದುದು. ಮುದ್ಗರ ಪ್ರಹಾರದಿಂದ ಘಟದ ಧ್ವಂಸವಾಗುತ್ತದೆಯೇ ಹೊರತಾಗಿ ನಿತ್ಯವಾದ ಅತ್ಯಂತಾಭಾವ ಉಂಟಾಗುವುದಿಲ್ಲ ಎಂದು ಹೇಳಿ ಅತಿವ್ಯಾಪ್ತಿಯನ್ನು ಪರಿಹಾರ ಮಾಡಿದರೆ, ಆಗ ಲಕ್ಷಣಕ್ಕೆ ಅಸಂಭವವೇ ಬರುತ್ತದೆ. ಏಕೆಂದರೆ ಬ್ರಹ್ಮಪ್ರಮಾ ಬಾಧ್ಯತ್ವ ಎಂಬುದು ವಿಶೇಷ್ಯ ದಳ. ಅದಕ್ಕೆ ಬ್ರಹ್ಮಪ್ರಮಾ

ಪ್ರಯೋಜ್ಯ ಅತ್ಯಂತಾಭಾವ ಎಂದು ಅರ್ಥ. ಅತ್ಯಂತಾಭಾವವು ನಿತ್ಯವಾದುದರಿಂದ ಅದು ಬ್ರಹ್ಮಪ್ರಮೆಯಿಂದ ಪ್ರಯೋಜ್ಯವೇ ಆಗುವುದಿಲ್ಲ. ಆದ್ದರಿಂದ ಅಸಂಭವ ದೋಷವು ಬರುತ್ತದೆ ಮತ್ತು ನಿಷ್ಪ್ರಕಾರಕ ಜ್ಞಾನವು ಬಾಧಕವಾಗಬೇಕಾದರೆ ಅದು ಅತ್ಯಂತಾಭಾವವನ್ನು ಉಲ್ಲೇಖ ಮಾಡಬೇಕಷ್ಟೇ. ನಿನ್ನ ಮತದಲ್ಲಿ ನಿಷ್ಪ್ರಕಾರಕ ಜ್ಞಾನವು ಕೇವಲ ಬ್ರಹ್ಮವಿಷಯಕ. ಅತ್ಯಂತಾಭಾವವನ್ನು ಉಲ್ಲೇಖಿಸುವುದಿಲ್ಲ. ಆದ್ದರಿಂದ ಅದು ಯಾವುದಕ್ಕೂ ಬಾಧಕವೇ ಅಲ್ಲವಾದ್ದರಿಂದಲೂ ಅಸಂಭವವು ಬರುತ್ತದೆ. ಬಾಧ ಎಂದರೆ ಪುನಃ ಪ್ರಮೋತ್ಪತ್ತ್ಯಭಾವ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಚರಮ ಸಾಕ್ಷಾತ್ಕಾರದ ನಂತರ ಜೀವನ್ಮುಕ್ತಿ ಅವಸ್ಥೆಯಲ್ಲಿರುವ ನಿನ್ನ ಯೋಗಿಗಳು ಭಿಕ್ಷಾಟನಾದಿಗಳಲ್ಲಿ ಪ್ರವೃತ್ತಿಯನ್ನು ಮಾಡುತ್ತಾರೆ. ಅವರಿಗೆ ಪ್ರಮೆಯೇ ಉಂಟಾಗದಿದ್ದರೆ ಭಿಕ್ಷಾಟನಾದಿಗಳಲ್ಲಿ ಪ್ರವೃತ್ತಿಯನ್ನು ಮಾಡುವುದು ಹೇಗೆ? ಆದ್ದರಿಂದ ಪುನಃ ಪ್ರಮೆಯ ಉತ್ಪತ್ತಿ ಇದ್ದೇ ಇದೆ. ಆಗ ಪುನಃ ಪುನಃ ಅನುತ್ಪತ್ತಿಯನ್ನು ಬಾಧ ಎಂದು ಹೇಳುವುದಕ್ಕೆ ಆಗುವುದಿಲ್ಲ. ಆದ್ದರಿಂದ ಬಾಧದ ಸ್ವರೂಪವನ್ನೂ ನಿರ್ವಚನ ಮಾಡಲು ಸಾಧ್ಯವಿಲ್ಲವಾದ್ದರಿಂದ ಈ ವ್ಯಾವಹಾರಿಕ ಲಕ್ಷಣಕ್ಕೆ ಅತಿವ್ಯಾಪ್ತಿ ಮತ್ತು ಅಸಂಭವ ದೋಷಗಳು ಬರುತ್ತವೆ ಎಂದು ಅಭಿಪ್ರಾಯ.

ದೇಹಾತ್ಮೈಕ್ಯಂ ನಭೋನ್ನೈಲ್ಯಂ ಪ್ರಾತಿಭಾಸಿಕಮೇವ ತೇ ।
ಬ್ರಹ್ಮಪ್ರಮಾನ್ಯಾಬಾಧ್ಯಂ ಚ ಬಾಧ್ಯಂ ಚರಮತದ್ಧಿಯಾ ॥ ೧೨೮೨ ॥

**ಅರ್ಥ**– ತೇ= ನಿನ್ನ ಮತದಲ್ಲಿ, ದೇಹಾತ್ಮೈಕ್ಯಂ= ದೇಹಾತ್ಮೈಕ್ಯವು, ನಭೋನ್ನೈಲ್ಯಂ= ಮತ್ತು ನಭೋನ್ನೈಲ್ಯವು, ಪ್ರಾತಿಭಾಸಿಕಮೇವ= ಪ್ರಾತಿಭಾಸಿಕವಾದುದೇ ಆಗಿದೆ, ಅದು, ಬ್ರಹ್ಮಪ್ರಮಾನ್ಯಾಬಾಧ್ಯಂ= ಬ್ರಹ್ಮಪ್ರಮಾ ಭಿನ್ನದಿಂದ ಬಾಧ್ಯವಲ್ಲ, ಚರಮತದ್ಧಿಯಾ ಚ= ಮತ್ತು ಚರಮ ಬ್ರಹ್ಮಪ್ರಮೆಯಿಂದ, ಬಾಧ್ಯಂ= ಬಾಧ್ಯವಾಗುತ್ತದೆ.

**ಅನುವಾದ**– ನಿನ್ನ ಮತದಲ್ಲಿ ದೇಹಾತ್ಮೈಕ್ಯ ಮತ್ತು ನಭೋನ್ನೈಲ್ಯಗಳು ಪ್ರಾತಿಭಾಸಿಕವೆಂದು ಅಂಗೀಕೃತವಾಗಿದೆ. ಅವುಗಳಲ್ಲಿ ಬ್ರಹ್ಮಪ್ರಾಮಾನ್ಯಾಬಾಧ್ಯತ್ವವು ಮತ್ತು ಚರಮಪ್ರಮಾ ಬಾಧ್ಯತ್ವವು ಬರುತ್ತದೆ.

**ಭಾವವಿಲಾಸಿನೀ**– ಪರರೀತ್ಯೈವಸ್ಥಲಾಂತರೇ ಅತಿವ್ಯಾಪ್ತಿಮಾಹ – **ದೇಹಾತ್ಮೈಕ್ಯಮಿತಿ** ॥ ತೇ ಮತೇ। ತದ್ಧಿಯಾ ಬ್ರಹ್ಮಧಿಯಾ ॥ ೧೨೮೨ ॥

**ವಿವರಣೆ**– ಆದ್ದರಿಂದ ವ್ಯಾವಹಾರಿಕ ಲಕ್ಷಣಕ್ಕೆ ಪ್ರಾತಿಭಾಸಿಕವಾದ ಈ ಸ್ಥಳಗಳಲ್ಲಿ ಅತಿವ್ಯಾಪ್ತಿಯು ಬರುತ್ತದೆ ಎಂದು ಅಭಿಪ್ರಾಯ.

ನಿಯಮೇನೇತರಜ್ಞಾನಾಬಾಧ್ಯೇ ತದ್ಬಾಧಯೋಗ್ಯತಾ ।
ಕಥಂ ಸ್ಯಾನ್ನ ಹಿ ತತ್ ತಸ್ಯ ಯೋಗ್ಯಂ ಯನ್ನ ಕದಾಚನ ॥ ೧೨೮೩ ॥

ಬ್ರಹ್ಮಪ್ರಮಾನ್ಯಾಬಾಧ್ಯೇ ಸತಿ ತಜ್‌ಜ್ಞಾನಬಾಧ್ಯತಾ ।
ಕಥಮುಕ್ತೇಷ್ವತಿವ್ಯಾಪ್ತಾ ವ್ಯಾವಹಾರಿಕತಾ ವದ ॥ ೧೨೮೪ ॥

**ಅರ್ಥ–** ನಿಯಮೇನ= ನಿಯತವಾಗಿ, ಇತರಜ್ಞಾನ ಅಬಾಧ್ಯೇ= ಬ್ರಹ್ಮಜ್ಞಾನೇತರ ಜ್ಞಾನ ಅಬಾಧ್ಯವಾದ ವಸ್ತುವಿನಲ್ಲಿ, ತದ್ಬಾಧಯೋಗ್ಯತಾ= ಇತರ ಜ್ಞಾನ ಬಾಧ್ಯತ್ವ ಯೋಗ್ಯತ್ವವು, ಕಥಂ ಸ್ಯಾತ್= ಹೇಗೆ ಉಂಟಾಗುತ್ತದೆ, ಯತ್= ಯಾವುದು, ಕದಾಚನ ನ= ಯಾವಾಗಲೂ ಉಂಟಾಗುವುದಿಲ್ಲವೋ, ತತ್= ಅದು, ತಸ್ಯ= ಅದಕ್ಕೆ, ಯೋಗ್ಯಂ ನ ಹಿ= ಯೋಗ್ಯವಾಗುವುದಿಲ್ಲವಷ್ಟೇ, ಉಕ್ತೇಷು ಅತಿವ್ಯಾಪ್ತಾ= ಹಿಂದೆ ಹೇಳಿದಂತೆ ಪ್ರಾತಿಭಾಸಿಕದಲ್ಲಿ ಅತಿವ್ಯಾಪ್ತವಾದ, ಬ್ರಹ್ಮಪ್ರಮಾನ್ಯಾಬಾಧ್ಯೇ ಸತಿ ತಜ್ಞಾನಬಾಧ್ಯತಾ= ಬ್ರಹ್ಮಪ್ರಮ-ಅನ್ಯ ಅಬಾಧ್ಯತ್ವ ವಿಶಿಷ್ಟ ಬ್ರಹ್ಮ ಪ್ರಮಾಬಾಧ್ಯತ್ವ ಎಂಬುದು, ಕಥಂ= ಹೇಗೆ, ವ್ಯಾವಹಾರಿಕತಾ= ವ್ಯಾವಹಾರಿಕ ಲಕ್ಷಣವಾಗುತ್ತದೆಂದು, ವದ= ಹೇಳು.

**ಅನುವಾದ–** ಯಾವುದು ನಿಯತವಾಗಿ ಇತರ ಜ್ಞಾನದಿಂದ ಅಬಾಧ್ಯವಾಗುತ್ತದೆಯೋ ಅದರಲ್ಲಿ ಇತರ ಬಾಧ್ಯತ್ವ ಯೋಗ್ಯತೆಯಾದರೂ ಹೇಗೆ ಬರಬೇಕು? ಯಾವುದರಿಂದ ಯಾವುದು ಎಂದೂ ಉಂಟಾಗುವುದಿಲ್ಲವೋ ಅದು ಅದಕ್ಕೆ ಯೋಗ್ಯವೆಂದು ಹೇಗೆ ಹೇಳುವುದು? ಆದ್ದರಿಂದ ಹಿಂದೆ ಹೇಳಿದ ಪ್ರಾತಿಭಾಸಿಕ ಸ್ಥಳದಲ್ಲಿ ಅತಿವ್ಯಾಪ್ತವಾದ ಬ್ರಹ್ಮಪ್ರಮಾನ್ಯಾಬಾಧ್ಯತ್ವೇ ಸತಿ ಬ್ರಹ್ಮಪ್ರಮಾ ಬಾಧ್ಯತ್ವವು ಹೇಗೆ ವ್ಯಾವಹಾರಿಕ ಲಕ್ಷಣವಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ತದ್ಬಾಧಯೋಗ್ಯತಾ ಇತರಜ್ಞಾನಬಾಧಯೋಗ್ಯತಾ । ಯತ್ ಕದಾಚನ ಕದಾಪಿ ನ ಭವತಿ ತತ್ತಸ್ಯ ಯೋಗ್ಯಂ ನ ಹೀತಿ ಯೋಜನಾ । ಕದಾಪಿ ಫಲನಿಷ್ಪತ್ತ್ಯಭಾವೇ ಯವಾಂಕುರಸ್ಯ ಕಲಮಾಂಕುರಜನಕತ್ವಯೋಗ್ಯತ್ವವತ್ ಯೋಗ್ಯತಾಯಾ ಏವಾಯೋಗಾದಿತಿ ಭಾವಃ ॥ ೧೨೮೩-೧೨೮೪ ॥

**ವಿವರಣೆ–** ಇತರ ಜ್ಞಾನ ಅಬಾಧ್ಯತ್ವೇ ಸತಿ ಬ್ರಹ್ಮಜ್ಞಾನ ಬಾಧ್ಯತ್ವಂ' ಎಂಬ ನಮ್ಮ ಲಕ್ಷಣಕ್ಕೆ ಇತರ ಜ್ಞಾನ ಜನ್ಯಬಾಧಾऽಯೋಗ್ಯತ್ವೇ ಸತಿ ತಜ್ಞಾನ ಬಾಧ್ಯತ್ವಂ' ಎಂದು ಅರ್ಥ. ಆದ್ದರಿಂದ ದೇಹಾತ್ಮೈಕ್ಯ ಮತ್ತು ನಭೋನೈಲ್ಯಗಳಲ್ಲಿ ಬ್ರಹ್ಮಜ್ಞಾನೇತರ ಜ್ಞಾನ ಬಾಧ್ಯತ್ವವು ಇಲ್ಲದಿದ್ದರೂ ಬ್ರಹ್ಮೇತರ ಜ್ಞಾನ ಬಾಧ್ಯತ್ವಯೋಗ್ಯತ್ವವು ಇರುವುದರಿಂದ ಅಲ್ಲಿ ಅತಿವ್ಯಾಪ್ತಿಯು ಬರುವುದಿಲ್ಲ ಎಂದು ಶಂಕಿಸಿದರೆ ಅದಕ್ಕೆ ಇಲ್ಲಿ ಉತ್ತರವನ್ನು ಹೇಳುತ್ತಾರೆ :- ಒಂದು ಕಾರಣದಿಂದ ಒಂದು ಕಾರ್ಯವು ಅನೇಕ ಸ್ಥಳದಲ್ಲಿ ಉಂಟಾಗಿ ಒಂದು ಸ್ಥಳದಲ್ಲಿ ಉಂಟಾಗದಿದ್ದರೆ ಮಾತ್ರ ಅಲ್ಲಿ ಯೋಗ್ಯತೆಯನ್ನು ಕಲ್ಪನೆ ಮಾಡುತ್ತೇವೆ. ಅರಣ್ಯಸ್ಥ ದಂಡದಿಂದ ಘಟವು ಉಂಟಾಗದಿದ್ದರೂ ಬೇರೆಯ ದಂಡಗಳಿಂದ ಘಟವು ಉಂಟಾಗುವುದರಿಂದ, ಅರಣ್ಯಸ್ಥ ದಂಡದಲ್ಲಿ ಘಟಜನಕತ್ವದ ಯೋಗ್ಯತ್ವವನ್ನು ಕಲ್ಪನೆ

ಮಾಡುತ್ತೇವೆ. ಆದರೆ ಇಲ್ಲಿ ದೇಹಾತ್ಮೈಕ್ಯ ಮತ್ತು ನಬೋನ್ಯೆಲ್ಯಗಳು ಬ್ರಹ್ಮಜ್ಞಾನ ಭಿನ್ನ ಜ್ಞಾನದಿಂದ ಎಂದೂ ಬಾಧಿತವಾಗುವುದಿಲ್ಲ. ಆದ್ದರಿಂದ ಅವುಗಳಲ್ಲಿ ಬ್ರಹ್ಮಜ್ಞಾನೇತರಜ್ಞಾನ ಬಾಧ್ಯತ್ವ ಯೋಗ್ಯತ್ವವನ್ನು ಕಲ್ಪನೆ ಮಾಡಲು ಸಾಧ್ಯವಿಲ್ಲ. ವಿಶೇಷಣವೂ ವಿಶೇಷ್ಯವೂ ಬರುವುದರಿಂದ ಅಲ್ಲಿ ಅತಿವ್ಯಾಪ್ತಿಯು ಬಂದೇ ಬರುತ್ತದೆ. ಆದ್ದರಿಂದ ಇದು ಲಕ್ಷಣವಾಗುವುದಿಲ್ಲ ಎಂದು ಅಭಿಪ್ರಾಯ.

ಕಿಂಚ ಬ್ರಹ್ಮಪ್ರಮಾನ್ಯಾಬಾಧ್ಯತ್ವಮಾತ್ರಂ ನ ಸೋಚಿತಾ ।
ಬ್ರಹ್ಮಣೋ ಬಾಧ್ಯತಾಪತ್ತೇಸ್ತತ್ಪ್ರಮಾಬಾಧ್ಯತಾಪಿ ಚ ॥ ೧೨೮೫ ॥

**ಅರ್ಥ–** ಕಿಂಚ= ಮತ್ತು, ಬ್ರಹ್ಮಪ್ರಮಾನ್ಯಾಬಾಧ್ಯತ್ವಮಾತ್ರಂ= ಬ್ರಹ್ಮಪ್ರಮಾನ್ಯ ಅಬಾಧ್ಯತ್ವ ಮಾತ್ರವೇ, ಸ= ವ್ಯಾವಹಾರಿಕತ್ವರೂಪವಾದುದೆಂದು ಹೇಳಲು, ನ ಉಚಿತಾ= ಯೋಗ್ಯವಲ್ಲ, ಏಕೆಂದರೆ, ಬ್ರಹ್ಮಣಃ= ಬ್ರಹ್ಮನಿಗೆ, ಬಾಧ್ಯತಾಪತ್ತೇಃ= ಬಾಧ್ಯತ್ವವು ಉಂಟಾಗುತ್ತದೆ, ತತ್ಪ್ರಮಾ ಬಾಧ್ಯತಾಪಿ= ಬ್ರಹ್ಮಪ್ರಮಾ ಬಾಧ್ಯತ್ವವು ಕೂಡ ಲಕ್ಷಣವೆಂದು ಹೇಳಲು ಬರುವುದಿಲ್ಲ.

**ಅನುವಾದ–** ಬ್ರಹ್ಮಪ್ರಮಾನ್ಯಾಬಾಧ್ಯತ್ವ ರೂಪವಾದ ವಿಶೇಷಣ ದಳವನ್ನೇ ಲಕ್ಷಣ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಬ್ರಹ್ಮನಿಗೂ ಬಾಧ್ಯತ್ವವು ಉಂಟಾಗುತ್ತದೆ. ಬ್ರಹ್ಮಪ್ರಮಾ ಬಾಧ್ಯತ್ವ ರೂಪವಾದ ವಿಶೇಷ್ಯ ದಳಕ್ಕೂ ಲಕ್ಷಣತ್ವವನ್ನು ಹೇಳಲು ಬರುವುದಿಲ್ಲ.

**ವಿವರಣೆ–** ಬ್ರಹ್ಮನು ಸರ್ವಥಾ ಅಬಾಧ್ಯ. ಆದ್ದರಿಂದ ಬ್ರಹ್ಮ ಪ್ರಮೇತರದಿಂದಲೂ ಅಬಾಧ್ಯನೇ ಆಗುತ್ತಾನೆ. ಆದ್ದರಿಂದ ವ್ಯಾವಹಾರಿಕ ಲಕ್ಷಣಕ್ಕೆ ಬ್ರಹ್ಮನಲ್ಲಿ ಅತಿವ್ಯಾಪ್ತಿ ಬರುವುದರಿಂದ ಕೇವಲ ವಿಶೇಷಣ ದಳವನ್ನೇ ಲಕ್ಷಣವೆಂದು ಹೇಳಬಾರದು. ಇನ್ನು ವಿಶೇಷ್ಯ ದಳವನ್ನೇ ಲಕ್ಷಣವೆಂದು ಹೇಳಿದರೆ ಮುಂದಿನ ಶ್ಲೋಕದಲ್ಲಿ ಅದಕ್ಕೆ ದೋಷವನ್ನು ಹೇಳುತ್ತಾರೆ.

ಬಾಧಶ್ಚ ನಾಸ್ತಿತಾಬೋಧೋ ನಾಪ್ರತೀತಿಸ್ತು ಕೇವಲಾ ।
ಅಸತೋ ಬಾಧ್ಯತಾಪತ್ತೇರಪಸಿದ್ಧಾಂತತೋಽಪಿ ಚ ॥ ೧೨೮೬ ॥

**ಅರ್ಥ–** ಬಾಧಶ್ಚ= ಬಾಧವೆಂದರೆ, ನಾಸ್ತಿತಾಬೋಧಃ= ನಾಸ್ತಿತ್ವ ಪ್ರಕಾರಕ ಜ್ಞಾನ, ಕೇವಲ ಅಪ್ರತೀತಿಸ್ತು= ಕೇವಲ ಪ್ರತೀತ್ಯಭಾವವು, ನ= ಅಲ್ಲ, ಏಕೆಂದರೆ, ಅಸತಃ ಬಾಧ್ಯತಾಪತ್ತೇಃ= ಅಸತ್ತಿಗೂ ಬಾಧ್ಯತ್ವವು ಉಂಟಾಗುತ್ತದೆ, ಚ= ಮತ್ತು, ಅಪಸಿದ್ಧಾಂತತೋ ಪಿ= ಅಪಸಿದ್ಧಾಂತವೂ ಬರುತ್ತದೆ.

**ಅನುವಾದ–** ಬಾಧವೆಂದರೆ ನಾಸ್ತಿತ್ವ ಪ್ರಕಾರಕ ಜ್ಞಾನ. ಕೇವಲ ಪ್ರತೀತ್ಯಭಾವವು ಅಲ್ಲ. ಕೇವಲ ಪ್ರತೀತ್ಯಭಾವವನ್ನೇ ಬಾಧವೆಂದು ಹೇಳಿದರೆ ಅಸತ್ತಾದ ಶಶವಿಷಾಣಕ್ಕೂ

ಬಾಧ್ಯತ್ವವು ಉಂಟಾಗುತ್ತದೆ ಮತ್ತು ಅಸತ್‌ಗೆ ಬಾಧವಿಲ್ಲ ಎಂಬ ನಿನ್ನ ಪೂರ್ವಾಚಾರ್ಯರ ವಚನಕ್ಕೂ ಬಾಧ ಬರುವುದರಿಂದ ಅಪಸಿದ್ಧಾಂತ ದೋಷವು ಬರುತ್ತದೆ.

**ಭಾವವಿಲಾಸಿನೀ–** ಉಕ್ತೇಷು ದೇಹಾತ್ಮೈಕ್ಯಾದಿಷು ವ್ಯಾವಹಾರಿಕತ್ವಲಕ್ಷಣಸ್ಯಾತಿವ್ಯಾಪ್ತಿಮ-ಸಂಭವಂ ಸೂಚಯನ್ ಭೇದಾದೇರಬಾಧ್ಯತಾಂ ಸ್ಥಿರೀಕರೋತಿ ॥ **ಕಿಂಚೇತಿ** ॥ ಸಾ ವ್ಯಾವಹಾರಿಕತಾ ॥ ೧೨೮೬ ॥

**ವಿವರಣೆ–** ಕೇವಲ ಪ್ರತೀತ್ಯಭಾವವನ್ನು ಬಾಧವೆಂದು ಹೇಳಿದರೆ ಅಸತ್ತಿಗೆ ಪ್ರತೀತಿ ಇಲ್ಲ ಎಂದು ನೀನು ಅಂಗೀಕರಿಸುವುದರಿಂದ ಅಂತಹ ಬಾಧವು ಅಸತ್ತಿಗೂ ಬರುವುದರಿಂದ ಬಾಧ್ಯದ ಲಕ್ಷಣವು ಅಸತ್ತಿನಲ್ಲೂ ಬರುತ್ತದೆ. ನೀನು ಅಸತ್ತಿಗೆ ಬಾಧವನ್ನು ಒಪ್ಪುವುದಿಲ್ಲ. ಮತ್ತು ನಿನ್ನ ಪೂರ್ವಾಚಾರ್ಯರು ಅಸತ್ತಿಗೆ ಬಾಧ್ಯವನ್ನು ಒಪ್ಪುವುದಿಲ್ಲ. ಆದ್ದರಿಂದ ಅಪಸಿದ್ಧಾಂತವು ಬರುತ್ತದೆ ಎಂದು ಅಭಿಪ್ರಾಯ.

ಸರ್ವಪ್ರಕಾರಶೂನ್ಯೈವ ನಿರ್ವಿಕಲ್ಪಕಧೀಸ್ತವ ।
ಬ್ರಹ್ಮಪ್ರಮಾ ತಯಾ ಕಸ್ಯ ಸಾಧನಂ ಬಾಧನಂ ವದ ॥ ೧೨೮೭ ॥

**ಅರ್ಥ–** ತವ= ನಿನಗೆ ಅಭಿಮತವಾದ, ಬ್ರಹ್ಮಪ್ರಮಾ= ಬ್ರಹ್ಮಪ್ರಮೆಯು, ನಿರ್ವಿಕಲ್ಪಕಧೀಃ= ನಿರ್ವಿಕಲ್ಪಕ ಜ್ಞಾನವಾದ್ದರಿಂದ, ಸರ್ವಪ್ರಕಾರಶೂನ್ಯೈವ= ಯಾವ ಪ್ರಕಾರವನ್ನೂ ಉಲ್ಲೇಖಿಸುವುದಿಲ್ಲವಷ್ಟೇ, ತಯಾ= ಅಂತಹ ಬ್ರಹ್ಮಪ್ರಮೆಯಿಂದ, ಕಸ್ಯ= ಯಾವುದರ, ಸಾಧನಂ= ಸಾಧನೆಯಾಗಲೀ, ಕಸ್ಯ= ಯಾವುದರ, ಬಾಧನಂ= ಬಾಧನೆಯಾಗಲೀ ಹೇಗೆ ಉಂಟಾಗುತ್ತದೆ ಎಂದು, ವದ= ಹೇಳು.

**ಅನುವಾದ–** ಮತ್ತು ನಿನಗೆ ಅಭಿಮತವಾದ ಬ್ರಹ್ಮಪ್ರಮೆಯು ನಿರ್ವಿಕಲ್ಪಕ ಜ್ಞಾನ. ಅದು ಯಾವ ಪ್ರಕಾರವನ್ನೂ ಉಲ್ಲೇಖಮಾಡುವುದಿಲ್ಲ. ಅಂತಹ ಜ್ಞಾನವು ಯಾವುದಕ್ಕೆ ಸಾಧಕವಾಗುತ್ತದೆ, ಅಥವಾ ಯಾವುದಕ್ಕೆ ಬಾಧಕವಾಗುತ್ತದೆ ಎಂದು ಹೇಳು.

**ಭಾವವಿಲಾಸಿನೀ–** ನಿರ್ವಿಕಲ್ಪಕಸ್ಯ ಸಾಧಕಬಾಧಕತ್ವಾಯೋಗಾದಿತಿ ಭಾವಃ ॥ ೧೨೮೭ ॥

**ವಿವರಣೆ–** ಭ್ರಾಂತಿಯಲ್ಲಿ ತೋರಿದ ಪ್ರಕಾರಕ್ಕೆ ವಿರುದ್ಧ ಪ್ರಕಾರವು ತೋರಿದರೆ ಮಾತ್ರ ಅದು ಬಾಧವಾಗುತ್ತದೆ. ನಿರ್ವಿಕಲ್ಪಕ ಜ್ಞಾನವು ನಿಷ್ಪ್ರಕಾರಕವಾದುದರಿಂದ ಅದರಲ್ಲಿ ಯಾವ ಪ್ರಕಾರವೂ ತೋರುವುದಿಲ್ಲ. ಆದ್ದರಿಂದ ಅದು ಯಾವುದಕ್ಕೂ ಬಾಧಕವೂ ಆಗುವುದಿಲ್ಲ ಮತ್ತು ಅದರಂತೆ ಯಾವುದಕ್ಕೂ ಸಾಧಕವೂ ಆಗುವುದಿಲ್ಲ ಎಂದು ಅಭಿಪ್ರಾಯ.

**ಅತೋ ಭೇದಾಖ್ಯರತ್ನಸ್ಯ ಜಗತ್ಕಲ್ಪದ್ರುಮಸ್ಯ ಚ ।**
**ಪಾರಮಾರ್ಥಿಕತಾಪನ್ನಾ ಬಾಧಾಭಾವಾದ್ಧಿ ಸರ್ವದಾ ।**
**ತ್ವದ್ರೀತ್ಯೈವ ನ ಮದ್ರೀತ್ಯಾ ಚಿತ್ರಾ ತೇ ಶಾಸ್ತ್ರಕರ್ತೃತಾ ॥ ೧೨೮೮ ॥**

**ಅರ್ಥ–** ಅತಃ= ಆದ್ದರಿಂದ, ಸರ್ವದಾ= ಯಾವಾಗಲೂ, ಬಾಧಾಭಾವಾತ್= ಬಾಧವಿಲ್ಲದಿರುವುದರಿಂದ, ಭೇದಾಖ್ಯರತ್ನಸ್ಯ= ಭೇದವೆಂಬ ರತ್ನಕ್ಕೂ, ಚ= ಮತ್ತು, ಜಗತ್ಕಲ್ಪದ್ರುಮಸ್ಯ= ಜಗತ್ತೆಂಬ ಕಲ್ಪವೃಕ್ಷಕ್ಕೂ, ತ್ವದ್ರೀತ್ಯೈವ= ನಿನ್ನ ರೀತಿಯಿಂದಲೇ, ಪಾರಮಾರ್ಥಿಕತಾ= ಪಾರಮಾರ್ಥಿಕತ್ವವು, ಆಪನ್ನಾ= ಉಂಟಾಯಿತು, ಮದ್ರೀತ್ಯಾ ನ= ನನ್ನ ರೀತಿಯಿಂದಲ್ಲ, ತೇ ಶಾಸ್ತ್ರಕರ್ತೃತಾ= ನಿನ್ನ ಶಾಸ್ತ್ರರಚನೆಯು, ಚಿತ್ರಾ= ವಿಚಿತ್ರವಾಗಿದೆ.

**ಅನುವಾದ– ಆದ್ದರಿಂದ ಯಾವಾಗಲೂ ಬಾಧವೇ ಇಲ್ಲದಿರುವುದರಿಂದ ಭೇದವೆಂಬ ರತ್ನಕ್ಕೂ ಮತ್ತು ಜಗತ್ತೆಂಬ ಕಲ್ಪವೃಕ್ಷಕ್ಕೂ ನಿನ್ನ ರೀತಿಯಿಂದಲೇ ಪಾರಮಾರ್ಥಿಕತೆ ಉಂಟಾಯಿತು. ನನ್ನ ರೀತಿಯಿಂದಲ್ಲ. ನಿನ್ನ ಶಾಸ್ತ್ರ ರಚನೆಯು ವಿಚಿತ್ರವಾಗಿದೆ.**

**ಭಾವವಿಲಾಸಿನೀ– ಅತಃ ನಿರ್ವಿಕಲ್ಪಕಸ್ಯ ಬಾಧಕತ್ವಾಯೋಗಾತ್ । ತೇ ಸ್ವವಚನವಿರೋಧಮಜಾನತಸ್ತವ ॥ ೧೨೮೭ ॥**

**ವಿವರಣೆ–** ನಿನಗೆ ಅಭಿಮತವಾದ ಬಾಧಜ್ಞಾನವು ನಿಷ್ಪ್ರಕಾರಕವಾದುದು. ನಿಷ್ಪ್ರಕಾರಕವಾದ ಜ್ಞಾನವು ಯಾವುದಕ್ಕೂ ಬಾಧಕವೇ ಅಲ್ಲ. ಆದ್ದರಿಂದ ಬಾಧವೇ ಇಲ್ಲದಿರುವುದರಿಂದ ಜಗತ್ತು ಮತ್ತು ಭೇದವು ಸತ್ಯವೆಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ನಿಷ್ಪ್ರಕಾರಕಧೀರ್ಯಾ ತೇ ಭೇದಾಭೇದಪ್ರಮಾ ನ ಸಾ ।**
**ತತ್ತ್ವಂ ಕಿಲ ತಥಾಪ್ಯೇಕಮತತ್ತ್ವಮಪರಂ ಕಿಲ ॥ ೧೨೮೯ ॥**

**ಅರ್ಥ–** ತೇ = ನಿನ್ನ ಮತೇ = ಮತದಲ್ಲಿ, ಯಾ = ಯಾವ, ನಿಷ್ಪ್ರಕಾರಕ ಧೀಃ = ನಿಷ್ಪ್ರಕಾರಕ ಜ್ಞಾನವು, ಅಸ್ತಿ = ಇದೆಯೋ, ಸಾ = ಅದು, ಭೇದಾಭೇದಪ್ರಮಾ = ಭೇದ ಮತ್ತು ಅಭೇದಗಳ ಯಥಾರ್ಥಜ್ಞಾನವು, ನ = ಅಲ್ಲ. (ಆ ನಿಷ್ಪ್ರಕಾರಕ ಜ್ಞಾನವು ಭೇದದ ಯಥಾರ್ಥಜ್ಞಾನವೂ ಅಲ್ಲ, ಅಭೇದದ ಯಥಾರ್ಥಜ್ಞಾನವೂ ಅಲ್ಲ.) ತಥಾಪಿ = ಹಾಗಿದ್ದರೂ, ತಯೋಃ = ಆ ಭೇದ ಮತ್ತು ಅಭೇದಗಳಲ್ಲಿ, ಏಕಂ = ಒಂದಾದ ಅಭೇದವು, ತತ್ತ್ವಮ್ ಕಿಲ = ತತ್ತ್ವವಾಗಿದೆಯಷ್ಟೇ. ಅಪರಂ = ಮತ್ತೊಂದು ಆದ ಭೇದವು, ಅತತ್ತ್ವಂ ಕಿಲ = ಅತತ್ತ್ವವಾಗಿದೆಯಷ್ಟೆ?

**ಅನುವಾದ–** ನೀನು ಅಂಗೀಕರಿಸುವ ನಿಷ್ಪ್ರಕಾರಕ ಜ್ಞಾನವು ಭೇದ ಪ್ರಮೆಯೂ ಅಲ್ಲ, ಅಭೇದ ಪ್ರಮೆಯೂ ಅಲ್ಲ. ಹೀಗಿರುವಾಗ ಭೇದಾಭೇದಗಳಲ್ಲಿ ಒಂದು ತತ್ತ್ವ, ಇನ್ನೊಂದು ಅತತ್ತ್ವವೆಂದು ಹೇಳುವುದು ಹಾಸ್ಯಾಸ್ಪದವಾಗಿದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಪರಪ್ರಕ್ರಿಯಾಮಪಹಸತಿ – ನಿಷ್ಪ್ರಕಾರಕೇತಿ ॥೧೨೮೯॥

**ವಿವರಣೆ–** ನಿಷ್ಪ್ರಕಾರಕ ಜ್ಞಾನವು ಭೇದವನ್ನಾಗಲೀ ಅಭೇದವನ್ನಾಗಲೀ ವಿಷಯೀಕರಿಸುವುದಿಲ್ಲ. ಹಾಗೆ ವಿಷಯೀಕರಿಸಿದರೆ ಅದು ನಿಷ್ಪ್ರಕಾರಕ ಜ್ಞಾನವೇ ಆಗುವುದಿಲ್ಲ ಎಂದು ಅದ್ವೈತಿಗಳು ಹೇಳುತ್ತಾರೆ. ಆದ್ದರಿಂದ ಅಭೇದವು ನಿಷ್ಪ್ರಕಾರಕ ಜ್ಞಾನಕ್ಕೆ ವಿಷಯವೇ ಅಲ್ಲ. ನಿಷ್ಪ್ರಕಾರಕ ಜ್ಞಾನಕ್ಕೆ ಅಭೇದವು ವಿಷಯವಾಗಿದ್ದರೆ ಅದರಿಂದ ಭೇದವು ಬಾಧಿತವಾಗಿ, ಭೇದವು ಅತತ್ತ್ವ, ಅಭೇದವು ತತ್ತ್ವ ಎಂದು ಸಿದ್ಧವಾಗುತ್ತಿದ್ದಿತು. ಹಾಗಿಲ್ಲದೆ ಭೇದವನ್ನು ಅತತ್ವ ಅಥವಾ ಅಭೇದವನ್ನು ತತ್ತ್ವ ಎಂದು ಹೇಳುವುದು ಅವಿವೇಕತನ ಎಂದು ಪರಿಹಾಸ ಮಾಡುತ್ತಾರೆ.

ಯದಿ ಬಾಧಸ್ತೇನ ನಾಶಸ್ತದಾ ದಂಡಾದಿನಾಶ್ಯತಾ ।
ದೃಷ್ಟಾ ಘಟಾದೌ ಯತ್ ತಸ್ಮಾನ್ನಸ್ಯುಸ್ತೇ ವ್ಯಾವಹಾರಿಕಾಃ ॥ ೧೨೯೦ ॥

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಬಾಧಃ = ಬಾಧವು ಎಂದರೆ, ತೇನ = ಅದರಿಂದ, ನಾಶಃ = ನಾಶವು, ಇತಿ ಅರ್ಥ = ಹೀಗೆ ಅರ್ಥವು ಆದರೆ, ತದಾ = ಆ ಪಕ್ಷದಲ್ಲಿ, ಯತಃ = ಯಾವ ಕಾರಣದಿಂದ, ದಂಡಾದಿನಾಶ್ಯತಾ = ದಂಡಾದಿಗಳಿಂದ ನಾಶವನ್ನು ಹೊಂದುವಿಕೆಯು, ಘಟಾದೌ = ಗಡಿಗೆ ಮೊದಲಾದವುಗಳಲ್ಲಿ, ದೃಷ್ಟಾ = ಕಂಡಿದೆಯೋ, ತಸ್ಮಾತ್ = ಆ ಕಾರಣದಿಂದ, ತೇ = ಆ ಗಡಿಗೆ ಮೊದಲಾದ ವಸ್ತುಗಳು, ವ್ಯವಹಾರಿಕಾಃ = ವ್ಯವಹಾರಿಕಗಳು, ನಸ್ಯುಃ = ಆಗಲಾರವು.

**ಅನುವಾದ–** ಬಾಧ ಎಂದರೆ ಅದರಿಂದ (ಜ್ಞಾನದಿಂದ) ನಾಶ ಎಂದು ಅರ್ಥವನ್ನು ಮಾಡಿದರೆ ಘಟಾದಿಗಳು ದಂಡದಿಂದ ನಾಶ್ಯವಾಗುವುದರಿಂದ ಅವುಗಳಲ್ಲಿ ವ್ಯಾವಹಾರಿಕತ್ವವು ಇರಲಾರದು.

**ಭಾವವಿಲಾಸಿನೀ–** ಪಕ್ಷಾಂತರಮಾಶಂಕ್ಯ ದೂಷಯತಿ ॥ ಯದೀತಿ ॥ ತೇನ ಜ್ಞಾನೇನ । ಆದಿಪದೇನ ಮುದ್ಗರೋ ಗೃಹ್ಯತೇ । ಯತ್ ಯಸ್ಮಾತ್ । ತೇ ಘಟಾದಯಃ ॥ ೧೨೯೦ ॥

**ವಿವರಣೆ–** ವ್ಯಾವಹಾರಿಕತ್ವ ಎಂದರೆ ಜ್ಞಾನಬಾಧ್ಯತ್ವ ಎಂದು ಅದ್ವೈತಿಗಳು ಹೇಳುತ್ತಾರೆ. ಆದ್ದರಿಂದ ಬ್ರಹ್ಮಜ್ಞಾನಬಾಧ್ಯತ್ವ ಎಂದರೆ ಬ್ರಹ್ಮಜ್ಞಾನನಾಶ್ಯತ್ವ ಎಂದು ಅರ್ಥ. ಹೀಗೆ ಹೇಳಿದರೆ ದಂಡಾದಿಗಳಿಂದ ನಾಶ್ಯವಾಗುವ ಘಟದಲ್ಲಿ ಬ್ರಹ್ಮಜ್ಞಾನನಾಶ್ಯತ್ವವು ಬರುವುದಿಲ್ಲವಾದ ಕಾರಣ ವ್ಯಾವಹಾರಿಕ ಲಕ್ಷಣಕ್ಕೆ ಘಟದಲ್ಲಿಯೇ ಅವ್ಯಾಪ್ತಿಯು ಬರುತ್ತದೆ ಎಂದು ಅಭಿಪ್ರಾಯ.

**ಅತೋ ಭೇದಾಖ್ಯರತ್ನಸ್ಯ ಜಗತ್ಕಲ್ಪದ್ರುಮಸ್ಯ ಚ ।**
**ಪಾರಮಾರ್ಥಿಕತಾಪನ್ನಾ ಬಾಧಾಭಾವಾದ್ಧಿ ಸರ್ವದಾ ।**
**ತ್ವದ್ರೀತ್ಯೈವ ನ ಮದ್ರೀತ್ಯಾ ಚಿತ್ರಾ ತೇ ಶಾಸ್ತ್ರಕರ್ತೃತಾ ॥ ೧೨೮೮ ॥**

**ಅರ್ಥ–** ಅತಃ= ಆದ್ದರಿಂದ, ಸರ್ವದಾ= ಯಾವಾಗಲೂ, ಬಾಧಾಭಾವಾತ್= ಬಾಧವಿಲ್ಲದಿರುವುದರಿಂದ, ಭೇದಾಖ್ಯರತ್ನಸ್ಯ= ಭೇದವೆಂಬ ರತ್ನಕ್ಕೂ, ಚ= ಮತ್ತು, ಜಗತ್ಕಲ್ಪದ್ರುಮಸ್ಯ= ಜಗತ್ತೆಂಬ ಕಲ್ಪವೃಕ್ಷಕ್ಕೂ, ತ್ವದ್ರೀತ್ಯೈವ= ನಿನ್ನ ರೀತಿಯಿಂದಲೇ, ಪಾರಮಾರ್ಥಿಕತಾ= ಪಾರಮಾರ್ಥಿಕತ್ವವು, ಆಪನ್ನಾ= ಉಂಟಾಯಿತು, ಮದ್ರೀತ್ಯಾ ನ= ನನ್ನ ರೀತಿಯಿಂದಲ್ಲ, ತೇ ಶಾಸ್ತ್ರಕರ್ತೃತಾ= ನಿನ್ನ ಶಾಸ್ತ್ರರಚನೆಯು, ಚಿತ್ರಾ= ವಿಚಿತ್ರವಾಗಿದೆ.

**ಅನುವಾದ–** ಆದ್ದರಿಂದ ಯಾವಾಗಲೂ ಬಾಧವೇ ಇಲ್ಲದಿರುವುದರಿಂದ ಭೇದವೆಂಬ ರತ್ನಕ್ಕೂ ಮತ್ತು ಜಗತ್ತೆಂಬ ಕಲ್ಪವೃಕ್ಷಕ್ಕೂ ನಿನ್ನ ರೀತಿಯಿಂದಲೇ ಪಾರಮಾರ್ಥಿಕತೆ ಉಂಟಾಯಿತು. ನನ್ನ ರೀತಿಯಿಂದಲ್ಲ. ನಿನ್ನ ಶಾಸ್ತ್ರ ರಚನೆಯು ವಿಚಿತ್ರವಾಗಿದೆ.

**ಭಾವವಿಲಾಸಿನೀ–** ಅತಃ ನಿರ್ವಿಕಲ್ಪಕಸ್ಯ ಬಾಧಕತ್ವಾಯೋಗಾತ್ । ತೇ ಸ್ವವಚನವಿರೋಧಮಜಾನತಸ್ತವ ॥ ೧೨೮೭ ॥

**ವಿವರಣೆ–** ನಿನಗೆ ಅಭಿಮತವಾದ ಬಾಧಜ್ಞಾನವು ನಿಷ್ಪ್ರಕಾರಕವಾದುದು. ನಿಷ್ಪ್ರಕಾರಕವಾದ ಜ್ಞಾನವು ಯಾವುದಕ್ಕೂ ಬಾಧಕವೇ ಅಲ್ಲ. ಆದ್ದರಿಂದ ಬಾಧವೇ ಇಲ್ಲದಿರುವುದರಿಂದ ಜಗತ್ತು ಮತ್ತು ಭೇದವು ಸತ್ಯವೆಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ನಿಷ್ಪ್ರಕಾರಕಧೀರ್ಯಾ ತೇ ಭೇದಾಭೇದಪ್ರಮಾ ನ ಸಾ ।**
**ತತ್ತ್ವಂ ಕಿಲ ತಥಾಪ್ಯೇಕಮತತ್ತ್ವಮಪರಂ ಕಿಲ ॥ ೧೨೮೯ ॥**

**ಅರ್ಥ–** ತೇ = ನಿನ್ನ ಮತೇ = ಮತದಲ್ಲಿ, ಯಾ = ಯಾವ, ನಿಷ್ಪ್ರಕಾರಕ ಧೀಃ = ನಿಷ್ಪ್ರಕಾರಕ ಜ್ಞಾನವು, ಅಸ್ತಿ = ಇದೆಯೋ, ಸಾ = ಅದು, ಭೇದಾಭೇದಪ್ರಮಾ = ಭೇದ ಮತ್ತು ಅಭೇದಗಳ ಯಥಾರ್ಥಜ್ಞಾನವು, ನ = ಅಲ್ಲ. (ಆ ನಿಷ್ಪ್ರಕಾರಕ ಜ್ಞಾನವು ಭೇದದ ಯಥಾರ್ಥಜ್ಞಾನವೂ ಅಲ್ಲ, ಅಭೇದದ ಯಥಾರ್ಥಜ್ಞಾನವೂ ಅಲ್ಲ.) ತಥಾಪಿ = ಹಾಗಿದ್ದರೂ, ತಯೋಃ = ಆ ಭೇದ ಮತ್ತು ಅಭೇದಗಳಲ್ಲಿ, ಏಕಂ = ಒಂದಾದ ಅಭೇದವು, ತತ್ತ್ವಮ್ ಕಿಲ = ತತ್ತ್ವವಾಗಿದೆಯಷ್ಟೇ. ಅಪರಂ = ಮತ್ತೊಂದು ಆದ ಭೇದವು, ಅತತ್ತ್ವಂ ಕಿಲ = ಅತತ್ತ್ವವಾಗಿದೆಯಷ್ಟೆ?

**ಅನುವಾದ–** ನೀನು ಅಂಗೀಕರಿಸುವ ನಿಷ್ಪ್ರಕಾರಕ ಜ್ಞಾನವು ಭೇದ ಪ್ರಮೆಯೂ ಅಲ್ಲ, ಅಭೇದ ಪ್ರಮೆಯೂ ಅಲ್ಲ. ಹೀಗಿರುವಾಗ ಭೇದಾಭೇದಗಳಲ್ಲಿ ಒಂದು ತತ್ತ್ವ, ಇನ್ನೊಂದು ಅತತ್ತ್ವವೆಂದು ಹೇಳುವುದು ಹಾಸ್ಯಾಸ್ಪದವಾಗಿದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಪರಪ್ರಕ್ರಿಯಾಮಪಹಸತಿ – ನಿಷ್ಪ್ರಕಾರಕೇತಿ ॥೧೨೮೯॥

**ವಿವರಣೆ–** ನಿಷ್ಪ್ರಕಾರಕ ಜ್ಞಾನವು ಭೇದವನ್ನಾಗಲೀ ಅಭೇದವನ್ನಾಗಲೀ ವಿಷಯೀಕರಿಸುವುದಿಲ್ಲ. ಹಾಗೆ ವಿಷಯೀಕರಿಸಿದರೆ ಅದು ನಿಷ್ಪ್ರಕಾರಕ ಜ್ಞಾನವೇ ಆಗುವುದಿಲ್ಲ ಎಂದು ಅದ್ವೈತಿಗಳು ಹೇಳುತ್ತಾರೆ. ಆದ್ದರಿಂದ ಅಭೇದವು ನಿಷ್ಪ್ರಕಾರಕ ಜ್ಞಾನಕ್ಕೆ ವಿಷಯವೇ ಅಲ್ಲ. ನಿಷ್ಪ್ರಕಾರಕ ಜ್ಞಾನಕ್ಕೆ ಅಭೇದವು ವಿಷಯವಾಗಿದ್ದರೆ ಅದರಿಂದ ಭೇದವು ಬಾಧಿತವಾಗಿ, ಭೇದವು ಅತತ್ತ್ವ, ಅಭೇದವು ತತ್ತ್ವ ಎಂದು ಸಿದ್ಧವಾಗುತ್ತಿದ್ದಿತು. ಹಾಗಿಲ್ಲದೆ ಭೇದವನ್ನು ಅತತ್ವ ಅಥವಾ ಅಭೇದವನ್ನು ತತ್ತ್ವ ಎಂದು ಹೇಳುವುದು ಅವಿವೇಕತನ ಎಂದು ಪರಿಹಾಸ ಮಾಡುತ್ತಾರೆ.

ಯದಿ ಬಾಧಸ್ತೇನ ನಾಶಸ್ತದಾ ದಂಡಾದಿನಾಶ್ಯತಾ ।
ದೃಷ್ಟಾ ಘಟಾದೌ ಯತ್ ತಸ್ಮಾನ್ನಸ್ಯುಸ್ತೇ ವ್ಯಾವಹಾರಿಕಾಃ ॥ ೧೨೯೦ ॥

**ಅರ್ಥ–** ಯದಿ = ಒಂದು ಪಕ್ಷದಲ್ಲಿ, 'ಬಾಧಃ = ಬಾಧವು ಎಂದರೆ, ತೇನ = ಅದರಿಂದ, ನಾಶಃ = ನಾಶವು, ಇತಿ ಅರ್ಥ = ಹೀಗೆ ಅರ್ಥವು ಆದರೆ, ತದಾ = ಆ ಪಕ್ಷದಲ್ಲಿ, ಯತಃ = ಯಾವ ಕಾರಣದಿಂದ, ದಂಡಾದಿನಾಶ್ಯತಾ = ದಂಡಾದಿಗಳಿಂದ ನಾಶವನ್ನು ಹೊಂದುವಿಕೆಯು, ಘಟಾದೌ = ಗಡಿಗೆ ಮೊದಲಾದವುಗಳಲ್ಲಿ, ದೃಷ್ಟಾ = ಕಂಡಿದೆಯೋ, ತಸ್ಮಾತ್ = ಆ ಕಾರಣದಿಂದ, ತೇ = ಆ ಗಡಿಗೆ ಮೊದಲಾದ ವಸ್ತುಗಳು, ವ್ಯವಹಾರಿಕಾಃ = ವ್ಯವಹಾರಿಕಗಳು, ನಸ್ಯುಃ = ಆಗಲಾರವು.

**ಅನುವಾದ–** ಬಾಧ ಎಂದರೆ ಅದರಿಂದ (ಜ್ಞಾನದಿಂದ) ನಾಶ ಎಂದು ಅರ್ಥವನ್ನು ಮಾಡಿದರೆ ಘಟಾದಿಗಳು ದಂಡದಿಂದ ನಾಶ್ಯವಾಗುವುದರಿಂದ ಅವುಗಳಲ್ಲಿ ವ್ಯಾವಹಾರಿಕತ್ವವು ಇರಲಾರದು.

**ಭಾವವಿಲಾಸಿನೀ–** ಪಕ್ಷಾಂತರಮಾಶಂಕ್ಯ ದೂಷಯತಿ ॥ ಯದೀತಿ ॥ ತೇನ ಜ್ಞಾನೇನ । ಆದಿಪದೇನ ಮುದ್ಗರೋ ಗೃಹ್ಯತೇ । ಯತ್ ಯಸ್ಮಾತ್ । ತೇ ಘಟಾದಯಃ ॥ ೧೨೯೦ ॥

**ವಿವರಣೆ–** ವ್ಯಾವಹಾರಿಕತ್ವ ಎಂದರೆ ಜ್ಞಾನಬಾಧ್ಯತ್ವ ಎಂದು ಅದ್ವೈತಿಗಳು ಹೇಳುತ್ತಾರೆ. ಆದ್ದರಿಂದ ಬ್ರಹ್ಮಜ್ಞಾನಬಾಧ್ಯತ್ವ ಎಂದರೆ ಬ್ರಹ್ಮಜ್ಞಾನನಾಶ್ಯತ್ವ ಎಂದು ಅರ್ಥ. ಹೀಗೆ ಹೇಳಿದರೆ ದಂಡಾದಿಗಳಿಂದ ನಾಶ್ಯವಾಗುವ ಘಟದಲ್ಲಿ ಬ್ರಹ್ಮಜ್ಞಾನನಾಶ್ಯತ್ವವು ಬರುವುದಿಲ್ಲವಾದ ಕಾರಣ ವ್ಯಾವಹಾರಿಕ ಲಕ್ಷಣಕ್ಕೆ ಘಟದಲ್ಲಿಯೇ ಅವ್ಯಾಪ್ತಿಯು ಬರುತ್ತದೆ ಎಂದು ಅಭಿಪ್ರಾಯ.

**ಉಪಾದಾನಾಜ್ಞಾನನಾಶದ್ವಾರಾ ಜ್ಞಾನಂ ಹಿ ನಾಶಕಮ್ ।**
**ಅನಾದೇರಸ್ಯ ಭೇದಸ್ಯ ತನ್ನಸ್ಯಾದ್ ಜ್ಞಾನನಾಶ್ಯತಾ ॥ ೧೨೯೧ ॥**

**ಅರ್ಥ–** ಜ್ಞಾನಂ = ಜ್ಞಾನವು, ಉಪಾದಾನಾಜ್ಞಾನನಾಶದ್ವಾರಾ = ಉಪಾದಾನ = ಉಪಾದಾನ ಕಾರಣವಾದ, ಅಜ್ಞಾನ = ಅಜ್ಞಾನದ, ನಾಶ = ನಾಶದ, ದ್ವಾರಾ = ಮೂಲಕವಾಗಿ, ನಾಶಕಂ = ಅಜ್ಞಾನಕಾರ್ಯಕ್ಕೆ ನಾಶಕವು, ಅಸ್ತಿಹಿ= ಆಗಿದೆಯಷ್ಟೆ, ತತ್ = ಆ ಕಾರಣದಿಂದ, ಅನಾದೇಃ= ಅನಾದಿಯಾದ, ಅಸ್ಯ = ಈ, ಭೇದಸ್ಯ = ಭೇದಕ್ಕೆ, ಜ್ಞಾನನಾಶ್ಯತಾ = ಜ್ಞಾನದಿಂದ ನಾಶಹೊಂದುವಿಕೆಯು, ನ ಸ್ಯಾತ್ = ಬರಲಾರದು.

**ಅನುವಾದ– ಜ್ಞಾನವು ವ್ಯಾವಹಾರಿಕವನ್ನು ನಾಶಮಾಡುವುದಾದರೆ ಅದು ಆ ವಸ್ತುವಿಗೆ ಉಪಾದಾನವಾದ ಅಜ್ಞಾನವನ್ನು ನಾಶಮಾಡಿ ಅದರಿಂದ ಅಜ್ಞಾನ ಕಾರ್ಯವನ್ನು ನಾಶಮಾಡುತ್ತದೆ ಎಂದು ಹೇಳಬೇಕು. ಆದ್ದರಿಂದ ಅಜ್ಞಾನಕಾರ್ಯವು ಮಾತ್ರ ಜ್ಞಾನದಿಂದ ನಾಶವಾಗುವುದರಿಂದ ಅನಾದಿಯಾದ ಭೇದವು ಜ್ಞಾನನಾಶ್ಯವಾಗದೇ ಇರಲಿ.**

**ಭಾವವಿಲಾಸಿನೀ– ದೋಷಾಂತರಂ ಚಾಹ – ಉಪಾದಾನೇತಿ ॥** ಹೀತ್ಯನೇನ ಜ್ಞಾನಮಜ್ಞಾನಸ್ಯೈವ ನಾಶಕಮಿತಿ ಪರಪ್ರಸಿದ್ಧಿಂ ಸೂಚಯತಿ । ತತ್ತಸ್ಮಾತ್ ಅಜ್ಞಾನೋಪಾದಾನಕತ್ವಾಭಾವಾತ್ ॥ ೧೨೯೧ ॥

**ವಿವರಣೆ–** ಜ್ಞಾನವು ಅಜ್ಞಾನನಾಶದ್ವಾರಾ ತತ್ಕಾರ್ಯನಾಶಕವೆಂದು ಅದ್ವೈತಿಗಳು ಹೇಳುತ್ತಾರೆ. ಆದರೆ ಭೇದವು ಅಜ್ಞಾನಕಾರ್ಯವೇ ಅಲ್ಲ, ಏಕೆಂದರೆ ಅದು ಅನಾದಿ. ಆದ್ದರಿಂದ ಭೇದದಲ್ಲಿ ಜ್ಞಾನನಾಶ್ಯತ್ವವು ಬರುವುದಿಲ್ಲ. ವ್ಯಾವಹಾರಿಕತ್ವ ಲಕ್ಷಣಕ್ಕೆ ಭೇದದಲ್ಲಿ ಅವ್ಯಾಪ್ತಿ ಬರುತ್ತದೆ ಎಂದು ಇಲ್ಲಿ ಹೇಳುತ್ತಾರೆ.

**ಅಜ್ಞಾನೋಪಾದಾನಕೇ ತೇ ರೂಪ್ಯಾದೌ ಪ್ರಾತಿಭಾಸಿಕೇ ।**
**ಅಸ್ತ್ಯೇವ ಜ್ಞಾನನಾಶ್ಯತ್ವಮತೋಽಪ್ಯೇತದಲಕ್ಷಣಂ ॥ ೧೨೯೨ ॥**

**ಅರ್ಥ–** ತೇ = ನಿನ್ನ ಅಭಿಪ್ರಾಯದಲ್ಲಿ, ಅಜ್ಞಾನೋಪಾದಾನಕೇ = ಅಜ್ಞಾನವೇ ಉಪಾದಾನವಾಗಿವುಳ್ಳ, ಪ್ರಾತಿಭಾಸಿಕೇ = ಪ್ರಾತಿಭಾಸಿಕ ಸತ್ಯವಾದ, ರೂಪ್ಯಾದೌ = ಶುಕ್ತಿರಜತ ಮೊದಲಾದ ವಸ್ತುಗಳಲ್ಲಿ, ಜ್ಞಾನನಾಶ್ಯತ್ವಂ = ಜ್ಞಾನದಿಂದ ನಾಶಹೊಂದುವಿಕೆಯು, ಅಸ್ತಿ ಏವ = ಇದ್ದೇ ಇದೆ. ಅತಃ = ಅಲಕ್ಷ್ಯವಾದ ಪ್ರಾತಿಭಾಸಿಕದಲ್ಲಿ ವ್ಯವಹಾರಿಕ ಲಕ್ಷಣಕ್ಕೆ ಅತಿವ್ಯಾಪ್ತಿ ಬರುವುದರಿಂದ, ಏತತ್ ಅಪಿ = ಜ್ಞಾನನಾಶ್ಯತ್ವ ಎಂಬುದೂ ಕೂಡ, ಅಲಕ್ಷಣಂ = ವ್ಯವಹಾರಿಕದ ಲಕ್ಷಣವಾಗಲಾರದು.

**ಅನುವಾದ–** ಅಜ್ಞಾನವು ಉಪಾದಾನವಾದ ಶುಕ್ತಿರೂಪ್ಯಾದಿಗಳು ಪ್ರಾತಿಭಾಸಿಕ-ವಾಗಿವೆ. ಅದರಲ್ಲಿ ಜ್ಞಾನನಾಶ್ಯತ್ವವು ಇದೆ. ಆದ್ದರಿಂದಲೂ ಜ್ಞಾನನಾಶ್ಯತ್ವವು ಲಕ್ಷಣವಾಗುವುದಿಲ್ಲ. ಶುಕ್ತಿಜ್ಞಾನದಿಂದ ಶುಕ್ತಿರೂಪ್ಯಾಜ್ಞಾನವು ನಷ್ಟವಾಗಿ ತತ್ಕಾರ್ಯವಾದ ರಜತವೂ ನಾಶವನ್ನು ಹೊಂದುತ್ತದೆ. ಆದ್ದರಿಂದ ಜ್ಞಾನನಾಶ್ಯತ್ವವು ಶುಕ್ತಿರೂಪ್ಯದಲ್ಲಿ ಬಂದಿದೆ. ಅದು ಪ್ರಾತಿಭಾಸಿಕ. ಆದ್ದರಿಂದ ವ್ಯಾವಹಾರಿಕ ಲಕ್ಷಣಕ್ಕೆ ಪ್ರಾತಿಭಾಸಿಕದಲ್ಲಿ ಅತಿವ್ಯಾಪ್ತಿ ಬರುವುದರಿಂದಲೂ ಅದು ಲಕ್ಷಣವಲ್ಲ.

**ಭಾವವಿಲಾಸಿನೀ–** ಜ್ಞಾನನಾಶ್ಯತ್ವಮಾತ್ರಂ ವ್ಯವಹಾರಿಕತ್ವಂ ಬ್ರಹ್ಮಜ್ಞಾನನಾಶ್ಯತ್ವಂ ವಾ ಬ್ರಹ್ಮ-ಜ್ಞಾನೇತರಜ್ಞಾನಾನಾಶ್ಯತ್ವೇ ಸತಿ ಬ್ರಹ್ಮಜ್ಞಾನನಾಶ್ಯತ್ವಂ ವೇತಿ ವಿಕಲ್ಪಂ ಮನಸಿ ನಿಧಾಯ ಕ್ರಮೇಣ ದೂಷಯತಿ ॥ **ಅಜ್ಞಾನೋಪಾದಾನಕೇತಿ** ॥ ಅತಃ ಪ್ರಾತಿಭಾಸಿಕೇತಿವ್ಯಾಪ್ತೇಃ ॥ ೧೨೯೨ ॥

**ವಿವರಣೆ–** ವ್ಯಾವಹಾರಿಕತ್ವವೆಂದರೆ ಕೇವಲ ಜ್ಞಾನನಾಶ್ಯತ್ವವೋ ಅಥವಾ ಬ್ರಹ್ಮಜ್ಞಾನ ನಾಶ್ಯತ್ವವೋ ಅಥವಾ ಬ್ರಹ್ಮಜ್ಞಾನೇತರಜ್ಞಾನ ಅನಾಶ್ಯತ್ವವೋ ಎಂದು ವಿಕಲ್ಪ ಮಾಡಿ, ಕೇವಲ ಜ್ಞಾನ ನಾಶ್ಯತ್ವ ಪಕ್ಷದಲ್ಲಿ ಈ ಶ್ಲೋಕದಲ್ಲಿ ದೋಷವನ್ನು ಹೇಳುತ್ತಾರೆ. ಶುಕ್ತಿಜ್ಞಾನ ನಾಶ್ಯವಾದ ರಜತವು ಪ್ರಾತಿಭಾಸಿಕ. ಅಲ್ಲಿ ಜ್ಞಾನನಾಶ್ಯತ್ವರೂಪಲಕ್ಷಣಕ್ಕೆ ಅತಿವ್ಯಾಪ್ತಿ ಬರುವುದರಿಂದ ಜ್ಞಾನನಾಶ್ಯತ್ವವು ವ್ಯಾವಹಾರಿಕ ಲಕ್ಷಣವಲ್ಲ ಎಂದು ಸಿದ್ಧವಾಗುತ್ತದೆ.

**ಶುಕ್ತ್ಯವಚ್ಛಿನ್ನಚಿಜ್ಞಾನಂ ಬ್ರಹ್ಮಜ್ಞಾನಂ ಚ ತತ್ ತವ ॥ ೧೨೯೩ ॥**

**ಅರ್ಥ–** ತತ್ = ಆ, ಶುಕ್ತವ್ಯಚ್ಛಿನ್ನಚಿಜ್ಞಾನಂ ಚ = ಶುಕ್ತ್ಯವಚ್ಛಿನ್ನವಾದ ಚೈತನ್ಯ ಜ್ಞಾನವೂ ಕೂಡ, ತವ = ನಿನ್ನ, ಮತೇ = ಮತದಲ್ಲಿ, ಬ್ರಹ್ಮಜ್ಞಾನಂ = ಬ್ರಹ್ಮಜ್ಞಾನವು ಆಗಿದೆ.

**ಅನುವಾದ–** ಶುಕ್ತ್ಯವಚ್ಛಿನ್ನ ಚೈತನ್ಯಜ್ಞಾನವು ನಿನ್ನ ಮತದಲ್ಲಿ ಬ್ರಹ್ಮಜ್ಞಾನವೇ ಆಗಿದೆ.

**ಭಾವವಿಲಾಸಿನೀ–** ತತ್ ಶುಕ್ತಿಜ್ಞಾನಮ್ । ತವ ಮತೇ ॥ ೧೨೯೩ ॥

**ವಿವರಣೆ–** ವ್ಯಾವಹಾರಿಕತ್ವವೆಂದರೆ ಬ್ರಹ್ಮಜ್ಞಾನ ನಾಶ್ಯತ್ವ ಎಂಬ ಎರಡನೆಯ ಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ. ಅದ್ವೈತ ಮತದಲ್ಲಿ ಶುಕ್ತಿಜ್ಞಾನ ಎಂದರೆ ಶುಕ್ತ್ಯವಚ್ಛಿನ್ನ ಚೈತನ್ಯಜ್ಞಾನ. ಚೈತನ್ಯವು ಬ್ರಹ್ಮರೂಪವೇ. ಆದ್ದರಿಂದ ಶುಕ್ತಿಜ್ಞಾನವು ಬ್ರಹ್ಮಜ್ಞಾನವಾಯಿತು. ಶುಕ್ತಿರೂಪ್ಯವು ಅಂತಹ ಬ್ರಹ್ಮಜ್ಞಾನ ನಾಶ್ಯವಾಗುವುದರಿಂದ ವ್ಯಾವಹಾರಿಕ ಲಕ್ಷಣಕ್ಕೆ ಪ್ರಾತಿಭಾಸಿಕದಲ್ಲಿ ಅತಿವ್ಯಾಪ್ತಿಯು ಬಂದೇ ಬರುತ್ತದೆ.

**ಜ್ಞಾನಾನ್ನಾಶೇಪಿ ಮಿಥ್ಯಾತ್ವೇ ಹೇತುರಜ್ಞಾನಕಾರ್ಯತಾ ।**
**ಸಾ ಚಾಸ್ತಿ ಶುಕ್ತಿರೂಪ್ಯಾದೌ ನಾಸ್ತಿ ಭೇದಾದ್ಯನಾದಿಷು ॥ ೧೨೯೪ ॥**

**ಅರ್ಥ–** ಜಗತಃ = ಈ ಜಗತ್ತಿಗೆ, ಜ್ಞಾನಾತ್ = ಬ್ರಹ್ಮಜ್ಞಾನದಿಂದ, ನಾಶೇ ಅಪಿ = ನಾಶವು ಇದ್ದರೂ ಕೂಡ, ತಸ್ಯ = ಆ ಜಗತ್ತಿನ, ಮಿಥ್ಯಾತ್ವೇ= ಮಿಥ್ಯಾತ್ವದಲ್ಲಿ (ಮಿಥ್ಯಾತ್ವಕ್ಕೆ),

ಅಜ್ಞಾನಕಾರ್ಯತಾ = ಅಜ್ಞಾನಕಾರ್ಯತ್ವವು, ಹೇತುಃ = ಕಾರಣವು, ಇತಿ= ಹೀಗೆ, ಅಂಗೀಕಾರ್ಯಾ= ಸ್ವೀಕರಿಸಲ್ಪಡಬೇಕು, ಸಾ ಚ = ಆ ಅಜ್ಞಾನಕಾರ್ಯತ್ವವಾದರೂ, ಶುಕ್ತಿರೂಪ್ಯಾದೌ = ಶುಕ್ತಿರಜತವೇ ಮೊದಲಾದ ವಸ್ತುಗಳ, ಅಸ್ತಿ = ಇದೆ. ಭೇದಾದ್ಯನಾದಿಷು = ಭೇದ ಮೊದಲಾದ ಅನಾದಿ ವಸ್ತುಗಳಲ್ಲಿ, ಸಾ = ಆ ಅಜ್ಞಾನಕಾರ್ಯತ್ವವು, ನಾಸ್ತಿ = ಇಲ್ಲ.

**ಅನುವಾದ–** ಜ್ಞಾನ ನಾಶ್ಯತ್ವ ಪ್ರಯುಕ್ತ ಮಿಥ್ಯಾತ್ವವನ್ನು ಹೇಳಿದರೂ ಸಹ ಅದಕ್ಕೆ ಪ್ರಯೋಜಕವಾದುದು ಅಜ್ಞಾನಕಾರ್ಯತ್ವ. ಅಜ್ಞಾನಕಾರ್ಯತ್ವವು ಶುಕ್ತಿರೂಪ್ಯಾದಿಗಳಲ್ಲಿ ಬರಬಹುದು. ಆದರೆ ಅನಾದಿಯಾದ ಭೇದದಲ್ಲಿ ಕಾರ್ಯತ್ವವೇ ಇಲ್ಲದಿರುವುದರಿಂದ ಅಜ್ಞಾನಕಾರ್ಯತ್ವವು ಬರುವುದಿಲ್ಲ.

**ಭಾವವಿಲಾಸಿನೀ–** ಕಿಂಚ ಜ್ಞಾನಾನಾಶ್ಯೇನಾಪಿ ಮಿಥ್ಯಾತ್ವಂ ವದತಾ ಪರೇಣಾಜ್ಞಾನಕಾರ್ಯತ್ವ ಏವ ಭರೋ ದಾತವ್ಯಃ। ನಾಶಮಾತ್ರಸ್ಯ ಮಿಥ್ಯಾತ್ವಾಸಾಧಕತ್ವಾತ್। ತಚ್ಚ ಅತ್ರ ಶುಕ್ತಿರಜತಾದಾವತಿವ್ಯಾಪ್ತಂ ಅವ್ಯಾಪ್ತಂ ಚ ಭೇದಾದ್ಯನಿತ್ಯಪದಾರ್ಥೇಷ್ವಿತ್ಯಾಹ – **ಜ್ಞಾನಾದಿತಿ** ॥ ೧೨೯ ॥

**ವಿವರಣೆ–** ಜ್ಞಾನನಾಶ್ಯತ್ವವಿದ್ದರೂ ಮಿಥ್ಯಾತ್ವ ಏಕೆ ಬರಬೇಕು ಎಂಬ ಪ್ರಶ್ನೆಗೆ ಉತ್ತರವಾಗಿ ಅದ್ವೈತಿಗಳು ಜ್ಞಾನವು ಅಜ್ಞಾನವನ್ನೇ ನಾಶಮಾಡುತ್ತದೆ. ಅಜ್ಞಾನ ನಾಶವಾಗುವುದರಿಂದ ಅಜ್ಞಾನಕಾರ್ಯವೂ ನಾಶವಾಗುತ್ತದೆ, ಅಜ್ಞಾನವು ಮಿಥ್ಯಾವಾದುದರಿಂದ ಅಜ್ಞಾನ ಕಾರ್ಯವೂ ಮಿಥ್ಯಾಭೂತವಾದುದೇ ಎಂದು ಹೇಳುತ್ತಾರೆ. ಆದ್ದರಿಂದ ಮಿಥ್ಯಾತ್ವ ಪ್ರಯೋಜಕವಾದುದು ಸಾಕ್ಷಾತ್ತಾಗಿ ಅಜ್ಞಾನ ಕಾರ್ಯತ್ವವೇ ಹೊರತು ಜ್ಞಾನ ನಾಶ್ಯತ್ವವಲ್ಲ ಎಂದಾಯಿತು. ಅಜ್ಞಾನಕಾರ್ಯತ್ವವು ಅಜ್ಞಾನಕಾರ್ಯವಾದ ಶುಕ್ತಿರೂಪ್ಯದಲ್ಲೂ, ಕಾರ್ಯವಾದ ಘಟಾದಿಗಳಲ್ಲಿಯೂ ಇರಬಹುದು. ಆದರೆ ಅನಾದಿಯಾದ ಭೇದದಲ್ಲಿ ಎಂದೂ ಇರಲು ಸಾಧ್ಯವಿಲ್ಲ. ಆದರೆ ಭೇದವು ವ್ಯಾವಹಾರಿಕವೆಂದು ಒಪ್ಪುತ್ತೀಯೆ. ಎಂದರೆ ಮಿಥ್ಯಾಭೂತ ಎಂದರ್ಥ. ಅಜ್ಞಾನಕಾರ್ಯವಲ್ಲದ ಭೇದದಲ್ಲಿ ಮಿಥ್ಯಾತ್ವವನ್ನು ಅಂಗೀಕಾರ ಮಾಡಲು ಯಾವ ಯುಕ್ತಿಯೂ ಇಲ್ಲ ಎಂದು ಇಲ್ಲಿ ಹೇಳುತ್ತಾರೆ.

**ಬ್ರಹ್ಮಜ್ಞಾನೇತರಜ್ಞಾನನಾಶ್ಯತ್ವಸ್ಯ ಪ್ರವೇಶನೇ ।**
**ಘಟಾದಿವೃತ್ತಿನಾಶ್ಯೇಷು ತೂಲಾಜ್ಞಾನೇಷು ಲಕ್ಷಣಂ ।**
**ಅವ್ಯಾಪಕಂ ಸ್ಯಾತ್ ತದ್ಯೋಗೇ ಮೂಲಸ್ಯಾಪಸ್ಯತೌ ಭವೇತ್ ॥ ೧೨೫ ॥**

**ಅರ್ಥ–** ವ್ಯಾವಹಾರಿಕ ಲಕ್ಷಣೇ = ವ್ಯಾವಹಾರಿಕದ ಲಕ್ಷಣದಲ್ಲಿ, ಬ್ರಹ್ಮಜ್ಞಾನೇತರಜ್ಞಾನನಾಶ್ಯತ್ವಸ್ಯ = ಬ್ರಹ್ಮಜ್ಞಾನೇತರಜ್ಞಾನ ನಾಶ್ಯತ್ವಂ ಎಂಬ ವಿಶೇಷಣವನ್ನು, ಪ್ರವೇಶನೇ = ಹಾಕಿದರೆ, ಘಟಾದಿವೃತ್ತಿನಾಶ್ಯೇಷು = ಘಟಾದಿ ವೃತ್ತಿಜ್ಞಾನಗಳಿಂದ ನಾಶಹೊಂದುವ, ತೂಲಾಜ್ಞಾನೇಷು = ತೂಲಾಜ್ಞಾನಗಳಲ್ಲಿ, ಲಕ್ಷಣಂ = ವ್ಯವಹಾರಿಕ

ಲಕ್ಷಣವು, ಅವ್ಯಾಪಕಂ = ಅವ್ಯಾಪಕತ್ವ ದೋಷವುಳ್ಳದ್ದು, ಸ್ಯಾತ್ = ಆದೀತು, ಅಥವಾ = ಅನೇಕ ತೂಲಾಜ್ಞಾನಗಳನ್ನು ಒಪ್ಪದೇ ಇದ್ದ ಪಕ್ಷದಲ್ಲಿ ಮೂಲಸ್ಯ = ಮೂಲಾಜ್ಞಾನದ, ಅಪಸೃತೌ = ನಾಶವು, ಅಂಗೀಕೃತಾಯಾಂ = ಅಂಗೀಕಾರ ಮಾಡಲ್ಪಟ್ಟರೆ, ತದ್ಯೋಗೇ = ಮೂಲಾಜ್ಞಾನ ಸಂಬಂಧದಲ್ಲಿ, ಲಕ್ಷಣಂ = ಲಕ್ಷಣವು, ಅವ್ಯಾಪಕಂ = ಅವ್ಯಾಪ್ತಿದೋಷವುಳ್ಳದ್ದು ಸ್ಯಾತ್ = ಆದೀತು.

**ಅನುವಾದ–** ಬ್ರಹ್ಮಜ್ಞಾನೇತರಜ್ಞಾನ-ಅನಾಶ್ಯತ್ವೇಸತಿಬ್ರಹ್ಮಜ್ಞಾನನಾಶ್ಯತ್ವಂ ವ್ಯಾವಹಾರಿಕ ಲಕ್ಷಣಂ ಎಂದು ಹೇಳಿದರೆ ಘಟಾದಿ ವೃತ್ತಿಗಳಿಂದ ನಾಶವಾಗುವ ಘಟಾದಿ ವಿಷಯ ತೂಲಾಜ್ಞಾನದಲ್ಲಿ ಲಕ್ಷಣಕ್ಕೆ ಅವ್ಯಾಪ್ತಿಯು ಬರುತ್ತದೆ. ಏಕೆಂದರೆ ಘಟಜ್ಞಾನವು ಬ್ರಹ್ಮಜ್ಞಾನೇತರ ಜ್ಞಾನ. ಅದರಿಂದ ನಾಶ್ಯವಾಗುವುದರಿಂದ ಅವ್ಯಾಪ್ತಿಯು ಬರುತ್ತದೆ. ತೂಲಾಜ್ಞಾನವನ್ನು ಒಪ್ಪದೇ ಇದ್ದ ಪಕ್ಷದಲ್ಲಿ ಘಟಜ್ಞಾನದಿಂದ ಮೂಲಾಜ್ಞಾನದ ಸಂಯೋಗವು ನಾಶವಾಗುತ್ತದೆ ಎಂದು ಹೇಳಬೇಕು. ಆಗ ಮೂಲಾಜ್ಞಾನ ಸಂಯೋಗದಲ್ಲಿ ಬ್ರಹ್ಮಜ್ಞಾನೇತರ ಜ್ಞಾನ ನಾಶ್ಯತ್ವವೇ ಬರುವುದರಿಂದ ಅವ್ಯಾಪ್ತಿಯು ಬರುತ್ತದೆ.

**ಭಾವವಿಲಾಸಿನೀ–** ತೂಲಾಜ್ಞಾನೇಷು ಘಟಾದ್ಯವಚ್ಛಿನ್ನಚೈತನ್ಯಾವರಕಾಜ್ಞಾನೇಷು । ಲಕ್ಷಣಂ ವ್ಯಾವಹಾರಿಕತ್ವಲಕ್ಷಣಮ್ । ಅವ್ಯಾಪಕಂ ವಿಶೇಷಣಾಭಾವಾತ್ । ತದ್ಯೋಗೇ ಅಜ್ಞಾನ-ಯೋಗೇ । ಮೂಲಸ್ಯ ಮೂಲಾಜ್ಞಾನಸ್ಯ । ಜ್ಞಾನಾತ್ ತೂಲಾಜ್ಞಾನನಾಶಪಕ್ಷೇ ತೂಲಾಜ್ಞಾನೇಷ್ವವ್ಯಾಪ್ತಿಃ । ಮೂಲಾಜ್ಞಾನಾಪಸರಣಪಕ್ಷೇ ಜ್ಞಾನನಾಶ್ಯೇ ತತ್‌ಸಂಯೋಗೇಽ-ವ್ಯಾಪ್ತಿರಿತ್ಯರ್ಥಃ । ಉಕ್ತವಿಶೇಷಣದಾನೇನ ಶುಕ್ತಿಜ್ಞಾನನಾಶ್ಯರೂಪ್ಯಾದಾವತಿ-ವ್ಯಾಪ್ತಿಪರಿಹಾರೇಽಪಿ ಘಟವೃತ್ತಿನಾಶ್ಯೇ ತೂಲಾಜ್ಞಾನೇ ಮೂಲಾಜ್ಞಾನಸಂಯೋಗೇ ವಾಽವ್ಯಾಪ್ತಿರಪರಿಹಾರ್ಯೇತಿ ಭಾವಃ ॥ ೧೨೫ ॥

**ವಿವರಣೆ–** ಘಟಜ್ಞಾನದಿಂದ ಘಟಾಜ್ಞಾನವು ನಿವೃತ್ತವಾಗುತ್ತದೆ ಎಂದು ಹೇಳುವ ಪಕ್ಷದಲ್ಲಿ ಅದ್ವೈತಿಗಳಿಗೆ ಎರಡು ಅಭಿಪ್ರಾಯವಿದೆ. ಎಷ್ಟು ಜ್ಞಾನಗಳು ಬರುತ್ತವೆಯೋ, ಅಷ್ಟು ಅಜ್ಞಾನಗಳು ನಾಶವಾಗಬೇಕು. ಆದರೆ ಮೂಲಾಜ್ಞಾನವು ಒಂದೇ ಇದೆ. ಆದ್ದರಿಂದ ಆಯಾ ಜ್ಞಾನಗಳಿಂದ ನಾಶವಾಗುವ ಅನೇಕ ಅಜ್ಞಾನಗಳನ್ನು ಒಪ್ಪಿ ಅವುಗಳನ್ನು ತೂಲಾಜ್ಞಾನವೆಂದು ಕರೆಯುತ್ತಾರೆ. ಈ ತೂಲಾಜ್ಞಾನಗಳು ಮೂಲಾಜ್ಞಾನದ ಅಂಕುರ ರೂಪವಾದವುಗಳು ಎಂದು ಅವರ ಅಭಿಪ್ರಾಯ. ಆ ಪಕ್ಷದಲ್ಲಿ ಘಟಜ್ಞಾನದಿಂದ ತೂಲಾಜ್ಞಾನವು ನಾಶವಾದಾಗ ಈ ಘಟಜ್ಞಾನವು ಅವರಿಗೆ ಅಭಿಮತವಾದ ಬ್ರಹ್ಮಜ್ಞಾನವಲ್ಲ, ಬ್ರಹ್ಮಜ್ಞಾನೇತರವಾದುದು. ಬ್ರಹ್ಮಜ್ಞಾನೇತರಜ್ಞಾನದಿಂದ ನಾಶ್ಯತ್ವವೇ ಬರುತ್ತದೆ, ಅನಾಶ್ಯತ್ವವು ಬರುವುದಿಲ್ಲ. ಆದ್ದರಿಂದ ವ್ಯಾವಹಾರಿಕ ಲಕ್ಷಣಕ್ಕೆ ತೂಲಾಜ್ಞಾನದಲ್ಲಿ ಅವ್ಯಾಪ್ತಿಯು ಬರುತ್ತದೆ. ಇನ್ನೊಂದು ಪಕ್ಷದಲ್ಲಿ ಅನೇಕ

ತೂಲಾಜ್ಞಾನವನ್ನು ಒಪ್ಪದೇ, ಮೂಲಾಜ್ಞಾನವು ಒಂದೇ ಇದೆ, ಘಟದ ಜ್ಞಾನವು ಬಂದಾಗ ಮೂಲಾಜ್ಞಾನ ಸಂಯೋಗಕ್ಕೆ ಅಪಸರಣವು ಉಂಟಾಗುತ್ತದೆ ಎಂದು ಹೇಳುತ್ತಾರೆ. ಆ ಕಲ್ಪದಲ್ಲಿ ಮೂಲಜ್ಞಾನಸಂಯೋಗದಲ್ಲಿ ಅವ್ಯಾಪ್ತಿಯು ಬರುತ್ತದೆ. ಏಕೆಂದರೆ ಅದು ಬ್ರಹ್ಮಜ್ಞಾನೇತರಜ್ಞಾನನಾಶ್ಯವಾಗುತ್ತದೆ ಎಂದು ಅಭಿಪ್ರಾಯ.

ಕಿಂಚ ಬ್ರಹ್ಮಜ್ಞಾನನಾಶ್ಯಂ ಬ್ರಹ್ಮಜ್ಞಾನಂ ತವಾಪಿ ನ ।
ಆತ್ಮಾಶ್ರಯಾದತಸ್ತತ್ರೈವಾವ್ಯಾಪ್ತಿರಭವದ್ ಧ್ರುವಾ ॥ ೧೨೯೬ ॥

**ಅರ್ಥ–** ಕಿಂಚ = ಅದಲ್ಲದೇ, ತವ = ನಿನ್ನ ಮತೇ ಅಪಿ = ಮತದಲ್ಲಿಯೂ ಕೂಡ, ಬ್ರಹ್ಮಜ್ಞಾನಂ = ಬ್ರಹ್ಮಜ್ಞಾನವು, ಆತ್ಮಾಶ್ರಯಾತ್ = ಆತ್ಮಾಶ್ರಯದೋಷ ಬರುವುದರಿಂದ, ಬ್ರಹ್ಮಜ್ಞಾನನಾಶ್ಯಂ = ಬ್ರಹ್ಮಜ್ಞಾನದಿಂದ ನಾಶಹೊಂದುವಂತಹದು, ನ = ಅಲ್ಲ. ಅತಃ = ಆದ್ದರಿಂದ, ತತ್ರೈವ = ಆ ಬ್ರಹ್ಮಜ್ಞಾನದಲ್ಲಿಯೇ, ಅವ್ಯಾಪ್ತಿ= ವ್ಯಾವಹಾರಿಕಃ ಲಕ್ಷಣಕ್ಕೆ ಅವ್ಯಾಪ್ತಿಯು, ಧ್ರುವಾ= ನಿಶ್ಚಿತವಾದದ್ದು, ಅಭವತ್ = ಆಯಿತು.

**ಅನುವಾದ–** ಅದೂ ಅಲ್ಲದೆ, ನಿನ್ನ ಪ್ರಕ್ರಿಯೆಯಂತೆ ಬ್ರಹ್ಮಜ್ಞಾನವು ಬ್ರಹ್ಮಜ್ಞಾನ ನಾಶ್ಯವೆಂದು ಒಪ್ಪಿದರೆ ಆತ್ಮಾಶ್ರಯ ದೋಷವು ಬರುತ್ತದೆ. ಆದ್ದರಿಂದ ನಿನ್ನ ಲಕ್ಷಣಕ್ಕೆ ಬ್ರಹ್ಮಜ್ಞಾನದಲ್ಲಿಯೇ ನಿಶ್ಚಿತವಾಗಿ ಅವ್ಯಾಪ್ತಿಯು ಬರುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣ ಸಮುದಿತಲಕ್ಷಣಸ್ಯಾಪಿ ಸ್ಥಲಾಂತರೇಽವ್ಯಾಪ್ತಿಮಾಹ - **ಕಿಂಚೇತಿ॥** ಆತ್ಮಾಶ್ರಯಪರಿಹಾರಾಯ ಜ್ಞಾನನಾಶ್ಯಾಜ್ಞಾನಸ್ಯ ಮಧ್ಯೇ ಪ್ರವೇಶೇ ತ್ರಿಕ್ಷಣಾವಸ್ಥಾಯಿಜ್ಞಾನಸ್ಯಾಜ್ಞಾನನಾಶದಶಾಯಾಂ ಸ್ವತ ಏವ ನಾಶೇನಾಜ್ಞಾನನಾಶಪ್ರಣಾಡ್ಯಾಪಿ ಜ್ಞಾನನಾಶ್ಯತ್ವಾಭಾವೇನ ಪುನರವ್ಯಾಪ್ತಿಃ। ಅತ ಏವ ಧ್ರುವೇತ್ಯುಕ್ತಮ್ ॥ ೧೨೯೬ ॥

**ವಿವರಣೆ–** ಬ್ರಹ್ಮಜ್ಞಾನೇತರ-ಅನಾಶ್ಯತ್ವೇ ಸತಿ ಬ್ರಹ್ಮಜ್ಞಾನನಾಶ್ಯತ್ವಂ ವ್ಯಾವಹಾರಿಕತ್ವಂ' ಎಂದು ಲಕ್ಷಣವನ್ನು ಹೇಳಿದರೆ ಅದಕ್ಕೆ ಸ್ಥಳಾಂತರದಲ್ಲಿ ಅವ್ಯಾಪ್ತಿಯನ್ನು ಹೇಳುತ್ತಾರೆ. ತನಗೆ ತಾನೇ ನಾಶಕವೆಂದು ಹೇಳಿದರೆ ಸ್ಪಷ್ಟವಾಗಿ ಆತ್ಮಾಶ್ರಯವು ಬರುತ್ತದೆ. ಆದ್ದರಿಂದ ಬ್ರಹ್ಮಜ್ಞಾನವು ಅಜ್ಞಾನಕ್ಕೆ ನಾಶಕ, ಅಜ್ಞಾನ ನಾಶದಿಂದ ಅದರ ಕಾರ್ಯವಾದ ಬ್ರಹ್ಮಜ್ಞಾನವು ನಾಶವಾಗುತ್ತದೆ ಎಂದು ಮಧ್ಯೆ ಅಜ್ಞಾನವನ್ನು ಕಲ್ಪಿಸಿದರೆ ಅದೂ ಸರಿಯಲ್ಲ. ಜ್ಞಾನವು ತ್ರಿಕ್ಷಣಾವಸ್ಥಾಯಿ ಆಗಿರುವುದರಿಂದ ಅಜ್ಞಾನ ನಾಶ ಕ್ಷಣದಲ್ಲಿ ಜ್ಞಾನವು ಸ್ವತಃ ನಾಶವನ್ನು ಹೊಂದುವುದರಿಂದ ಮುಂದಿನ ಕ್ಷಣದಲ್ಲಿ ಉಂಟಾಗುವ ಜ್ಞಾನನಾಶವು ಜ್ಞಾನ ಪ್ರಯುಕ್ತವಾಗಿ ಎಂದು ಹೇಳುವುದು ತಪ್ಪಾಗುತ್ತದೆ. ಆದ್ದರಿಂದ ಬ್ರಹ್ಮಜ್ಞಾನದಲ್ಲಿ ಅವ್ಯಾಪ್ತಿಯು ಬಂದೇ ಬರುತ್ತದೆ.

ಬಾಧ್ಯತ್ವೇ ನಿರ್ವಿಕಲ್ಪಾ ಧೀರ್ನ ಜಗದ್ ಭೀಷಯೇನ್ಮಮ ।
ನಾಶ್ಯತ್ವೇ ಸ್ವವಿನಾಶ್ಯಾ ಧೀರ್ನ ಜಗದ್ ಭೀಷಯೇನ್ಮಮ ॥ ೧೨೯೭ ॥

**ಅರ್ಥ–** ಬಾಧ್ಯತ್ವೇ = ಬ್ರಹ್ಮಜ್ಞಾನದಿಂದ ಬಾಧ್ಯತ್ವವನ್ನು ಹೇಳಿದರೆ, ನಿರ್ವಿಕಲ್ಪಾಧೀಃ = ನಿರ್ವಿಕಲ್ಪಕ ಜ್ಞಾನವು, ಮಮ = ನನ್ನ, ಜಗತ್ = ಜಗತ್ತನ್ನು, ನ ಭೀಷಯೇತ್ = ಹೆದರಿಸಲಾರದು, ನಾಶ್ಯತ್ವೇ ತು = ಬ್ರಹ್ಮಜ್ಞಾನದಿಂದ ನಾಶ್ಯತ್ವವನ್ನು ಹೇಳಿದರೆ, ಅವಿನಾಶ್ಯ = ನಾಶವಿಲ್ಲದ, ಧೀಃ = ಬ್ರಹ್ಮಜ್ಞಾನವು, ಮಮ = ನನ್ನ, ಜಗತ್ = ಜಗತ್ತನ್ನು, ನ ಭೀಷಯೇತ್= ಹೆದರಿಸಲಾರದು.

**ಅನುವಾದ–** ಬ್ರಹ್ಮಜ್ಞಾನವು ನಿರ್ವಿಕಲ್ಪಕ ಜ್ಞಾನವಾಗಿ ಬಾಧ್ಯವಾದರೆ ನನ್ನ ಸತ್ಯವಾದ ಜಗತ್ತಿಗೆ ಯಾವ ಭಯವೂ ಇಲ್ಲ. ಬ್ರಹ್ಮಜ್ಞಾನಕ್ಕೆ ಬ್ರಹ್ಮಜ್ಞಾನ ನಾಶ್ಯತ್ವವನ್ನು ಒಪ್ಪುವುದಾದರೆ ಬ್ರಹ್ಮಜ್ಞಾನವೇ ಅವಿನಾಶಿಯಾಗಿ ಉಳಿಯುವುದರಿಂದ ಜಗತ್ಸತ್ಯತ್ವಕ್ಕೆ ಯಾವ ಭಯವೂ ಇಲ್ಲ.

**ಭಾವವಿಲಾಸಿನೀ–** ಏವಂ ಚೋಭಯತಃ ಪಾಶಾರಜ್ಜುರಿತ್ಯಾಹ – ಬಾಧ್ಯತ್ವ ಇತಿ ॥ ಜ್ಞಾನಬಾಧ್ಯತ್ವ ಇತ್ಯರ್ಥಃ। ನಾಶ್ಯತ್ವೇ ಜ್ಞಾನನಾಶ್ಯತ್ವೇ। ಜಗದಂತಃಪಾತಿಜ್ಞಾನಸ್ಯೈವೋರ್ವರಿತತ್ವಾದಿತಿ ಭಾವಃ ॥ ೧೨೬೭ ॥

**ವಿವರಣೆ–** ಬಾಧ್ಯತ್ವ ಮತ್ತು ನಾಶ್ಯತ್ವ ಎರಡು ಪಕ್ಷಗಳಲ್ಲಿಯೂ ದೋಷವನ್ನು ಹೇಳುತ್ತಾರೆ. ಬ್ರಹ್ಮಜ್ಞಾನವು ಬಾಧ್ಯವೆಂದಾದರೆ ತಾನೇ ಬಾಧ್ಯವಾಗುವ ಯಾವ ಜ್ಞಾನವೂ ಇನ್ನೊಂದನ್ನು ಬಾಧಿಸಲಾರದು. ಆದ್ದರಿಂದ ಜಗತ್ತಿಗೆ ಬಾಧವಿಲ್ಲ ಎಂದು ಸಿದ್ಧವಾಗುತ್ತದೆ. ಬ್ರಹ್ಮಜ್ಞಾನವು ನಾಶ್ಯವಾಗುವುದಾದರೆ ತನಗೆ ತಾನೇ ನಾಶಕವಾಗುವುದಿಲ್ಲವಾದಕಾರಣ ಬ್ರಹ್ಮಜ್ಞಾನವೇ ಅವಿನಾಶ್ಯವಾಗಿ ಉಳಿಯುವುದರಿಂದ ಜಗತ್ತು ಉಳಿಯುವ ಕಾರಣದಿಂದ ಜಗತ್ಸತ್ಯತ್ವಕ್ಕೆ ಯಾವ ಭಯವೂ ಇಲ್ಲ.

**ಕಿಂಚ ಪ್ರಾರಬ್ಧಕರ್ಮಾಣಿ ಬ್ರಹ್ಮಜ್ಞಾನಾದನಂತರಂ ।**
**ಸ್ಥಾಯೀನಿ ಭೋಗಕ್ಷಯ್ಯಾಣಿ ತೇಷ್ವವ್ಯಾಪ್ತಿರ್ದ್ವಿಧಾಪ್ಯಭೂತ್॥ ೧೨೬೮ ॥**

**ಅರ್ಥ–** ಕಿಂಚ = ಅದಲ್ಲದೆ, ಭೋಗಕ್ಷಯ್ಯಾಣಿ = ಭೋಗದಿಂದಲೇ ನಾಶ ಹೊಂದುವಂತಹ, ಪ್ರಾರಬ್ಧಕರ್ಮಾಣಿ = ಪ್ರಾರಬ್ಧಕರ್ಮಗಳು, ಬ್ರಹ್ಮಜ್ಞಾನಾತ್ = ಬ್ರಹ್ಮಜ್ಞಾನದ, ಅನಂತರಂ ಅಪಿ = ಅನಂತರವೂ ಕೂಡ, ಸ್ಥಾಯೀನಿ = ಉಳಿಯುವಂತಹವು ಆಗಿರುತ್ತವೆ. ಅತಃ = ಆದ್ದರಿಂದ, ದ್ವಿಧಾ ಅಪಿ = ಎರಡು ಪ್ರಕಾರಗಳಲ್ಲಿಯೂ ಕೂಡ, ತೇಷು= ಆ ಪ್ರಾರಬ್ಧಕರ್ಮಗಳಲ್ಲಿ, ಅವ್ಯಾಪ್ತಿಃ = ವ್ಯಾವಹಾರಿಕ ಲಕ್ಷಣಕ್ಕೆ ಅವ್ಯಾಪ್ತಿಯು, ಅಭೂತ್ = ಬಂದಿತು.

**ಅನುವಾದ–** ಅದೂ ಅಲ್ಲದೇ, ಪ್ರಾರಬ್ಧಕರ್ಮಗಳು ಬ್ರಹ್ಮಜ್ಞಾನಾನಂತರದಲ್ಲಿಯೂ ಉಳಿಯುತ್ತವೆ. ಅವು ಭೋಗದಿಂದ ಮಾತ್ರ ಕ್ಷಯವನ್ನು ಹೊಂದುತ್ತವೆ. ಎರಡು ಪ್ರಕಾರಗಳಲ್ಲಿಯೂ ಪ್ರಾರಬ್ಧಕರ್ಮಗಳಲ್ಲಿ ಅವ್ಯಾಪ್ತಿಯು ಉಂಟಾಗುತ್ತದೆ.

**ಭಾವವಿಲಾಸಿನೀ–** ಸ್ಥಲಾಂತರೇ ವಿಶೇಷಣಾಭಾವಾದ್ವಿಶೇಷ್ಯಾಭಾವಾಚ್ಚ ಪ್ರಾಪ್ತಾಮವ್ಯಾಪ್ತಿಮಾಹ **– ಕಿಂಚ ಪ್ರಾರಬ್ಧೇತಿ ॥** ಭೋಗಕ್ಷಯ್ಯಾಣಿ ಸುಖದುಃಖಾನುಭವರೂಪಭೋಗನಾಶ್ಯಾನಿ । ತೇಷು ಬ್ರಹ್ಮಜ್ಞಾನಾನಾಶ್ಯೇಷು । ಬ್ರಹ್ಮಜ್ಞಾನೇತರಸುಖದುಃಖಜ್ಞಾನನಾಶ್ಯೇಷು । ದ್ವಿಧಾ ಉಕ್ತವಿಧಯಾ ಪ್ರಕಾರದ್ವಯೇನ ॥ ೧೨೯೮ ॥

**ವಿವರಣೆ–** ಬ್ರಹ್ಮಜ್ಞಾನೇತರಜ್ಞಾನ-ಅಬಾಧ್ಯತ್ವೇಸತಿ ಬ್ರಹ್ಮಜ್ಞಾನಬಾಧ್ಯತ್ವಂ' ಎಂದು ಲಕ್ಷಣವನ್ನು ಹೇಳಿದರೂ ಇನ್ನೊಂದು ಸ್ಥಳದಲ್ಲಿ ಅವ್ಯಾಪ್ತಿಯನ್ನು ಹೇಳುತ್ತಾರೆ. ಪ್ರಾರಬ್ಧ ಕರ್ಮಗಳು ಬ್ರಹ್ಮಜ್ಞಾನನಾಶ್ಯವಲ್ಲ. ಸುಖದುಃಖಾನುಭವರೂಪವಾದ ಭೋಗದಿಂದ ಮಾತ್ರ ನಾಶ್ಯವಾದವು. ಅವುಗಳಲ್ಲಿ ಬ್ರಹ್ಮಜ್ಞಾನಬಾಧ್ಯತ್ವವೂ ಇಲ್ಲ ಅಥವಾ ಬ್ರಹ್ಮಜ್ಞಾನ ನಾಶ್ಯತ್ವವೂ ಇಲ್ಲ. ಹಾಗೆಯೇ, ಬ್ರಹ್ಮಜ್ಞಾನೇತರ ಅಬಾಧ್ಯತ್ವವೂ ಇಲ್ಲ. ಏಕೆಂದರೆ ಬ್ರಹ್ಮಜ್ಞಾನೇತರವಾದ ಭೋಗದಿಂದ ಬಾಧ್ಯತ್ವವಾಗಲೀ ಅಥವಾ ನಾಶ್ಯತ್ವವಾಗಲೀ ಇದೆ. ಆದ್ದರಿಂದ ಪ್ರಾರಬ್ಧಕರ್ಮಗಳಲ್ಲಿ ಅವ್ಯಾಪ್ತಿಯು ಅಪರಿಹಾರ್ಯವಾಗಿ ಉಂಟಾಗುತ್ತದೆ ಎಂದು ಅಭಿಪ್ರಾಯ.

ಅರ್ಥಕ್ರಿಯಾಕಾರಿತ್ವೈವ ವ್ಯಾವಹಾರಿಕತಾ ಯದಿ ।
ಶಶಶೃಂಗಮಭೂತ್ ತತ್ವಂ ಪರಮಾರ್ಥತರಂ ತದಾ ॥ ೧೨೯೯ ॥

**ಅರ್ಥ–** ಯದಿ = ಒಂದು ಪಕ್ಷ, ವ್ಯಾವಹಾರಿಕತಾ = ವ್ಯಾವಹಾರಿಕತ್ವವು, ಅರ್ಥ-ಕ್ರಿಯಾಕಾರಿಕಾ ಏವ = ಅರ್ಥಕ್ರಿಯಾಕಾರಿತ್ವವೇ ಆದರೆ, ತದಾ = ಆ ಪಕ್ಷದಲ್ಲಿ, ಶಶಶೃಂಗಂ = ಮೊಲದ ಕೊಂಬು, ಪರಮಾರ್ಥತರಂ = ಪರಮಾರ್ಥತರವಾದ, ತತ್ವಂ = ತತ್ವವು, ಅಭೂತ್ = ಆಯಿತು.

**ಅನುವಾದ–** ವ್ಯಾವಹಾರಿಕತ್ವಂ 'ಅರ್ಥಕ್ರಿಯಾಕಾರಿತ್ವಂ' ಎಂದು ಹೇಳಿದರೆ ಶಶವಿಷಾಣವು ಪರಮಾರ್ಥತರ ತತ್ತ್ವವಾಗುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣ ವ್ಯಾವಹಾರಿಕತ್ವಲಕ್ಷಣಮನೂದ್ಯ ದೂಷಯತಿ – **ಅರ್ಥಕ್ರಿಯೇತಿ ॥** ಅರ್ಥಕ್ರಿಯಾಕಾರಿತ್ವರೂಪವ್ಯಾವಹಾರಿಕತ್ವಶಂಕಾಯಾ ಅಪ್ಯಭಾವಾತ್ ಪರಮಾರ್ಥತರಮಿತ್ಯುಕ್ತಮ್ ॥ ೧೨೯೯ ॥

**ವಿವರಣೆ–** ಅರ್ಥಕ್ರಿಯಾಕಾರಿತ್ವವು ವ್ಯಾವಹಾರಿಕತ್ವವೆಂದು ಹೇಳಿದರೆ, ಬ್ರಹ್ಮನಲ್ಲಿ ಅರ್ಥಕ್ರಿಯಾಕಾರಿತ್ವ ವಿಷಯದಲ್ಲಿ ವಾದಿಗಳ ವಿಪ್ರತಿಪತ್ತಿ ಇದೆ. ಆದರೆ ಶಶಶೃಂಗದಲ್ಲಿ ಅರ್ಥಕ್ರಿಯಾಕಾರಿತ್ವವು ಇಲ್ಲ ಎಂಬ ವಿಷಯದಲ್ಲಿ ಯಾವ ವಾದಿಗಳಿಗೂ ವಿಪ್ರತಿಪತ್ತಿ ಇಲ್ಲ. ಅರ್ಥಕ್ರಿಯಾಕಾರಿತ್ವ ಶಂಕೆ ಇರುವ ಬ್ರಹ್ಮನು ಪಾರಮಾರ್ಥಿಕನಾಗುವುದಾದರೆ ಅರ್ಥಕ್ರಿಯಾಕಾರಿತ್ವ ಶಂಕೆಯೂ ಇಲ್ಲದಂತಹ ಶಶವಿಷಾಣವು ಪಾರಮಾರ್ಥಿಕತರ ವಾಗಿರುತ್ತವೆಂದು ಇಲ್ಲಿ ಆಪಾದನೆ ಮಾಡುತ್ತಾರೆ.

**ಉಪಾದಾನಂ ನಿಮಿತ್ತಂ ವಾ ಭ್ರಮಾಧಿಷ್ಠಾನಮೇವ ವಾ ।**
**ಬ್ರಹ್ಮ ತ್ವಪರಮಾರ್ಥತ್ವಾದುಪೇಕ್ಷ್ಯಮಭವತ್ ತವ ॥ ೧೩೦೦ ॥**

**ಅರ್ಥ–** ಬ್ರಹ್ಮ ತು= ಪರಬ್ರಹ್ಮನಾದರೋ, ಜಗತಃ = ಜಗತ್ತಿಗೆ, ಉಪಾದಾನಂ ವಾ = ಉಪಾದಾನಕಾರಣನಾಗಲಿ, ನಿಮಿತ್ತಂ ವಾ = ನಿಮಿತ್ತಕಾರಣನಾಗಲಿ, ಭ್ರಮಾಧಿಷ್ಠಾನಂ ಏವ ವಾ = ಭ್ರಮೆಗೆ ಅಧಿಷ್ಠಾನನಾಗಲಿ (ಯಾವ ರೀತಿಯಿಂದಲೂ ಅವನಿಗೆ ಅರ್ಥ-ಕ್ರಿಯಾ-ಕಾರಿತ್ವವು ಬರುವುದರಿಂದ), ಅಪರಮಾರ್ಥತ್ವಾತ್= ಪಾರಮಾರ್ಥಿಕಸತ್ಯವಾಗಲಿಲ್ಲವಾದ್ದರಿಂದ, ತವ = ನಿನಗೆ, ಉಪೇಕ್ಷ್ಯಂ = ತಿರಸ್ಕಾರಕ್ಕೆ ಯೋಗ್ಯನು, ಅಭವತ್ = ಆದನು.

**ಅನುವಾದ–** ಬ್ರಹ್ಮನು ಜಗತ್ತಿಗೆ ಉಪಾದಾನನಾಗಲೀ ಅಥವಾ ನಿಮಿತ್ತನಾಗಲೀ ಅಥವಾ ಜಗದ್‌ಭ್ರಮಾಧಿಷ್ಠಾನವಾಗಲೀ ಯಾವ ರೀತಿಯಿಂದಲಾದರೂ ಅವನಿಗೆ ಅರ್ಥಕ್ರಿಯಾಕಾರಿತ್ವವು ಬರುವುದರಿಂದ ಅವನು ಪರಮಾರ್ಥಸತ್ ಎಂದು ಸಿದ್ಧವಾಗುವುದಿಲ್ಲ. ಆದ್ದರಿಂದ ನಿನ್ನ ಮತದಲ್ಲಿ ಅವನು ಉಪೇಕ್ಷ್ಯನಾಗುತ್ತಾನೆ.

**ಭಾವವಿಲಾಸಿನೀ–** ತವಮತೇ । ಜಗತೋ ನಿಮಿತ್ತತ್ವಾತ್ ಉಪಾದಾನತ್ವಾದ್ವಾ ಅಂತತೋಽಧಿಷ್ಠಾನತಯಾ ಜಗದ್‌ಭ್ರಮಹೇತುತ್ವಾದ್ವಾ ತವ ವ್ಯಾವಹಾರಿಕತ್ವಲಕ್ಷಣಮಿದಂ ಬ್ರಹ್ಮಣ್ಯತಿ-ವ್ಯಾಪ್ತಮ್ । ಅರ್ಥಕ್ರಿಯಾಶೂನ್ಯತ್ವರೂಪಂ ಪಾರಮಾರ್ಥಿಕತ್ವಲಕ್ಷಣಂ ಚ ಶಶಶೃಂಗೇಽತಿ-ವ್ಯಾಪ್ತಮಿತಿ ಭಾವಃ ॥ ೧೩೦೦ ॥

**ವಿವರಣೆ–** ಶ್ರುತಿ ಸೂತ್ರಗಳು ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳುತ್ತವೆ. ಆ ಜಗತ್ಕಾರಣತ್ವವು ಇಲ್ಲವೇ ಉಪಾದಾನತ್ವ ರೂಪವಾಗಬೇಕು ಅಥವಾ ನಿಮಿತ್ತತ್ವರೂಪವಾಗಬೇಕು ಅಥವಾ ಭ್ರಮಾಧಿಷ್ಠಾನತ್ವ ರೂಪವಾಗಬೇಕು. ಏನಾದರೂ ಜಗತ್ಸೃಷ್ಟಿಗೆ ಅನುಕೂಲವಾದ ಕ್ರಿಯೆಯನ್ನು ಬ್ರಹ್ಮನಲ್ಲಿ ಒಪ್ಪಬೇಕು. ಹೀಗೆ ಬ್ರಹ್ಮನಲ್ಲಿ ಅರ್ಥಕ್ರಿಯಾಕಾರಿತ್ವವು ಬರುವುದರಿಂದ ಅವನು ವ್ಯಾವಹಾರಿಕವೆಂದಾಯಿತು. ವ್ಯಾವಹಾರಿಕವಾದುದು ಉಪೇಕ್ಷ್ಯವಾದುದರಿಂದ ನಿನ್ನ ಪ್ರಕ್ರಿಯೆಯಂತೆ ಬ್ರಹ್ಮನು ಉಪೇಕ್ಷ್ಯನಾಗುತ್ತಾನೆ ಎಂದು ಇಲ್ಲಿ ಆಪಾದನೆ ಮಾಡುತ್ತಾರೆ.

**ಮುಕ್ತೇಶ್ಚ ಸಾಧಕೋ ಮುಕ್ತೋ ಮುಕ್ತಿದಂ ಚಾಭವನ್ಮೃಷಾ॥ ೧೩೦೧ ॥**

**ಅರ್ಥ–** ಚ = ಮತ್ತು, ಮುಕ್ತೇಃ = ಮೋಕ್ಷಕ್ಕೆ, ಸಾಧಕಃ = ಸಾಧಕವಾದುದು, ಮುಕ್ತಃ = ಮುಕ್ತಜೀವಿಯು, ಮುಕ್ತಿದಂ = ಮೋಕ್ಷವನ್ನು ಕೊಡುವವನು, ಚ = ಕೂಡ, ಮೃಷಾ = ಮಿಥ್ಯಾಭೂತವಾದದ್ದು, ಅಭವತ್ = ಆದನು.

**ಅನುವಾದ–** ಮುಕ್ತಿಗೆ ಸಾಧಕವಾದುದು, ಮುಕ್ತನು ಮತ್ತು ಮೋಕ್ಷವನ್ನು ಕೊಡುವವನೂ ಸಹ ಮಿಥ್ಯಾಭೂತನಾಗಬೇಕಾಗುತ್ತದೆ.

**ಭಾವವಿಲಾಸಿನೀ–** ಮುಕ್ತಿದಂ ಬ್ರಹ್ಮ ॥ ೧೩೦೧ ॥

**ವಿವರಣೆ–** ಮುಕ್ತಿಗೆ ಸಾಧಕವಾದುದು ಬ್ರಹ್ಮಜ್ಞಾನ. ಅದಕ್ಕೆ ಮೋಕ್ಷರೂಪ ಅರ್ಥಕ್ರಿಯಾಕಾರಿತ್ವ ಇದೆ. ಮುಕ್ತನು ಮೋಕ್ಷಸಾಧಕನಾಗಿದ್ದಾನೆ. ಅವನಿಗೂ ಮುಕ್ತಿರೂಪಾರ್ಥ ಕ್ರಿಯಾಕಾರಿತ್ವವಿದೆ. ಮುಕ್ತಿಯನ್ನು ಕೊಡುವ ಬ್ರಹ್ಮನಿಗೂ ಮೋಕ್ಷದಾತೃತ್ವರೂಪವಾದ ಅರ್ಥಕ್ರಿಯಾಕಾರಿತ್ವವಿದೆ. ಯಾವುದು ಅರ್ಥಕ್ರಿಯಾ-ಕಾರಿಯೋ ಅದು ಮಿಥ್ಯಾ ಎಂದು ಹೇಳಿದರೆ ಈ ಮೂರು ವಸ್ತುಗಳೂ ಮಿಥ್ಯಾಭೂತ-ವಾಗಬೇಕಾದ ಪ್ರಸಂಗವು ಬರುತ್ತವೆ.

**ಭಯಕಂಪಾದಿಹೇತುತ್ವಂ ರಜ್ಜುಸರ್ಪಸ್ಯ ತೇ ಮತೇ ।**
**ಸ್ವಾಪ್ನಸ್ಯ ಚಾಸ್ತಿ ತೇನೇದಂ ವ್ಯಾವಹಾರಿಕತಾ ಕಥಮ್ ॥ ೧೩೦೨ ॥**

**ಅರ್ಥ–** ತೇ = ನಿನ್ನ, ಮತೇ = ಮತದಲ್ಲಿ, ಭಯಕಂಪಾದಿಹೇತುತ್ವಂ = ಹೆದರಿಕೆ, ನಡುಕ, ಮೊದಲಾದವುಗಳನ್ನು ಕುರಿತು ಕಾರಣತ್ವವು, ರಜ್ಜುಸರ್ಪಸ್ಯ = ಹಗ್ಗದಲ್ಲಿ ಕಂಡ ಹಾವಿಗೆ, ಸ್ವಾಪ್ನಸ್ಯ ಚ = ಸ್ವಪ್ನದಲ್ಲಿ ಕಂಡ ವಸ್ತುವಿಗೆ, ಅಸ್ತಿ = ಇದೆ, ತೇನ = ಹೀಗೆ ವ್ಯಾವಹಾರಿಕಲಕ್ಷಣಕ್ಕೆ ಪ್ರಾತಿಭಾಸಿಕದಲ್ಲಿ ಅತಿವ್ಯಾಪ್ತಿ ಬರುವುದರಿಂದ, ಇದಂ = ಈ ಅರ್ಥಕ್ರಿಯಾಕಾರಿತ್ವವು, ವ್ಯಾವಹಾರಿಕತಾ = ವ್ಯಾವಹಾರಿಕತ್ವವು (ವ್ಯಾವಹಾರಿಕದ ಲಕ್ಷಣವು), ಕಥಂ = ಹೇಗೆ, ಭವೇತ್= ಆಗುತ್ತದೆ.

**ಅನುವಾದ–** ನಿನ್ನ ಮತದಲ್ಲಿ ಭಯಕಂಪಾದಿಹೇತುತ್ವವು ರಜ್ಜುಸರ್ಪಕ್ಕೂ ಮತ್ತು ಸ್ವಾಪ್ನ ಪದಾರ್ಥಗಳಿಗೂ ಇದೆ. ವ್ಯಾವಹಾರಿಕಲಕ್ಷಣವು ಪ್ರಾತಿಭಾಸಿಕದಲ್ಲಿ ಬರುವುದರಿಂದ ಅರ್ಥಕ್ರಿಯಾಕಾರಿತ್ವವು ಹೇಗೆ ವ್ಯಾವಹಾರಿಕ ಲಕ್ಷಣವಾಗುತ್ತದೆ?

**ಭಾವವಿಲಾಸಿನೀ–** ಪ್ರಾತಿಭಾಸಿಕೇಽತಿವ್ಯಾಪ್ತಿಮಾಹ – **ಭಯೇತಿ** ॥ ಇದಂ ಅರ್ಥಕ್ರಿಯಾಕಾ-ರಿತ್ವಮ್ ॥ ೧೩೦೨ ॥

**ವಿವರಣೆ–** ಅರ್ಥಕ್ರಿಯಾಕಾರಿತ್ವವು ವ್ಯಾವಹಾರಿಕತ್ವ ಎಂದು ಹೇಳಿದರೆ ರಜ್ಜುಸರ್ಪಕ್ಕೂ ಸಹ ಭಯಕಂಪಾದಿ ಅರ್ಥಕ್ರಿಯಾಕಾರಿತ್ವವಿದೆ. ಆದ್ದರಿಂದ ಅದನ್ನೂ ವ್ಯಾವಹಾರಿಕವೆಂದು ಒಪ್ಪಬೇಕು. ಆದರೆ ನೀನು ಅವುಗಳನ್ನು ಪ್ರಾತಿಭಾಸಿಕವೆಂದು ಒಪ್ಪುತ್ತೀಯೆ. ಹಾಗೆಯೇ ಸ್ವಾಪ್ನ ಪದಾರ್ಥಕ್ಕೂ ಕೂಡ ಸೂಚಕತ್ವಾದಿ ಅರ್ಥಕ್ರಿಯಾ-ಕಾರಿತ್ವವಿದೆ. ನೀನು ಅದನ್ನೂ ಪ್ರಾತಿಭಾಸಿಕವೆಂದು ಅಂಗೀಕರಿಸುತ್ತೀಯೆ. ಆದ್ದರಿಂದ ವ್ಯಾವಹಾರಿಕಲಕ್ಷಣಕ್ಕೆ ಪ್ರಾತಿಭಾಸಿಕವಾದ ಈ ಎರಡು ಸ್ಥಳಗಳಲ್ಲಿ ಅತಿವ್ಯಾಪ್ತಿಯು ಬರುವುದರಿಂದ ಅರ್ಥಕ್ರಿಯಾಕಾರಿತ್ವವು ವ್ಯಾವಹಾರಿಕಲಕ್ಷಣವಾಗುವುದಿಲ್ಲ.

**ಪ್ರಾತಿಭಾಸಿಕ ಏವಾರ್ಥೋ ಜ್ಞಾನಂ ಚ ಪ್ರಾತಿಭಾಸಿಕಮ್ ।**
**ಇತಿ ಯೋ ವಕ್ತಿ ಕಿಂ ನಾಸ್ಯ ಪ್ರಾತಿಭಾಸಿಕಮರ್ಥಕೃತ್ ॥ ೧೩೦೩ ॥**

**ಅರ್ಥ–** ಯಃ = ಯಾರು, ಅರ್ಥಃ = ಅರ್ಥವು, ಪ್ರಾತಿಭಾಸಿಕಃ ಏವ = ಪ್ರಾತಿಭಾಸಿಕವೇ ಆಗಿದೆ, ಚ = ಮತ್ತು, ಜ್ಞಾನಂ = ಜ್ಞಾನವು, ಪ್ರಾತಿಭಾಸಿಕಂ = ಪ್ರಾತಿಭಾಸಿಕವಾಗಿದೆ, ಇತಿ = ಈ ರೀತಿಯಾಗಿ, ವಕ್ತಿ = ಹೇಳುತ್ತಾನೋ, ಅಸ್ಯ = ಇವನಿಗೆ, ಪ್ರಾತಿಭಾಸಿಕಂ = ಪ್ರಾತಿಭಾಸಿಕವಾದದ್ದು, ಅರ್ಥಕೃತ್= ಅರ್ಥಕ್ರಿಯಾಕಾರಿಯು, ಕಿಂ ನ = ಅಲ್ಲವೇನು.

**ಅನುವಾದ– ಯಾರು ಅರ್ಥವೂ ಪ್ರಾತಿಭಾಸಿಕ ಮತ್ತು ಜ್ಞಾನವೂ ಪ್ರಾತಿಭಾಸಿಕ ಎಂದು ಹೇಳುತ್ತಾರೋ ಅವರಿಗೆ ಪ್ರಾತಿಭಾಸಿಕವಾದುದು ಅರ್ಥಕ್ರಿಯಾಕಾರಿಯಲ್ಲವೇ?**

**ಭಾವವಿಲಾಸಿನೀ– ಅಸ್ಯ ಅರ್ಥಜ್ಞಾನಯೋರುಭಯೋರಪ್ಯಧ್ಯಾಸಂ ವದತೋ ಮಾಯಿನಃ ॥**

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ರಜ್ಜುಸರ್ಪ ಸ್ಥಳದಲ್ಲಿಯೂ ಸ್ವಾಪ್ನ ಪದಾರ್ಥ ಸ್ಥಳದಲ್ಲಿಯೂ ಅದ್ವೈತವು ಜ್ಞಾನವೂ ಮತ್ತು ಅರ್ಥವೂ ಪ್ರಾತಿಭಾಸಿಕವೆಂದು ಹೇಳುತ್ತಾರೆ ಮತ್ತು ಅರ್ಥವು ಭಯಕಂಪಾದಿ ಅರ್ಥಕ್ರಿಯಾಕಾರಿ ಎಂದು ಹೇಳುತ್ತಾರೆ. ಒಂದು ಪಕ್ಷ ಅರ್ಥಕ್ಕೆ ಅರ್ಥಕ್ರಿಯಾಕಾರಿತ್ವವನ್ನು ಹೇಳದೆ ಜ್ಞಾನಕ್ಕೇ ಅರ್ಥಕ್ರಿಯಾಕಾರಿತ್ವವನ್ನು ಒಪ್ಪಿದರೂ, ಪ್ರಾತಿಭಾಸಿಕಾರ್ಥ ವಿಷಯಕ ಜ್ಞಾನವೂ ಪ್ರಾತಿಭಾಸಿಕವೆಂದು ಅವರ ಮತವಿರುವುದರಿಂದ ಅರ್ಥಕ್ರಿಯಾಕಾರಿತ್ವವು ಪ್ರಾತಿಭಾಸಿಕದಲ್ಲಿ ಬರುವುದರಿಂದ ವ್ಯಾವಹಾರಿಕಲಕ್ಷಣಕ್ಕೆ ಪ್ರಾತಿಭಾಸಿಕದಲ್ಲಿ ಅತಿವ್ಯಾಪ್ತಿಯು ಬರುತ್ತದೆ ಎಂದು ಇಲ್ಲಿ ವಿವರಿಸುತ್ತಾರೆ.

**ಅತತ್ವಮಭವತ್ ತೇಽನ್ನಂ ತೃಣಂ ತತ್ವಮಭೂದಹೋ ॥ ೧೩೦೪ ॥**

**ಅರ್ಥ–** ತೇ = ನಿನ್ನ ದೃಷ್ಟಿಯಿಂದ, ಅನ್ನಂ = ಅನ್ನವು, ಅತತ್ವಂ = ಅತತ್ವವಾದದ್ದು, ಅಭವತ್ = ಆಯಿತು, ತೃಣಂ = ಹುಲ್ಲು, ತತ್ವಂ = ತತ್ವವು, ಅಭೂತ್ = ಆಯಿತು, ಅಹೋ = ಆಶ್ಚರ್ಯವು,

**ಅನುವಾದ– ನಿನಗೆ ಅನ್ನವು ಅತತ್ವವಾಯಿತು ಮತ್ತು ತೃಣವು ತತ್ವವಾಯಿತು. ಇದು ಎಂತಹ ಆಶ್ಚರ್ಯ!**

**ಭಾವವಿಲಾಸಿನೀ– ಕಿಂಚ ಅರ್ಥಕ್ರಿಯಾಕಾರಿತ್ವಸ್ಯಾತತ್ವಾಪರಪರ್ಯಾಯವ್ಯಾವಹಾರಿಕತ್ವ-ಪ್ರಯೋಜಕತ್ವೇ ತವಾರ್ಥಕ್ರಿಯಾಕಾರಿ ಅನ್ನಂ ರಾಸಭಸ್ಯೈವ ತತ್ವಮ್ । ತಸ್ಯ ತೇನಾರ್ಥಾ-ಭಾವಾತ್ । ತವ ತು ಅತತ್ವಮೇವ । ತೃಪ್ತಿರೂಪಾರ್ಥಕ್ರಿಯಾಕಾರಿತ್ವಾತ್ । ತತ್ವಂ ತು ತವ ರಾಸಭಸ್ಯಾರ್ಥಕ್ರಿಯಾಕಾರಿತಯಾ ತಸ್ಯಾತತ್ವಭೂತಂ ತೃಣಮೇವ । ತತಸ್ತವಾರ್ಥಾ-ಭಾವಾದಿತ್ಯಾಪತಿತಂ ಅತತ್ವಮೇವ ಪಶುತ್ವಯೋಗ್ಯೋಽಸೀತ್ಯಾಹ – ಅತತ್ವಮಿತಿ ॥೧೩೦೪॥**

**ವಿವರಣೆ–** ನಿನ್ನ ಅನ್ನಕ್ಕೆ ತೃಪ್ತಿರೂಪವಾದ ಅರ್ಥಕ್ರಿಯಾಕಾರಿತ್ವವಿರುವುದರಿಂದ ಅದು ಅತತ್ವವಾಯಿತು. ತೃಣಕ್ಕೆ ನಿನ್ನನ್ನು ಕುರಿತು ತೃಪ್ತಿರೂಪ ಅರ್ಥಕ್ರಿಯಾಕಾರಿತ್ವವು

ಇಲ್ಲದಿರುವುದರಿಂದ ಅದು ತತ್ತ್ವವಾಯಿತು. ರಾಸಭಕ್ಕೆ ಅರ್ಥಕ್ರಿಯಾಕಾರಿಯಾದ ಆದ್ದರಿಂದ ಅತತ್ತ್ವವಾದ ತೃಣವು ನಿನಗೆ ಅರ್ಥಕ್ರಿಯಾಕಾರಿಯಾಯಿತು. ಆದ್ದರಿಂದ ನೀನು ಪಶುವೆಂದು ಪರಿಹಾಸ ಮಾಡುತ್ತಾರೆ.

**ಸಮರ್ಥಾಯಾಂ ಪ್ರವೃತ್ತೌ ತು ಪ್ರಾಮಾಣ್ಯಂ ಹೀಯತೇ ಕಿಲ ।**
**ಅಸಮರ್ಥಪ್ರವೃತ್ತೌ ತು ಪ್ರಾಮಾಣ್ಯಮುಪಚೀಯತೇ ॥ ೧೩೦೫ ॥**

**ಅರ್ಥ–** ಸಮರ್ಥಾಯಾಂ = ಸಮರ್ಥವಾದ, ಪ್ರವೃತ್ತೌ ತು = ಪ್ರವೃತ್ತಿಯಾದರೆ, ಪ್ರಾಮಾಣ್ಯಂ = ಜ್ಞಾನದ ಪ್ರಾಮಾಣ್ಯವು, ಹೀಯತೇ = ಕಡಿಮೆಯಾಗುತ್ತದೆ, ಅಸಮರ್ಥಪ್ರವೃತ್ತೌ ತು = ಅಸಮರ್ಥವಾದ ಪ್ರವೃತ್ತಿ ಇದ್ದರೆ, ಪ್ರಾಮಾಣ್ಯಂ = ಪ್ರಾಮಾಣ್ಯವು, ಉಪಚೀಯತೇ ಕಿಲ = ಅಭಿವೃದ್ಧವಾಗುತ್ತದಷ್ಟೆ

**ಅನುವಾದ–** ಸಮರ್ಥ ಪ್ರವೃತ್ತಿ ಜನಕತ್ವವು ಬಂದರೆ ಪ್ರಾಮಾಣ್ಯವು ಕಡಿಮೆಯಾಗುತ್ತದೆ. ಸಮರ್ಥ ಪ್ರವೃತ್ತಿ ಜನಕತ್ವವು ಬರದಿದ್ದರೆ ಪ್ರಾಮಾಣ್ಯವು ವೃದ್ಧಿಯಾಗುತ್ತದೆ ಎಂಬುದು ಆಶ್ಚರ್ಯಕರವಾದ ಸಂಗತಿ.

**ಭಾವವಿಲಾಸಿನೀ– ದೋಷಾಂತರಂ ಚಾಹ – ಸಮರ್ಥಾಯಾಮಿತಿ ॥ ಅರ್ಥಕ್ರಿಯಾಕಾರಿತ್ವಸ್ಯ ಮಿಥ್ಯಾತ್ವಪ್ರಯೋಜಕತ್ವೇನೋಕ್ತೇಸ್ತದಭಾವಸ್ಯ ಚ ಪಾರಮಾರ್ಥ್ಯೋಪಯೋಗಿತ್ವೋಕ್ತೇರಿತಿಭಾವಃ । ಇದಂ ಚ ನ ವಿದುಷಾಂ ಸಮ್ಮತಮಿತಿ ಜ್ಞೇಯಮ್ ॥ ೧೩೦೫ ॥**

**ವಿವರಣೆ–** ಅರ್ಥಕ್ರಿಯಾಕಾರಿತ್ವವನ್ನು ಮಿಥ್ಯಾತ್ವಕ್ಕೆ ಪ್ರಯೋಜಕವೆಂದೂ, ಅರ್ಥಕ್ರಿಯಾಕಾರಿತ್ವಾಭಾವವನ್ನು ಪಾರಮಾರ್ಥಿಕತ್ವಕ್ಕೆ ಪ್ರಯೋಜಕವೆಂದೂ ಹೇಳಿದರೆ ಇಲ್ಲಿ ದೋಷಾಂತರವನ್ನು ಹೇಳುತ್ತಾರೆ. ಆದ್ದರಿಂದ ಇಂತಹ ವ್ಯವಸ್ಥೆಯು ಎಂದಿಗೂ ವಿದ್ವಾಂಸರಿಗೆ ಸಮ್ಮತವಲ್ಲ ಎಂದು ಅಭಿಪ್ರಾಯ.

**ಇಯಂ ಹಿ ಶಾಸ್ತ್ರಮರ್ಯಾದಾ ನ ವಾರ್ಯಾ ದಾಯವೇದಿಭಿಃ ।**
**ಯತ್ ಸಾರ್ಥಕ್ಯಂ ಪರಸ್ಯಾಹ ವೈಯರ್ಥ್ಯಂ ಸ್ವಸ್ಯ ಸ ಸ್ವಯಮ್ ॥ ೧೩೦೬ ॥**

**ಅರ್ಥ–** ಸಃ= ಅದ್ವೈತಿಯು, ಯತ್=ಯಾವ ಕಾರಣದಿಂದ, ಪರಸ್ಯ = ಪರರ ವಾದಕ್ಕೆ, ಸಾರ್ಥಕ್ಯಂ = ಸಾರ್ಥಕ್ಯವನ್ನು, ಚ = ಮತ್ತು, ಸ್ವಸ್ಯ = ತನ್ನ ವಾದಕ್ಕೆ, ವೈಯರ್ಥ್ಯಂ = ವೈಯರ್ಥ್ಯವನ್ನು, ಸ್ವಯಂ = ತಾನೇ, ಆಹ = ಹೇಳುತ್ತಾನೋ, ತತ್= ಆ ಕಾರಣದಿಂದ, ದಾಯವೇದಿಭಿಃ = ತನ್ನ ಲಾಭವನ್ನು ಯೋಚಿಸುವ ವಾದಿಗಳಿಂದ, ಇಯಂ = ಈ, ಶಾಸ್ತ್ರಮರ್ಯಾದಾ = ಶಾಸ್ತ್ರಮರ್ಯಾದೆಯು, ನ ವಾರ್ಯಾ ಹಿ = ನಿರಾಕರಿಸಲ್ಪಡಲು ಯೋಗ್ಯವಲ್ಲವಷ್ಟೆ.

**ಅನುವಾದ–** ಈ ಶಾಸ್ತ್ರಮರ್ಯಾದೆಯನ್ನು ತಮ್ಮ ಲಾಭವನ್ನು ಯೋಚಿಸುವ ಯಾವ ವಾದಿಗಳೂ ಅಲ್ಲಗಳೆಯಬಾರದು. ಏಕೆಂದರೆ ತನ್ನ ವಾದಗಳಿಗೆ ವೈಯರ್ಥ್ಯವನ್ನು ಪರರ ವಾದಗಳಿಗೆ ಸಾರ್ಥಕ್ಯವನ್ನು ತಾನೇ ಹೇಳುತ್ತಾನೆ.

**ಭಾವವಿಲಾಸಿನೀ–ದೋಷಾಂತರಂ ಚಾಹ– ಇಯಮಿತಿ ॥ ದಾಯವೇದಿಭಿಃ ಆದಾಯ ವೇದಿಭಿಃ ।** ಯತ್ ಯಸ್ಮಾತ್ ಭೇದಸ್ಯಾರ್ಥಕ್ರಿಯಾಕಾರಿತ್ವಂ ವದನ್ ಪರಸ್ಯ ಭೇದವಾದಿನಃ ಮೋಕ್ಷಾದ್ಯರ್ಥಕ್ರಿಯಾವತ್ತ್ವೇನ ಸಾರ್ಥಕ್ಯಮಾಹ । ಐಕ್ಯಸ್ಯಾರ್ಥಕ್ರಿಯಾಕಾರಿತ್ವಾಭಾವಂ ವದನ್‌ಸ್ವಸ್ಯ ವೈಯರ್ಥ್ಯಮಾಹ ॥ ಸಃ ವಾದೀ । ತತ್ತಸ್ಮಾತ್ ನ ವಾರ್ಯೇತಿ ಪೂರ್ವೇಣಾನ್ವಯಃ । ಏವಂ ವದತಃ ಸ್ವವ್ಯಾಹತಿರಿತಿ ಭಾವಃ ॥ ೧೩೦೬ ॥

**ವಿವರಣೆ–** ವಾದಿಗಳಾದವರು ತಮ್ಮ ವಾದಕ್ಕೆ ಸಾರ್ಥಕ್ಯವನ್ನು, ಪರರ ವಾದಕ್ಕೆ ವೈಯರ್ಥ್ಯವನ್ನು ಹೇಳಬೇಕು. ಅದ್ವೈತಿಗಳು ತಮ್ಮ ಕಾರ್ಯಕ್ಕೆ ಸಾರ್ಥಕ್ಯವನ್ನು ಹೇಳಿದರೆ ಅರ್ಥಕ್ರಿಯಾಕಾರಿತ್ವವು ಬರುವುದರಿಂದ ಅದು ಮಿಥ್ಯಾತ್ವಪ್ರಯೋಜಕವಾಗುವುದರಿಂದ ತಮ್ಮ ವಾದಕ್ಕೆ ಸಾರ್ಥಕ್ಯವನ್ನು ಹೇಳಬಾರದು. ಹೇಳದಿದ್ದರೆ ಪರರ ವಾದಕ್ಕೆ ಪ್ರತಿರೋಧವಿಲ್ಲದಿರುವುದರಿಂದ ಪರರ ವಾದವೇ ಜಯಿಸುತ್ತದೆ. ಹೀಗೆ ತನ್ನ ವಾದದ ಸೋಲನ್ನು ತಾನೇ ಒಪ್ಪಿಕೊಳ್ಳುವವನ ವಾದವನ್ನು ಯಾವ ವಿವೇಕಿಯಾದವನೂ ಅಲ್ಲಗಳೆಯಲು ಹೋಗಬಾರದು ಎಂದು ಅಭಿಪ್ರಾಯ.

**ಸತ್ಯಂ ಅರ್ಥಕ್ರಿಯಾಕೃತ್ತ್ವಂ ತೇನ ಚ ಕ್ಷಣಿಕಂ ಜಗತ್ ।**
**ಯೋ ವಕ್ತಿ ತೇನ ತೇ ಸಖ್ಯಂ ಮಹದಾಸೀದ್ ಭವಾಂತರೇ ।**
**ಅರ್ಥಕ್ರಿಯಾಕಾರಿ ಸರ್ವಂ ಯಸ್ತ್ವಂ ಮಿಥ್ಯೇತಿ ಕತ್ಥಸೇ ॥ ೧೩೦೭ ॥**

**ಅರ್ಥ–** ಸತ್ವಂ ನಾಮ = ಸತ್ವವೆಂದರೆ, ಅರ್ಥಕ್ರಿಯಾಕಾರಿತ್ವಂ = ಅರ್ಥಕ್ರಿಯಾಕಾರಿತ್ವವಾಗಿದೆ, ತೇನ ಚ = ಆ ಅರ್ಥಕ್ರಿಯಾಕಾರಿತ್ವದಿಂದಾದರೂ, ಜಗತ್ = ಪ್ರಪಂಚವು, ಕ್ಷಣಿಕಂ = ಕ್ಷಣಿಕವಾಗಿದೆ, ಇತಿ = ಈ ರೀತಿಯಾಗಿ, ಯಃ = ಯಾವ ಬೌದ್ಧನು, ವಕ್ತಿ = ಹೇಳುತ್ತಾನೋ, ತೇನ = ಅವನ ಜೊತೆಗೆ, ಯಃ ತ್ವಂ = ಯಾವ ನೀನು, ಸರ್ವಂ = ಎಲ್ಲ, ಅರ್ಥಕ್ರಿಯಾಕಾರಿ = ಅರ್ಥಕ್ರಿಯಾಕಾರಿಯಾದ ಜಗತ್ತು, ಮಿಥ್ಯಾ ಇತಿ = ಮಿಥ್ಯಾ ಎಂದು, ಕತ್ಥಸೇ = ಹೇಳುತ್ತೀಯೋ, ತಸ್ಯ ತೇ = ಅಂತಹ ನಿನಗೆ, ಮಹತ್ = ದೊಡ್ಡ, ಸಖ್ಯಂ = ಸ್ನೇಹವು, ಭವಾಂತರೇ = ಜನ್ಮಾಂತರದಲ್ಲಿ ಆಸೀತ್ = ಇದ್ದಿತು.

**ಅನುವಾದ–** ಸತ್ವ ಎಂದರೆ ಅರ್ಥಕ್ರಿಯಾಕಾರಿತ್ವ, ಯಾವುದು ಅರ್ಥಕ್ರಿಯಾಕಾರಿಯೋ ಅದು ಕ್ಷಣಿಕ ಎಂದು ಬೌದ್ಧರು ಹೇಳುತ್ತಾರೆ. ವ್ಯಾವಹಾರಿಕ ಸತ್ವ ಎಂದರೆ ಅರ್ಥಕ್ರಿಯಾಕಾರಿತ್ವ, ಯಾವುದು ಅರ್ಥಕ್ರಿಯಾಕಾರಿಯೋ ಅದು ಮಿಥ್ಯಾ ಎಂದು

ನೀನು ಹೇಳುತ್ತೀಯೇ. ನಿನಗೂ ಮತ್ತು ಬೌದ್ಧರಿಗೂ ಜನ್ಮಾಂತರದಲ್ಲಿ ಬಹಳ ಸ್ನೇಹವಿದ್ದಂತೆ ತೋರುತ್ತದೆ.

**ಭಾವವಿಲಾಸಿನೀ–** ಕಿಂಚೈವಂ ವದತೋ ಬೌದ್ಧಮತಪ್ರವೇಶಾಪತ್ತಿರಿತ್ಯಾಹ – **ಸತ್ತ್ವ ಇತಿ ॥** ತೇನ ಅರ್ಥಕ್ರಿಯಾಕಾರಿತ್ವಾಖ್ಯಸತ್ತ್ವೇನ ಯತ್ ಸತ್ತತ್‌ಕ್ಷಣಿಕಮಿತಿ ವದನ್‌ಬೌದ್ಧಃ । ಭವಾಂತರೇ ಜನ್ಮಾಂತರೇ। ಯಸ್ತ್ವಂ ಕತ್ಥಸೇ । ತಸ್ಯ ತವ ತೇನ ಸಖ್ಯಮಾಸೀದಿತಿ ಪೂರ್ವೇಣಾನ್ವಯಃ । ಇದಂ ತವ ಮತಂ ಬೌದ್ಧಮತಂ ಚೈಕಪ್ರಕಾರಮೇವಾಭೂದಿತಿ ಭಾವಃ ॥ ೧೩೦೭ ॥

**ವಿವರಣೆ–** ಹೀಗೆ ಅಂಗೀಕಾರ ಮಾಡಿದರೆ ಬೌದ್ಧ ಮತ ಪ್ರವೇಶಾಪತ್ತಿಯನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ. ಯಾವುದು ಅರ್ಥಕ್ರಿಯಾಕಾರಿಯೋ ಅದು ಸತ್ಯವೆಂದು ಲೋಕವು ಅಂಗೀಕರಿಸುತ್ತದೆ. ಅದನ್ನು ಬಿಟ್ಟು ಯಾವುದು ಅರ್ಥಕ್ರಿಯಾಕಾರಿಯೋ ಅದು ಕ್ಷಣಿಕ ಎಂದು ಹೇಳುವವನ ಮಾತು, ಯಾವುದು ಅರ್ಥಕ್ರಿಯಾಕಾರಿಯೋ ಅದು ಮಿಥ್ಯಾ ಎಂದು ಹೇಳುವವನ ಮಾತು ಎಂದೂ ಅಂಗೀಕಾರಾರ್ಹವಲ್ಲ. ಅವೆರಡೂ ವಾಕ್ಯಗಳೂ ತುಂಬಾ ಸದೃಶವಾಗಿರುವುದರಿಂದ ನಿನಗೆ ಬೌದ್ಧಮತ ಪ್ರವೇಶ ಉಂಟಾಗುವುದೆಂದು ಹೇಳುತ್ತಾರೆ.

ಏತಾದೃಶಂ ಚ ಮಿಥ್ಯಾತ್ವಂ ಭೇದಸ್ಯಾಸ್ತು ಸದಾ ಮಮ ।
ಮುಕ್ತಿಂ ಚ ಸದ್ಯಃ ಸಂದಧ್ಯಾದ್ ಯ ಏವಂ ವ್ಯಾವಹಾರಿಕಃ॥ ೧೩೦೮ ॥

**ಅರ್ಥ–** ಏವಂ = ಈ ರೀತಿಯಾಗಿ, ವ್ಯಾವಹಾರಿಕಃ = ವ್ಯಾವಹಾರಿಕವಾದ, ಯಃ = ಯಾವುದು, ಮುಕ್ತಿಂ ಚ = ಮೋಕ್ಷವನ್ನಾದರೋ, ಸದ್ಯಃ = ಶೀಘ್ರವಾಗಿ, ಸಂದಧ್ಯಾತ್ = ಕೊಡುತ್ತದೋ, ತಸ್ಯ = ಅಂತಹ, ಮಮ = ನನ್ನ ಮತದ, ಭೇದಸ್ಯ = ಭೇದಕ್ಕೆ, ಏತಾದೃಶಂ = ಇಂತಹ, ಮಿಥ್ಯಾತ್ವಂ ಚ = ಮಿಥ್ಯಾತ್ವವಾದರೂ, ಸದಾ = ಯಾವಾಗಲೂ, ಅಸ್ತು = ಇರಲಿ.

**ಅನುವಾದ–** ನನ್ನ ಭೇದಕ್ಕೆ ನೀನು ಹೇಳುವ ಇಂತಹ ಮಿಥ್ಯಾತ್ವವು ಯಾವಾಗಲೂ ಇರಲಿ. ಏಕೆಂದರೆ ಹೀಗೆ ವ್ಯಾವಹಾರಿಕವಾದ ಆ ಭೇದವು ತಕ್ಷಣದಲ್ಲಿ ಮುಕ್ತಿಯನ್ನು ಸಂಪಾದಿಸಿಕೊಡುತ್ತದೆ.

**ಭಾವವಿಲಾಸಿನೀ–** ಏತಾದೃಶಂ ಚ ವ್ಯಾವಹಾರಿಕತ್ವಂ ತ್ವದಭಿಲಷಿತಬಾಧ್ಯತ್ವವಿರೋಧಿ-ತಯಾಽಸ್ಮದಭಿಮತಸತ್ತ್ವಸಂಪಾದಕತಯಾ ಚ ನಾನಿಷ್ಟಮಿತ್ಯಾಹ – **ಏತಾದೃಶಮಿತಿ ॥** ಯಃ ವ್ಯಾವಹಾರಿಕೋ ಭೇದಃ ॥ ೧೩೦೮ ॥

**ವಿವರಣೆ–** ನಾವು ಅಂಗೀಕರಿಸುವ ಭೇದವು ಅರ್ಥಕ್ರಿಯಾಕಾರಿಯಾದುದರಿಂದ ಮಿಥ್ಯಾ ಎಂದು ಹೇಳುತ್ತೀಯೆ. ಅರ್ಥಕ್ರಿಯಾಕಾರಿತ್ವಕ್ಕೆ ವಿರೋಧವಿಲ್ಲದ ಮಿಥ್ಯಾತ್ವವನ್ನು ಹೇಳುವುದಾದರೆ ಅಂತಹ ಮಿಥ್ಯಾತ್ವವನ್ನು ನಾವು ಅಂಗೀಕರಿಸುತ್ತೇವೆ. ಏಕೆಂದರೆ

ಭೇದಜ್ಞಾನದ ಕಾರ್ಯವಾದ ಮೋಕ್ಷವನ್ನು ಸಾಧನೆ ಮಾಡಿಕೊಡುವುದರಲ್ಲಿ ಭೇದಕ್ಕೆ ಯಾವ ಅಸಾಮರ್ಥ್ಯವೂ ಇರುವುದಿಲ್ಲ. ನೀನು ಹೇಳುವ ಮಿಥ್ಯಾತ್ವವು ಕೇವಲ ಪಾರಿಭಾಷಿಕವಾಗುತ್ತದೆಯಾದ್ದರಿಂದ ನಮ್ಮ ಭೇದಕ್ಕೆ ಅದರ ವಿರೋಧವಿಲ್ಲ ಎಂದು ಹೇಳುತ್ತಾರೆ.

**ಮಹಾತತ್ತ್ವಂ ತವೈಕ್ಯಂ ಚ ನ ಭೇದಸ್ಯ ವಿರೋಧಕೃತ್ ।**
**ಅತೋ ಯಮಪ್ರತಿದ್ವಂದ್ವೋ ದ್ವಂದ್ವಂ ಸರ್ವತ್ರ ಸಾಧಯೇತ್ ॥ ೧೩೦೯ ॥**

**ಅರ್ಥ–** ತವ = ನಿನ್ನ, ಮಹಾತತ್ತ್ವಂ = ದೊಡ್ಡತತ್ತ್ವವೆನಿಸಿದ, ಐಕ್ಯಂ ಚ = ಐಕ್ಯವಾದರೋ, ಭೇದಸ್ಯ = ಭೇದಕ್ಕೆ, ನ ವಿರೋಧಕೃತ್ = ವಿರೋಧವನ್ನು ಮಾಡುವಂಥದೇ ಅಲ್ಲ, ಅತಃ = ಆದ್ದರಿಂದ, ಅಪ್ರತಿದ್ವಂದ್ವಃ = ಪ್ರತಿರೋಧರಹಿತವಾದ, ಅಯಂ = ಈ ಭೇದವು, ಸರ್ವತ್ರ = ಎಲ್ಲೆಡೆ, ದ್ವಂದ್ವಂ= ಭೇದವೆನಿಸಿಕೊಂಡ ತನ್ನನ್ನೇ, ಸಾಧಯೇತ್ = ಸಾಧಿಸಿಕೊಳ್ಳುತ್ತದೆ.

**ಅನುವಾದ–** ನಿನ್ನ ಮಹಾತತ್ತ್ವವಾದ ಐಕ್ಯವು ಭೇದಕ್ಕೆ ವಿರೋಧವನ್ನೇ ಮಾಡುವುದಿಲ್ಲ. ಆದ್ದರಿಂದ ಪ್ರತಿರೋಧರಹಿತವಾದ ಭೇದವು ಎಲ್ಲ ಕಡೆಯಲ್ಲಿಯೂ ತನ್ನನ್ನೇ ತಾನು ಸಾಧಿಸಿಕೊಳ್ಳುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಮಮೈವಾನುಕೂಲಮಭೂದಿತ್ಯಾಹ – **ಮಹಾತತ್ತ್ವಮಿತಿ** ॥ ತತ್ತ್ವಸ್ಯ ತ್ವಯಾಽರ್ಥಕ್ರಿಯಾಕಾರಿತ್ವಾನಂಗೀಕಾರಾದಿತಿ ಭಾವಃ । ಅತಃ ಐಕ್ಯಸ್ಯಾಕಿಂಚಿತ್ಕರತ್ವಾತ್ । ಅಯಂ ಭೇದಃ । ದ್ವಂದ್ವಂ ದ್ವಿತಾಮ್। ಸರ್ವತ್ರ ಜೀವೇಶ್ವರಜಡೇಷು ॥ ೧೩೦೯ ॥

**ವಿವರಣೆ–** ಐಕ್ಯಕ್ಕೆ ಅರ್ಥಕ್ರಿಯಾಕಾರಿತ್ವವನ್ನು ಒಪ್ಪಿದರೆ ಅದಕ್ಕೆ ಮಿಥ್ಯಾತ್ವವು ಉಂಟಾಗುತ್ತದೆ. ವಿರೋಧವೂ ಒಂದು ಅರ್ಥಕ್ರಿಯಾ. ಆ ಕಾರಣದಿಂದ ಐಕ್ಯಕ್ಕೆ ವಿರೋಧರೂಪವಾದ ಅರ್ಥಕ್ರಿಯಾಕಾರಿತ್ವವನ್ನು ಅಂಗೀಕಾರಮಾಡಬಾರದು. ಆಗ ಅದು ಭೇದಕ್ಕೆ ವಿರೋಧವನ್ನು ಮಾಡುವುದಿಲ್ಲ. ತನಗೆ ವಿರೋಧವಿಲ್ಲದ ಭೇದವು ಎಲ್ಲ ಕಡೆಯಲ್ಲಿಯೂ ರಾರಾಜಿಸಿ ಜೀವೇಶ್ವರಾದಿಪಂಚಭೇದಗಳನ್ನೂ ಸಿದ್ಧಿ ಮಾಡಿಕೊಡುತ್ತದೆ ಎಂದು ತಾತ್ಪರ್ಯ.

**ನಾಪ್ಯವಿದ್ಯಾಕಾರ್ಯತಾ ತೇ ವ್ಯಾವಹಾರಿಕತೋಚಿತಾ ।**
**ಅವಿದ್ಯಾಯಾಮಭಾವೇನ ಭೇದೇಽನಾದಾವಭಾವತಃ ।**
**ಸತ್ತ್ವಾಚ್ಚ ರಜ್ಜುಸರ್ಪಾದಿಪ್ರಾತಿಭಾಸಿಕರಾಶಿಷು ॥ ೧೩೧೦ ॥**

**ಅರ್ಥ–** ಅವಿದ್ಯಾಯಾಂ = ಅಜ್ಞಾನದಲ್ಲಿ, ಅಭಾವೇನ = ಇಲ್ಲದಿರುವುದರಿಂದ, ಅನಾದೌ = ಅನಾದಿಯಾದ, ಭೇದೇ= ಭೇದದಲ್ಲಿ, ಅಭಾವತಃ = ಇಲ್ಲದಿರುವುದರಿಂದ, ಚ = ಮತ್ತು, ರಜ್ಜುಸರ್ಪಾದಿಪ್ರಾತಿಭಾಸಿಕರಾಶಿಸು – ರಜ್ಜುಸರ್ಪಾದಿ = ಹಗ್ಗದಲ್ಲಿ ಕಂಡ ಹಾವೇ

ಮೊದಲಾದ, ಪ್ರಾತಿಭಾಸಿಕ = ಪ್ರಾತಿಭಾಸಿಕ ವಸ್ತುಗಳ, ರಾಶಿಸು = ಗುಂಪುಗಳಲ್ಲಿ, ಸತ್ತ್ವಾತ್ = ಇರುವುದರಿಂದ, ತೇ = ನಿನ್ನ, ವ್ಯಾವಹಾರಿಕತಾ = ವ್ಯಾವಹಾರಿಕತ್ವ ಎಂಬುದು, ಅವಿದ್ಯಾಕಾರ್ಯತಾ ಅಪಿ = ಅವಿದ್ಯಾಕಾರ್ಯತ್ವ ಎಂಬುದೂ ಕೂಡ, ನ ಉಚಿತಾ = ಯೋಗ್ಯವಲ್ಲ.

**ಅನುವಾದ–** ಅಥವಾ ವ್ಯಾವಹಾರಿಕತ್ವ ಎಂದರೆ ಅವಿದ್ಯಾಕಾರ್ಯತ್ವ ಎಂದೂ ನೀನು ಹೇಳಬಾರದು. ಏಕೆಂದರೆ ಅವಿದ್ಯಾಕಾರ್ಯತ್ವರೂಪವಾದ ಲಕ್ಷಣವು ಅವಿದ್ಯೆಯಲ್ಲಾಗಲೀ ಅಥವಾ ಅನಾದಿಯಾದ ಭೇದದಲ್ಲಾಗಲೀ ಬರುವುದಿಲ್ಲ. ಮತ್ತು ಪ್ರಾತಿಭಾಸಿಕವಾದ ರಜ್ಜು ಸರ್ಪಾದಿಗಳಲ್ಲಿ ಬರುತ್ತದೆ.

**ಭಾವವಿಲಾಸಿನೀ–** ಪಕ್ಷಾಂತರಮಪ್ಯನೂದ್ಯ ದೂಷಯತಿ – ನಾಪೀತಿ ॥ ಅನಾದೌ ಭೇದ ಇತಿ ಸಂಬಂಧಃ ಪೂರ್ವವದವ್ಯಾಪ್ತತ್ವಾದತಿವ್ಯಾಪ್ತತ್ವಾಚ್ಚೇತಿ ಭಾವಃ ॥ ೧೩.೧೦ ॥

**ವಿವರಣೆ–** ಈ ಶ್ಲೋಕದಲ್ಲಿ ವ್ಯಾವಹಾರಿಕಕ್ಕೆ ಲಕ್ಷಣಾಂತರವನ್ನು ಅನುವಾದ ಮಾಡಿ ದೂಷಣೆಯನ್ನು ಮಾಡುತ್ತಾರೆ. 'ಅವಿದ್ಯಾಕಾರ್ಯತ್ವಂ ವ್ಯಾವಹಾರಿಕತ್ವಂ' ಎಂದು ಹೇಳಬಾರದು. ಏಕೆಂದರೆ ಅವಿದ್ಯೆಯಲ್ಲಿ ಅವಿದ್ಯಾಕಾರ್ಯತ್ವವು ಬರಲು ಸಾಧ್ಯವಿಲ್ಲ. ಹಾಗೆಯೇ ಅನಾದಿಯಾದ ಭೇದದಲ್ಲಿ ಕಾರ್ಯತ್ವವೇ ಇಲ್ಲದಿರುವುದರಿಂದ ಅವಿದ್ಯಾಕಾರ್ಯತ್ವವು ಬರಲು ಸಾಧ್ಯವಿಲ್ಲ. ಅಲ್ಲದೇ ರಜ್ಜುಸರ್ಪಾದಿಗಳನ್ನು ಅವಿದ್ಯಾಕಾರ್ಯವೆಂದು ನೀನು ಒಪ್ಪುತ್ತೀಯೆ. ಅವು ಪ್ರಾತಿಭಾಸಿಕ. ಆದ್ದರಿಂದ ಅವ್ಯಾಪ್ತಿ ಮತ್ತು ಅತಿವ್ಯಾಪ್ತಿ ದೋಷಗ್ರಸ್ತವಾದ ಧರ್ಮವು ಲಕ್ಷಣವೇ ಆಗುವುದಿಲ್ಲ.

ನ ಹಿ ಹಾನಮುಪಾದಾನಮಭಿಲಾಪೋಽಪಿ ವಾ ತವ ।
ವ್ಯವಹಾರೋ ಮತಸ್ತಸ್ಮಾತ್ ತದರ್ಹತ್ವಂ ಚ ಸಾ ನ ತೇ ॥ ೧೩.೧೧ ॥

**ಅರ್ಥ–**ತವ = ನಿನ್ನದೃಷ್ಟಿಯಿಂದ, ವ್ಯಾವಹಾರಿಕಸ್ಯ = ವ್ಯಾವಹಾರಿಕ ವಸ್ತುವಿಗೆ, ಹಾನಂ = ಪರಿತ್ಯಾಗ ಮಾಡುವಿಕೆ, ಉಪಾದಾನಂ = ಸ್ವೀಕಾರ ಮಾಡುವಿಕೆ, ಅಪಿ = ಮತ್ತು, ಅಭಿಲಾಪಃ = ಶಬ್ದಪ್ರಯೋಗ ಮಾಡುವಿಕೆ (ಇವೇ ಮೊದಲಾದ), ವ್ಯವಹಾರಃ = ವ್ಯವಹಾರವು, ನಹಿ ಮತಃ = ಸಮ್ಮತವಾಗಿಲ್ಲ, ತಸ್ಮಾತ್ = ಆ ಕಾರಣದಿಂದ, ತೇ ಮತೇ = ನಿನ್ನ ಮತದಲ್ಲಿ, ತಾ = ಆ ವ್ಯಾವಹಾರಿಕತ್ವವು, ತದರ್ಹತ್ವಂ ಚ = ಹಾನಾದಿ ವ್ಯವಹಾರ ಅರ್ಹತ್ವವೂ ಕೂಡ, ನ = ಅಲ್ಲ.

**ಅನುವಾದ–** ನೀನು ಹಾನ, ಉಪಾದಾನ ಅಥವಾ ಶಬ್ದಪ್ರಯೋಗ ರೂಪವಾದ ವ್ಯವಹಾರಕ್ಕೆ ಅರ್ಹವಾದುದು ವ್ಯಾವಹಾರಿಕವೆಂದು ಅಂಗೀಕರಿಸುವುದಿಲ್ಲ. ಆದ್ದರಿಂದ 'ವ್ಯಾವಹಾರಿಕತ್ವಂನಾಮ ಹಾನಾದಿವ್ಯವಹಾರವಿಷಯತ್ವಂ' ಎಂದು ಲಕ್ಷಣವನ್ನು ಹೇಳಲು ಬರುವುದಿಲ್ಲ.

**ಭಾವವಿಲಾಸಿನೀ–** ಲೋಕಪ್ರಸಿದ್ಧವ್ಯವಹಾರಯೋಗ್ಯತ್ವಂ ಚ ವ್ಯಾವಹಾರಿಕತ್ವಂ ನೇತ್ಯಾಹ – ನಹೀತಿ ॥ ಸಾ ವ್ಯಾವಹಾರಿಕತಾ ॥ ೧೩೧೧ ॥

**ವಿವರಣೆ–** ಇಲ್ಲಿ ಲಕ್ಷಣಾಂತರವನ್ನು ಶಂಕಿಸಿ ಪರಿಹಾರ ಮಾಡುತ್ತಾರೆ.

ಯಾ ಬ್ರಹ್ಮಣ್ಯಭಿಲಾಪಾರ್ಹೇ ಸದಾಽಽದೇಯೇ ಮುಮುಕ್ಷುಭಿಃ ।
ಹೇಯೇ ಚ ಶುಕ್ತಿರೂಪ್ಯಾದೌ ಜಗತೀವ ಪ್ರದೃಶ್ಯತೇ ॥ ೧೩೧೨ ॥

**ಅರ್ಥ–** ಅಭಿಲಾಪಾರ್ಹೇ = ಶಬ್ದಪ್ರಯೋಗಕ್ಕೆ ಯೋಗ್ಯನಾದ, ಚ = ಮತ್ತು, ಮುಮುಕ್ಷುಭಿಃ = ಮೋಕ್ಷವನ್ನು ಬಯಸುವ ಜೀವಿಗಳಿಂದ, ಸದಾ = ಯಾವಾಗಲೂ, ಆದೇಯೇ = ಉಪಾದೇಯನಾದ (ಸ್ವೀಕಾರಕ್ಕೆ ಯೋಗ್ಯನಾದ), ಬ್ರಹ್ಮಣಿ = ಪರಬ್ರಹ್ಮನಲ್ಲಿ, ಚ = ಮತ್ತು, ಜಗತಿ ಇವ = ಜಗತ್ತಿನಲ್ಲಿರುವಂತೆ, ಹೇಯೇ = ತಿರಸ್ಕಾರಕ್ಕೆ ಯೋಗ್ಯವಾದ, ಶುಕ್ತಿರಜತಾದೌ = ಶುಕ್ತಿರಜತ ಮೊದಲಾದವುಗಳಲ್ಲಿ, ಯಾ = ಯಾವ ಹಾನಾದಿ ವ್ಯವಹಾರಾರ್ಹತ್ವವು, ಪ್ರದೃಶ್ಯತೇ = ಕಾಣಲ್ಪಡುತ್ತದೋ, ಸ = ಅದು, ವ್ಯಾವಹಾರಿಕತ್ವಂ = ವ್ಯಾವಹಾರಿಕತ್ವವು, ನ = ಅಲ್ಲ.

**ಅನುವಾದ–** ಏಕೆಂದರೆ ಆ ಲಕ್ಷಣವು ಶಬ್ದಪ್ರಯೋಗಾರ್ಹನಾದ ಮತ್ತು ಮುಮುಕ್ಷುಗಳಿಂದ ಸದಾ ಉಪಾದೇಯನಾದ ಬ್ರಹ್ಮನಲ್ಲಿ ಬರುತ್ತದೆ. ಮತ್ತು ಆ ಲಕ್ಷಣವು ಜಗತ್ತಿನಲ್ಲಿದ್ದಂತೆ ಹೇಯವಾದ ಶುಕ್ತಿರೂಪ್ಯಗಳಲ್ಲಿಯೂ ಇದೆ.

**ಭಾವವಿಲಾಸಿನೀ–** ಕುತ ಇತ್ಯತ ಆಹ–ಯಾ ಬ್ರಹ್ಮಣೀತಿ ॥ ಆದೇಯೇ ಉಪಾದೇಯೇ ॥೧೩೧೨॥

**ವಿವರಣೆ–** ಹಾನ, ಉಪಾದಾನ, ಉಪೇಕ್ಷಾ, ಶಬ್ದಪ್ರಯೋಗಾದಿ ರೂಪವ್ಯವಹಾರ ಯೋಗ್ಯತ್ವಂ ವ್ಯಾವಹಾರಿಕತ್ವಂ ಎಂದು ಹೇಳಿದರೆ ಬ್ರಹ್ಮನಲ್ಲಿ ಮುಮುಕ್ಷುಗಳಿಂದ ಉಪಾದೇಯತ್ವವಿದೆ. ಬ್ರಹ್ಮನಲ್ಲಿ ಸಕಲವೇದಾದಿ ಶಬ್ದಪ್ರಯೋಗವಿದೆ. ಆದ್ದರಿಂದ ಉಪಾದಾನಾರ್ಹತ್ವವು ಬರುತ್ತದೆ. ಶುಕ್ತಿರೂಪ್ಯಾದಿಗಳಲ್ಲಿ ಹಾನಾರ್ಹತ್ವವು ಬರುತ್ತದೆ. ಆದ್ದರಿಂದ ವ್ಯಾವಹಾರಿಕ ಲಕ್ಷಣವು ಪಾರಮಾರ್ಥಿಕನಾದ ಬ್ರಹ್ಮನಲ್ಲಿಯೂ ಪ್ರಾತಿಭಾಸಿಕ-ವಾದ ಶುಕ್ತಿರೂಪ್ಯದಲ್ಲಿಯೂ ಬರುವುದರಿಂದ, ಅತಿವ್ಯಾಪ್ತಿ ಗ್ರಸ್ತವಾಗುತ್ತದೆ. ಆದ್ದರಿಂದ ಇದೂ ಲಕ್ಷಣವಾಗುವುದಿಲ್ಲ.

ಉಭಯತ್ರ ಹ್ಯತಿವ್ಯಾಪ್ತಾ ಕಥಂ ಮಧ್ಯಸ್ಯ ಸಾ ದಶಾ ॥ ೧೩೧೩ ॥

**ಅರ್ಥ–** ಉಭಯತ್ರ = ಪಾರಮಾರ್ಥಿಕ ಮತ್ತು ಪ್ರಾತಿಭಾಸಿಕಗಳಲ್ಲಿ, ಅತಿವ್ಯಾಪ್ತಾ = ಅತಿವ್ಯಾಪ್ತಿ ದೋಷವನ್ನು ಹೊಂದಿದ, ಸಾ ಹಿ = ಆ ವ್ಯಾವಹಾರಿಕತ್ವವಾದರೋ, ಮಧ್ಯಸ್ಯ = ಮಧ್ಯದಲ್ಲಿರುವ ಜಗತ್ತಿನ, ದಶಾ = ಅವಸ್ಥೆಯು (ಲಕ್ಷಣವು), ಕಥಂ = ಹೇಗೆ, ಸ್ಯಾತ್ = ಆದೀತು.

**ಅನುವಾದ–** ಪಾರಮಾರ್ಥಿಕ ಮತ್ತು ಪ್ರಾತಿಭಾಸಿಕಗಳಲ್ಲಿ ಅತಿವ್ಯಾಪ್ತವಾದ ಲಕ್ಷಣವನ್ನು ಮಧ್ಯದಲ್ಲಿರುವ ಜಗತ್ತಿನ ಲಕ್ಷಣವೆಂದು ಹೇಗೆ ಹೇಳುತ್ತೀಯೇ?

**ಭಾವವಿಲಾಸಿನೀ–**ಉಭಯತ್ರ ಪಾರಮಾರ್ಥಿಕೇ ಪ್ರಾತಿಭಾಸಿಕೇ ಚ । ಸಾ ಲೋಕಸಿದ್ಧವ್ಯವಹಾರಾರ್ಹತಾ । ಮಧ್ಯಸ್ಯ ತಯೋರ್ಮಧ್ಯಪತಿತಸ್ಯ ಜಗತಃ ಕಥಂ ದಶೇತಿ ಸಂಬಂಧಃ ॥೧೩೧೩॥

ವ್ಯಾವಹಾರಿಕತೋಕ್ತಿಸ್ತದ್ವ್ಯವಹಾರಜ್ಞಸಂಸದಿ ।
ನ ಭಾತಿ ಪ್ರಾಂಕಣಕಥಾ ನ ಹಿ ಭಾತಿ ರಣಾಂಕಣೇ ॥ ೧೩೧೪ ॥

**ಅರ್ಥ–** ತತ = ಆದ್ದರಿಂದ, ವ್ಯಾವಕಾರಿಕತೋಕ್ತಿಃ = ಜಗತ್ತು ವ್ಯಾವಹಾರಿಕ ಎಂಬ ಹೇಳಿಕೆಯು, ವ್ಯವಹಾರಜ್ಞಸಂಸದಿ = ಜಗತ್ತಿನ ವ್ಯವಹಾರವನ್ನು ತಿಳಿದವರ ಸಭೆಯಲ್ಲಿ, ನ ಭಾತಿ = ಶೋಭಿಸುವುದಿಲ್ಲ, ಪ್ರಾಂಗಣಕಥಾ = ಮನೆಯ ಅಂಗಳದಲ್ಲಿ ನಡೆಯುವ ಕಥೆಯು, ರಣಾಂಗಣೇ = ಯುದ್ಧಭೂಮಿಯಲ್ಲಿ, ನ ಭಾತಿ ಹಿ = ಶೋಭಿಸುವುದಿಲ್ಲವಷ್ಟೆ.

**ಅನುವಾದ–** ಆದ್ದರಿಂದ ಜಗತ್ತು ವ್ಯಾವಹಾರಿಕ ಎಂಬ ನಿನ್ನ ಉಕ್ತಿಯು ಜಗತ್ತಿನ ವ್ಯವಹಾರವನ್ನು ತಿಳಿದವರ ಸಭೆಯಲ್ಲಿ ಎಂದೂ ಶೋಭಿಸುವುದಿಲ್ಲ. ಮನೆಯ ಅಂಗಳದಲ್ಲಿ ನಡೆಯುವ ಕಥೆಯು ಹೇಗೆ ರಣಾಂಗಣದಲ್ಲಿ ಶೋಭಿಸುವುದಿಲ್ಲವೋ ಅದರಂತೆ ನಿನ್ನ ಮಾತೂ ಶೋಭಿಸುವುದಿಲ್ಲ.

**ಭಾವವಿಲಾಸಿನೀ–** ವ್ಯಾವಹಾರಿಕತ್ವಖಂಡನಮುಪಸಂಹರತಿ ॥ **ವ್ಯಾವಹಾರಿಕತೋಕ್ತಿರಿತಿ** ॥ ತನ್ನಿರ್ವಕ್ತುಮಶಕ್ಯತ್ವಾತ್ । ತತ್ರ ದೃಷ್ಟಾಂತಮಾಹ – **ಪ್ರಾಂಕಣೇತಿ** ॥ ೧೩೧೪ ॥

**ವಿವರಣೆ–** ನಿರ್ದುಷ್ಟವಾದ ವ್ಯಾವಹಾರಿಕ ಲಕ್ಷಣವನ್ನು ನಿರ್ವಚನ ಮಾಡಲು ಬರದಿರುವುದರಿಂದ ಲಕ್ಷಣ ವ್ಯವಹಾರಜ್ಞರ ಸಭೆಯಲ್ಲಿ ನೀನು ಹಾಸ್ಯಾಸ್ಪದನಾಗುತ್ತೀಯೆ ಎಂದು ದೃಷ್ಟಾಂತ ಪೂರ್ವಕವಾಗಿ ಇಲ್ಲಿ ಸಮರ್ಥಿಸುತ್ತಾರೆ.

ಪ್ರತ್ಯಕ್ಷಶ್ರುತಿಯುಕ್ತೀನಾಂ ವಿರೋಧಾದೈಕ್ಯಮೇವ ತೇ ।
ಸ್ಯಾದ್ ವ್ಯಾವಹಾರಿಕಂ ಸಿಂಹದೇವದತ್ತಾದಿಕೈಕ್ಯವತ್ ॥ ೧೩೧೫ ॥

**ಅರ್ಥ–** ಪ್ರತ್ಯಕ್ಷಶ್ರುತಿಯುಕ್ತೀನಾಂ = ಪ್ರತ್ಯಕ್ಷ, ವೇದ ಮತ್ತು ಅನುಮಾನ ಪ್ರಮಾಣಗಳ, ವಿರೋಧಾತ್ = ವಿರೋಧವಿರುವುದರಿಂದ, ತೇ = ನಿನ್ನ, ಐಕ್ಯಂ ಏವ = ಐಕ್ಯವೇ, ಸಿಂಹದೇವದತ್ತಾದಿ ಐಕ್ಯವತ್ = ಸಿಂಹ ದೇವದತ್ತ ಇತ್ಯಾದಿಗಳ ನಡುವಣ ಅಭೇದದಂತೆ, ವ್ಯಾವಹಾರಿಕಂ = ಬಾಧ್ಯವು, ಸ್ಯಾತ್ = ಆಗುತ್ತದೆ.

**ಅನುವಾದ–** ಪ್ರತ್ಯಕ್ಷ ಶ್ರುತಿ ಮತ್ತು ಯುಕ್ತಿಗಳಿಂದ ವಿರೋಧವಿರುವುದರಿಂದ ನಿನ್ನ ಐಕ್ಯವೇ ಸಿಂಹೋ ದೇವದತ್ತಃ ಎಂಬ ವಾಕ್ಯದಲ್ಲಿ ತೋರುವ ಐಕ್ಯವು ಬಾಧ್ಯವಾದಂತೆ ಬಾಧ್ಯವಾಗುತ್ತದೆ.

"ಆದಿತ್ಯೋ ಪ್ರಸ್ತರಃ ಯೂಪಃ" "ಯಜಮಾನ ಪ್ರಸ್ತರಃ"

**ವಿವರಣೆ–** ಪ್ರಮಾಣಾಂತರಸಂವಾದವುಳ್ಳ ಭೇದಕ್ಕೆ ಎಂದೂ ಬಾಧ್ಯತ್ವರೂಪವಾದ ವ್ಯಾವಹಾರಿಕತ್ವವು ಬರುವುದಿಲ್ಲ. ಸರ್ವಪ್ರಮಾಣವಿರುದ್ಧವಾದ ನಿನ್ನ ಐಕ್ಯಕ್ಕೇ ಅದು ಉಚಿತವಾದುದು ಎಂದು ಉಪಪಾದನೆ ಮಾಡುತ್ತಾರೆ. ಸಿಂಹೋ ದೇವದತ್ತಃ ಎಂಬಲ್ಲಿ ತೋರುವ ಮುಖ್ಯವಾದ ಐಕ್ಯವು ಹೇಗೆ ಬಾಧಿತವಾಗುವುದೋ ಹಾಗೆ ನೀನು ಹೇಳುವ ಐಕ್ಯವೂ ಸಹ ಪ್ರಮಾಣವಿರೋಧವಿರುವುದರಿಂದ ಬಾಧಿತವಾಗುತ್ತದೆ ಎಂದು ತಾತ್ಪರ್ಯ.

**ಸಾದೃಶ್ಯೈಕ್ಯಪರತ್ವೇ ಸ್ಯಾದೇವ ವಾ ವ್ಯಾವಹಾರಿಕಮ್ ।**
**ನ ಚೇತ್ ಪೂರ್ವೋಕ್ತಮಾರ್ಗೇಣ ಸಾತ್ ತದ್ಧಿ ಪ್ರಾತಿಭಾಸಿಕಮ್ ॥೧೩೧೬॥**

**ಅರ್ಥ–** ಶ್ರುತೇಃ = ತತ್ತ್ವಮಸಿ ಎಂಬ ವೇದವಾಕ್ಯಕ್ಕೆ, ಸಾದೃಶ್ಯೈಕ್ಯಪರತ್ವೇ = ಸಾದೃಶ್ಯ ಐಕ್ಯ ಪ್ರತಿಪಾದಕತ್ವವು ಇದ್ದರೆ, ಐಕ್ಯಂ = ಅಭೇದವು, ವ್ಯಾವಹಾರಿಕಂ ವಾ = ವ್ಯಾವಹಾರಿಕವಾದರೂ, ಸ್ಯಾತ್ ಏವ = ಆಗಲೇಬೇಕು, ನ ಚೇತ್ = ಇಲ್ಲದಿದ್ದರೆ, ಪೂರ್ವೋಕ್ತಮಾರ್ಗೇಣ = ಹಿಂದೆ ಹೇಳಿದ ರೀತಿಯಿಂದ, ತತ್= ಆ ಐಕ್ಯವು, ಪ್ರಾತಿಭಾಸಿಕಂ = ಪ್ರಾತಿಭಾಸಿಕವು, ಸ್ಯಾತ್ ಹಿ= ಆದೀತಷ್ಟೆ.

**ಅನುವಾದ–** ತತ್ತ್ವಮಸಿ ವಾಕ್ಯಕ್ಕೆ ಸಾದೃಶ್ಯೈಕ್ಯಪರತ್ವವನ್ನು ಒಪ್ಪಿದರೆ ಐಕ್ಯವು ವ್ಯಾವಹಾರಿಕವಾಗಬೇಕು. ಇಲ್ಲದಿದ್ದರೆ ಹಿಂದೆ ಹೇಳಿದಂತೆ ಈಗಲೇ ಬಾಧವು ಬರುವುದರಿಂದ ಅದು ಪ್ರಾತಿಭಾಸಿಕವೇ ಆಗಬೇಕು. ಸಾದೃಶ್ಯೈಕ್ಯವು ವ್ಯಾವಹಾರಿಕವಾಗಬಹುದು. ಮುಖ್ಯವಾದ ಐಕ್ಯವು ಮಾತ್ರ ಪ್ರಾತಿಭಾಸಿಕವೇ ಎಂದು ಅಭಿಪ್ರಾಯ.

**ಭೇದಸ್ತು ಶ್ರುತಿಯುಕ್ತಿಭ್ಯಾಂ ಪ್ರತ್ಯಕ್ಷೇಣ ಚ ಸಾಧಿತಃ ।**
**ಬ್ರಹ್ಮವತ್ ಪಾರಮಾರ್ಥ್ಯಾರ್ಹಃ ಕಥಂ ಸ್ಯಾದ್ ವ್ಯಾವಹಾರಿಕಃ ॥ ೧೩೧೭ ॥**

**ಅರ್ಥ–** ಶ್ರುತಿಯುಕ್ತಿಭ್ಯಾಂ = ಆಗಮ ಮತ್ತು ಅನುಮಾನ ಪ್ರಮಾಣಗಳಿಂದ, ಚ= ಮತ್ತು, ಪ್ರತ್ಯಕ್ಷೇಣ = ಪ್ರತ್ಯಕ್ಷ ಪ್ರಮಾಣದಿಂದ, ಸಾಧಿತಃ = ಸಮರ್ಥಿಸಲ್ಪಟ್ಟ, ಬ್ರಹ್ಮವತ್ = ಪರಬ್ರಹ್ಮನಂತೆ, ಪಾರಮಾರ್ಥ್ಯಾರ್ಹ = ಪಾರಮಾರ್ಥಿಕ ಸತ್ಯತ್ವಕ್ಕೆ ಅರ್ಹವಾದ, ಭೇದಃ ತು = ಭೇದವಾದರೋ, ಕಥಂ = ಹೇಗೆ, ವ್ಯಾವಹಾರಿಕಃ = ವ್ಯಾವಹಾರಿಕ ಸತ್ಯವು, ಸ್ಯಾತ್ = ಆದೀತು.

**ಅನುವಾದ–** ಶ್ರುತಿ, ಯುಕ್ತಿ ಮತ್ತು ಪ್ರತ್ಯಕ್ಷಗಳಿಂದ ಸಾಧಿಸಲ್ಪಟ್ಟ ಭೇದವಾದರೂ ಬ್ರಹ್ಮನಂತೆ ಪಾರಮಾರ್ಥಿಕತ್ವಕ್ಕೆ ಅರ್ಹವಾಗಿದೆ. ಅದು ಹೇಗೆ ವ್ಯಾವಹಾರಿಕವಾಗಲು ಸಾಧ್ಯ?

**ಭಾವವಿಲಾಸಿನೀ–** ಪ್ರಮಾಣಾಂತರಸಂವಾದವತೋ ಭೇದಸ್ಯ ನ ವ್ಯಾವಹಾರಿಕತ್ವಂ ಕಿಂತು ತದ್ವಿರುದ್ಧೈಕ್ಯಸ್ಯೈವ ತದುಚಿತಮಿತ್ಯಾಹ – **ಪ್ರತ್ಯಕ್ಷೇತಿ** ॥ ಪ್ರಕಾರಾಂತರೇಣಾಪಿ ವ್ಯಾವಹಾರಿಕತಾಮಾಹ – **ಸಿಂಹೇತಿ** ॥ ನ ಚೇಲ್ಲೋಕಸಿದ್ಧರೀತ್ಯಾ ವ್ಯಾವಹಾರಿಕೈಕ್ಯಂ ನೋಚ್ಯತೇ ಚೇತ್ । ತದೈಕ್ಯಮ್ ॥ ೧೩೦೫-೧೩೧೭ ॥

ಭೇದಸ್ತನ್ಮತಿಭೇದಾದೇರ್ವಿರೋಧ್ಯೈಕ್ಯಸ್ಯ ಚೋದ್ಧತೇಃ ।
ತ್ರಿಧಾಪಿ ಪರಮಾರ್ಥೋಽಭೂದ್ ಯೋಽತ್ಯುಚ್ಚಬ್ರಹ್ಮಧರ್ಮಿಕಃ॥ ೧೩೧೮ ॥

**ಅರ್ಥ–** ಮತಿಭೇದಾದೇಃ = ಮತಿಭೇದ, ಸ್ಥಾನಭೇದ, ಮೊದಲಾದವುಗಳನ್ನು, ಚ = ಮತ್ತು, ವಿರೋಧ್ಯೈಕ್ಯಸ್ಯ = ಭೇದ ವಿರೋಧಿಯಾದ ಐಕ್ಯವನ್ನು, ಉದ್ಧೃತೇಃ = ಖಂಡನಮಾಡಿರುವುದರಿಂದ, ಯಃ = ಯಾವ, ಅತ್ಯುಚ್ಚಬ್ರಹ್ಮಧಾರ್ಮಿಕಃ = ಅತ್ಯಂತ ಶ್ರೇಷ್ಠನಾದ ಬ್ರಹ್ಮನಿಗೆ ಸಮಾನವಾಗಿ ಅಬಾಧ್ಯತ್ವವೆಂಬ ಧರ್ಮವನ್ನು ಹೊಂದಿರುವ, ಭೇದಃ = ಭೇದವು, ಅಸ್ತಿ = ಇದೆಯೋ, ಸಹ = ಅದು, ತ್ರಿಧಾ ಅಪಿ = ಪ್ರತ್ಯಕ್ಷ, ಅನುಮಾನ, ಆಗಮ ಎಂಬ ಮೂರು ಪ್ರಮಾಣಗಳ ಅನುಸಾರವಾಗಿಯೂ ಕೂಡ, ಪರಮಾರ್ಥಃ = ಪಾರಮಾರ್ಥಿಕ ಸತ್ಯವು, ಅಭೂತ್ = ಆಯಿತು.

**ಅನುವಾದ–** ಆದ್ದರಿಂದ ಚೈತನ್ಯ ಭೇದವನ್ನು ಒಪ್ಪದೇ ಏಕಕಾಲದಲ್ಲಿ ಮತಿಭೇದವನ್ನು ಕೂಡಿಸಲು ಬರುವುದಿಲ್ಲವಾದ್ದರಿಂದ ಭೇದಕ್ಕೆ ವಿರೋಧಿಯಾದ ಐಕ್ಯವನ್ನು ಪ್ರಮಾಣ ವಿರುದ್ಧ ಎಂದು ಹೇಳಿ ತೆಗೆದು ಹಾಕಿರುವುದರಿಂದ ಮೂರು ರೀತಿಯಿಂದಲೂ ಬ್ರಹ್ಮ ಧರ್ಮಿಕವಾದ ಭೇದವು ಅತ್ಯಂತ ಶ್ರೇಷ್ಠವಾಗಿ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ತತ್ತಸ್ಮಾತ್ ಪ್ರಮಾಣತ್ರಯಸಿದ್ಧತ್ವೇನ ವ್ಯಾವಹಾರಿಕತ್ವಾನರ್ಹತ್ವಾತ್ । ಉದ್ಧೃತೇಃ ನಿರಾಸಾತ್ । ತ್ರಿಧಾ ಶ್ರುತ್ಯಾದಿಪ್ರಮಾಣಸಿದ್ಧತ್ವಾತ್ ಶ್ರುತೇರ್ಮತಿಭೇದಾದ್ಯರ್ಥಾಂತರೇ ನೇತುಮಶಕ್ಯತ್ವಾತ್ ವಿರೋಧ್ಯೈಕ್ಯಸ್ಯಾಪ್ರಾಮಾಣಿಕತ್ವೇನ ನಿರಾಸಾಚ್ಚ । ಯೋ ಭೇದ ಇತಿ ಸಂಬಂಧಃ ॥ ೧೩೧೮ ॥

**ವಿವರಣೆ–** ಮೂರು ವಿಧದಿಂದಲೂ ಎಂದರೆ ಶ್ರುತ್ಯಾದಿ ಪ್ರಮಾಣದಿಂದ ಸಿದ್ಧವಾದುದರಿಂದ ಮತ್ತು ದ್ವಾಸುಪರ್ಣಾ ಇತ್ಯಾದಿ ಶ್ರುತಿಗಳನ್ನು ಮತಿಭೇದವೆಂಬ ಉಪಚರಿತಾರ್ಥವನ್ನು ಹೇಳಿ ನಯನ ಮಾಡಲು ಸಾಧ್ಯವಿಲ್ಲವಾದ್ದರಿಂದ, ಮತ್ತು ಭೇದಕ್ಕೆ ವಿರೋಧಿಯಾದ ಐಕ್ಯವನ್ನು ಅಪ್ರಾಮಾಣಿಕವೆಂದು ಸಮರ್ಥನೆ ಮಾಡಿರುವುದರಿಂದ ಎಂದು ಅರ್ಥ.

ಏವಮಾವಿದ್ಯಕಂ ಭೇದಮಥವೌಪಾಧಿಕಂ ವದನ್ ।
ಪ್ರಷ್ಟವ್ಯೋ ಯದ್ಯವಿದ್ಯಾದ್ಯೈಃ ಕೃತತ್ವಂ ತಸ್ಯ ಕೀರ್ತ್ಯತೇ ॥ ೧೩೧೯ ॥

ತದಾ ತವಾಪಸಿದ್ಧಾಂತಃ ಷಡಸ್ಮಾಕಮನಾದಯಃ ।
ಇತ್ಯಾಹುಃ ಕಿಲ ತೇ ಪೂರ್ವೇ ತಸ್ಮಾಜ್ಜೀವೇಶಯೋರ್ಭಿದಾ ।
ಅನಾದಿಸ್ತೇ ತತಸ್ತಸ್ಯಾಃ ಕೃತತ್ವೋಕ್ತಿರವಿದ್ಯಯಾ ॥ ೧೩೨೦ ॥

**ಅರ್ಥ–** ಭೇದಂ = ಭೇದವನ್ನು, ಆವಿದ್ಯಕಂ = ಆವಿದ್ಯಕವೆಂದು, ಅಥವಾ = ಅಥವಾ, ಔಪಾಧಿಕಂ = ಔಪಾಧಿಕವೆಂದು, ವದನ್ = ಹೇಳುವ ಅದ್ವೈತಿಯು, ಏವಂ = ಈ ಮುಂದೆ ಹೇಳುವ ರೀತಿಯಲ್ಲಿ, ಪ್ರಷ್ಟವ್ಯಃ = ಪ್ರಶ್ನಿಸಲ್ಪಡಬೇಕು, ಯದಿ = ಒಂದು ಪಕ್ಷದಲ್ಲಿ, ತಸ್ಯ = ಆ ಭೇದಕ್ಕೆ, ಅವಿದ್ಯಾದ್ಯೈಃ = ಅವಿದ್ಯ ಮೊದಲಾದವುಗಳಿಂದ, ಕೃತತ್ವಂ = ನಿರ್ಮಿತವಾಗಿರುವಿಕೆಯು, ಕೀರ್ತ್ಯತೇ = ಹೇಳಲ್ಪಡುವುದಾದರೆ, ತದಾ = ಆಗ, ತವ = ನಿನಗೆ, ಅಪಸಿದ್ಧಾಂತಃ = ಅಪಸಿದ್ಧಾಂತ ದೋಷವು ಬರುತ್ತದೆ, ತೇ = ನಿನ್ನ, ಪೂರ್ವೇ = ಪೂರ್ವಾಚಾರ್ಯರು, ಅಸ್ಮಾಕಂ = ನಮ್ಮ ಮತದಲ್ಲಿ, ಷಟ್= ಆರು ವಸ್ತುಗಳು, ಅನಾದಯಃ = ಅನಾದಿಗಳು ಆಗಿವೆ, ಇತಿ = ಈ ರೀತಿಯಾಗಿ, ಆಹುಃ ಕಿಲ = ಹೇಳುತ್ತಾರಷ್ಟೆ. ತಸ್ಮಾತ್ = ಆದ್ದರಿಂದ, ಜೀವೇಶಯೋಃ = ಜೀವ ಮತ್ತು ಈಶರ ನಡುವೆ ಇರುವ, ಭಿದಾ= ಭೇದವು, ಅನಾದಿಃ = ಅನಾದಿಯಾಗಿದೆ, ತತಃ = ಆದ್ದರಿಂದ, ತೇ = ನಿನ್ನ, ತಸ್ಯಾ = ಆ ಭೇದದ, ಕೃತತ್ವೋಕ್ತಿಃ = ಅಜ್ಞಾನ ಕೃತತ್ವೋಕ್ತಿಯು (ಅವಿದ್ಯಾ ಕೃತತ್ವೋಕ್ತಿಯು) ಅವಿದ್ಯಯಾ = ಅಜ್ಞಾನದಿಂದ, ಜನ್ಯಾ= ಹುಟಿದ್ದಾಗಿದೆ.

**ಅನುವಾದ–** ಹೀಗೆ ಯಾರು ಭೇದವನ್ನು ಆವಿದ್ಯಕ ಅಥವಾ ಔಪಾಧಿಕ ಎಂದು ಹೇಳುತ್ತಾರೋ ಅವರನ್ನು ಕುರಿತು ಆವಿದ್ಯಕ ಅಥವಾ ಔಪಾಧಿಕ ಎಂದರೆ ಅವಿದ್ಯಾಕೃತತ್ವ ಅಥವಾ ಉಪಾಧಿಕೃತತ್ವ ಎಂದು ಅರ್ಥವೇ ಎಂದು ಹೇಳಬೇಕು. ಹಾಗೆ ಹೇಳಿದರೆ ನಿನಗೆ ಅಪಸಿದ್ಧಾಂತವು ಬರುತ್ತದೆ. ಏಕೆಂದರೆ ನಿನ್ನ ಪ್ರಾಚೀನಾಚಾರ್ಯರು ಷಡಸ್ಮಾಕಮನಾದಯಃ ಎಂದು ಹೇಳಿ ಜೀವೇಶಭೇದವನ್ನು ಅನಾದಿ ಎಂದು ಒಪ್ಪಿದ್ದಾರೆ. ಆದ್ದರಿಂದ ಅನಾದಿಯಾದ ಭೇದವನ್ನು ಅವಿದ್ಯಾಕೃತ ಅಥವಾ ಉಪಾಧಿಕೃತ ಎಂದು ಹೇಳುವ ನಿನ್ನ ಮಾತೇ ಅಜ್ಞಾನ ಮೂಲಕವಾಗಿದೆ.

**ಭಾವವಿಲಾಸಿನೀ–** ಭೇದಸ್ಯಾವಿದ್ಯಕತ್ವಮೌಪಾಧಿಕತ್ವಂ ಚ ಯತ್ಪರೋ ವಕ್ತಿ ತದಪಿ ಕಿಮವಿದ್ಯಾದಿನಾ ಕೃತತ್ವಂ ಜ್ಞಾಪಿತತ್ವಂ ಅವಿದ್ಯಮಾನಸ್ಯ ಜ್ಞಾಪಿತತ್ವಂ ಸಂಬಂಧಮಾತ್ರಂ ಅವಿದ್ಯಾನಾಶನಾಶ್ಯತ್ವಂ ವೇತಿ ವಿಕಲ್ಪಂ ಮನಸಿ ನಿಧಾಯ ಕ್ರಮೇಣ ದೂಷಯತಿ ॥ ಏವಮಿತ್ಯಾದಿನಾ ॥ ತಸ್ಯ ಭೇದಸ್ಯ । ತತಃ ಅನಾದಿತ್ವಾತ್ । ತಸ್ಯಾಃ ಭಿದಾಯಾಃ । ಅವಿದ್ಯಯಾ ಪೂರ್ವೋತ್ತರಜ್ಞಾನೇನ ಕೃತತ್ವೋಕ್ತಿರಿತಿ ಸಂಬಂಧಃ ॥ ೧೩೧೯-೧೩೨೦ ॥

**ವಿವರಣೆ–** ಭೇದವು ಆವಿದ್ಯಕ ಅಥವಾ ಔಪಾಧಿಕ ಎಂದು ಪರರು ಹೇಳುತ್ತಾರೆ. ಆಗ ಆವಿದ್ಯಕ ಎಂದರೆ ಅವಿದ್ಯಾಕೃತತ್ವ ಎಂದು ಅರ್ಥವೇ ಅಥವಾ ಅವಿದ್ಯಾಜ್ಞಾಪಿತತ್ವ

ಎಂದು ಅರ್ಥವೇ ಅಥವಾ ಅವಿದ್ಯಮಾನವಾದ ತಾನು ಅವಿದ್ಯೆಯಿಂದ ಜ್ಞಾಪಿತವಾಗುತ್ತದೆ ಎಂದು ಅರ್ಥವೇ ಅಥವಾ ಅವಿದ್ಯಾ ಸಂಬಂಧಮಾತ್ರವೇ ಅಥವಾ ಅವಿದ್ಯಾ ನಾಶ ಪ್ರಯುಕ್ತವಾದ ನಾಶ್ಯತ್ವವೇ ಎಂದು ವಿಕಲ್ಪವನ್ನು ಮಾಡಿ ಕ್ರಮವಾಗಿ ಒಂದೊಂದನ್ನೂ ದೂಷಿಸುತ್ತಾರೆ. ಜೀವೇಶ ಭೇದವನ್ನು ಪ್ರಾಚೀನಾದ್ವೈತಾಚಾರ್ಯರು ಅನಾದಿ ಎಂದು ಹೇಳುತ್ತಾರೆ. ಆದ್ದರಿಂದ ಅದನ್ನು ಅವಿದ್ಯೆಯಿಂದ ಜನ್ಯ, ಅಥವಾ ಉಪಾಧಿಯಿಂದ ಜನ್ಯ ಎಂದು ಹೇಳಿದರೆ ಅಪಸಿದ್ಧಾಂತ ಬರುವುದರಿಂದ ನಿನ್ನ ಮಾತೇ ಅಜ್ಞಾನ ಮೂಲವಾಗಿದೆ ಎಂದು ಅಭಿಪ್ರಾಯ.

**ಯದಿ ತಜ್ಞಾಪಿತತ್ವಾಚ್ಚ ಭೇದೇ ದೋಷಃ ಪ್ರಭಾಷ್ಯತೇ ।**
**ತದೈಕ್ಯಮಪಿ ದೋಷಿ ಸ್ಯಾತ್ ತಚ್ಚ ಮಾನಸವೇದನೇ ।**
**ಅಜ್ಞಾನಾಜ್‌ಜ್ಞಾಪಿತಂ ಕಿಂ ನ ಕಿಂ ವಾ ದೇಹಾದ್ಯುಪಾದಿಭಿಃ ॥ ೧೩.೨೧ ॥**

**ಅರ್ಥ–** ಚ = ಮತ್ತು ಕೂಡ, ಯದಿ = ಒಂದು ಪಕ್ಷದಲ್ಲಿ, ತಜ್‌ಜ್ಞಾಪಿತತ್ವಾ = ಅವಿದ್ಯಾತ್ ಜ್ಞಾಪಿತತ್ವ ಇರುವುದರಿಂದ, ಭೇದೇ = ಭೇದದಲ್ಲಿ, ದೋಷಃ = ಆವಿದ್ಯಕತ್ವ ಎಂಬ ದೋಷವು, ತ್ವಯಾ = ನಿನ್ನಿಂದ, ಪ್ರಭಾಷ್ಯತೇ = ಹೇಳಲ್ಪಡುವುದಾದರೆ, ತದಾ = ಆಗ, ಐಕ್ಯಂ ಅಪಿ = ಐಕ್ಯವೂ ಕೂಡ, ದೋಷಿ = ಆವಿದ್ಯಕತ್ವವೆಂಬ ದೋಷವುಳ್ಳದ್ದು, ಸ್ಯಾತ್ = ಆಗುತ್ತದೆ, ತತ್ ಚ = ಆ ಐಕ್ಯವಾದರೋ, ಮಾನಸವೇದನೇ = ಮಾನಸ ಜ್ಞಾನ ಬರುವ ಸಂದರ್ಭದಲ್ಲಿ, ಅಜ್ಞಾನಾತ್ = ಅಜ್ಞಾನದಿಂದ, ಜ್ಞಾಪಿತಂ = ಜ್ಞಾಪಿತವಾದದ್ದು, ಕಿಂ ನ = ಅಲ್ಲವೇನು, ವಾ= ಅಥವಾ, ದೇಹಾದ್ಯುಪಾದಿಭಿಃ = ದೇಹ, ಅಂತಃಕರಣ ಮೊದಲಾದ ಉಪಾದಿಗಳಿಂದ, ಜ್ಞಾಪಿತಂ= ಜ್ಞಾಪಿತವಾದದ್ದು, ಕಿಂ ನ = ಅಲ್ಲವೇನು.

**ಅನುವಾದ–** ಆವಿದ್ಯಕತ್ವ ಎಂದರೆ ಅವಿದ್ಯಾಜ್ಞಾಪಿತತ್ವ ಎಂದು ಹೇಳಿ ಭೇದದಲ್ಲಿ ದೋಷವನ್ನು ಹೇಳುವುದಾದರೆ ನಿನ್ನ ಐಕ್ಯವೂ ದುಷ್ಟವಾಗುತ್ತದೆ. ಏಕೆಂದರೆ ಐಕ್ಯದ ಮಾನಸ ಜ್ಞಾನ ಬರುವಾಗ ಐಕ್ಯವೂ ಸಹ ಅವಿದ್ಯಾ, ದೇಹ, ಅಂತಃಕರಣಾದಿ ಉಪಾಧಿಗಳಿಂದ ಜ್ಞಾಪಿತವಾಗುತ್ತದೆಯಷ್ಟೇ.

**ಭಾವವಿಲಾಸಿನೀ–** ತಚ್ಚ ಐಕ್ಯಂ ಚ । ದೇಹಾದ್ಯುಪಾಧಿಭಿರ್ಜ್ಞಾಪಿತಂ ಕಿಂ ನ । ಆದಿಪದೇನಾಂತಃಕರಣಾದಿಕಮುಚ್ಯತೇ । ಔಪಾಧಿಕತ್ವಪಕ್ಷೇ ಪ್ರತಿಬಂದೀಗ್ರಹಣಾಯೇದಮುದಿತಮ್ ॥ ೧೩.೨೧॥

**ವಿವರಣೆ–** ಅವಿದ್ಯಾಜ್ಞಾಪಿತತ್ವಂ ಆವಿದ್ಯಕತ್ವಂ ಅಥವಾ ಉಪಾದಿಜ್ಞಾಪಿತತ್ವಂ ಔಪಾಧಿಕತ್ವಂ ಎಂದು ಹೇಳಿದರೆ ಆ ಕಲ್ಪದಲ್ಲಿ ಇಲ್ಲಿ ದೋಷವನ್ನು ಹೇಳುತ್ತಾರೆ. ಭೇದಜ್ಞಾನವು ಹೇಗೆ ಅವಿದ್ಯೆಯಿಂದ ಉಂಟಾಗುತ್ತದೆಯೋ ಹಾಗೆ ಐಕ್ಯಜ್ಞಾನವೂ ಅವಿದ್ಯೆಯಿಂದ ಉಂಟಾಗುತ್ತದೆ. ಎರಡೂ ಅವಿದ್ಯಾಕಾರ್ಯಗಳೇ ಸರಿ. ಎರಡು ಜ್ಞಾನಿಗಳಿಗೂ ದೇಹಾದ್ಯುಪಾಧಿಗಳು ಬೇಕು. ಆದ್ದರಿಂದ ಉಪಾದಿ ಜ್ಞಾಪಿತತ್ವವು ಎರಡು

ಕಡೆಗಳಲ್ಲಿಯೂ ಇದೆ. ಅವಿದ್ಯಾದಿ ಜ್ಞಾಪ್ತಿತತ್ವ ಇರುವುದರಿಂದ ಭೇದವು ಅಪ್ರಾಮಾಣಿಕವಾಗುವುದಾದರೆ ಅದೇ ಕಾರಣದಿಂದ ನಿನ್ನ ಐಕ್ಯವು ಅಪ್ರಾಮಾಣಿಕವಾಗಲಿ ಎಂಬ ಪ್ರತಿಬಂದಿಯನ್ನು ಇಲ್ಲಿ ನೀಡುತ್ತಾರೆ.

**ಅವಿದ್ಯಾಕಾರ್ಯಮಖಿಲಂ ಕಾರ್ಯಂ ಕಿಲ ಭವನ್ಮತೇ ।**
**ಏವಂ ಸತ್ಯೈಕ್ಯಧೀರಂತೇ ಕಿಂ ತೇ ಹಂತೈತದಂತರಾ ॥ ೧೩೨೨ ॥**

**ಅರ್ಥ–** ಭವನ್ಮತೇ = ನಿನ್ನ ಮತದಲ್ಲಿ, ಅಖಿಲಂ = ಎಲ್ಲ, ಕಾರ್ಯಂ = ಕಾರ್ಯವು, ಅವಿದ್ಯಾಕಾರ್ಯಂ ಕಿಲ = ಅವಿದ್ಯೆಯ ಕಾರ್ಯವಾಗಿದೆಯಷ್ಟೆ, ಏವಂ ಸತಿ= ಹೀಗಿರುವಾಗ, ಅಂತೇ = ತತ್ತ್ವಜ್ಞಾನ ಬರುವ ಸಂದರ್ಭದಲ್ಲಿ, ತೇ = ನಿನ್ನ, ಐಕ್ಯಧೀಃ = ಐಕ್ಯಜ್ಞಾನವು, ಏತತ್= ಈ ಅಜ್ಞಾನವನ್ನು, ಅಂತರಾ= ಬಿಟ್ಟು ಉಂಟಾಗುವುದೇನು, ಹಂತ = ಇದು ವಿಲಕ್ಷಣವಾಗಿದೆ.

**ಅನುವಾದ–** ನಿನ್ನ ಮತದಲ್ಲಿ ಅವಿದ್ಯಾವ್ಯತಿರಿಕ್ತವಾದುದೆಲ್ಲವೂ ಅವಿದ್ಯಾಕಾರ್ಯ. ಕೊನೆಯಲ್ಲಿ ಉತ್ಪನ್ನವಾಗುವ ಐಕ್ಯಜ್ಞಾನವೂ ಸಹ ಅವಿದ್ಯಾಕಾರ್ಯವೇ. ಆದ್ದರಿಂದ ಅದಕ್ಕೆ ತನ್ನನ್ನು ಬಿಟ್ಟು ಬೇರೆ ಯಾವ ನಾಶಕವನ್ನು ನೀನು ಹೇಳಲು ಸಾಧ್ಯ?

**ಭಾವವಿಲಾಸಿನೀ–** ಐಕ್ಯಜ್ಞಾನಸ್ಯಾವಿದ್ಯಾಕಾರ್ಯತ್ವೇ ಹೇತುಮಾಹ – **ಅವಿದ್ಯೇತಿ** ॥ ಏವಂ ಸತಿ ಸರ್ವಸ್ಯ ಕಾರ್ಯಸ್ಯಾವಿದ್ಯಾಕಾರ್ಯತ್ವೇ ಸತಿ। ಏತತ್ ಅಜ್ಞಾನಮ್। ಅಂತರಾ ವಿನಾ ॥೧೩೨೨॥

**ವಿವರಣೆ–** ಐಕ್ಯ ಜ್ಞಾನವು ಅವಿದ್ಯಾಕಾರ್ಯ. ಅದು ಸಂಸಾರದ ಕೊನೆಯಲ್ಲಿ ಹುಟ್ಟುವುದು. ಅದರ ನಾಶ ಬೇರೆ ಯಾವುದರಿಂದಲೂ ಸಾಧ್ಯವಿಲ್ಲ. ಏಕೆಂದರೆ ಆಗ ಉಳಿದಿರುವ ಬ್ರಹ್ಮ ಸರ್ವಸಾಮರ್ಥ್ಯ ವಿಧುರ. ಮತ್ತು ಅವಿದ್ಯೆಯು ತನಗೆ ತಾನು ನಾಶಕವಾಗುವುದಿಲ್ಲ. ಹೀಗಿರುವಾಗ ಐಕ್ಯಜ್ಞಾನವೇ ಐಕ್ಯಜ್ಞಾನಕ್ಕೆ ನಾಶಕ ಎಂದು ಹೇಳಲಾಗದು, ಹಾಗೆ ಹೇಳಿದರೆ ಆತ್ಮಾಶ್ರಯ ದೋಷವು ಬಂದೇ ಬರುತ್ತದೆ.

**ಅವಿದ್ಯಮಾನಂ ಭಾತೀತಿ ವಾದೋಽನಾದೌ ಕಥಂ ವದ ।**
**ಬಂಧೇಽಪ್ಯಾವಿದ್ಯಕತ್ವಂ ತದಂಧ ತೇ ನಿರ್ನಿಬಂಧನಂ ॥ ೧೩೨೩ ॥**

**ಅರ್ಥ–** ಅನಾದೌ = ಅನಾದಿಯಾದ, ಭೇದೇ = ಭೇದದ ವಿಷಯದಲ್ಲಿ, ಅವಿದ್ಯಮಾನಂ= ಅವಿದ್ಯಮಾನವಾದದ್ದು, ಭಾತಿ = ತೋರುತ್ತದೆ, ಇತಿ = ಎಂಬ, ತೇ = ನಿನ್ನ ವಾದಃ = ವಾದವು, ಕಥಂ = ಹೇಗೆ, ಉಚಿತಃ = ಉಚಿತವಾಗುತ್ತದೆ, ಅಪಿ ಚ = ಮತ್ತೂ ಕೂಡ, ಅಂಧ= ಕುರುಡನಾದ ಅದ್ವೈತಿಯೇ, ಅನಾದೌ = ಅನಾದಿಯಾದ, ಬಂಧೇ ಅಪಿ = ಬಂಧದಲ್ಲಿಯೂ ಕೂಡ, ತೇ = ನಿನ್ನ ಮತದಲ್ಲಿ ಹೇಳಲ್ಪಡುವ, ಆವಿದ್ಯಕತ್ವಂ = ಆವಿದ್ಯಕತ್ವವು, ನಿರ್ನಿಬಂಧನಂ= ನಿರಾಧಾರವಾಗಿದೆ.

**ಅನುವಾದ–** ಅವಿದ್ಯಮಾನವಾದ ಭೇದವೇ ತೋರುತ್ತದೆ ಎಂಬ ನಿನ್ನ ವಾದವು ಅನಾದಿಯಾದ ಭೇದದಲ್ಲಿ ಹೇಗೆ ಕೂಡುತ್ತದೆ? ಹಾಗೆಯೇ ಬಂಧವು ಆವಿದ್ಯಕ ಎಂಬ ನಿನ್ನ ವಾದವು ನಿರ್ನಿಬಂಧನವಾಗಿದೆ. ನೀನು ಅಂಧನೇ ಸರಿ.

**ವಿವರಣೆ–** ಅನಾದಿಯಾದುದು ಆವಿದ್ಯಕವಾಗಲು ಸಾಧ್ಯವಿಲ್ಲ. ಅನಾದಿ ಎಂದರೆ ಅನಾದಿ ಕಾಲದಿಂದಲೂ ವಿದ್ಯಮಾನವಾದುದು ಎಂದೇ ಅರ್ಥ. ಅದನ್ನು ಸ್ವಾಭಾವಿಕವೆಂದೇ ಒಪ್ಪಬೇಕು. ಭೇದವು ಅನಾದಿಯಾದರೂ ಅದು ಆವಿದ್ಯಕವೆಂದು ಹೇಳಿದರೆ ಐಕ್ಯವು ಅನಾದಿಯಾದರೂ ಅದು ಆವಿದ್ಯಕವಾಗಲಿ ಎಂಬ ಪ್ರಸಂಗವು ಬರುತ್ತದೆ. ಬಂಧವೂ ಸಹ ಭೇದದಂತೆಯೇ ಅನಾದಿಯಾಗಿದೆ. ಆದ್ದರಿಂದ ಭೇದವು ಹೇಗೆ ಆವಿದ್ಯಕವಲ್ಲವೋ ಹಾಗೆ ಬಂಧವೂ ಆವಿದ್ಯಕವಲ್ಲ. ಇದನ್ನು ತಿಳಿಯದೆ ಬಂಧವನ್ನು ಆವಿದ್ಯಕವೆಂದು ಹೇಳುವ ನೀನು ಕುರುಡನೇ ಸರಿ ಎಂದು ತಾತ್ಪರ್ಯ.

**ಅತಸ್ತತ್ಸಂಬಂಧಮಾತ್ರಾದ್ ಯದ್ಯವದ್ಯಂ ನಿಗದ್ಯತೇ ।**
**ತರ್ಹ್ಯೈಕ್ಯಸ್ಯಾಪ್ಯವದ್ಯಂ ಸ್ಯಾತ್ ತದಜ್ಞಾನಾವೃತಂ ಹಿ ತೇ ॥ ೧೩೨೪ ॥**

**ಅರ್ಥ–** ಅತಃ = ಆದ್ದರಿಂದ, ತತ್ಸಂಬಂಧ ಮಾತ್ರಾತ್ = ಅವಿದ್ಯಾಸಂಬಂಧವಿರುವ ಕಾರಣದಿಂದಲೇ, ಯದಿ = ಒಂದು ಪಕ್ಷದಲ್ಲಿ, ಭೇದಸ್ಯ = ಭೇದಕ್ಕೆ, ಅವದ್ಯಂ = ಆವಿದ್ಯಕತ್ವ ದೋಷವು, ನಿಗದ್ಯತೇ = ಹೇಳಲ್ಪಡುತ್ತದೆಂದಾದರೆ, ತರ್ಹಿ = ಆ ಪಕ್ಷದಲ್ಲಿ, ಐಕ್ಯಸ್ಯ ಅಪಿ = ಐಕ್ಯಕ್ಕೂ ಕೂಡ, ಅವದ್ಯಂ = ಆವಿದ್ಯಕತ್ವ ಎಂಬ ದೋಷವು, ಸ್ಯಾತ್ = ಬರುತ್ತದೆ, ತತ್ = ಆ ಐಕ್ಯವು, ತೇ ಮತೇ = ನಿನ್ನ ಮತದಲ್ಲಿ, ಅಜ್ಞಾನಾವೃತಂ ಹಿ = ಅಜ್ಞಾನಾವೃತವಾಗಿದೆಯಷ್ಟೆ (ಬ್ರಹ್ಮನ ಸ್ವರೂಪಭೂತವಾದದ್ದರಿಂದ)

**ಅನುವಾದ–** ಅವಿದ್ಯಾ ಸಂಬಂಧದಿಂದ ದೋಷವುಂಟಾಗುತ್ತದೆ ಎಂದು ಹೇಳುವುದಾದರೆ ಐಕ್ಯಕ್ಕೂ ಅವಿದ್ಯಾಸಂಬಂಧವಿರುವುದರಿಂದ ಅದೂ ದುಷ್ಟವಾಗಲಿ.

**ಭಾವವಿಲಾಸಿನೀ–** ಅನಾದೌ ಭೇದೇ । ಅನ್ಯಥಾ ಐಕ್ಯಸ್ಯಾಪ್ಯವಿದ್ಯಮಾನತ್ವಪ್ರಸಂಗಾದಿತಿ ಭಾವಃ । ತತ್ತಸ್ಮಾದ್ ಅನಾದೇರಾವಿದ್ಯಕತ್ವಾಯೋಗಾತ್ । ತೇಮತೇ ॥ ೧೩೨೩-೧೩೨೪ ॥

**ವಿವರಣೆ–** ಆವಿದ್ಯಕತ್ವ ಎಂದರೆ ಅವಿದ್ಯಾಸಂಬಂಧವುಳ್ಳದ್ದು ಎಂದರ್ಥ ಎಂಬ ಪಕ್ಷವನ್ನು ಇಲ್ಲಿ ನಿರಾಕರಿಸುತ್ತಾರೆ. ಭೇದವು ಅವಿದ್ಯಾಕಾರ್ಯವಲ್ಲದಿದ್ದರೂ ಅವಿದ್ಯಾ ಸಂಬಂಧವುಳ್ಳದ್ದಾಗಿದೆ. ಆದ್ದರಿಂದ ಅದಕ್ಕೆ ಮಿಥ್ಯಾತ್ವ ರೂಪವಾದ ದೋಷವು ಬರುತ್ತದೆ ಎಂದು ಹೇಳುವುದಾದರೆ ಐಕ್ಯವೂ ಸಹ ಅವಿದ್ಯಾಸಂಬಂಧಿಯಾಗಿದೆ. ಏಕೆಂದರೆ ಸಂಸಾರವಿರುವವರೆಗೂ ಐಕ್ಯವು ಅವಿದ್ಯೆಯಿಂದ ಆವೃತವಾಗಿರುವುದಷ್ಟೇ. ಅವಿದ್ಯೆಯ ಸಂಬಂಧವಿಲ್ಲದಿದ್ದರೆ ಅವಿದ್ಯೆಯಿಂದ ಆವೃತವಾಗುವುದು ಸಾಧ್ಯವಿಲ್ಲ. ಹೀಗೆ ಐಕ್ಯಕ್ಕೂ

ಅವಿದ್ಯೆಯ ಸಂಬಂಧವಿರುವುದರಿಂದ ಅದೂ ದುಷ್ಟವಾಗಿ ಮಿಥ್ಯಾಭೂತವಾಗಲಿ ಎಂದು ಇಲ್ಲಿ ಆಪಾದನೆಯನ್ನು ಮಾಡುತ್ತಾರೆ.

**ಯತೋ ಬ್ರಹ್ಮಚಿತೋಽಪ್ಯಸ್ತಿ ತತ್ಸಂಸರ್ಗೋಽಪವರ್ಗತಃ ।**
**ಪುರಾ ತತಃ ಸಾಽಪಿ ಭೇದಸಮೈವಾಸೀನ್ಮತೇ ತವ ॥ ೧೩೨೫ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಬ್ರಹ್ಮ ಚಿತಃ ಅಪಿ = ಬ್ರಹ್ಮಚೈತನ್ಯಕ್ಕೂ ಕೂಡ, ತತ್ಸಂಸರ್ಗಃ = ಅವಿದ್ಯಾಸಂಬಂಧವು, ಅಪವರ್ಗತಃ = ಮೋಕ್ಷಕ್ಕಿಂತ, ಪುರಾ = ಮುಂಚೆ, ಅಸ್ತಿ = ಇದೆಯೋ, ತತಃ = ಆ ಕಾರಣದಿಂದ, ಸಾ ಅಪಿ = ಆ ಬ್ರಹ್ಮಚೈತನ್ಯವೂ ಕೂಡ, ತವ = ನಿನ್ನ, ಮತೇ = ಮತದಲ್ಲಿ, ಭೇದಸಮಾಏವ = ಭೇದಕ್ಕೆ ಸಮಾನವಾದದ್ದೇ, ಆಸೀತ್ = ಆಯಿತು.

**ಅನುವಾದ–** ಬ್ರಹ್ಮಚೈತನ್ಯಕ್ಕೂ ಸಹ ಮೋಕ್ಷಕ್ಕಿಂತ ಮೊದಲು ಅವಿದ್ಯಾ-ಸಂಬಂಧವಿರುವುದರಿಂದ ಬ್ರಹ್ಮಚೈತನ್ಯವೂ ಕೂಡ ನಿನ್ನ ಮತದಲ್ಲಿ ಭೇದಸಮಕಕ್ಷಾಪನ್ನವೇ ಆಯಿತು.

**ವಿವರಣೆ–** ಐಕ್ಯವು ಅವಿದ್ಯವಾಗಲಿ ಎಂದಿಷ್ಟೇ ಅಲ್ಲ, ಬ್ರಹ್ಮಚೈತನ್ಯವೂ ಅವಿದ್ಯಕವಾಗಲಿ ಎಂಬ ಆಪತ್ತಿಯನ್ನು ಇಲ್ಲಿ ಕೊಡುತ್ತಾರೆ. ಮೋಕ್ಷವಾಗುವವರೆಗೆ ಬ್ರಹ್ಮಚೈತನ್ಯವೇ ಅಜ್ಞಾನದಿಂದ ಆವೃತವಾಗಿರುತ್ತದೆಯಷ್ಟೆ. ಆದ್ದರಿಂದ ಬ್ರಹ್ಮಚೈತನ್ಯಕ್ಕೂ ಅಜ್ಞಾನದ ಸಂಬಂಧವಿದೆ. ಅವಿದ್ಯಕತ್ವ ಎಂದರೆ ಅಜ್ಞಾನಸಂಬಂಧ ಎಂದು ಹೇಳಿದರೆ ಬ್ರಹ್ಮನಿಗೂ ಅಜ್ಞಾನ ಸಂಬಂಧವಿರುವುದರಿಂದ ಅವನೂ ಮಿಥ್ಯಾಭೂತ-ನಾಗಬೇಕಾಗುತ್ತದೆ.

**ಅಜ್ಞಾನನಾಶಾದ್ ಭೇದಸ್ಯ ನಾಶೇ ಬ್ರಹ್ಮಾಪಿ ನಶ್ಯತು ॥ ೧೩೨೬ ॥**

**ಅರ್ಥ–** ಅಜ್ಞಾನ ನಾಶಾತ್ = ಅಜ್ಞಾನದ ನಾಶದಿಂದ, ಭೇದಸ್ಯ = ಭೇದಕ್ಕೆ, ನಾಶೇ = ನಾಶವಾಗುವುದಾದರೆ, ಬ್ರಹ್ಮ ಅಪಿ = ಪರಬ್ರಹ್ಮವೂ ಕೂಡ, ನಶ್ಯತು = ನಾಶಹೊಂದಲಿ.

**ಅನುವಾದ–** ಅಜ್ಞಾನ ನಾಶದಿಂದ ಭೇದವು ನಾಶವಾಗುವುದಾದರೆ ಅಜ್ಞಾನ ನಾಶದಿಂದ ಬ್ರಹ್ಮನೂ ನಾಶವನ್ನು ಹೊಂದಲಿ.

**ಭಾವವಿಲಾಸಿನೀ–** ತತ್‌ಸಂಸರ್ಗಃ ಅವಿದ್ಯಾಸಂಸರ್ಗಃ । ಸಾ ಬ್ರಹ್ಮಚಿತ್ ॥ ೧೩೨೫-೧೩೨೬ ॥

**ವಿವರಣೆ–** ಅಜ್ಞಾನಕ್ಕೆ ಭೇದಸಂಬಂಧವಿದೆ. ಆದ್ದರಿಂದ ಅಜ್ಞಾನವು ನಾಶವಾದಾಗ ಅದರ ಸಂಬಂಧವುಳ್ಳ ಭೇದವೂ ನಾಶವಾಗುತ್ತದೆ ಎಂದರೆ ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಬ್ರಹ್ಮನಿಗೂ ಅಜ್ಞಾನಸಂಬಂಧವಿದೆ. ಅಜ್ಞಾನವು ನಾಶವಾದಾಗ ಬ್ರಹ್ಮಚೈತನ್ಯವೂ ನಾಶವಾಗಲಿ ಎಂಬ ಆಪತ್ತಿಯು ಬರುತ್ತದೆ ಎಂದು ತಾತ್ಪರ್ಯ.

**ಯದ್ಯಜ್ಞಾನಾನುಪಾದಾನಂ ಬ್ರಹ್ಮ ತನ್ನಾಶನಾಶಿ ನ ।**
**ತರ್ಹ್ಯನಾದಿವಿಭೇದೋಽಯಂ ಕುತಸ್ತನ್ನಾಶನಾಶವಾನ್ ॥ ೧೩.೨೭ ॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಅಜ್ಞಾನ ಅನುಪಾದಾನಂ = ಅಜ್ಞಾನವೇ ಉಪಾದಾನಕಾರಣವಾಗಿ ಉಳ್ಳದ್ದು ಅಲ್ಲದ, ಬ್ರಹ್ಮ = ಬ್ರಹ್ಮವು, ತನ್ನಾಶನಾಶೀ – ತತ್ = ಆ ಅಜ್ಞಾನದ, ನಾಶ = ನಾಶದಿಂದ, ನಾಶೀ = ನಾಶಹೊಂದತಕ್ಕದ್ದು, ನ = ಅಲ್ಲವಾದರೆ, ತರ್ಹಿ= ಆ ಪಕ್ಷದಲ್ಲಿ, ಅಯಂ = ಈ, ಅನಾದಿವಿಭೇದಃ = ಅನಾದಿಯಾದ ಭೇದವು, ತನ್ನಾಶ-ನಾಶವಾನ್= ಆ ಅಜ್ಞಾನದ ನಾಶದಿಂದ ನಾಶವನ್ನು ಹೊಂದುವಂತಹದು, ಕುತಃ = ಏಕೆ.

**ಅನುವಾದ– ಬ್ರಹ್ಮನಿಗೆ ಅಜ್ಞಾನ ಸಂಬಂಧವಿದ್ದರೂ, ಅಜ್ಞಾನವು ಬ್ರಹ್ಮನಿಗೆ ಉಪಾದಾನವಲ್ಲವಾದ ಕಾರಣ ಅಜ್ಞಾನನಾಶದಿಂದ ಬ್ರಹ್ಮನು ನಾಶವಾಗುವುದಿಲ್ಲ ಎಂದು ಹೇಳಿದರೆ ಭೇದಕ್ಕೆ ಅಜ್ಞಾನ ಸಂಬಂಧವಿದ್ದರೂ ಅನಾದಿಯಾದ ಭೇದಕ್ಕೆ ಅಜ್ಞಾನವು ಉಪಾದಾನವಲ್ಲದ ಕಾರಣ ಅಜ್ಞಾನವು ನಾಶವನ್ನು ಹೊಂದಿದರೂ ಭೇದವು ನಾಶವನ್ನು ಹೊಂದುವುದಿಲ್ಲ ಎಂದು ಸಿದ್ಧವಾಗುತ್ತದೆ.**

**ಭಾವವಿಲಾಸಿನೀ– ತನ್ನಾಶನಾಶಿ ಅಜ್ಞಾನನಾಶಾನ್ನಾಶಿ ॥ ೧೩.೨೭ ॥**

**ವಿವರಣೆ–** ಅಜ್ಞಾನ ಮತ್ತು ಭೇದಗಳಿಗೆ ಸಮಾನವಾದ ಯೋಗಕ್ಷೇಮವನ್ನು ಈ ಶ್ಲೋಕದಲ್ಲಿ ನಿರೂಪಿಸುತ್ತಾರೆ.

**ತದ್ಬ್ರಹ್ಮಸಮಸಾಮರ್ಥ್ಯೋ ಭೇದೋ ಭೇದ್ಯೋ ನ ಕೇನಚಿತ್॥ ೧೩.೨೮ ॥**

**ಅರ್ಥ–** ತತ್ = ಅನಾದಿಯಾದ್ದರಿಂದ, ಬ್ರಹ್ಮಸಮಸಾಮರ್ಥ್ಯಃ = ಪರಬ್ರಹ್ಮನಿಗೆ ಸಮಾನವಾದ ಶಕ್ತಿಯುಳ್ಳ, ಭೇದಃ = ಭೇದವು, ಕೇನಚಿತ್ = ಯಾರಿಂದಲೂ ಕೂಡ, ನ ಭೇದ್ಯಃ = ನಿರಾಕರಿಸಲ್ಪಡಲು ಸಾಧ್ಯವಲ್ಲ.

**ಅನುವಾದ– ಆದ್ದರಿಂದ ಬ್ರಹ್ಮನಿಗೆ ಸಮಾನವಾದ ಸಾಮರ್ಥ್ಯವುಳ್ಳ ಭೇದವನ್ನು ಯಾರೂ ನಿರಾಕರಿಸಲು ಸಾಧ್ಯವಿಲ್ಲ.**

**ವಿವರಣೆ–** ಬ್ರಹ್ಮನೂ ಅನಾದಿ ಮತ್ತು ಭೇದವೂ ಅನಾದಿ. ಅನಾದಿಯಾದ ಬ್ರಹ್ಮನಿಗೂ ನಿವೃತ್ತಿಯಿಲ್ಲ, ಹಾಗೆಯೇ ಭೇದಕ್ಕೂ ನಿವೃತ್ತಿಯಿಲ್ಲ. ಹೀಗೆ ಭೇದಕ್ಕೆ ಬ್ರಹ್ಮನಿಗೆ ಸಮಾನವಾದ ಸಾಮರ್ಥ್ಯವಿದೆ ಎಂದು ಉಪಪಾದನೆ ಮಾಡುತ್ತಾರೆ.

**ಕಿಂಚ ಮಾಯಾನಿವೃತ್ತೌ ಚ ಸ್ಮರ್ಯತೇ ಶ್ರೂಯತೇ ಚ ಯಾ ।**
**ಸಾ ಭಿದಾ ನ ಪರೈರ್ಭೇದ್ಯಾ ಭಿನತ್ತಿ ನಿಖಿಲಂ ಜಗತ್ ॥ ೧೩.೨೯ ॥**

**ಅರ್ಥ–** ಕಿಂಚ = ಅದಲ್ಲದೆ, ಮಾಯಾನಿವೃತ್ತೌ ಚ = ಮಾಯೆಯು ನಿವೃತ್ತವಾದ ಬಳಿಕವೂ ಕೂಡ, ಯಾ = ಯಾವುದು, ಸ್ಮರ್ಯತೇ = ಸ್ಮೃತಿಗಳಲ್ಲಿ ಹೇಳಲ್ಪಡುತ್ತದೋ, ಶ್ರೂಯತೇ ಚ = ಶ್ರುತಿಗಳಲ್ಲೂ ಕೂಡ ಹೇಳಲ್ಪಡುತ್ತದೋ, ಸಾ = ಆ, ಭಿದಾ = ಭೇದವು, ಪರೈಃ = ಪ್ರತಿವಾದಿಗಳಿಂದ, ನ ಭೇದ್ಯಾ= ನಿರಾಕರಿಸಲ್ಪಡಲು ಸಾಧ್ಯವಲ್ಲ, ಸಾ ಏವ = ಆ ಭೇದವೇ, ನಿಖಿಲಂ = ಎಲ್ಲ, ಜಗತ್ = ಪ್ರಪಂಚವನ್ನು, ಭಿನತ್ತಿ = ಪಂಚಭೇದಯುಕ್ತವನ್ನಾಗಿ ಮಾಡುತ್ತದೆ.

**ಅನುವಾದ– ಅದೂ ಅಲ್ಲದೇ, ಮಾಯಾನಿವೃತ್ತಿಯಾದ ನಂತರವೂ ಯಾವ ಭೇದವು ಶ್ರುತಿ ಸ್ಮೃತಿಗಳಲ್ಲಿ ಹೇಳಲ್ಪಡುತ್ತದೆಯೋ, ಆ ಭೇದವನ್ನು ನಿರಾಕರಿಸಲು ಯಾರೂ ಸಮರ್ಥರಾಗುವುದಿಲ್ಲ. ಆ ಭೇದವೇ ಜಗತ್ತನ್ನು ವಿಭಾಗವನ್ನು ಮಾಡುತ್ತದೆ.**

**ಭಾವವಿಲಾಸಿನೀ– ಮೋಕ್ಷಕಾಲೇ ಶ್ರೂಯಮಾಣತ್ವಾಚ್ಚ ನ ಭೇದಸ್ಯ ವ್ಯಾವಹಾರಿಕತ್ವಾದಿಕಮಿತ್ಯಾಹ – ಕಿಂಚೇತಿ ॥ ಭಿನತ್ತಿ ಪಂಚಭೇದಯುಕ್ತಂ ಕರೋತಿ ॥ ೧೩೨೯ ॥**

**ವಿವರಣೆ–** 'ಅಕ್ಷಣ್ವಂತಃ ಕರ್ಣವಂತಃ ಸಖಾಯಃ' ಎಂಬ ವಾಕ್ಯವು ಮೋಕ್ಷದಲ್ಲಿ ಭೇದವನ್ನು ಹೇಳುತ್ತದೆ. 'ಇದಂ ಜ್ಞಾನಂ ಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ' ಎಂಬ ಗೀತಾವಾಕ್ಯವೂ ಸಹ ಮೋಕ್ಷದಲ್ಲಿ ಭೇದವನ್ನು ಹೇಳುತ್ತದೆ. ಮೋಕ್ಷದ ಅವಸ್ಥೆ ಎಂದರೆ ಅವಿದ್ಯಾನಿವೃತ್ತಿಯ ನಂತರ ಇರುವ ಅವಸ್ಥೆ. ಅವಿದ್ಯಾನಿವೃತ್ತಿಯ ನಂತರವೂ ಇರುವ ಭೇದವು ಆವಿದ್ಯಕವಾಗಲು ಸಾಧ್ಯವಿಲ್ಲ. ಅದು ಸತ್ಯವಾದುದು. ಆ ಕಾರಣದಿಂದ ಅದು ಜಗತ್ತನ್ನು ಜೀವ ಜಡ ಪರಮಾತ್ಮನೆಂದು ವಿಭಾಗಿಸುತ್ತದೆ ಮತ್ತು ಪಂಚಭೇದಗಳಿಂದ ಯುಕ್ತವಾದುದನ್ನಾಗಿಯೂ ಮಾಡುತ್ತದೆ.

**ಯದ್ ಬ್ರಹ್ಮಣಾ ಸಹೇತ್ಯುಕ್ತಂ ಮುಕ್ತೌ ತನ್ನಾಸತೀ ಭಿದಾ ।**
**ವ್ರಣಾದಪ್ಯಧಿಕೋ ಬಾಧಃ ಸಹೋಕ್ತ್ಯಾಽದ್ವೈತವಾದಿನಃ ॥ ೧೩೩೦ ॥**

**ಅರ್ಥ–** ಯತ್= ಯಾವ ಕಾರಣದಿಂದ, ಶ್ರುತೌ = ವೇದವಾಕ್ಯದಲ್ಲಿ, ಬ್ರಹ್ಮಣಾ ಸಹ = ಬ್ರಹ್ಮನ ಜೊತೆಯಲ್ಲಿ, ಇತಿ = ಈ ರೀತಿಯಾಗಿ, ಉಕ್ತಂ = ಹೇಳಲ್ಪಟ್ಟಿದೆಯೋ, ತತ್= ಆ ಕಾರಣದಿಂದ, ಮುಕ್ತೌ = ಮೋಕ್ಷದಲ್ಲಿ, ಭಿದಾ = ಭೇದವು, ನ ಅಸತೀ = ಅಸತ್ಯವಲ್ಲ, ಸಹೋಕ್ತ್ಯಾ = ವೇದದಲ್ಲಿ ಸಹ ಎಂದು ಇರುವುದರಿಂದ, ಅದ್ವೈತವಾದಿನಃ = ಅದ್ವೈತವಾದಿಗೆ, ವ್ರಣಾತ್ ಅಪಿ = ಹುಣ್ಣಿಗಿಂತಲೂ, ಅಧಿಕಃ = ಹೆಚ್ಚಿನ, ಬಾಧಃ = ನೋವು, ಭವತಿ = ಆಗುತ್ತದೆ.

**ಅನುವಾದ– ಬ್ರಹ್ಮಣಾ ಸಹ ಎಂದು ಹೇಳಿದ್ದರಿಂದ ಮೋಕ್ಷದಲ್ಲಿರುವ ಭೇದವು ಅಸತ್ಯವಲ್ಲ. ಅದ್ವೈತ ವಾದಿಗಳಿಗೆ ಸಹಶಬ್ದದಿಂದ ಉಂಟಾಗುವ ವೇದನವು ವ್ರಣದಿಂದ ಉಂಟಾಗುವ ವೇದನೆಗಿಂತಲೂ ಮಿಗಿಲಾದುದಷ್ಟೇ?**

**ಭಾವವಿಲಾಸಿನೀ–** ಯತ್ ಯಸ್ಮಾತ್ । ತತ್ ತಸ್ಮಾತ್ । ಅದ್ವೈತವಾದಿನಃ ಪರಾಚಾರ್ಯಸ್ಯ । ವ್ರಣಂ ನ ಬಾಧತೇ ಸಹಶಬ್ದೋ ಬಾಧತ ಇತಿ ಸ್ವಮರಣಕಾಲೇ ಶಂಕರಾಚಾರ್ಯೇಣ ಕಥಿತಮಿತಿಪ್ರಥಾ । ಅತ ಇದಮುಕ್ತಮ್ ॥ ೧೩೩೦ ॥

**ವಿವರಣೆ–** ವೇದವು 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ' ಮುಕ್ತನಾದವನು ಬ್ರಹ್ಮನ ಜೊತೆಯಲ್ಲಿ ಎಲ್ಲ ಭೋಗಗಳನ್ನೂ ಅನುಭವಿಸುತ್ತಾನೆ ಎಂದು ಹೇಳುತ್ತದೆ. ಸಹಭಾವವು ಭೇದಗರ್ಭಿತವಾದುದು. ಆದ್ದರಿಂದ ಮೋಕ್ಷದಲ್ಲಿಯೂ ಭೇದವಿದೆ ಎಂದು ಸಿದ್ಧವಾಯಿತು. ಮೋಕ್ಷದಲ್ಲಿರುವ ಭೇದವು ಅಸತ್ಯವಾಗಲಾರದು. ನನಗೆ ವ್ರಣದ ಬಾಧೆಯಿಲ್ಲ ಆದರೆ ಸಹ ಬ್ರಹ್ಮಣಾ ಎಂಬ ಉಕ್ತಿಯು ಬಹಳ ಬಾಧಿಸುತ್ತಿದೆ ಎಂದು ಶಂಕರಾಚಾರ್ಯರು ತಮ್ಮ ಮರಣ ಸಮಯದಲ್ಲಿ ಶಿಷ್ಯರಿಗೆ ಹೇಳಿದರೆಂಬ ಐತಿಹ್ಯವನ್ನು ಇಲ್ಲಿ ಗ್ರಂಥಕಾರರು ಸ್ಮರಿಸುತ್ತಾರೆ.

**ಅಪಿ ಸ್ವರೂಪನಿಷ್ಪತ್ತೌ ಸಮೀಪಪ್ರಾಪ್ತಿರುಚ್ಯತೇ ।**
**ಪರಂಜ್ಯೋತಿರಿತಿ ಶ್ರುತ್ಯಾ ತತ್ ತ್ಯಾಗಾರ್ಹಾ ಕಥಂ ಭಿದಾ॥ ೧೩೩೧ ॥**

**ಅರ್ಥ–** ಪರಂಜ್ಯೋತಿಃ ಇತಿ ಶ್ರುತ್ಯಾ = ಪರಂಜ್ಯೋತಿಃ ಎಂಬ ವೇದವಾಕ್ಯದಿಂದ, ಜೀವಸ್ಯ= ಜೀವನ, ಸ್ವರೂಪನಿಷ್ಪತ್ತೌ ಅಪಿ = ಸ್ವರೂಪಾಭಿವ್ಯಕ್ತಿಯ ಸಂದರ್ಭದಲ್ಲಿಯೂ ಕೂಡ, ಬ್ರಹ್ಮಣಃ ಬ್ರಹ್ಮನ, ಸಮೀಪಪ್ರಾಪ್ತಿಃ = ಸಮೀಪ ಹೋಗುವಿಕೆಯು, ಉಚ್ಯತೇ = ಹೇಳಲ್ಪಡುತ್ತದೆ, ತತ್= ಆದ್ದರಿಂದ, ಭಿದಾ = ಭೇದವು, ಕಥಂ = ಹೇಗೆ, ತ್ಯಾಗಾರ್ಹಾ= ತ್ಯಾಗಕ್ಕೆ ಯೋಗ್ಯವಾದದ್ದು, ಸ್ಯಾತ್ = ಆಗುತ್ತದೆ.

**ಅನುವಾದ–** 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ಶ್ರುತಿಯು ಜೀವನ ಸ್ವರೂಪಾಭಿವ್ಯಕ್ತಿಗೆ ಕಾರಣವಾಗಿ ಬ್ರಹ್ಮನ ಸಮೀಪಪ್ರಾಪ್ತಿಯನ್ನು ಹೇಳುತ್ತದೆ. ಆದ್ದರಿಂದ ಈ ಭೇದವು ಎಂದೂ ತ್ಯಾಗಾರ್ಹವಲ್ಲ.

**ಭಾವವಿಲಾಸಿನೀ–** ತನ್ಮುಕ್ತೌ ವಿದ್ಯಮಾನತ್ವಾತ್ ॥ ೧೩೩೧ ॥

**ವಿವರಣೆ–** ಪರಂಜ್ಯೋತಿಃ ಇತ್ಯಾದಿ ಶ್ರುತಿಯಲ್ಲಿ ಮುಕ್ತನಿಗೆ ಬ್ರಹ್ಮಸ್ವರೂಪಗಮನವನ್ನು ಹೇಳಿ ಅನಂತರ ಸ್ವರೂಪಾಭಿವ್ಯಕ್ತಿಯನ್ನು ಹೇಳುತ್ತದೆ. ಸ್ವರೂಪಾಭಿವ್ಯಕ್ತಿಯ ಸಂದರ್ಭದಲ್ಲೂ ಕೂಡ ಜೀವನಿಗೆ ಬ್ರಹ್ಮನ ಸಾಮಿಪ್ಯವೇ ಇದೆ ಎಂದು ಹೇಳಿ ಸಾಮಿಪ್ಯ ಇರಬೇಕಾದರೆ ಎರಡು ವಸ್ತುಗಳಿದ್ದರೆ ಮಾತ್ರ ಸಾಧ್ಯ. ಎರಡು ವಸ್ತುಗಳಿರಬೇಕಾದರೆ ಭೇದವು ಇರಲೇ ಬೇಕು. ಆದ್ದರಿಂದ ಮೋಕ್ಷದಲ್ಲಿಯೂ ಸಿದ್ಧವಾಗುವ ಈ ಭೇದವು ಎಂದಿಗೂ ತ್ಯಾಗಾರ್ಹವಲ್ಲ ಎಂದು ಅಭಿಪ್ರಾಯ.

ಪೂರ್ವೋಕ್ತಬ್ರಹ್ಮಸೂತ್ರಾಣಿ ಭೇದಮಾಘೋಷಯಂತಿ ಹಿ ।
ಅಭೇದೋಕ್ತೀಸ್ತಿರಸ್ಕೃತ್ಯ ಕುತಸ್ತಸ್ಯ ಹ್ಯಸತ್ಯತಾ ।
ಅತೋ ಭೇದಶ್ರುತೇರಗ್ರೇ ಕಸ್ಯ ಸ್ಯಾತ್ ಪ್ರತ್ಯವಸ್ಥಿತಿಃ ॥ ೧೩೩೨ ॥

**ಅರ್ಥ–** ಪೂರ್ವೋಕ್ತಬ್ರಹ್ಮಸೂತ್ರಾಣಿ - ಪೂರ್ವೋಕ್ತ = ಹಿಂದೆ ಹೇಳಲ್ಪಟ್ಟ, ಬ್ರಹ್ಮಸೂತ್ರಾಣಿ= ಬ್ರಹ್ಮಸೂತ್ರಗಳು, ಅಭೇದೋಕ್ತೀಃ= ಅಭೇದವನ್ನು ಹೇಳುವ ವಾಕ್ಯಗಳನ್ನು, ತಿರಸ್ಕೃತ್ಯ = ನಿರಾಕರಿಸಿ, ಭೇದಂ = ಭೇದವನ್ನು, ಆಘೋಷಯಂತಿ ಹಿ = ಘೋಷಿಸುತ್ತಿವೆಯಷ್ಟೆ, ಅತಃ= ಆದ್ದರಿಂದ, ತಸ್ಯ = ಬ್ರಹ್ಮಸೂತ್ರಗಳಿಂದ ನಿರ್ಣೀತವಾದ ಆ ಭೇದಕ್ಕೆ, ಅಸತ್ಯತಾ = ಅಸತ್ಯತ್ವವು, ಕುತಃ = ಯಾವ ಪ್ರಮಾಣದಿಂದ, ಸ್ಯಾತ್ ಹಿ = ಆಗಲು ಸಾಧ್ಯ, ಅತಃ = ಆದ್ದರಿಂದ, ಭೇದಶ್ರುತೇಃ = ಭೇದವನ್ನು ಹೇಳುವ ವೇದವಾಕ್ಯದ, ಅಗ್ರೇ = ಎದುರುಗಡೆ, ಕಸ್ಯ = ಯಾವ ಪ್ರಮಾಣದ (ಯಾವ ಪ್ರತಿವಾದಿಯ), ಪ್ರತ್ಯವಸ್ಥಿತಿಃ = ನಿಲ್ಲುವಿಕೆಯು, ಸ್ಯಾತ್ = ಆಗುತ್ತದೆ.

**ಅನುವಾದ–** ಹಿಂದೆ ಉದಾಹರಿಸಿದ ಬ್ರಹ್ಮಸೂತ್ರಗಳು ಜೀವೇಶ್ವರ ಭೇದವನ್ನು ಘೋಷಣೆ ಮಾಡುತ್ತಿವೆ. ಅಷ್ಟೇ ಅಲ್ಲದೆ ಅಭೇದ ವಾಕ್ಯಗಳನ್ನು ನಿರಾಕರಿಸುತ್ತಿವೆ. ಹೀಗಿರುವಾಗ ಭೇದವು ಹೇಗೆ ಅಸತ್ಯವಾಗುತ್ತದೆ? ಆದ್ದರಿಂದ ಭೇದಶ್ರುತಿಯ ಮುಂದೆ ಯಾವನು ಪ್ರತಿಭಟನಾಗಿ ನಿಲ್ಲಲು ಸಾಧ್ಯ?

**ಭಾವವಿಲಾಸಿನೀ–** ತಸ್ಯ ನಿರ್ಣಯಸೂತ್ರನಿರ್ಣೀತಸ್ಯ ॥ ೧೩೩೨ ॥

**ವಿವರಣೆ–** ವೇದಾರ್ಥನಿರ್ಣಾಯಕವಾದ ಬ್ರಹ್ಮಸೂತ್ರಗಳು ವೇದದಲ್ಲಿ ಅಭೇದವನ್ನು ಹೇಳುವಂತೆ ತೋರುವ ವಾಕ್ಯಗಳಿಗೆ ಅಭೇದವು ಅರ್ಥವಲ್ಲವೆಂದು ನಿರ್ಧರಿಸಿ ಬೇರೆ ಬೇರೆ ಸೂತ್ರಗಳಲ್ಲಿ ಜೀವೇಶಭೇದವನ್ನು ಸಾರುತ್ತಿರುವುದರಿಂದ ಆ ಭೇದವನ್ನು ನಿರಾಕರಣೆ ಮಾಡಲು ಯಾರಿಗೂ ಸಾಧ್ಯವಿಲ್ಲ ಎಂದು ಇಲ್ಲಿ ಗ್ರಂಥಕಾರರು ತಿಳಿಸುತ್ತಾರೆ.

ಅನಾದಿವೇದವಾಕ್ಯೇಷು ಪರಾಪರಕಥಾ ವೃಥಾ ।
ನಿಷೇಧವಿಧಿವಾರ್ತಾಽದ್ಧಾ ದಗ್ಧಾಽಗ್ನೀಷೋಮಪಾವಕೇ ॥ ೧೩೩೩ ॥

**ಅರ್ಥ–** ಅನಾದಿವೇದವಾಕ್ಯೇಷು = ಅನಾದಿಯಾದ ವೇದದ ವಾಕ್ಯಗಳಲ್ಲಿ, ಪರಾಪರಕಥಾ= ಇದು ಪೂರ್ವ ವಾಕ್ಯ, ಇದು ಅಪರ ವಾಕ್ಯ ಎಂಬ ವಿಚಾರವು, ವೃಥಾ = ವ್ಯರ್ಥವು, ನಿಷೇಧವಿಧಿವಾರ್ತಾತು = ನಿಷೇಧವಿಧಿವಾರ್ತೆಯಂತೂ, ಅಗ್ನೀಷೋಮ–ಪಾವಕೇ = ಅಗ್ನಿಷೋಮ ಯಾಗದ ಬೆಂಕಿಯಲ್ಲಿ (ಅಗ್ನಿಷೋಮ ಯಾಗದ ಹಿನ್ನೆಲೆಯಲ್ಲಿ), ಅದ್ಧಾ= ಚೆನ್ನಾಗಿ, ದಗ್ಧಾ= ಸುಟ್ಟುಹೋಯಿತು.

**ಅನುವಾದ–** ಅನಾದಿಯಾದ ವೇದದಲ್ಲಿ ಒಂದು ವಾಕ್ಯವನ್ನು ಪೂರ್ವ, ಇನ್ನೊಂದು ವಾಕ್ಯವನ್ನು ಪರ ಎಂದು ಹೇಳಿ ಬಾಧ್ಯಬಾಧಕ ಭಾವವನ್ನು ಹೇಳಲು ಬರುವುದಿಲ್ಲ. ನಿಷೇಧವಿಧಿ ವಾರ್ತೆಯಂತೂ ಅಗ್ನಿಷೋಮಯಾಗದ ವಹ್ನಿಯಲ್ಲಿ ಚೆನ್ನಾಗಿ ಸುಟ್ಟುಹೋಯಿತು.

**ಭಾವವಿಲಾಸಿನೀ–** ಭೇದವಾಕ್ಯಸ್ಯ ಪೂರ್ವತ್ವೇನ ದೌರ್ಬಲ್ಯಮ್ । ಅಭೇದವಾಕ್ಯಸ್ಯ ಪರತ್ವೇನ ಪ್ರಾಬಲ್ಯಂ ಪರೋ ವಕ್ತಿ ತದಪಿ ನ ಯುಕ್ತಮಿತ್ಯಾಹ – **ಅನಾದೀತಿ** ॥ ಅಪರಂ ಪೂರ್ವಮ್ । ವಿಧಿತೋ ನಿಷೇಧಸ್ಯ ಪ್ರಾಬಲ್ಯಂ ಪರೋ ವಕ್ತಿ । ತಚ್ಚ ನ ಯುಕ್ತಮಿತ್ಯಾಹ – **ನಿಷೇಧೇತಿ** ॥ ನ ಹಿಂಸ್ಯಾದಿತಿ ನಿಷೇಧವಾಕ್ಯೇ ಸತ್ಯಪಿ ಅಗ್ನೀಷೋಮೀಯಂ ಪಶುಮಾಲಭೇತೇತಿ ವಿಧಿ ವಾಕ್ಯಬಲಾತ್ ಅಗ್ನೀಷೋಮಪಾವಕಸ್ಯ ಜಾಜ್ವಲ್ಯಮಾನಸ್ಯ ಪ್ರತ್ಯಕ್ಷತೋ ದರ್ಶನಾತ್ ಪಾವಕೇ ದಗ್ಧೇತ್ಯುಕ್ತಮ್ ॥ ೧೩೩೩ ॥

**ವಿವರಣೆ–** ಭೇದವಾಕ್ಯಗಳು ಪೂರ್ವ ಮತ್ತು ಐಕ್ಯವಾಕ್ಯಗಳು ಪರ ಎಂದು ಹೇಳಿ ಅದ್ವೈತಿಗಳು ಐಕ್ಯವಾಕ್ಯದಿಂದ ಭೇದವಾಕ್ಯಗಳಿಗೆ ಬಾಧವನ್ನು ಹೇಳುತ್ತಾರೆ. ಅನಾದಿಯಾದ ವೇದದಲ್ಲಿ ಎರಡು ವಾಕ್ಯಗಳಿಗೂ ಒಂದೇ ರೀತಿಯಾದ ಪೂರ್ವತ್ವವಿರುವುದರಿಂದ ಬಾಧ್ಯಬಾಧಕವನ್ನು ಹೇಳಲು ಬರುವುದಿಲ್ಲ ಎಂದು ಇಲ್ಲಿ ತಿಳಿಸುತ್ತಾರೆ. ಹಾಗೆಯೇ ಭೇದವಾಕ್ಯಗಳು ವಿಧಿರೂಪವಾದವು. ಐಕ್ಯವಾಕ್ಯಗಳು ನಿಷೇಧರೂಪವಾದುವು. ವಿಧಿವಾಕ್ಯಗಳಿಂದ ನಿಷೇಧವಾಕ್ಯಗಗಳ ಪ್ರಬಲ. ಆದ್ದರಿಂದ ಐಕ್ಯವಾಕ್ಯಗಳು ಭೇದವಾಕ್ಯಗಳನ್ನು ಬಾಧಿಸುತ್ತವೆ ಎಂಬ ಅದ್ವೈತಿಗಳ ವಾದವು ಸರಿಯಲ್ಲ. ಮಾಹಿಂಸ್ಯಾತ್ ಎಂಬುದು ನಿಷೇಧವಾಕ್ಯ. ಅಗ್ನೀಷೋಮೀಯಂ ವಿಧಿವಾಕ್ಯ. ಈ ಅಗ್ನಿಷೋಪಶುಮಾಲಭೇತ ಎಂಬುದಾಯ ವಾಕ್ಯವೇ ಮಾಹಿಂಸ್ಯಾತ್ ಎಂಬ ನಿಷೇಧವಾಕ್ಯವನ್ನು ಬಾಧಿಸುತ್ತದೆ. ಆದ್ದರಿಂದ ನಿಷೇಧ ವಿಧಿವಾರ್ತೆಯು ಅಗ್ನಿಷೋಮಯಾಗದ ಅಗ್ನಿಯಲ್ಲಿ ಸುಟ್ಟುಹೋಯಿತು ಎಂದು ಆಲಂಕಾರಿಕವಾಗಿ ಹೇಳುತ್ತಾರೆ.

ಪರಸ್ಮಾತ್ ಪೂರ್ವಬಾಧಶ್ಚೇತ್ ಸ್ಮೃತ್ಯಾ ಸ್ಯಾಚ್ಛ್ರುತಿಬಾಧನಮ್ ।
ಪರಸ್ಮಾಜ್ಜಗತಃ ಪೂರ್ವಬ್ರಹ್ಮಬಾಧಶ್ಚ ತೇ ಭವೇತ್ ॥ ೧೩೩೪ ॥

**ಅರ್ಥ–** ಪರಸ್ಮಾತ್ = ಪರವಾದುದರಿಂದ, ಪೂರ್ವಬಾಧಃ ಚೇತ್ = ಪೂರ್ವಕ್ಕೆ ಬಾಧವು ಬರುವುದಾದರೆ, ಸ್ಮೃತ್ಯಾ = ಸ್ಮೃತಿಗಳಿಂದ, ಶ್ರುತಿಬಾಧನಂ = ವೇದಗಳಿಗೆ ಬಾಧವು, ಸ್ಯಾತ್ = ಆಗಲಿ, ಚ = ಮತ್ತು, ತೇ = ನಿನ್ನ ನ್ಯಾಯೇನ = ನ್ಯಾಯದಿಂದ, ಪರಸ್ಮಾತ್ = ಪರವಾದ, ಜಗತಃ = ಜಗತ್ತಿನಿಂದ, ಪೂರ್ವಬ್ರಹ್ಮಬಾಧಃ = ಪೂರ್ವನಾದ ಬ್ರಹ್ಮನಿಗೆ ಬಾಧವು, ಭವೇತ್ = ಆಗಲಿ.

**ಅನುವಾದ–** ಪರದಿಂದ ಪೂರ್ವಕ್ಕೆ ಬಾಧವುಂಟಾಗುವುದಾದರೆ ಸ್ಮೃತಿಯಿಂದ ಶ್ರುತಿಗೆ ಬಾಧವುಂಟಾಗಲಿ. ಅದು ನಿನ್ನ ನ್ಯಾಯದಂತೆ ಪೂರ್ವನಾದ ಬ್ರಹ್ಮನಿಗೆ ಪರವಾದ ಜಗತ್ತಿನಿಂದ ಬಾಧವುಂಟಾಗಲಿ.

**ಭಾವವಿಲಾಸಿನೀ–**ಅನಾದಿಷು ವೇದವಾಕ್ಯೇಷು ಪೂರ್ವಪರವಿಭಾಗ ಏವ ನ ಘಟತ ಇತ್ಯುಕ್ತಮ್ । ಅಧುನಾ ಪರಸ್ಮಾತ್ ಪೂರ್ವಬಾಧೋ ನ ಯುಕ್ತ ಇತ್ಯಾಹ – **ಪರಸ್ಮಾದಿತಿ** ॥ ೧೩೩೪ ॥

**ವಿವರಣೆ–** ಸ್ಮೃತಿಗಳು ಶ್ರುತಿಗಳನ್ನು ಆಧರಿಸಿ ಜನ್ಯವಾದವು. ಶ್ರುತಿಗಳು ಅನಾದಿ. ಆದ್ದರಿಂದ ಶ್ರುತಿಗಳಿಂತ ಸ್ಮೃತಿಗಳು ಪರವಾದವು. ಸ್ಮೃತಿಯಿಂದಲೇ ಶ್ರುತಿಗೆ ಬಾಧವನ್ನು ಹೇಳು ಎಂದು ಆಪಾದನೆ ಮಾಡುತ್ತಾರೆ. ಇದು ಸರ್ವಮೀಮಾಂಸಾ ವಿರುದ್ಧವಾದುದು. ಪೂರ್ವಮೀಮಾಂಸಾ ಶಾಸ್ತ್ರದಲ್ಲಿ ವಿರೋಧಾದಿಕರಣದಲ್ಲಿ ಸ್ಮೃತಿಯೇ ಶ್ರುತಿಗೆ ಬಾಧ್ಯವಾಗುತ್ತದೆ ಎಂದು ಸಮರ್ಥಿಸಿದ್ದಾರೆ. ಹಾಗೆಯೇ ಬ್ರಹ್ಮನು ಅನಾದಿ ಜನತ್ತು ಅವನಿಂದ ಜನ್ಯವಾದುದು, ಆದ್ದರಿಂದ ಪರವಾದ ಜಗತ್ತಿನಿಂದ ಪೂರ್ವನಾದ ಬ್ರಹ್ಮನಿಗೆ ಬಾಧವುಂಟಾಗಲಿ ಎಂದು ಆಪತ್ತಿಯು ಬರುತ್ತದೆ.

**ನಿಷೇಧಾದ್ ವಿಧಿಬಾಧಶ್ಚೇತ್ ಬೌದ್ಧೋಕ್ತ್ಯಾ ಧರ್ಮಬಾಧನಂ ।**
**ತಥಾ ಶೂನ್ಯತ್ವಕಥಯಾ ಬ್ರಹ್ಮ ಬಾಧ್ಯಂ ಭವೇತ್ ತವ ॥ ೧೩೩೫ ॥**

**ಅರ್ಥ–** ನಿಷೇಧಾತ್ = ನಿಷೇಧವಾಕ್ಯದಿಂದ, ವಿಧಿಬಾಧಃ ಚೇತ್ = ವಿಧಿವಾಕ್ಯಕ್ಕೆ ಬಾಧವು ಬರುವುದಾದರೆ, ಬೌದ್ಧೋಕ್ತ್ಯಾ = ಬೌದ್ಧರ ಶಾಸ್ತ್ರದಿಂದ, ಧರ್ಮಬಾಧನಂ = ಸನಾತನ ಧರ್ಮಕ್ಕೆ ಬಾಧವು, ಸ್ಯಾತ್ = ಬರಲಿ, ತಥಾ = ಅದೇ ರೀತಿಯಾಗಿ, ಬೌದ್ಧಸ್ಯ = ಬೌದ್ಧಮತಾನುಯಾಯಿಯ, ಶೂನ್ಯತ್ವಕಥಯಾ = ಶೂನ್ಯತ್ವ ವಿಚಾರದಿಂದ, ತವ = ನಿನ್ನ, ಬ್ರಹ್ಮ = ಪರಬ್ರಹ್ಮವು, ಬಾಧ್ಯಂ = ಬಾಧ್ಯವು ಭವೇತ್ = ಆಗಲಿ.

**ಅನುವಾದ–** ನಿಷೇಧದಿಂದ ವಿಧಿಯು ಬಾಧಿತವಾಗುವುದಾದರೆ ಬೌದ್ಧವಾಕ್ಯಗಳಿಂದ ಧರ್ಮವು ಬಾಧಿತವಾಗಲಿ. ಹಾಗೆಯೇ ಶೂನ್ಯ ಪ್ರತಿಪಾದಕ ಬೌದ್ಧವಾಕ್ಯದಿಂದ ಬ್ರಹ್ಮನು ಬಾಧ್ಯವಾಗಲಿ ಎಂಬ ಆಪತ್ತಿಯು ಉಂಟಾಗುತ್ತದೆ.

**ಭಾವವಿಲಾಸಿನೀ–** ತೇಮತೇ । ನಿಷೇಧಸ್ಯ ಬಾಧಕತ್ವೇ ದೋಷಾಂತರಂ ಚಾಹ – **ನಿಷೇಧಾದಿತಿ** ॥

**ವಿವರಣೆ–** ಶ್ರುತಿ-ಸ್ಮೃತಿಗಳು ಧರ್ಮವನ್ನು ವಿಧಾನ ಮಾಡುತ್ತವೆ. ಆದ್ದರಿಂದ ಧರ್ಮವನ್ನು ಹೇಳುವ ವಾಕ್ಯಗಳು ವಿಧಿರೂಪವಾಗಿವೆ. ಬೌದ್ಧರಾದರೋ ಧರ್ಮಾಭಾವವನ್ನು ಹೇಳುತ್ತಾರೆ. ಅವರ ವಾಕ್ಯ ನಿಷೇಧವಾಕ್ಯ. ಆದ್ದರಿಂದ ಅಂತಹ ಬೌದ್ಧವಾಕ್ಯಗಳಿಂದ ಧರ್ಮವನ್ನು ವಿಧಾನ ಮಾಡುವ ಶ್ರುತಿ-ಸ್ಮೃತಿಗಳ ವಾಕ್ಯವು ಬಾಧಿತವಾಗಲಿ ಎಂದು ಒಂದು ಆಪಾದನೆ. ವೇದವು ಅಸ್ತಿಬ್ರಹ್ಮ ಎಂದು ಹೇಳಿ ಬ್ರಹ್ಮನ

ಅಸ್ತಿತ್ವವನ್ನು ವಿಧಾನ ಮಾಡುತ್ತವೆ. ಬೌದ್ಧರು ಶೂನ್ಯವೇ ತತ್ತ್ವವೆಂದು ಹೇಳಿ ಬ್ರಹ್ಮನ ಅಸ್ತಿತ್ವವನ್ನು ನಿರಾಕರಿಸುತ್ತಾರೆ. ಇಲ್ಲಿಯೂ ಸಹ ಬೌದ್ಧರ ವಾಕ್ಯವು ನಿಷೇಧವಾಕ್ಯ. ಅಂತಹ ನಿಷೇಧ ವಾಕ್ಯಗಳಿಂದ ಬ್ರಹ್ಮನ ಸತ್ವವನ್ನು ಹೇಳುವ ವೇದವಾಕ್ಯಗಳಿಗೆ ಬಾಧವುಂಟಾಗಲಿ ಎಂದು ಎರಡನೆಯ ಆಪಾದನೆ.

ಪರಯಾ ಭಾರ್ಯಯಾ ಕಾರ್ಯನಿಷೇಧಪರಯಾ ತವ ।
ಪತಿಸ್ತ್ವಂ ಗೃಹಕೃತ್ಯಾನಾಂ ವಿಧಾತಾ ಹಂತ ಬಾಧ್ಯಸೇ ॥ ೧೩೩೬ ॥

**ಅರ್ಥ–** ಗೃಹಕೃತ್ಯಾನಾಂ = ಮನೆಕೆಲಸಗಳಿಗೆ, ವಿಧಾತಾ = ನಿರ್ದೇಶಕನಾದ, ಪತಿಃ = ಗಂಡನಾದ, ತ್ವಮ್ = ನೀನು, ಕಾರ್ಯ = ನೀನು ಹೇಳಿದ ಕೆಲಸಗಳನ್ನು, ನಿಷೇಧ = ಅಲ್ಲಗಳೆಯುವುದರಲ್ಲಿ, ಪರಯಾ = ಆಸಕ್ತಳಾದ, ತವ = ನಿನ್ನ, ಭಾರ್ಯಯಾ = ಹೆಂಡತಿಯಿಂದ, ಬಾಧ್ಯಸೇ ಹಂತ = ಬಾಧಿತನಾಗುವಿಯಷ್ಟೆ.

**ಅನುವಾದ–** ಗೃಹಕೃತ್ಯವನ್ನು ನಿರ್ವಹಿಸುವ ನೀನು ಇಂತಹ ಕೆಲಸವನ್ನು ಮಾಡು ಎಂದು ನಿನ್ನ ಹೆಂಡತಿಗೆ ಹೇಳಿದರೆ ಅದನ್ನು ಮಾಡುವುದಿಲ್ಲ ಎಂದು ಹೇಳುವ ಹೆಂಡತಿಯ ವಾಕ್ಯವು ಬಾಧಕವಾಗಿ ಅದರಿಂದ ನೀನು ಬಾಧ್ಯನಾಗುತ್ತೀಯೆ.

**ಭಾವವಿಲಾಸಿನೀ–** ಪರಂ ಪರಿಹಸನ್‌ಪಕ್ಷದ್ವಯಸ್ಯಾಪಿ ವ್ಯಭಿಚಾರಮಾಹ–**ಪರಯೇತಿ** ॥ ಕಾರ್ಯ-ನಿಷೇಧಪರಯಾ ಗೃಹಕೃತ್ಯಂ ಕರ್ತವ್ಯಮಿತ್ಯುಕ್ತೇ ನ ಶಕ್ಯತ ಇತಿ ಪ್ರತಿವಕ್ತ್ರ್ಯೇತ್ಯರ್ಥಃ ॥ ೧೩೩೬ ॥

**ವಿವರಣೆ–** ಪರರಿಂದ ಪೂರ್ವವು ಬಾಧಿತವಾಗುತ್ತದೆ ಎಂಬ ವಾದವನ್ನು ಪರಿಹಾಸ ಪೂರ್ವಕವಾಗಿ ಇಲ್ಲಿ ನಿರಾಕರಿಸುತ್ತಾರೆ. ಪತ್ನಿಯನ್ನು ಕುರಿತು ಪತಿಯು ಗೃಹಕೃತ್ಯವನ್ನು ನೆರವೇರಿಸುವುದಕ್ಕಾಗಿ ಇದನ್ನು ಮಾಡು, ಇದನ್ನು ಮಾಡು ಎಂದು ಆದೇಶಿಸುತ್ತಾನೆ. ಆಲಸ್ಯಸ್ವಭಾವದ ಪತ್ನಿಯು ಎಲ್ಲವನ್ನೂ ಮಾಡುವುದಿಲ್ಲ, ಮಾಡುವುದಿಲ್ಲ ಎಂದು ಹೇಳುತ್ತಾಳೆ. ಅವಳ ವಾಕ್ಯಗಳು ನಿಷೇಧವಾಕ್ಯಗಳು, ಪತ್ನಿಯ ವಾಕ್ಯಗಳು ವಿಧಿ ವಾಕ್ಯಗಳು. ಆದ್ದರಿಂದ ಪತ್ನಿಯ ವಾಕ್ಯದಿಂದ ಪತಿಯ ವಾಕ್ಯಗಳು ಬಾಧಿತವಾಗುತ್ತವೆ. ಹೀಗಾಗಿ ನೀನೇ ಮನೆಗೆಲಸವನ್ನು ಮಾಡುತ್ತಾ ನಿನ್ನ ಪತ್ನಿಯಿಂದ ನೀನೇ ಬಾಧಿತನಾಗುತ್ತೀಯೆ ಎಂಬ ಪರಿಹಾಸವನ್ನು ಇಲ್ಲಿ ಸೂಚಿಸಿದ್ದಾರೆ.

ಕಿಂಚ ಪೂರ್ವಂ ನಿಷೇಧ್ಯಂ ಚ ತಾದಾತ್ಮ್ಯಮಭವತ್ ತವ ।
ಭೇದಃ ಪರೋ ನಿಷೇಧೋ ಮೇ ಯೋಽನ್ಯೋನ್ಯಾಭಾವರೂಪಕಃ ॥ ೧೩೩೭ ॥

**ಅರ್ಥ–** ಕಿಂಚ = ಅದಲ್ಲದೆ, ತವ = ನಿನ್ನ, ತಾದಾತ್ಮ್ಯಂ = ತಾದಾತ್ಮ್ಯರೂಪವಾದ ಐಕ್ಯವು, ಪೂರ್ವಂ = ಮೊದಲಿನದು, ನಿಷೇಧ್ಯಂ ಚ = ನಿಷೇಧ್ಯವು ಕೂಡ, ಅಭವತ್ = ಆಯಿತು, ಯಃ = ಯಾವ, ಅನ್ಯೋನ್ಯಾಭಾವರೂಪಕಃ= ಅನ್ಯೋನ್ಯಾಭಾವರೂಪವಾದ, ಮೇ = ನನ್ನ,

ಭೇದಃ = ಭೇದವು, ಪರಃ = ಪರವಾದದ್ದು, ನಿಷೇಧಃ ಚ = ಐಕ್ಯಕ್ಕೆ ನಿಷೇಧಕವಾದದ್ದು ಕೂಡ, ಅಭವತ್ = ಆಯಿತು.

**ಅನುವಾದ–** **ಅದೂ ಅಲ್ಲದೆ, ತಾದಾತ್ಮ್ಯರೂಪವಾದ ಐಕ್ಯವನ್ನು ಹೇಳುವ ನಿನ್ನ ವಾಕ್ಯವು ನಿಷೇಧ್ಯವನ್ನು ಸಮರ್ಪಣೆ ಮಾಡುವುದರಿಂದ ಪೂರ್ವವಾಕ್ಯವಾಯಿತು. ಭೇದವು ತಾದಾತ್ಮ್ಯನಿಷೇಧರೂಪವಾದುದರಿಂದ ಭೇದವಾಕ್ಯವು ಪರವಾಕ್ಯವಾಯಿತು.**

**ಭಾವವಿಲಾಸಿನೀ– ಅಪಿ ಚಾಯಂ ನ್ಯಾಯಸ್ತವೈವಾನಿಷ್ಟ ಇತ್ಯಾಹ – ಕಿಂಚೇತಿ ॥ ಭೇದಃ ॥೧೩೩೭॥**

**ವಿವರಣೆ–** ಐಕ್ಯ ಮತ್ತು ಭೇದವಾಕ್ಯಗಳಲ್ಲಿ ಅದ್ವೈತಿಗಳು ಭೇದವಾಕ್ಯವನ್ನು ಪೂರ್ವವಾಕ್ಯವೆಂದು ಐಕ್ಯವಾಕ್ಯವನ್ನು ಪರವಾಕ್ಯವೆಂದು ಹೇಳುತ್ತಾರೆ. ಅದನ್ನು ಇಲ್ಲಿ ನಿರಾಕರಿಸಿ ಅದನ್ನು ವಿಪರೀತವಾಗಿ ಹೇಳಬೇಕೆಂದು ಗ್ರಂಥಕಾರರು ಸೂಚಿಸುತ್ತಾರೆ. ಭೇದವು ಅನ್ಯೋನ್ಯಾಭಾವ ಸ್ವರೂಪವಾದುದು. ಅನ್ಯೋನ್ಯಾಭಾವವೆಂದರೆ ತಾದಾತ್ಮ್ಯ ನಿಷೇಧ ರೂಪವಾದುದು. ತಾದಾತ್ಮ್ಯ ನಿಷೇಧವನ್ನು ಮಾಡಬೇಕಾದರೆ ತಾದಾತ್ಮ್ಯದ ಪ್ರಸಕ್ತಿ ಬೇಕು. ಐಕ್ಯವಾಕ್ಯಗಳು ತಾದಾತ್ಮ್ಯದ ಪ್ರಸಕ್ತಿಯನ್ನು ತಂದುಕೊಡುತ್ತವೆ. ಏಕೆಂದರೆ ಐಕ್ಯವೆಂದರೂ ತಾದಾತ್ಮ್ಯವೆಂದರೂ ಒಂದೇ. ಆದ್ದರಿಂದ ಪ್ರತಿಯೋಗಿಯ ಪ್ರಸಕ್ತಿಯನ್ನು ತಂದುಕೊಡುವ ವಾಕ್ಯವು ಪೂರ್ವವಾಕ್ಯ. ಅದನ್ನು ನಿಷೇಧ ಮಾಡುವ ವಾಕ್ಯವು ಉತ್ತರವಾಕ್ಯ. ಹೀಗಾಗಿ ಭೇದವಾಕ್ಯವೇ ಐಕ್ಯವಾಕ್ಯಕ್ಕೆ ಬಾಧಕವಾಗುತ್ತದೆಯೇ ಹೊರತು ವಿಪರೀತವಾಗಿ ಆಗುವುದಿಲ್ಲ ಎಂದು ತಾತ್ಪರ್ಯ.

**ಅತಸ್ತ್ವನ್ನ್ಯಾಯ ಏವಾಯಂ ಚಿತ್ರಂ ಮತ್ಕಾರ್ಯಸಾಧಕಃ ।**
**ಯದ್ಬಲಾದೈಕ್ಯವಾಕ್ಯಾನಾಂ ಬಾಧಿಕಾ ಭೇದವಾಗಭೂತ್ ॥ ೧೩೩೮ ॥**

**ಅರ್ಥ–** ಅತಃ = ಆದ್ದರಿಂದ, ಯದ್ಬಲಾತ್ = ಯಾವ ನ್ಯಾಯದ ಸಾಮರ್ಥ್ಯದಿಂದ, ಭೇದವಾಕ್= ಭೇದವಾಕ್ಯವು, ಐಕ್ಯವಾಕ್ಯಾನಾಂ = ಐಕ್ಯವಾಕ್ಯಗಳಿಗೆ, ಬಾಧಿಕಾ = ಬಾಧಕವು, ಅಭೂತ್ = ಆಯಿತೋ, ಸಃ= ಅಂತಹ, ಅಯಂ = ಈ, ತ್ವನ್ನ್ಯಾಯಃ ಏವ = ನಿನ್ನ ನ್ಯಾಯವೇ, ಮತ್ಕಾರ್ಯಸಾಧಕಃ= ನನ್ನ ಕಾರ್ಯದ ಸಾಧಕವು, ಅಭೂತ್ = ಆಯಿತು, ಚಿತ್ರಂ = ಆಶ್ಚರ್ಯವು.

**ಅನುವಾದ–** **ಆದ್ದರಿಂದ ನಿನ್ನ ನ್ಯಾಯವೇ ನನ್ನ ಪ್ರಮೇಯವನ್ನು ಸಾಧಿಸುತ್ತದೆ ಎಂಬುದು ಆಶ್ಚರ್ಯಕರವಾದ ಸಂಗತಿ. ಏಕೆಂದರೆ ನಿನ್ನ ನ್ಯಾಯದ ಬಲದಿಂದಲೇ ಭೇದವಾಕ್ಯವು ಐಕ್ಯವಾಕ್ಯಗಳಿಗೆ ಬಾಧಕವಾಗಿ ಸಂಪನ್ನವಾಯಿತು.**

**ಅತೋ ನಿರವಕಾಶಂ ಯತ್ ತದೇವ ಬಲವತ್ತರಮ್ ।**
**ದುರ್ಬಲಂ ಸಾವಕಾಶಂ ಸ್ಯಾದಿತಿ ಸರ್ವಂ ಮನೋರಮಮ್ ॥ ೧೩೩೯ ॥**

**ಅರ್ಥ–** ಅತಃ= ಆದ್ದರಿಂದ, ಯತ್= ಯಾವ ವಾಕ್ಯವು, ನಿರವಕಾಶಂ= ನಿರವಕಾಶವಾಗಿದೆಯೋ, ತತ್ ಏವ= ಅದೇ, ಬಲವತ್ತರಂ= ಪ್ರಬಲವಾಗಿದೆ, ಯತ್= ಯಾವ ಪ್ರಮಾಣವು, ಸಾವಕಾಶಂ = ಸಾವಕಾಶವಾಗಿದೆಯೋ, ತತ= ಅದು, ದುರ್ಬಲಂ = ದುರ್ಬಲವು, ಇತಿ = ಈ ರೀತಿಯಾಗಿ ಹೇಳಿದರೆ, ಸರ್ವಂ= ಎಲ್ಲ ವ್ಯವಸ್ಥೆಯೂ ಕೂಡ, ಮನೋರಮಂ= ಸಮಂಜಸವಾಗುತ್ತದೆ.

**ಅನುವಾದ– ಆದ್ದರಿಂದ ಯಾವುದು ನಿರವಕಾಶವೋ ಅದು ಪ್ರಬಲವಾದುದು, ಯಾವುದು ಸಾವಕಾಶವೋ ಅದು ದುರ್ಬಲವಾದುದು ಎಂದು ಹೇಳುವುದರಿಂದಲೇ ಸರ್ವವೂ ಸಮಂಜಸವಾಗುತ್ತದೆ.**

**ಭಾವವಿಲಾಸಿನೀ– ಯದ್ಬಲಾತ್ ಯಸ್ಯ ನ್ಯಾಯಸ್ಯ ಬಲಾತ್ ॥ ೧೩೩೮-೧೩೩೯ ॥**

**ವಿವರಣೆ–** ಪೂರ್ವಾಪರಭಾವದಿಂದಾಗಲೀ, ವಿಧಿನಿಷೇಧರೂಪತ್ವದಿಂದಲಾಗಲೀ ಬಾಧ್ಯ ಬಾಧಕಭಾವವನ್ನು ನಿರ್ಣಯ ಮಾಡಲಾಗುವುದಿಲ್ಲ. ಆದ್ದರಿಂದ ಬಲಾಬಲಗಳನ್ನು ನಿರವಕಾಶತ್ವ ಮತ್ತು ಸಾವಕಾಶತ್ವದಿಂದ ನಿರ್ಧರಿಸಬೇಕು. ಪ್ರತೀತಾರ್ಥವನ್ನು ಬಿಟ್ಟು ಬೇರೆ ಯಾವ ಅರ್ಥವನ್ನೂ ಮಾಡಲು ಸಾಧ್ಯವಿಲ್ಲದಿದ್ದರೆ ಅದನ್ನು ಪ್ರತೀತಾರ್ಥವನ್ನು ಬಿಟ್ಟು ಬೇರೆ ಕಡೆ ನಿರವಕಾಶ ಎಂದು ಹೇಳುತ್ತೇವೆ. ಪ್ರತೀತಾರ್ಥವೇ ಅಲ್ಲದೇ ವಾಕ್ಯವು ಇನ್ನೊಂದು ಅರ್ಥವನ್ನು ಸ್ವತಃ ಹೇಳುತ್ತಿದ್ದರೆ ಆ ವಾಕ್ಯಕ್ಕೆ ಪ್ರತೀತಾರ್ಥವನ್ನು ಬಿಟ್ಟು ಬೇರೆ ಅರ್ಥಗಳಲ್ಲಿಯೂ ಅವಕಾಶವಿರುವುದರಿಂದ ಸಾವಕಾಶ ಎಂದು ಹೇಳುತ್ತೇವೆ. ನಿರವಕಾಶವಾಕ್ಯವು ಸಾವಕಾಶ ವಾಕ್ಯವನ್ನು ಬಾಧಿಸುತ್ತದೆ ಎಂದೇ ಹೇಳಬೇಕು. ಉಳಿದೆಲ್ಲಾ ಚಿಂತನೆಗಳು ಅಪ್ರಯೋಜಕ ಎಂದು ಇಲ್ಲಿ ನಿರೂಪಿಸುತ್ತಾರೆ.

**ಯದ್ಯನ್ಯತಃ ಸಿದ್ಧಭೇದಸ್ಯಾನುವಾದೇನ ಮೇ ಶ್ರುತಿಃ ।**
**ನ ಭೇದಸಾಧಿಕಾ ತರ್ಹಿ ಸ್ವಪ್ರಕಾಶತ್ವಶಕ್ತಿತಃ ॥ ೧೩೪೦ ॥**

**ಸಿದ್ಧಸ್ಯ ಬ್ರಹ್ಮಸತ್ತ್ವಸ್ಯಾಪ್ಯನುವಾದಪರಾ ಶ್ರುತಿಃ ।**
**ಅಸ್ತಿ ಬ್ರಹ್ಮೇತ್ಯಾದಿ ರೂಪಾ ನ ತತ್ತತ್ತ್ವಂ ಪ್ರಸಾಧಯೇತ್ ॥ ೧೩೪೧ ॥**

**ಅರ್ಥ–** ಯದಿ = ಒಂದು ಪಕ್ಷದಲ್ಲಿ, ಅನ್ಯತಃ = ಪ್ರತ್ಯಕ್ಷಾದಿಗಳಿಂದ, ಸಿದ್ಧ = ಸಿದ್ಧವಾದ, ಭೇದಸ್ಯ = ಭೇದದ, ಅನುವಾದೇನ = ಅನುವಾದ ಮಾಡುತ್ತಿರುವ ಕಾರಣದಿಂದ, ಮೇ = ನನ್ನ ಶ್ರುತಿಃ = ಭೇದವನ್ನು ಪ್ರತಿಪಾದನೆ ಮಾಡುವ ಶ್ರುತಿಯು, ಭೇದಸಾಧಿಕಾ = ಭೇದಕ್ಕೆ ಸಾಧಕವಾದದ್ದು, ನ ಸ್ಯಾತ್ = ಅಲ್ಲವೆಂದಾದರೆ, ತರ್ಹಿ = ಆ ಪಕ್ಷದಲ್ಲಿ, ಸ್ವಪ್ರಕಾಶತ್ವಶಕ್ತಿತಃ = ಸ್ವಪ್ರಕಾಶತ್ವ ಸಾಮರ್ಥ್ಯದಿಂದ, ಸಿದ್ಧಸ್ಯ = ಸಿದ್ಧವಾದ,

ಬ್ರಹ್ಮಸತ್ತ್ವಸ್ಯ= ಬ್ರಹ್ಮನ ಅಸ್ತಿತ್ವದ, ಅನುವಾದಪರಾ = ಅನುವಾದ ವನ್ನು ಮಾಡುತ್ತಿರುವ, ಅಸ್ತಿ ಬ್ರಹ್ಮೇತ್ಯಾದಿ ರೂಪಾ = ಅಸ್ತಿ ಬ್ರಹ್ಮ ಇದೇ ಮೊದಲಾದ, ಶ್ರುತಿಃ ಅಪಿ = ವೇದವಾಕ್ಯವೂ ಕೂಡ, ತತ್ಸತ್ತ್ವಂ= ಪರಬ್ರಹ್ಮನ ಅಸ್ತಿತ್ವವನ್ನು, ನ ಪ್ರಸಾಧಯೇತ್ = ಸಾಧನೆ ಮಾಡದೆ ಹೋದೀತು.

**ಅನುವಾದ– ಬೇರೆ ಪ್ರಮಾಣದಿಂದ ಸಿದ್ಧವಾದ ಭೇದವನ್ನು ಅನುವಾದ ಮಾಡುವುದರಿಂದ ನನ್ನ ಶ್ರುತಿಯು ಭೇದ ಸಾಧಕವಲ್ಲ ಎಂದು ಹೇಳುವುದಾದರೆ ಸ್ವಪ್ರಕಾಶತ್ವಸಾಮರ್ಥ್ಯದಿಂದ ತಾನಾಗಿಯೇ ಸಿದ್ಧವಾದ ಬ್ರಹ್ಮಸತ್ತ್ವವನ್ನು ಅನುವಾದ ಮಾಡುವ ಅಸ್ತಿಬ್ರಹ್ಮ ಮೊದಲಾದ ಶ್ರುತಿಯೂ ಸಹ ಬ್ರಹ್ಮಸತ್ತ್ವವನ್ನು ಸಾಧನೆ ಮಾಡಲಾರದು.**

**ಭಾವವಿಲಾಸಿನೀ– ಮಾನಾಂತರಸಿದ್ಧಭೇದಸ್ಯಾನುವಾದಕತಯಾ ಭೇದಶ್ರುತೇರ್ನ ಭೇದೇ ತಾತ್ಪರ್ಯಮಿತಿ ಶಂಕಾಂ ಪ್ರತಿಬಂದ್ಯಾ ಪರಿಹರತಿ - ಯದೀತಿ ॥ ಅನ್ಯತಃ ಮಾನಾಂತರಾತ್ । ತತ್ಸತ್ತ್ವಂ ಬ್ರಹ್ಮಸತ್ತ್ವಮ್ ॥ ೧೩೪೦-೧೩೪೧ ॥**

**ವಿವರಣೆ–** ಅನುವಾದಕತ್ವ ಇದ್ದರೆ ಶ್ರುತಿಗೆ ಆ ಅರ್ಥದಲ್ಲಿ ತಾತ್ಪರ್ಯವಿಲ್ಲ ಎಂದು ಹೇಳುವುದಾದರೆ ಬ್ರಹ್ಮಸತ್ವವು ಮಾನಾಂತರ ಸಿದ್ಧವಾಗಿರುವುದರಿಂದ ಬ್ರಹ್ಮಸತ್ವವನ್ನು ಹೇಳುವ ಶ್ರುತಿಯು ಬ್ರಹ್ಮಸತ್ವಕ್ಕೆ ಸಾಧಕವಾಗಲಾರದು ಎಂಬ ಆಪಾದನೆಯನ್ನು ಇಲ್ಲಿ ಮಾಡುತ್ತಾರೆ. ಅಸಿದ್ಧವಾದ ಐಕ್ಯವನ್ನು ಹೇಳುವ ನಿನ್ನ ವಾಕ್ಯದಂತೆ, ಅಸಿದ್ಧವಾದ ಶೂನ್ಯವನ್ನು ಬೋಧಿಸುವ ಬೌದ್ಧವಾಕ್ಯವು ಪ್ರಬಲವೆಂದು ಅಂಗೀಕರಿಸಬೇಕಾಗುತ್ತದೆ. ಆದ್ದರಿಂದಲೂ ಸಹ ಈ ಬ್ರಹ್ಮಧರ್ಮಿಕ ಭೇದವು ಬ್ರಹ್ಮನಿಗೆ ಸಮಾನವಾದ ಯೋಗಕ್ಷೇಮವುಳ್ಳದ್ದಾಗಿದೆ.

ಸಿದ್ಧವಾದುದನ್ನು ಹೇಳಿದರೆ ಅನುವಾದಕತ್ವ ಬರುವುದರಿಂದ ಅರ್ಥಸಿದ್ಧಿಯಾಗುವುದಿಲ್ಲ ಎಂದು ಹೇಳಿದರೆ ಅಸಿದ್ಧವಾದುದನ್ನು ಹೇಳಿದರೆ ಅರ್ಥಸಿದ್ಧಿಯಾಗುತ್ತದೆ ಎಂದಂತಾಯಿತು. ಐಕ್ಯವು ಪ್ರಮಾಣಾಂತರದಿಂದ ಪ್ರಾಪ್ತವಲ್ಲವಾದುದರಿಂದ ಐಕ್ಯವನ್ನು ಹೇಳುವ ವಾಕ್ಯವು ಸ್ವಾರ್ಥದಲ್ಲಿ ತಾತ್ಪರ್ಯವುಳ್ಳದ್ದು. ಆದ್ದರಿಂದ ಐಕ್ಯವು ಸಿದ್ಧವಾಗುತ್ತದೆ ಎಂದು ಹೇಳುತ್ತಾರೆ. ಅದಕ್ಕೆ ಇಲ್ಲಿ ಗ್ರಂಥಕಾರರು ಪ್ರತಿಬಂದಿಯನ್ನು ನೀಡುತ್ತಾರೆ. ಶೂನ್ಯವೂ ಅಸಿದ್ಧವಾದುದೇ. ಶೂನ್ಯವನ್ನು ಹೇಳುವ ಬೌದ್ಧರ ವಾಕ್ಯಗಳಿಗೆ ಅಸಿದ್ಧ ಬೋಧಕತ್ವ ಇರುವ ಪ್ರಯುಕ್ತ ಅರ್ಥಸಾಧಕತ್ವವು ಬರುತ್ತದೆ. ಆದ್ದರಿಂದ ಶೂನ್ಯವು ತತ್ವವೆಂದು ಸಿದ್ಧವಾಗಲಿ ಎಂಬ ಅನಿಷ್ಟ ಆಪಾದನೆಯನ್ನು ಇಲ್ಲಿ ಮಾಡುತ್ತಿದ್ದಾರೆ. ಹೀಗಾಗಿ ಬ್ರಹ್ಮನಿಗೆ ಎಂತಹ ಸತ್ಯತ್ವವೋ ಬ್ರಹ್ಮಧರ್ಮಿಕವಾದ ಭೇದಕ್ಕೂ ಕೂಡ ಅಂತಹದೇ ಸತ್ಯತ್ವವನ್ನು ಅಂಗೀಕರಿಸಬೇಕೆಂದು ತಾತ್ಪರ್ಯ.

**ಅಸಿದ್ಧಬೋಧಕಂ ಶೂನ್ಯವಾಕ್ಯಂ ಸ್ಯಾದೈಕ್ಯವಾಕ್ಯವತ್ ।**
**ಅತೋऽಪಿ ಬ್ರಹ್ಮಭೇದೋऽಯಂ ಬ್ರಹ್ಮಸಂಮಿತ ಏವ ಹಿ ॥ ೧೩೪೨ ॥**

**ಅರ್ಥ–** ಅಸಿದ್ಧಬೋಧಕಂ = ಅಸಿದ್ಧವಾದ ಶೂನ್ಯವನ್ನು ಬೋಧಿಸುತ್ತಿರುವ, ಶೂನ್ಯವಾಕ್ಯಂ = ಬೌದ್ಧರ ಶೂನ್ಯವಾಕ್ಯವು, ಐಕ್ಯವಾಕ್ಯವತ್ = ಐಕ್ಯವನ್ನು ಪ್ರತಿಪಾದಿಸುವ ವಾಕ್ಯದಂತೆ, ಅರ್ಥಸಾಧಕಂ = ತನ್ನ ಅರ್ಥಕ್ಕೆ ಸಾಧಕವಾದದ್ದು, ಸ್ಯಾತ್ = ಆಗಬೇಕಾದೀತು, ಅತಃ ಅಪಿ = ಆ ಕಾರಣದಿಂದಲೂ ಕೂಡ, ಅಯಂ = ಈ, ಬ್ರಹ್ಮಭೇದಃ = ಬ್ರಹ್ಮಭೇದವು, ಬ್ರಹ್ಮಸಂಮಿತಃ ಏವ = ಬ್ರಹ್ಮನಿಗೆ ಸದೃಶವಾದದ್ದೇ (ಬ್ರಹ್ಮನಂತೆ ಪಾರಮಾರ್ಥಿಕ ಸತ್ಯವಾದದ್ದೇ) ಅಸ್ತಿ ಹಿ = ಆಗಿದೆಯಷ್ಟೆ.

**ಅನುವಾದ– ಅಸಿದ್ಧವಾದ ಶೂನ್ಯವನ್ನು ಬೋಧಿಸುವ ಬೌದ್ಧರ ವಾಕ್ಯವೂ ಐಕ್ಯವನ್ನು ಪ್ರತಿಪಾದಿಸುವ (ನಿನ್ನ) ವಾಕ್ಯದಂತೆ ತನ್ನ ಅರ್ಥವನ್ನು ಸಾಧಿಸುತ್ತದೆ ಎಂದು ಅಂಗೀಕರಿಸಬೇಕಾದೀತು. ಆದ್ದರಿಂದಲೂ ಸಹ ಈ ಬ್ರಹ್ಮಭೇದವು ಬ್ರಹ್ಮನಿಗೆ ಸದೃಶವಾದದ್ದೇ ಆಗಿದೆ (ಬ್ರಹ್ಮನಂತೆ ಪಾರಮಾರ್ಥಿಕವೇ ಆಗಿದೆ).**

**ಭಾವವಿಲಾಸಿನೀ– ಅತೋऽಪಿ ಉಕ್ತನ್ಯಾಯಾದಪಿ ॥ ೧೩೪೨ ॥**

**ಯದಿ ಪ್ರತ್ಯಕ್ಷಸಿದ್ಧಸ್ಯ ಸಾ ಭೇದಸ್ಯಾನುವಾದಿನೀ ।**
**ತರ್ಹೀಶಧರ್ಮಿಕೋ ಭೇದೋ ಭೀಮಸೇನಗದಾऽಭವತ್ ।**
**ಯತೋऽನ್ಯಪದಯುಗ್ಮೇನ ಭೇದೌ ದ್ವಾವಪ್ಯುದೀರಿತೌ ॥ ೧೩೪೩ ॥**

**ಅರ್ಥ–** ಸಾ= ಭೇದಶ್ರುತಿಯು, ಯದಿ= ಒಂದು ಪಕ್ಷ, ಪ್ರತ್ಯಕ್ಷಸಿದ್ಧಸ್ಯ= ಪ್ರತ್ಯಕ್ಷಸಿದ್ಧವಾದ, ಭೇದಸ್ಯ= ಭೇದದ, ಅನುವಾದಿನೀ= ಅನುವಾದಿನಿ ಎಂದಾದರೆ, ತರ್ಹಿ= ಆಗ, ಈಶಧರ್ಮಿಕೋ ಭೇದಃ= ಈಶ್ವರಧರ್ಮಿಕವಾದ ಭೇದವು, ಭೀಮಸೇನಗದಾऽಭವತ್= ಭೀಮಸೇನನ ಗದೆಯಾಯಿತು, ಯತಃ= ಏಕೆಂದರೆ, ಅನ್ಯಪದಯುಗ್ಮೇನ= ಎರಡು ಅನ್ಯಪದಗಳಿಂದ, ದ್ವಾವಪಿಭೇದೌ= ಎರಡು ಭೇದಗಳು, ಉದೀರಿತೌ= ಹೇಳಲ್ಪಟ್ಟಿವೆ.

**ಅನುವಾದ– ಭೇದ ಶ್ರುತಿಯು ಪ್ರತ್ಯಕ್ಷ ಸಿದ್ಧವಾದ ಭೇದವನ್ನು ಅನುವಾದಮಾಡುತ್ತದೆ ಎಂದು ಹೇಳಿದರೆ, ಶ್ರುತಿಯು ಹೇಳಿದ ಈಶಧರ್ಮಿಕ ಭೇದವು ನಿನಗೆ ಭೀಮಸೇನ ಗದೆಯಂತೆ ಆಯಿತು. ಶ್ರುತಿಯು ಎರಡು ಬಾರಿ ಅನ್ಯಪದವನ್ನು ಪ್ರಯೋಗ ಮಾಡಿ ಜೀವಧರ್ಮಿಕ ಭೇದವನ್ನು ಮತ್ತು ಈಶ್ವರಧರ್ಮಿಕ ಭೇದವನ್ನು ಹೇಳುತ್ತದೆಯಷ್ಟೇ.**

**ಭಾವವಿಲಾಸಿನೀ– ದೋಷಾಂತರಂ ಚಾಹ – ಯದೀತಿ ॥ ಸಾ ಭೇದಶ್ರುತಿಃ । ಭೀಮಸೇನಗದಾ ಭೀಮಸೇನಗದಾವದಭೇದ್ಯ ಇತ್ಯರ್ಥಃ । ಈಶ್ವರಧರ್ಮಿಕಭೇದಸ್ಯ ಪ್ರತ್ಯಕ್ಷಾಸಿದ್ಧತ್ವೇನ ಅನು-**

**ವಾದಕತ್ವಶಂಕಯಾ ಅಪಿ ತತ್ರಾಭಾವಾದಿತಿ ಭಾವಃ । ನನ್ವೀಶ್ವರಧರ್ಮಿಕೋ ಭೇದಃ ಶ್ರುತ್ಯಾ ನೋಕ್ತ ಇತ್ಯತ ಆಹ – ಯತ ಇತಿ ॥ ದ್ವೌ ಈಶ್ವರಧರ್ಮಿಕಜೀವಧರ್ಮಿಕೌ ॥ ೧೩೪೩ ॥**

**ವಿವರಣೆ–** ಭೇದ ಶ್ರುತಿಯು ಪ್ರತ್ಯಕ್ಷ ಸಿದ್ಧವಾದ ಭೇದವನ್ನು ಅನುವಾದ ಮಾಡುತ್ತದೆ ಎಂದು ಹೇಳಿದರೆ ಜೀವಧರ್ಮಿಕಭೇದವು ನಾಹಂ ಸರ್ವಜ್ಞಃ, ನಾಹಂ ನಿರ್ದುಃಖಃ ಎಂಬ ಪ್ರತ್ಯಕ್ಷದಿಂದ ಸಿದ್ಧವಾಗಿರುವುದರಿಂದ ಅದನ್ನು ಅನುವಾದ ಮಾಡುತ್ತದೆ ಎಂದು ಹೇಳಬಹುದಾದರೂ ಈಶ್ವರಧರ್ಮಿಕಭೇದವು ಜೀವನಿಗೆ ಪ್ರತ್ಯಕ್ಷಸಿದ್ಧವೇ ಆಗದಿರುವುದರಿಂದ ಈಶ್ವರಧರ್ಮಿಕಭೇದವನ್ನು ಹೇಳುವ ವಾಕ್ಯವು ಭೀಮಸೇನನ ಗದೆಯಂತೆ ಅಭೇದ್ಯವಾಗುತ್ತದೆ. ಶ್ರುತಿಯು 'ತಯೋ ರನ್ಯಃ, ಅನಶ್ನನ್ನನ್ಯಃ' ಎಂದು ಎರಡು ಬಾರಿ ಅನ್ಯಪದ ಪ್ರಯೋಗವನ್ನು ಮಾಡಿ ಈಶಧರ್ಮಿಕ ಭೇದವನ್ನು ಮತ್ತು ಜೀವಧರ್ಮಿಕ ಭೇದವನ್ನು ಹೇಳುತ್ತದೆಯಷ್ಟೇ. ಶ್ರುತಿಯು ಈಶ್ವರ ಧರ್ಮಿಕ ಭೇದವನ್ನು ಹೇಳುವುದೇ ಇಲ್ಲ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಶ್ರುತಿಯಲ್ಲಿ ಎರಡು ಬಾರಿಯೂ ಅನ್ಯ ಪದಗಳಿಗೆ ಬೇರೆ ಬೇರೆ ಅರ್ಥವನ್ನು ಹೇಳಬೇಕು. ಒಂದು ಅನ್ಯಶಬ್ದಕ್ಕೆ ಜೀವ ಧರ್ಮಿಕ ಭೇದವುಳ್ಳದ್ದು ಎಂದು ಇನ್ನೊಂದು ಅನ್ಯ ಶಬ್ದಕ್ಕೆ ಈಶ್ವರ ಧರ್ಮಿಕ ಭೇದವುಳ್ಳದ್ದು ಎಂದು ಅರ್ಥವನ್ನು ಮಾಡಬೇಕು. ಹೀಗೆ ಮಾಡಿದಾಗ ಈಶ್ವರ ಧರ್ಮಿಕ ಭೇದವು ಯಾವ ರೀತಿಯಿಂದಲೂ ಜೀವನಿಗೆ ಪ್ರತ್ಯಕ್ಷ ಸಿದ್ಧವಾಗುವುದಿಲ್ಲವಾದ್ದರಿಂದ ಅದನ್ನು ಹೇಳುವ ವಾಕ್ಯವು ಅನುವಾದವೆಂದು ಹೇಳಲು ಬರುವುದಿಲ್ಲ. ಅಂತಹ ವಾಕ್ಯವು ಭೇದಸಾಧಕವೇ ಆಗುತ್ತದೆ.

**ಅಥ ಪ್ರತ್ಯಕ್ಷಸಿದ್ಧಸ್ಯ ಜೀವಭೇದಸ್ಯ ಚ ಶ್ರುತಿಃ ।**
**ಕುತೋಽನುವಾದಂ ಕುರುತೇ ತೂಷ್ಣೀಂ ವಾ ದೂಷಣಾಯ ವಾ ॥ ೧೩೪೪ ॥**

**ಅರ್ಥ–** ಅಥ= ಇನ್ನು, ಶ್ರುತಿಃ= ಶ್ರುತಿಯು, ಪ್ರತ್ಯಕ್ಷಸಿದ್ಧಸ್ಯ= ಪ್ರತ್ಯಕ್ಷಸಿದ್ಧವಾದ, ಜೀವಭೇದಸ್ಯ= ಜೀವಭೇದವನ್ನು, ಕುತಃ= ಏಕೆ, ಅನುವಾದಂ ಕುರುತೇ= ಅನುವಾದ ಮಾಡುತ್ತದೆ? ತೂಷ್ಣೀಂ ವಾ= ಸುಮ್ಮನೆಯೋ, ದೂಷಣಾಯ ವಾ= ಅಥವಾ ದೋಷವನ್ನು ಹೇಳುವುದಕ್ಕೋ?

**ಅನುವಾದ–** ಇನ್ನು ಪ್ರತ್ಯಕ್ಷ ಸಿದ್ಧವಾದ ಜೀವಭೇದವನ್ನೇ ಶ್ರುತಿಯು ಅನುವಾದ ಮಾಡುತ್ತದೆ ಎಂದು ಒಪ್ಪಿಕೊಂಡರೂ ಸಹ ಶ್ರುತಿಯು ಏಕೆ ಅನುವಾದವನ್ನು ಮಾಡುತ್ತದೆ? ಸುಮ್ಮನೆ ಅನುವಾದ ಮಾಡುತ್ತದೆಯೋ, ಅಥವಾ ದೂಷಣೆಯನ್ನು ಮಾಡುವ ಸಲುವಾಗಿ ಅನುವಾದ ಮಾಡುತ್ತದೆಯೋ ಎಂದು ನಮ್ಮ ಪ್ರಶ್ನೆ.

**ಭಾವವಿಲಾಸಿನೀ– ಕುತ ಇತ್ಯುಕ್ತಪ್ರಶ್ನಂ ವಿಶದಯತಿ ॥ ತೂಷ್ಣೀಂ ವೇತಿ ॥ ಪಕ್ಷದ್ವಯಂ ಚ ದೂಷಯತಿ – ಆದ್ಯ ಇತ್ಯಾದಿನಾ ॥ ನಚೇನ್ಮಾನಾಂತರಸಂವಾದೋ ದಾರ್ಢ್ಯಾಯ ನಚೇತ್ । ಶಾಸನಂ ಶಿಲಾಶಾಸನಮ್ ॥ ೧೩೪೪-೧೩೪೫ ॥**

**ವಿವರಣೆ–** ಅನುವಾದ ಎರಡು ರೀತಿಯಲ್ಲಿಯೂ ಇರಬಹುದು. ವಿಷಯವನ್ನು ತಿಳಿಸುವುದಕ್ಕಾಗಿಯೂ ಅನುವಾದವನ್ನು ಮಾಡಬಹುದು ಅಥವಾ ದೂಷಣೆಯನ್ನು ಮಾಡುವುದಕ್ಕೂ ಅನುವಾದವನ್ನು ಮಾಡಬಹುದು. ಇಲ್ಲಿ ಯಾವ ರೀತಿಯಾದ ಅನುವಾದ ಎಂದು ಪ್ರಶ್ನೆ.

ಆದ್ಯೇ ದ್ವಿರ್ಬದ್ಧಭೇದೋಽಸೌ ಸುಬದ್ಧೋಭೂನ್ನ ಸಂಶಯಃ ।
ನ ಚೇತ್ ಸ್ವೋಕ್ತಾರ್ಥನಿರ್ಣೀತ್ಯೈ ಶಾಸನಾನುಸೃತಿರ್ವೃಥಾ ॥ ೧೩೪೫ ॥

**ಅರ್ಥ–** ಆದ್ಯೇ= ಸುಮ್ಮನೆ ಎಂಬ ಪಕ್ಷದಲ್ಲಿ, ಅಸೌ ದ್ವಿರ್ಬದ್ಧಭೇದಃ= ಈ ಎರಡು ಸಲ ಹೇಳಲ್ಪಟ್ಟ ಭೇದವು, ಸುಬದ್ಧೋಭೂತ್= ಬಹಳ ದೃಢವಾಯಿತು, ನ ಸಂಶಯಃ= ಇದರಲ್ಲಿ ಸಂಶಯವಿಲ್ಲ, ನ ಚೇತ್= ಇಲ್ಲದಿದ್ದರೆ, ಸ್ವೋಕ್ತಾರ್ಥನಿರ್ಣೀತ್ಯೈ= ತಾನು ಹೇಳಿದ ಅರ್ಥವನ್ನು ನಿರ್ಣಯಿಸಲು, ಶಾಸನಾನುಸೃತಿಃ= ಶಾಸನವನ್ನು ಅನುಸರಿಸುವುದು, ವೃಥಾ= ವ್ಯರ್ಥವಾಗುತ್ತದೆ.

**ಅನುವಾದ–** ಸುಮ್ಮನೆ ಅನುವಾದ ಮಾಡುತ್ತದೆ ಎಂದು ಹೇಳಿದರೆ ಎರಡು ಪ್ರಮಾಣಗಳಿಂದ ಸಿದ್ದವಾದ ಭೇದವು ದೃಢವಾಯಿತು ಎಂಬ ವಿಷಯದಲ್ಲಿ ಸಂಶಯವಿಲ್ಲ. ಹಾಗಿಲ್ಲದಿದ್ದರೆ ತಾವು ಹೇಳಿದ ಅರ್ಥವನ್ನು ಸಮರ್ಥಿಸಲು ಜನರು ಶಿಲಾಶಾಸನವನ್ನು ಅನುಸರಿಸುವುದು ವ್ಯರ್ಥವಾಗುತ್ತದೆ?

**ವಿವರಣೆ–** ದೂಷಣೆಯನ್ನು ಮಾಡದೆ ಸುಮ್ಮನೆ ಅನುವಾದವನ್ನು ಮಾಡಿದರೆ ಶ್ರುತಿಗೆ ಅದರಲ್ಲಿ ತಾತ್ಪರ್ಯವಿದೆ ಎಂದಾಯಿತು. ಆದ್ದರಿಂದ ಅರ್ಥವು ಸಿದ್ಧವಾಗುತ್ತದೆ. ಮೊದಲು ಪ್ರತ್ಯಕ್ಷದಿಂದ ಸಿದ್ಧವಾಗಿ, ಅನಂತರ ಶ್ರುತಿಯಿಂದಲೂ ಸಿದ್ಧವಾಗುವ ಆ ಅರ್ಥವು ಸದೃಢವಾಗುತ್ತದೆ. ಎರಡು ಗಂಟು ಹಾಕಿದ ವಸ್ತುವು ಸುಭದ್ರವಾಗಿರುವಂತೆ ಭೇದವು ಸುಭದ್ರವಾಗಿರುತ್ತದೆ. ಹಾಗಿಲ್ಲದಿದ್ದರೆ ತಾವು ಹೇಳಿದ ಅರ್ಥವನ್ನು ಸಮರ್ಥಿಸಲು ಜನರು ಶಿಲಾಶಾಸನವನ್ನು ಅನುಸರಿಸುವುದು ವ್ಯರ್ಥವಾಗುತ್ತದೆ. ಏಕೆಂದರೆ ಇವರು ಹೇಳುವ ಅರ್ಥವನ್ನೇ ಶಿಲಾಶಾಸನವು ಅನುವಾದ ಮಾಡುವುದರಿಂದ ನಿನ್ನ ರೀತಿಯಲ್ಲಿ ಅದು ದೌರ್ಬಲ್ಯಕ್ಕೆ ಕಾರಣವಾಗಬೇಕು. ಆದರೆ ಪ್ರಪಂಚದ ವ್ಯವಹಾರ ಆ ರೀತಿಯಿಲ್ಲ.

ಮಾನಸ್ಯ ಮಾನಸಂವಾದೇ ಪ್ರಾಮಾಣ್ಯಾವಧೃತಿಃ ಕಿಲ ।
ಚಿತ್ರಸತ್ವೌಷಧೇನಾಭೂತ್ ಕಾಚಚ್ಛೇದೇಽಕ್ಷ್ಣಿತೀಕ್ಷ್ಣತಾ ।
ಅತೋಽತಿಬಲವದ್ವೈರಾತ್ ಸ್ಯಾದೈಕ್ಯಸ್ಯ ಪಲಾಯನಂ ॥ ೧೩೪೬ ॥

**ಅರ್ಥ–** ಮಾನಸ್ಯ= ಒಂದು ಪ್ರಮಾಣಕ್ಕೆ, ಮಾನಸಂವಾದೇ= ಇನ್ನೊಂದು ಪ್ರಮಾಣದ ಸಂವಾದ ಉಂಟಾದರೆ, ಪ್ರಾಮಾಣ್ಯಾವಧೃತಿಃ ಕಿಲ= ಪ್ರಾಮಾಣ್ಯದ ಅವಧಾರಣೆಯೇ

ಉಂಟಾಗುವುದಷ್ಟೆ, ಚಿತ್ರಸತ್ವೌಷಧೇನ= ಚಿತ್ರಸತ್ವ ಎಂಬ ಔಷಧದಿಂದ, ಅಕ್ಷ್ಣಿ= ಕಣ್ಣಿನಲ್ಲಿ, ಕಾಚಚ್ಛೇದೇ= ಕಾಚದೋಷವು ನಿವೃತ್ತಿಯಾಗುತ್ತಿರಲು, ಅತಿತೀಕ್ಷ್ಣತಾ= ಕಣ್ಣಿಗೆ ತೀಕ್ಷ್ಣತೆಯೇ ಉಂಟಾಗುವುದಷ್ಟೆ, ಅತಃ= ಆದ್ದರಿಂದ, ಅತಿಬಲವದ್ವೈರಾತ್= ಬಹಳ ಪ್ರಬಲವಾದ ಭೇದವಾಕ್ಯದ ವಿರೋಧದಿಂದ, ಐಕ್ಯಸ್ಯ= ಐಕ್ಯಕ್ಕೆ, ಪಲಾಯನಂ= ಪಲಾಯನವು ಉಂಟಾಗುತ್ತದೆ.

**ಅನುವಾದ–** ಒಂದು ಪ್ರಮಾಣಕ್ಕೆ ಇನ್ನೊಂದು ಪ್ರಮಾಣದ ಸಂವಾದ ಉಂಟಾದರೆ ಮೊದಲನೆಯ ಪ್ರಮಾಣದ ಪ್ರಾಮಾಣ್ಯವು ದೃಢವಾಗುತ್ತದೆ. ಚಿತ್ವಸತ್ವ ಎಂಬ ಔಷಧದಿಂದ ಕಣ್ಣಿನ ಕಾಚದೋಷವು ನಿವೃತ್ತಿಯಾದರೆ ದೃಷ್ಟಿಯು ಹೇಗೆ ತೀಕ್ಷ್ಣವಾಗುತ್ತದೆಯೋ ಆ ರೀತಿ. ಆದ್ದರಿಂದ ಅತ್ಯಂತ ಪ್ರಬಲವಾದ ಭೇದವಾಕ್ಯದ ವಿರೋಧದಿಂದಾಗಿ ನಿನ್ನ ಐಕ್ಯ ಶ್ರುತಿಯು ಪಲಾಯನವನ್ನು ಮಾಡುತ್ತದೆ.

**ಭಾವವಿಲಾಸಿನೀ–** ಮಾನಾಂತರಸಂವಾದೇನ ಭೇದಸ್ಯ ಬಲವತ್ತ್ವಾತ್ ॥ ೧೩೪೬ ॥

**ವಿವರಣೆ–** ಒಂದು ಪ್ರಮಾಣಕ್ಕೆ ಇನ್ನೊಂದು ಪ್ರಮಾಣದ ಸಂವಾದವು ದೌರ್ಬಲ್ಯ ಹೇತುವಲ್ಲ. ಪ್ರತ್ಯುತ ಪ್ರಾಬಲ್ಯಹೇತು. ಒಂದೇ ಪ್ರಮಾಣವು ಇದ್ದಾಗ ಏನಾದರೂ ಸಂಶಯ ಬರಬಹುದು. ಆದರೆ ಇನ್ನೊಂದು ಪ್ರಮಾಣವು ಅದನ್ನೇ ಸಮರ್ಥಿಸಿದಾಗ ಮೊದಲನೆಯ ಪ್ರಮಾಣದ ಅರ್ಥವು ನಿಸ್ಸಂಶಯವಾಗಿ ಸಿದ್ಧವಾಗುತ್ತದೆ. ಹೇಗೆ ಕಣ್ಣಿನಲ್ಲಿರುವ ಕಾಚದೋಷವು ಔಷಧಿಯಿಂದ ನಿವೃತ್ತವಾದಾಗ ಕಣ್ಣಿನಲ್ಲಿ ಮೊದಲೇ ಇದ್ದ ದೃಷ್ಟಿ ಶಕ್ತಿಯು ಹೇಗೆ ಚುರುಕುಗೊಳ್ಳುತ್ತದೆಯೋ ಅದರಂತೆ. ಆದ್ದರಿಂದ ಭೇದಶ್ರುತಿಯು ಪ್ರಬಲವಾದುದು. ಏಕೆಂದರೆ ಅದಕ್ಕೆ ಪ್ರತ್ಯಕ್ಷದ ಸಹಾಯವಿದೆ. ಅದರ ವಿರೋಧಕ್ಕೆ ಹೆದರಿ ನಿನ್ನ ಐಕ್ಯಶ್ರುತಿಯೇ ಪಲಾಯನವನ್ನು ಮಾಡುತ್ತದೆ ಎಂದು ತಾತ್ಪರ್ಯ.

**ದ್ವಿತೀಯೇ ದೂಷಣಂ ಕಿಂ ತದೈಕ್ಯವಾಕ್ಯಂ ಯದೀಷ್ಯತೇ ।**
**ತದಾಽನ್ಯೋನ್ಯಾಶ್ರಯೋ ದೋಷೋ ವೈರ್ಯಾಶ್ಲೇಷೋಪಮಸ್ತವ ॥೧೩೪೭॥**

**ಅರ್ಥ–** ದ್ವಿತೀಯೇ= ದೂಷಣೆಗೋಸ್ಕರ ಅನುವಾದಮಾಡುತ್ತದೆ ಎಂಬ ದ್ವಿತೀಯಪಕ್ಷದಲ್ಲಿ, ತದ್ದೂಷಣಂ= ಆ ದೂಷಣವು, ಕಿಂ= ಯಾವುದು, ಯದಿ= ಒಂದು ಪಕ್ಷ, ಐಕ್ಯವಾಕ್ಯಂ= ಐಕ್ಯವಾಕ್ಯವು, ಇಷ್ಯತೇ= ದೂಷಣವೆಂದು ಅಭಿಪ್ರೇತವಾದರೆ, ತದಾ= ಆಗ ಉಂಟಾಗುವ, ಅನ್ಯೋನ್ಯಾಶ್ರಯೋದೋಷಃ= ಅನ್ಯೋನ್ಯಾಶ್ರಯದೋಷವು, ತವ= ನಿನಗೆ, ವೈರ್ಯಾಶ್ಲೇಷೋಪಮಃ= ಶತ್ರುವನ್ನು ಆಲಿಂಗನಮಾಡಿದಂತೆಯೇ ಸರಿ.

**ಅನುವಾದ–** ಎರಡನೆಯ ಪಕ್ಷದಲ್ಲಿ ಆ ದೂಷಣ ಯಾವುದು? ಐಕ್ಯವಾಕ್ಯವೇ ಅದರ ದೂಷಣ ಎಂದು ಹೇಳಿದರೆ ಆಗ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಅದು ನಿನಗೆ ಶತ್ರುವನ್ನು ಆಲಿಂಗಿಸಿದಂತೆಯೇ ಸರಿ.

**ಭಾವವಿಲಾಸಿನೀ–** ದ್ವಿತೀಯೇ ದೂಷಣಾರ್ಥಮನುವಾದ ಇತಿ ಪಕ್ಷೇ । ತತ್ ಯದರ್ಥಮನುವಾದಃ ತತ್ । ತದಾ ಐಕ್ಯವಾಕ್ಯಸ್ಯ ದೂಷಣತ್ವೇ ॥ ೧೩೪೭ ॥

**ವಿವರಣೆ–** ದೂಷಣಕ್ಕಾಗಿ ಅನುವಾದ ಮಾಡುತ್ತದೆ ಎಂಬ ಎರಡನೇ ಪಕ್ಷವನ್ನು ಇಲ್ಲಿ ವಿಚಾರ ಮಾಡುತ್ತಾರೆ. ನಮಗೆ ಯಾವ ದೂಷಣವೂ ಕಾಣುವುದಿಲ್ಲ ಎಂದು ನಾವು ಹೇಳಿದರೆ ಐಕ್ಯವಾಕ್ಯವೇ ದೂಷಣ ಎಂದು ಅವರ ಉತ್ತರ. ಆಗ ಸ್ಪಷ್ಟವಾಗಿ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಅನ್ಯೋನ್ಯಾಶ್ರಯದೋಷವು ದೊಡ್ಡ ಶತ್ರುವಿದ್ದಂತೆ. ಭೇದ ಶ್ರುತಿಗೆ ಅನುವಾದಕತ್ವವನ್ನು ಸಮರ್ಥನೆ ಮಾಡಲು ಹೋಗಿ ಶತ್ರುವನ್ನು ಆಲಿಂಗಿಸಿದಂತಾಯಿತು ಎಂದು ಪರಿಹಾಸ ಮಾಡುತ್ತಾರೆ.

ದೂಷಣಾರ್ಥಾನುವಾದಿತ್ವೇ ಸಿದ್ಧೇ ಭೇದಪರಶ್ರುತೇಃ ।
ನಿರಂಕುಶೈಕ್ಯವಾಗೈಕ್ಯಮುಕ್ತ್ವಾ ತಾಂ ದೂಷಯೇತ್ ಸ್ವಯಂ ॥ ೧೩೪೮ ॥

ಸಿದ್ಧೇಽಸ್ಯಾ ದೂಷಕತ್ವೇ ಚ ದೂಷಣಾರ್ಥಾನುವಾದಿನೀ ।
ಸಾ ಸ್ಯಾದಿತಿ ನ ಕಸ್ಯ ಸ್ಯಾದನ್ಯೋನ್ಯಾಶ್ರಯದೂಷಣಂ ॥ ೧೩೪೯ ॥

**ಅರ್ಥ–** ಭೇದಪರಶ್ರುತೇಃ= ಭೇದಪ್ರತಿಪಾದಕ ಶ್ರುತಿಗೆ, ದೂಷಣಾರ್ಥಾನುವಾದಿತ್ವೇ= ದೂಷಣೆಗೋಸ್ಕರ ಅನುವಾದಮಾಡುತ್ತಿದೆ ಎಂಬ ಪ್ರಮೇಯವು, ಸಿದ್ಧೇ= ಸಿದ್ಧವಾದರೆ, ನಿರಂಕುಶೈಕ್ಯವಾಕ್= ನಿರ್ಬಾಧವಾದ ಐಕ್ಯವಾಕ್ಯವು, ಸ್ವಯಂ= ತಾನು, ಐಕ್ಯಮುಕ್ತ್ವಾ= ಐಕ್ಯವನ್ನು ಹೇಳಿ, ತಾಂ= ಆ ಭೇದಶ್ರುತಿಯನ್ನು, ದೂಷಯೇತ್= ದೂಷಿಸುತ್ತದೆ, ಚ= ಮತ್ತು, ಅಸ್ಯಾಃ= ಈ ಐಕ್ಯಶ್ರುತಿಗೆ, ದೂಷಕತ್ವೇ ಸಿದ್ಧೇ= ದೂಷಕತ್ವವು ಸಿದ್ಧವಾದರೆ, ಸಾ= ಆ ಭೇದಶ್ರುತಿಯು, ದೂಷಣಾರ್ಥಾನುವಾದಿನೀ ಸ್ಯಾತ್= ದೂಷಣಾರ್ಥವಾದ ಅನುವಾದವಾಗುತ್ತದೆ, ಇತಿ= ಎಂಬ ಕಾರಣದಿಂದ, ಅನ್ಯೋನ್ಯಾಶ್ರಯದೂಷಣಂ= ಅನ್ಯೋನ್ಯಾಶ್ರಯದೋಷವು, ಕಸ್ಯ ನ ಸ್ಯಾತ್= ಯಾರಿಗೆ ತಿಳಿಯುವುದಿಲ್ಲ.

**ಅನುವಾದ–** ಭೇದ ಶ್ರುತಿಯು ದೂಷಣಾರ್ಥವಾಗಿ ಅನುವಾದ ಮಾಡುತ್ತದೆ ಎಂದು ಸಿದ್ಧವಾದರೆ ಆಗ ನಿರಂಕುಶವಾದ ಐಕ್ಯಶ್ರುತಿಯು ಐಕ್ಯವನ್ನು ಹೇಳಿ ತಾನು ಭೇದಶ್ರುತಿಯನ್ನು ದೂಷಣ ಮಾಡುತ್ತದೆ ಎಂದು ಸಿದ್ಧವಾಗುತ್ತದೆ. ಐಕ್ಯ ಶ್ರುತಿಯು ಭೇದಶ್ರುತಿಯನ್ನು ದೂಷಣ ಮಾಡುತ್ತದೆ ಎಂದು ಸಿದ್ಧವಾದರೆ ಭೇದಶ್ರುತಿಯು ದೂಷಣಾರ್ಥವಾಗಿ ಅನುವಾದ ಮಾಡುತ್ತದೆ ಎಂದು ಸಿದ್ಧವಾಗುತ್ತದೆ. ಈ ಅನ್ಯೋನ್ಯಾಶ್ರಯ ದೋಷವು ಯಾರಿಗೆ ತಿಳಿಯುವುದಿಲ್ಲ?

**ಭಾವವಿಲಾಸಿನೀ–** ಅನ್ಯೋನ್ಯಾಶ್ರಯಮೇವ ದರ್ಶಯತಿ – **ದೂಷಣೇತಿ** ॥ ನಿರಂಕುಶಾ ವಿರೋಧಿ ಭೇದಶ್ರುತ್ಯಾಖ್ಯಾಂಕುಶರಹಿತಾ ॥ ತಾಂ ಭೇದಶ್ರುತಿಮ್ । ಅಸ್ಯಾಃ ಐಕ್ಯಶ್ರುತೇಃ । ಸಾ ಭೇದ-ಶ್ರುತಿಃ ॥ ೧೩೪೮-೧೩೪೯ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ಅನ್ಯೋನ್ಯಾಶ್ರಯವನ್ನೇ ಇಲ್ಲಿ ಸ್ಪಷ್ಟಪಡಿಸುತ್ತಾರೆ.

**ಶ್ವಾನಂ ಗೃಹಾಣ ಭಿಕ್ಷಾ ಮೇ ಮಾಸ್ತ್ವಿತ್ಯಾಭಾಣಕಂ ಸ್ಮರ ।**
**ಯದನ್ಯೋನ್ಯಾಶ್ರಯಶುನಾ ದಂಷ್ಟ್ರಾ ಪರಶುನಾರ್ದಿತೇ ।**
**ದೂರೇಭೂದ್ ದೂಷಣಾರ್ಥಾನುವಾದಿತ್ವಾನ್ನಸ್ಯ ಭೋಜನಂ ॥ ೧೩೫೦ ॥**

**ಅರ್ಥ–** ಶ್ವಾನಂ ಗೃಹಾಣ= ನಾಯಿಯನ್ನು ಹಿಡಿದುಕೊ, ಭಿಕ್ಷಾ ಮೇ ಮಾಸ್ತು= ನನಗೆ ಭಿಕ್ಷೆಯು ಬೇಡ, ಇತಿ ಆಭಾಣಕಂ= ಎಂಬ ಗಾದೆಯನ್ನು, ಸ್ಮರ= ಸ್ಮರಿಸಿಕೊ, ಯತ್= ಯಾವ ಕಾರಣದಿಂದ, ಅನ್ಯೋನ್ಯಾಶ್ರಯಶುನಾ= ಅನ್ಯೋನ್ಯಾಶ್ರಯ ಎಂಬ ನಾಯಿಯಿಂದ, ದಂಷ್ಟ್ರಾ ಪರಶುನಾರ್ದಿತೇ= ಕೋರೆಹಲ್ಲುಗಳೆಂಬ ಕೊಡಲಿಯಿಂದ ಪೀಡಿಸಲ್ಪಡುತ್ತಿರುವಾಗ, ದೂಷಣಾರ್ಥಾನುವಾದಿತ್ವಾನ್ನಸ್ಯ= ದೂಷಣಾರ್ಥವಾಗಿ ಅನುವಾದ ಎಂಬ ಅನ್ನದ, ಭೋಜನಂ= ಭೋಜನವು, ದೂರೇ ಅಭೂತ್= ಬಹಳ ದೂರದಲ್ಲಿ ಉಳಿಯಿತು.

**ಅನುವಾದ– ನಾಯಿಯನ್ನು ಹಿಡಿದುಕೋ ನನಗೆ ಭಿಕ್ಷೆಯು ಬೇಡ ಎಂಬ ಗಾದೆಯನ್ನು ಸ್ಮರಿಸಿಕೋ. ಭೇದಶ್ರುತಿಗೆ ಅನುವಾದಕತ್ವವನ್ನು ಹೇಳಲು ಹೊರಟ ನೀನು ಅನ್ಯೋನ್ಯಾಶ್ರಯವೆಂಬ ನಾಯಿಯ ಹರಿತವಾದ ಹಲ್ಲುಗಳಿಂದ ಹಿಂಸಿಸಲ್ಪಡುವಾಗ ದೂಷಣಾರ್ಥವಾಗಿ ಅನುವಾದ ಎನ್ನುವ ನಿನಗೆ ಇಷ್ಟವಾದ ಭೋಜನವು ದೂರದಲ್ಲಿಯೇ ಹೊರಟು ಹೋಯಿತು.**

**ಭಾವವಿಲಾಸಿನೀ–ತಥಾ ಚ ಭಿಕ್ಷಾ ಮಾಸ್ತು ಶ್ವಾನಂ ಗೃಹಾಣೇತ್ಯಾಭಾಣಕಮನು- ಕರೋಷೀತ್ಯಾಹ –ಶ್ವಾನಮಿತಿ ॥ ಅರ್ದಿತೇ ತ್ವಯಿ ॥ ೧೩೫೦ ॥**

**ವಿವರಣೆ–** ಭಿಕ್ಷೆಯನ್ನು ಬೇಡಲು ಹೊರಟವನು ಯಜಮಾನನ ಮನೆಯ ಮುಂದೆ ನಿಂತಾಗ ಯಜಮಾನನ ನಾಯಿಯು ಅಟ್ಟಿಸಿಕೊಂಡು ಬರಲು, ಭಿಕ್ಷುಕನು ಯಜಮಾನನನ್ನು ಕುರಿತು ನಾಯಿಯನ್ನು ಹಿಡಿದುಕೋ, ನನಗೆ ಭಿಕ್ಷೆಯು ಬೇಡ ಎಂದು ತಿಳಿಸಿದನಂತೆ. ಅದರಂತೆ ದೂಷಣಾರ್ಥವಾಗಿ ಅನುವಾದ ಎಂಬ ಭಿಕ್ಷಾನ್ನವನ್ನು ಸ್ವೀಕರಿಸಲು ಹೊರಟ ನೀನು ಅನ್ಯೋನ್ಯಾಶ್ರಯವೆಂಬ ನಾಯಿಯ ಹಲ್ಲುಗಳಿಗೆ ಸಿಕ್ಕಿ ಗಾಯಗೊಂಡಾಗ ದೂಷಣಾರ್ಥವಾದ ಅನುವಾದವು ಬೇಡ, ಅನ್ಯೋನ್ಯಾಶ್ರಯವು ಬರದಿದ್ದರೆ ಸಾಕು ಎಂದು ಹೇಳಬೇಕಾಗುತ್ತದೆ. ಆದ್ದರಿಂದ ನಿನ್ನ ಸ್ಥಿತಿಯು ಹೀಗೆ ಚಿಂತಾಜನಕವಾಯಿತು ಎಂದು ಪರಿಹಾಸ ಮಾಡುತ್ತಾರೆ.

**ದೃಢಪ್ರತ್ಯಕ್ಷವೈರೇಽಪಿ ಶ್ರುತಿರೈಕ್ಯಂ ಕಥಂ ವದೇತ್ ।**
**ಅಬಾಧಿತೋ ಹಿ ವಾಕ್ಯಾರ್ಥೋ ಯೋಗ್ಯತಾಽಽವಶ್ಯಕೀ ನ ಕಿಮ್ ॥೧೩೫೧॥**

**ಅರ್ಥ–** ದೃಢಪ್ರತ್ಯಕ್ಷವೈರೇಽಪಿ= ಪ್ರಬಲಪ್ರತ್ಯಕ್ಷವಿರೋಧವಿದ್ದರೂ, ಶ್ರುತಿಃ= ಐಕ್ಯಶ್ರುತಿಯು, ಐಕ್ಯಂ= ಐಕ್ಯವನ್ನು, ಕಥಂ ವದೇತ್= ಹೇಗೆ ಹೇಳುತ್ತದೆ? ವಾಕ್ಯಾರ್ಥಃ= ವಾಕ್ಯಾರ್ಥವು, ಅಬಾಧಿತೋ ಹಿ= ಅಬಾಧಿತವಾಗಬೇಕಷ್ಟೆ? ಯೋಗ್ಯತಾ= ಯೋಗ್ಯತೆಯು, ಆವಶ್ಯಕೀ ನ ಕಿಂ= ಆವಶ್ಯಕವಲ್ಲವೆ?

**ಅನುವಾದ–** ಪ್ರಬಲವಾದ ಪ್ರತ್ಯಕ್ಷದ ವಿರೋಧವಿರುವಾಗ ಶ್ರುತಿಯು ಐಕ್ಯವನ್ನು ಹೇಗೆ ಹೇಳಲು ಸಾಧ್ಯ? ವಾಕ್ಯಾರ್ಥವು ಅಬಾಧಿತವಾಗಿರಬೇಕಷ್ಟೇ? ಏಕೆಂದರೆ ವಾಕ್ಯವು ಪ್ರಮಾಣವಾಗಬೇಕಾದರೆ ಯೋಗ್ಯತೆಯು ಅವಶ್ಯಕವಾಗಿ ಬೇಕು.

**ಭಾವವಿಲಾಸಿನೀ–** ಕಿಂಚ ಪ್ರತ್ಯಕ್ಷಬಾಧಾಚ್ಚ ಐಕ್ಯಶ್ರುತಿರ್ನ ಸ್ವಾರ್ಥಪರಾ । ಅತೋಽಪಿ ನ ಭೇದಶ್ರುತಿದೂಷಣಾಯಾಲಮಿತ್ಯಾಹ – ದೃಢೇತಿ ॥ ಯೋಗ್ಯತಾ ಅರ್ಥಾಬಾಧರೂಪ-ಯೋಗ್ಯತಾ ॥ ೧೩೫೧ ॥

**ವಿವರಣೆ–** ಪ್ರತ್ಯಕ್ಷ ವಿರೋಧವಿರುವಾಗ ವಾಕ್ಯವು ಪ್ರತೀತಾರ್ಥದಲ್ಲಿ ಪ್ರಮಾಣವಾಗುವುದಿಲ್ಲ. ಉದಾಹರಣೆಗೆ ವಹ್ನಿನಾ ಸಿಂಚತಿ ಎಂಬ ವಾಕ್ಯವು ಪ್ರಮಾಣವಾಗುವುದಿಲ್ಲ. ವಹ್ನಿಯಲ್ಲಿ ಸೇಚನಕರಣತ್ವವಿಲ್ಲ ಎಂಬ ಪ್ರತ್ಯಕ್ಷವಿದೆ. ಹೀಗೆ ಪ್ರತ್ಯಕ್ಷವಿರೋಧವು ಇರುವುದರಿಂದ ಆ ವಾಕ್ಯದಲ್ಲಿ ಯೋಗ್ಯತೆ ಇಲ್ಲ ಎಂದು ಹೇಳುತ್ತಾರೆ. ಯೋಗ್ಯತೆಯು ಇಲ್ಲದ ವಾಕ್ಯವು ಅಪ್ರಮಾಣವಾಗುತ್ತದೆ. ಹೀಗೆ ಐಕ್ಯಶ್ರುತಿಗೆ ಪ್ರತ್ಯಕ್ಷವಿರೋಧವು ಬರುವುದರಿಂದ ಪ್ರತೀತವಾದ ಐಕ್ಯವನ್ನು ಹೇಳಲು ಹೊರಟರೆ ಯೋಗ್ಯತೆ ಇಲ್ಲದಿರುವುದರಿಂದ ಅದು ಅಪ್ರಮಾಣವೇ ಆಗುತ್ತದೆ ಎಂದು ಇಲ್ಲಿ ತಿಳಿಸುತ್ತಾರೆ.

**ಯದಾ ಪ್ರತ್ಯಕ್ಷಬಾಧಾಯಾಪ್ಯೈಕ್ಯವಾಕ್ಯಂ ವ್ರಜೇತ್ ತವ ।**
**ತದಾ ಬಲವತೀ ಭೇದಶ್ರುತಿರ್ಹನ್ಯಾದ್ಧಿ ಪೃಷ್ಠತಃ ॥ ೧೩೫೨ ॥**

**ಅರ್ಥ–** ಯದಾ= ಯಾವಾಗ, ತವ= ನಿನ್ನ, ಐಕ್ಯವಾಕ್ಯಂ= ಐಕ್ಯವಾಕ್ಯವು, ಪ್ರತ್ಯಕ್ಷಬಾಧಾಯ= ಭೇದಪ್ರತ್ಯಕ್ಷವನ್ನು ಬಾಧಿಸಲು, ವ್ರಜೇತ್= ಹೊರಡುತ್ತದೆಯೋ, ತದಾ= ಆಗ, ಬಲವತೀ= ಪ್ರಬಲವಾದ, ಭೇದಶ್ರುತಿಃ= ಭೇದಶ್ರುತಿಯು, ಪೃಷ್ಠತಃ= ಹಿಂದಿನಿಂದ ಬಂದು, ಅನ್ಯಾದ್ಧಿ= ಐಕ್ಯವಾಕ್ಯವನ್ನು ಕೊಲ್ಲುವುದಷ್ಟೆ?

**ಅನುವಾದ–** ನಿನ್ನ ಐಕ್ಯವಾಕ್ಯವು ಪ್ರತ್ಯಕ್ಷವನ್ನೇ ಬಾಧಿಸಲು ಹೊರಟಾಗಲೂ ಸಹ ಪ್ರಬಲವಾದ ಭೇದಶ್ರುತಿಯು ಹಿಂದಿನಿಂದ ಬಂದು ನಿನ್ನ ಐಕ್ಯವಾಕ್ಯವನ್ನು ಕೊಲ್ಲುತ್ತದೆ.

**ಭಾವವಿಲಾಸಿನೀ–** ಐಕ್ಯಶ್ರುತ್ಯೈವ ಪ್ರತ್ಯಕ್ಷಸ್ಯಾಪಿ ಬಾಧ ಇತಿ ಚೇತ್ । ತತ್ರಾಹ – **ಯದೇತಿ** ॥ ಬಲವತೀ ಪ್ರತ್ಯಕ್ಷಸಹಾಯವತ್ತ್ವೇನ ಬಲವತೀ ॥ ೧೩೫೨ ॥

**ವಿವರಣೆ–** ಐಕ್ಯವಾಕ್ಯವು ಭೇದಶ್ರುತಿಗೆ ಸಹಾಯಕವಾದ ಭೇದ ಪ್ರತ್ಯಕ್ಷವನ್ನೂ ಬಾಧಿಸುತ್ತದೆ ಎಂದು ಹೇಳುವಂತಿಲ್ಲ. ಐಕ್ಯ ಶ್ರುತಿಯು ಭೇದ ಪ್ರತ್ಯಕ್ಷವನ್ನು ಬಾಧಿಸಲು ಹೊರಟಾಗ ಪ್ರತ್ಯಕ್ಷ ಸಹಾಯವಿರುವುದರಿಂದ ಪ್ರಬಲವಾದ ಭೇದಶ್ರುತಿಯು ಐಕ್ಯಶ್ರುತಿಯನ್ನು ಹಿಂಬಾಲಿಸಿಕೊಂಡು ಬಂದು ಐಕ್ಯಶ್ರುತಿಯನ್ನೇ ನಾಶಮಾಡುತ್ತದೆ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

**ಅಥ ಭೇದಶ್ರುತಿಂ ರೋದ್ಧುಂ ಯದಾ ನಿವರ್ತತೇ ತತಃ ।**
**ತದಾ ತಾಂ ಪೃಷ್ಠತೋ ಹನ್ಯಾತ್ ಸ ಸಾಕ್ಷೀ ಬಲವತ್ತರಃ ॥ ೧೩೫೩ ॥**

**ಅರ್ಥ–** ಅಥ= ಇನ್ನೊಂದು ಪಕ್ಷದಲ್ಲಿ, ಯದಾ= ಯಾವಾಗ, ಭೇದಶ್ರುತಿಂ= ಭೇದಶ್ರುತಿಯನ್ನು, ರೋದ್ಧುಂ= ವಿರೋಧಿಸಲು, ತತಃ= ಆ ಪ್ರಬಲಪ್ರತ್ಯಕ್ಷದಿಂದ, ನಿವರ್ತತೇ= ಐಕ್ಯವಾಕ್ಯವು ಹಿಂದಿರುಗಿದರೆ, ತದಾ= ಆಗ, ತಾಂ= ಆ ಐಕ್ಯವಾಕ್ಯವನ್ನು, ಬಲವತ್ತರಃ= ಅತ್ಯಂತ ಪ್ರಬಲವಾದ, ಸ ಸಾಕ್ಷೀ= ಆ ಸಾಕ್ಷಿಯು, ಪೃಷ್ಠತಃ= ಹಿಂದಿನಿಂದ ಬಂದು, ಹನ್ಯಾತ್= ಕೊಲ್ಲುತ್ತದೆ.

**ಅನುವಾದ–** ಐಕ್ಯ ಶ್ರುತಿಯು ಭೇದ ಶ್ರುತಿಯನ್ನು ವಿರೋಧಿಸಲು ಪ್ರತ್ಯಕ್ಷ ಬಾಧವನ್ನು ಮಾಡುವುದನ್ನು ಬಿಟ್ಟು ಹಿಂದಿರುಗಿದರೆ ಆಗ ಪ್ರಬಲವಾದ ಸಾಕ್ಷಿಯು ಐಕ್ಯಶ್ರುತಿಯನ್ನು ಹಿಂದಿನಿಂದ ಅನುಸರಿಸಿ ಕೊಲ್ಲುತ್ತದೆ.

**ಭಾವವಿಲಾಸಿನೀ–** ತತಃ ಪ್ರತ್ಯಕ್ಷಬಾಧಕರಣಾತ್ । ತಾಂ ಐಕ್ಯಶ್ರುತಿಮ್ । ಸಃ ಭೇದಗ್ರಾಹೀ ಬಲವತ್ತರಃ ॥ ೧೩೫೩ ॥

**ವಿವರಣೆ–** ಐಕ್ಯಶ್ರುತಿಯು ಒಂದು ಕಡೆ ಭೇದಶ್ರುತಿಯ ವಿರೋಧ, ಇನ್ನೊಂದು ಕಡೆ ಸಾಕ್ಷಿ ಪ್ರತ್ಯಕ್ಷದ ವಿರೋಧ. ಈ ಎರಡು ವಿರೋಧಗಳ ನಡುವೆ ಒಂದು ವಿರೋಧಿಯ ಕಡೆಗೆ ತಿರುಗಿದರೆ ಇನ್ನೊಂದು ವಿರೋಧಿಯು ಹಿಂದಿನಿಂದ ಕೊಲ್ಲುವುದರಿಂದ ಐಕ್ಯಶ್ರುತಿಯು ಎಂದೂ ಬದುಕುವುದಿಲ್ಲ ಎಂದು ಹೇಳುತ್ತಾರೆ.

**ತಸ್ಮಾದುಭಾಭ್ಯಾಂ ಯುದ್ಧೇನ ಕ್ಲಿಶ್ಯೇದೈಕ್ಯಶ್ರುತಿಸ್ತವ ।**
**ಅತಸ್ತಾಂ ಕ್ಲೇಶನಾಶಾಯ ಶೀಘ್ರಮರ್ಥಾಂತರೇ ನಯ ॥ ೧೩೫೪ ॥**

**ಅರ್ಥ–** ತಸ್ಮಾತ್= ಆದ್ದರಿಂದ, ತವ= ನಿನ್ನ, ಐಕ್ಯಶ್ರುತಿಃ= ಐಕ್ಯಶ್ರುತಿಯು, ಉಭಾಭ್ಯಾಂ= ಭೇದಶ್ರುತಿ ಮತ್ತು ಭೇದಪ್ರತ್ಯಕ್ಷಗಳ ಜೊತೆಯಲ್ಲಿ, ಯುದ್ಧೇನ= ಯುದ್ಧದಿಂದ, ಕ್ಲಿಶ್ಯೇತ್= ಕ್ಲೇಶಪಡುತ್ತದೆ, ಅತಃ= ಆದ್ದರಿಂದ, ಕ್ಲೇಶನಾಶಾಯ= ಆ ಕ್ಲೇಶವನ್ನು ಪರಿಹಾರ ಮಾಡಲು, ತಾಂ= ಆ ಐಕ್ಯಶ್ರುತಿಯನ್ನು, ಶೀಘ್ರಂ= ಬೇಗ, ಅರ್ಥಾಂತರೇ ನಯ= ಬೇರೆ ಅರ್ಥದಲ್ಲಿ ತೆಗೆದುಕೊಂಡು ಹೋಗು.

**ಅನುವಾದ–** ಆದ್ದರಿಂದ ನಿನ್ನ ಐಕ್ಯ ಶ್ರುತಿಯು ಭೇದ ಶ್ರುತಿ ಮತ್ತು ಸಾಕ್ಷಿ ಪ್ರತ್ಯಕ್ಷ ಇವೆರಡರ ಜೊತೆಯಲ್ಲಿ ಏಕಕಾಲದಲ್ಲಿ ಯುದ್ಧವನ್ನು ಮಾಡಿ ಕ್ಲೇಶಕ್ಕೆ ಒಳಗಾಗುತ್ತದೆ. ಐಕ್ಯಶ್ರುತಿಯ ಆ ಕ್ಲೇಶವನ್ನು ಕಳೆಯಲು ಬೇಗ ಅದಕ್ಕೆ ಅರ್ಥಾಂತರವನ್ನು ಮಾಡು.

**ಭಾವವಿಲಾಸಿನೀ–** ತಸ್ಮಾತ್ ಶ್ರುತ್ಯಾ ಯುದ್ಧೇ ಪ್ರತ್ಯಕ್ಷೇಣ ತಾಡನಾತ್ ಪ್ರತ್ಯಕ್ಷೇಣ ಯುದ್ಧೇ ಚ ಶ್ರುತ್ಯಾ ತಾಡನಾದಿತ್ಯರ್ಥಃ। ಯಥಾ ಉಭಾಭ್ಯಾಂ ಪ್ರಬಲಭಟಾಭ್ಯಾಂ ಯುದ್ಧಕಾರಿಭಟಸ್ಯ ಏಕಂ ಪ್ರತಿ ಪ್ರತ್ಯವಸ್ಥಾನೇ ಅಪರೋ ಹನ್ಯಾತ್ । ಅಪರಂ ಪ್ರತಿ ಚ ಪ್ರತ್ಯವಸ್ಥಾನೇ ಪುನಃ ಸ ಏವ ಹನ್ಯಾತ್ । ತಥಾ ತವೈಕ್ಯವಾಕ್ಯಸ್ಯಾಪಿ ಪ್ರಬಲಪ್ರಮಾಣದ್ವಯವಿರೋಧೇನ ಸ್ವಾರ್ಥಾಸಾಧಕತ್ವ-ರೂಪಸಂಕಟವಮಾಗತಮಿತಿ ಭಾವಃ। ಅತಃ ಉಕ್ತರೀತ್ಯಾ ಪ್ರಮಾಣದ್ವಯವಿರೋಧೇನ ಸ್ವಮುಖ್ಯಾರ್ಥಕಥನಸಾಮರ್ಥ್ಯಾಭಾವಾತ್ ॥

**ವಿವರಣೆ–** ಈ ವಿರೋಧಗಳನ್ನು ಪರಿಹಾರ ಮಾಡಿಕೊಳ್ಳಲು ಐಕ್ಯಶ್ರುತಿಗೆ ಅರ್ಥಾಂತರವನ್ನು ಮಾಡುವ ಉಪಾಯ ಒಂದನ್ನು ಬಿಟ್ಟು ಬೇರೆ ಯಾವ ಮಾರ್ಗವೂ ಇಲ್ಲವೆಂದು ಇಲ್ಲಿ ಹೇಳುತ್ತಾರೆ.

ಕಿಂಚ ಪ್ರತ್ಯಕ್ಷಬಾಧಾಯ ನಾಲಂ ವಾಕ್ಯಶತಾನ್ಯಪಿ ।
ಅನ್ಯೋನ್ಯಾಶ್ರಯದೋಷೇಣ ತಥಾ ದೋಷಾಂತರೇಣ ಚ ॥ ೧೩೪೫ ॥

**ಅರ್ಥ–** ಕಿಂಚ= ಮತ್ತು, ವಾಕ್ಯಶತಾನ್ಯಪಿ= ಒಂದುನೂರು ವಾಕ್ಯಗಳೂ ಸಹ, ಪ್ರತ್ಯಕ್ಷ-ಬಾಧಾಯ= ಪ್ರತ್ಯಕ್ಷವನ್ನು ಬಾಧಿಸಲು, ಅನ್ಯೋನ್ಯಾಶ್ರಯದೋಷೇಣ= ಅನ್ಯೋನ್ಯಾ-ಶ್ರಯದೋಷದಿಂದ, ತಥಾ= ಮತ್ತು, ದೋಷಾಂತರೇಣ ಚ= ಬೇರೆ ದೋಷದಿಂದಲೂ, ನಾಲಂ= ಸಮರ್ಥವಾಗುವುದಿಲ್ಲ.

**ಅನುವಾದ–** ಅದೂ ಅಲ್ಲದೆ, ನೂರು ವಾಕ್ಯಗಳೂ ಸಹ ಒಂದು ಪ್ರತ್ಯಕ್ಷವನ್ನು ಬಾಧಿಸಲಾರವು. ವಾಕ್ಯವು ಪ್ರತ್ಯಕ್ಷವನ್ನು ಬಾಧಿಸಿದರೆ ಅನ್ಯೋನ್ಯಾಶ್ರಯ ದೋಷವು ಮತ್ತು ಬೇರೆ ದೋಷವೂ ಬರುತ್ತದೆ. ಐಕ್ಯಶ್ರುತಿಗೆ ಪ್ರತ್ಯಕ್ಷಬಾಧಕತ್ವವನ್ನು ಹೇಳಿದರೆ ಹಿಂದೆಯೇ ತಿಳಿಸಿದಂತೆ ಅನ್ಯೋನ್ಯಾಶ್ರಯದೋಷವು ಮತ್ತು ಲಕ್ಷಣಾವೃತ್ತಿಯ ವಿಚ್ಛೇದಪ್ರಸಂಗವೂ ಬರುತ್ತದೆ ಎಂದು ಈ ಶ್ಲೋಕಗಳಲ್ಲಿ ಹೇಳುತ್ತಾರೆ.

ಪ್ರತ್ಯಕ್ಷಬಾಧೇ ವಾಕ್ಯಂ ತದೈಕ್ಯಂ ವಕ್ತಿ ಹ್ಯಬಾಧಿತಂ ।
ವಾಕ್ಯೇನೈವಾಕ್ಷಬಾಧೇ ಚ ಕಥಂ ನಾನ್ಯೋನ್ಯಸಂಶ್ರಯಃ ॥ ೧೩೪೬ ॥

**ಅರ್ಥ–** ಪ್ರತ್ಯಕ್ಷಬಾಧೇ= ಪ್ರತ್ಯಕ್ಷವು ಬಾಧಿತವಾದರೆ, ತದ್ ವಾಕ್ಯಂ= ಆ ಐಕ್ಯಶ್ರುತಿಯು, ಅಬಾಧಿತಂ= ಅಬಾಧಿತವಾದ, ಐಕ್ಯಂ= ಐಕ್ಯವನ್ನು, ವಕ್ತಿ ಹಿ= ಹೇಳುತ್ತದೆಯಷ್ಟೆ? ವಾಕ್ಯೇನೈವ= ಐಕ್ಯವಾಕ್ಯದಿಂದಲೇ, ಅಕ್ಷಬಾಧೇ ಚ= ಪ್ರತ್ಯಕ್ಷಬಾಧವನ್ನು ಅಂಗೀಕರಿಸಿದರೆ,

ಅನ್ಯೋನ್ಯಸಂಶ್ರಯಃ= ಅನ್ಯೋನ್ಯಾಶ್ರಯದೋಷವು, ಕಥಂ ನ= ಹೇಗೆ ಉಂಟಾಗುವುದಿಲ್ಲ?

**ಅನುವಾದ–** ಪ್ರತ್ಯಕ್ಷವು ಬಾಧಿತವಾದರೆ ವಾಕ್ಯವು ಅಬಾಧಿತವಾದ ಐಕ್ಯವನ್ನು ಹೇಳುತ್ತದೆ. ವಾಕ್ಯವು ಐಕ್ಯವನ್ನು ಹೇಳಿದರೆ ಅದರಿಂದ ಪ್ರತ್ಯಕ್ಷವು ಬಾಧಿತವಾಗುತ್ತದೆ ಎಂದು ಹೇಳಿದರೆ ಹೇಗೆ ಅನ್ಯೋನ್ಯಾಶ್ರಯ ದೋಷವು ಬರದೇ ಇರಲು ಸಾಧ್ಯ?

**ಭಾವವಿಲಾಸಿನೀ–** ಐಕ್ಯಶ್ರುತೇಃ ಪ್ರತ್ಯಕ್ಷಬಾಧಕತ್ವೇ ಪೂರ್ವವದನ್ಯೋನ್ಯಾಶ್ರಯಂ ಲಕ್ಷಣಾವೃತ್ತೇ-ರುಚ್ಛೇದಂ ಚ ದೋಷಮಾಹ – **ಕಿಂಚೇತಿ** ॥ ೧೩೫೫-೧೩೫೭ ॥

**ವಾಕ್ಯೇನೈವ ಯದಾಽಕ್ಷಸ್ಯ ದೃಢಸ್ಯಾಪಿ ಪ್ರಬಾಧನಮ್ ।**
**ಗಂಗಾಯಾಂ ಘೋಷ ಇತಿ ವಾಕ್ ಕುರ್ಯಾದ್ ಘೋಷವತೀಂ ನದೀಮ್ ।**
**ಸಾಕ್ಷಾದ್ ಬಾಧೇನ ತತ್ತ್ಯಾಗೇ ಗತಮೈಕ್ಯಂ ಭವತ್ಕರಾತ್ ॥ ೧೩೫೭ ॥**

**ಅರ್ಥ–** ಯದಾ= ಒಂದು ಪಕ್ಷ, ವಾಕ್ಯೇನೈವ= ವಾಕ್ಯದಿಂದಲೇ, ದೃಢಸ್ಯಾಪಿ ಅಕ್ಷಸ್ಯ= ಪ್ರಬಲವಾದ ಪ್ರತ್ಯಕ್ಷಕ್ಕೂ, ಪ್ರಬಾಧನಂ= ಬಾಧವು ಉಂಟಾಗುವುದಾದರೆ, ಗಂಗಾಯಾಂ ಘೋಷ ಇತಿ ವಾಕ್= ಗಂಗಾಯಾಂ ಘೋಷಃ ಎಂಬ ವಾಕ್ಯವು, ನದೀಂ= ಪ್ರವಾಹವನ್ನು, ಘೋಷವತೀಂ ಕುರ್ಯಾದ್= ಹಳ್ಳಿಗೆ ಆಶ್ರಯವನ್ನಾಗಿಮಾಡಬೇಕಾಗುತ್ತದೆ. ಸಾಕ್ಷಾದ್ ಬಾಧೇನ= ಪ್ರತ್ಯಕ್ಷಬಾಧದಿಂದ, ತತ್ತ್ಯಾಗೇ= ಪ್ರವಾಹಕ್ಕೆ ಘೋಷಾಧಾರತ್ವವನ್ನು ತ್ಯಾಗಮಾಡಿದರೆ, ಐಕ್ಯಂ= ಐಕ್ಯವು, ಭವತ್ಕರಾತ್= ನಿನ್ನ ಹಸ್ತದಿಂದ, ಗತಂ= ಕಳಚಿಹೋಗುತ್ತದೆ.

**ಅನುವಾದ–** ವಾಕ್ಯವೇ ದೃಢವಾದ ಪ್ರತ್ಯಕ್ಷಕ್ಕೆ ಬಾಧವಾಗುತ್ತದೆ ಎಂದು ಹೇಳಿದರೆ 'ಗಂಗಾಯಾಂ ಘೋಷಃ' ಎಂಬ ವಾಕ್ಯದ ಬಲದಿಂದ ಪ್ರವಾಹಕ್ಕೇ ಘೋಷಾಶ್ರಯತ್ವವು ಸಿದ್ಧವಾದೀತು. ಪ್ರತ್ಯಕ್ಷ ವಿರೋಧವು ಬರುವುದರಿಂದ ಪ್ರವಾಹಕ್ಕೆ ಘೋಷಾಶ್ರಯತ್ವವನ್ನು ಅಂಗೀಕಾರ ಮಾಡುವುದಿಲ್ಲವೆಂದು ಹೇಳಿದರೆ ಐಕ್ಯವು ನಿನ್ನ ಕೈಯಿಂದ ಕಳಚಿಹೋಗುತ್ತದೆ.

**ಭಾವವಿಲಾಸಿನೀ–** ಘೋಷಾನರ್ಹತ್ವಪ್ರತ್ಯಕ್ಷಸ್ಯ ಗಂಗಾಯಾಂ ಘೋಷ ಇತ್ಯಾಪ್ತವಾಕ್ಯೇನೈವ ಬಾಧಿತುಂ ಶಕ್ಯತ್ವಾತ್ ಐಕ್ಯವಾಕ್ಯಾತ್ ಪ್ರತ್ಯಕ್ಷಬಾಧಿತಮೈಕ್ಯಮಿವ ಗಂಗಾಯಾಂ ಘೋಷ ಇತಿ ವಾಕ್ಯಾತ್ ಪ್ರತ್ಯಕ್ಷಬಾಧಿತಮಪಿ ಘೋಷಾಧಾರತ್ವಂ ಪ್ರವಾಹಸ್ಯೈವ ಸಿದ್ಧ್ಯೇದಿತಿ ವಾಕ್ಯೇನೈವ ಪ್ರತ್ಯಕ್ಷಬಾಧನೇ ಲಕ್ಷಣಾವೃತ್ತೇರುಚ್ಛೇದ ಏವ ಸ್ಯಾದಿತಿ ಭಾವಃ ॥ ೧೩೫೭ ॥

**ವಿವರಣೆ–** ಪ್ರವಾಹದಲ್ಲಿ ಘೋಷಾಧಾರತ್ವಾಭಾವ ಪ್ರತ್ಯಕ್ಷವಿದೆ. 'ಗಂಗಾಯಾಂ ಘೋಷಃ' ಎಂಬ ವಾಕ್ಯದಿಂದಲೇ ಆ ಪ್ರತ್ಯಕ್ಷವು ಬಾಧಿತವಾಗುವುದಾದರೆ ಪ್ರವಾಹಕ್ಕೆ

ಘೋಷಾಧಾರತ್ವವೇ ಸಿದ್ಧವಾಗಬೇಕು. ಪ್ರತ್ಯಕ್ಷ ಬಾಧಿತವಾದ ಐಕ್ಯವಾಕ್ಯದಿಂದ ಪ್ರತ್ಯಕ್ಷ ವಿರುದ್ಧವಾದ ಐಕ್ಯವು ಸಿದ್ಧವಾಗುವುದಾದರೆ ಪ್ರವಾಹಕ್ಕೆ ಘೋಷಾಧಾರತ್ವವು ಏಕೆ ಸಿದ್ಧವಾಗಬಾರದು? ಆದ್ದರಿಂದ ಗಂಗಾಪದಕ್ಕೆ ತೀರದಲ್ಲಿ ಲಕ್ಷಣಾವೃತ್ತಿಯನ್ನು ಅಂಗೀಕರಿಸಬೇಕಾದ ಅವಶ್ಯಕತೆಯೇ ಇಲ್ಲದಿರುವುದರಿಂದ ಲಕ್ಷಣಾವೃತ್ತಿಯೇ ಉಚ್ಛಿನ್ನವಾಗುತ್ತದೆ.

ತ್ಯಜ ವಾ ಲಕ್ಷಣಾವೃತ್ತಿಂ ಭಜ ವಾ ತತ್ತ್ವವಿನ್ಮತಂ ।
ವ್ರಜ ವಾಽನ್ಯತ್ರ ವಾಣೀಮುತ್ಸೃಜ ವಾ ಬುಧಸಂಸದಿ ॥ ೧೩೫೮ ॥

**ಅರ್ಥ–** ಲಕ್ಷಣಾವೃತ್ತಿಂ= ಲಕ್ಷಣಾವೃತ್ತಿಯನ್ನು, ತ್ಯಜ ವಾ= ತ್ಯಜಿಸು, ವಾ= ಅಥವಾ, ತತ್ತ್ವವಿನ್ಮತಂ= ತತ್ತ್ವವಾದಿಗಳ ಮತವನ್ನು, ಭಜ= ಅನುಸರಿಸು, ವಾ= ಅಥವಾ, ಅನ್ಯತ್ರ= ಬೇರೆ ಕಡೆಗೆ, ವ್ರಜ= ಹೊರಟುಹೋಗು, ವಾ= ಅಥವಾ, ಬುಧಸಂಸದಿ= ವಿದ್ವಾಂಸರ ಸಭೆಯಲ್ಲಿ, ವಾಣೀಮುತ್ಸೃಜ= ಮಾತನಾಡುವುದನ್ನು ನಿಲ್ಲಿಸು.

**ಅನುವಾದ–** ಆದ್ದರಿಂದ ಇಲ್ಲವೇ ಲಕ್ಷಣಾವೃತ್ತಿಯನ್ನು ತ್ಯಜಿಸು ಅಥವಾ ತತ್ತ್ವವಾದಿಗಳ ಮತವನ್ನು ಅವಲಂಬಿಸು ಅಥವಾ ವಿದ್ವತ್ ಸಮೂಹದಲ್ಲಿ ಮಾತನಾಡುವುದನ್ನು ಬಿಟ್ಟು ಬೇರೆ ಕಡೆಗೆ ಹೊರಟು ಹೋಗು.

**ಭಾವವಿಲಾಸಿನೀ–** ಏತದೇವ ಸಂಗೃಹ್ಯಾಹ – **ತ್ಯಜ ವೇತಿ ॥** ವಾಕ್ಯಸ್ಯೈವ ಪ್ರತ್ಯಕ್ಷಬಾಧಕತ್ವೇ ಉಕ್ತರೀತ್ಯಾ ವಾಕ್ಯಬಲಾದೇವ ಘೋಷಾಧಾರತ್ವಸ್ಯೈವ ಪ್ರವಾಹೇ ವಕ್ತುಂ ಶಕ್ಯತ್ವೇನ ಲಕ್ಷಣಾವೃತ್ತಿಂ ತ್ಯಜ ವಾ ಲಕ್ಷಣಾವೃತ್ತಿರಕ್ಷಣಾಯ ಪ್ರತ್ಯಕ್ಷಸ್ಯೈವ ವಾಕ್ಯಬಾಧಕತ್ವಮಂಗೀಕೃತ್ಯ ಬಾಧಿತಮುಖ್ಯಾರ್ಥತ್ಯಾಗೇನ ವಾಕ್ಯಸ್ಯಾರ್ಥಾಂತರೇ ಪ್ರಾಪಣೇ ತದ್ವದೈಕ್ಯವಾಕ್ಯಸ್ಯಾಪಿ ಪ್ರತ್ಯಕ್ಷಬಾಧಿತಂ ಮುಖ್ಯೈಕ್ಯಂ ಪರಿತ್ಯಜ್ಯಾಮುಖ್ಯಲೋಕಸಿದ್ಧಸಾದೃಶ್ಯೈಕ್ಯರೂಪಾರ್ಥಾಂತರೇಽವಶ್ಯಂ ಪ್ರಾಪಣೀಯತ್ವಾತ್ ತತ್ತ್ವವಿನ್ಮತಂ ಭಜ ವಾ । ಏಕತ್ರ ಪ್ರತ್ಯಕ್ಷಬಾಧೇನ ವಾಕ್ಯಮರ್ಥಾಂತರೇನೀತ್ವಾ ನ್ಯಾಯಸಾಮ್ಯೇಽಪಿ ಪುನರೇಕತ್ರ ನ ನಯಸಿಚೇತ್ ಅರ್ಧಜರತೀಯಕಾರಿಣಂ ತ್ವಾಂ ಪಂಡಿತಾ ಹಸೇಯುಃ । ಅತೋಽನ್ಯತ್ರ ದೇಶಾಂತರೇ ವ್ರಜ ವಾ । ದೇಶಾಂತರಗಮನೇ ಹಾಸ್ಯಾರ್ಧ-ಜರತೀಯಕಥನೇ ಚಾಲಸಶ್ಚೇತ್ ಬುಧಸಂಸದಿ ವಾಣೀಮುತ್ ಸೃಜ ವೇತಿ ಯೋಜನಾ । ಅನುಪ್ರಾಸಃಶಬ್ದಾಲಂಕಾರಃ । ಉಭಯತಃ ಪಾಶಾರಜ್ಜುರರ್ಥಾಲಂಕಾರಃ । ವಕ್ತುರಾಪ್ತತ್ವನಿಶ್ಚಯೇ ಸತಿ ಹಿ ತದ್ವಾಕ್ಯೇಽಪ್ರಾಮಾಣ್ಯಾಸಂಭವೇನ ಮುಖ್ಯಾರ್ಥಬಾಧೇಽಬಾಧಿತಮರ್ಥಾಂತರಂ ವದಂತಿ । ಅನ್ಯಥಾ ಆಕಾಶೇ ಘೋಷ ಇತಿವತ್ ಗಂಗಾಯಾಂ ಘೋಷ ಇತಿ ವಾಕ್ಯಮ-ಪ್ಯನ್ಮತ್ತಪ್ರಲಪಿತಮೇವೇತಿ ಬ್ರೂಯುಃ । ಏವಂಚ ನಿಶ್ಚಿತಪ್ರಮಾಣ್ಯತಯಾ ಪ್ರಬಲಸ್ಯೈವ ವಾಕ್ಯಸ್ಯ ಬಾಧಕಂ ಪ್ರತ್ಯಕ್ಷಂ ಶ್ರುತೇರಪಿ ಕಥಂ ನ ಬಾಧಕಮಿತಿ ಭಾವಃ । ಯಜಮಾನ-ಪ್ರಸ್ತರಾದಿಭೇದವಿಷಯಪ್ರತ್ಯಕ್ಷೇಣೈವ ತದಭೇದಶ್ರುತೀನಾಂ ಬಹ್ವೀನಾಮಪಿ ಬಾಧದರ್ಶನಾತ್ ಶ್ರುತಿತ್ವೇನಾಪಿ ನ ಕಶ್ಚಿದ್ವಿಶೇಷಃ ॥ ೧೩೫೮ ॥

**ವಿವರಣೆ–** ಹಿಂದೆ ಹೇಳಿದ ದೋಷಗಳನ್ನೇ ಸಂಗ್ರಹ ಮಾಡಿ ಈ ಶ್ಲೋಕದಲ್ಲಿ ಹೇಳುತ್ತಾರೆ. ವಾಕ್ಯವೇ ಪ್ರತ್ಯಕ್ಷ ಬಾಧಕವಾಗುವುದಾದರೆ ಹಿಂದೆ ಹೇಳಿದ ರೀತಿಯಲ್ಲಿ ಪ್ರವಾಹಕ್ಕೇ ಘೋಷಾಧಾರತ್ವವನ್ನು ಹೇಳಲು ಸಾಧ್ಯವಾಗುವುದರಿಂದ ಲಕ್ಷಣಾವೃತ್ತಿಯನ್ನು ತ್ಯಜಿಸು. ಇದು ಒಂದು ಕಲ್ಪನೆ. ಲಕ್ಷಣಾವೃತ್ತಿಯನ್ನು ರಕ್ಷಣೆ ಮಾಡುವುದಕ್ಕೋಸ್ಕರವಾಗಿ ಪ್ರತ್ಯಕ್ಷವೇ ವಾಕ್ಯಕ್ಕೆ ಬಾಧಕವೆಂದು ಅಂಗೀಕರಿಸಿ ವಾಕ್ಯಕ್ಕೆ ಬಾಧಿತವಾದ ಮುಖ್ಯಾರ್ಥವನ್ನು ಪರಿತ್ಯಜಿಸಿ ಅರ್ಥಾಂತರವನ್ನು ಹೇಳುವುದಾದರೆ ಅದರಂತೆ ಐಕ್ಯವಾಕ್ಯಕ್ಕೂ ಸಹ ಪ್ರತ್ಯಕ್ಷಬಾಧಿತವಾದ ಮುಖ್ಯಾಭೇದವನ್ನು ಪರಿತ್ಯಜಿಸಿ ಲೋಕಸಿದ್ಧವಾದ ಅಮುಖ್ಯವಾದ ಸಾದೃಶ್ಯಾಭೇದರೂಪವಾದ ಅರ್ಥಾಂತರವನ್ನು ಮಾಡಬೇಕಾಗುವುದರಿಂದ ಇದು ತತ್ತ್ವವಾದಿಗಳ ಮತವಾದ್ದರಿಂದ ತತ್ತ್ವವಾದಿಗಳ ಮತವನ್ನಾದರೂ ಅನುಸರಿಸು. ಗಂಗಾಯಾಂ ಘೋಷಃ ಎಂಬಲ್ಲಿ ಪ್ರತ್ಯಕ್ಷಬಾಧವಿರುವ ಕಾರಣ ವಾಕ್ಯಕ್ಕೆ ಅರ್ಥಾಂತರವನ್ನು ಮಾಡಿ ಐಕ್ಯವಾಕ್ಯಕ್ಕೂ ಸಹ ಅದೇ ನ್ಯಾಯವಿದ್ದರೂ ಅನ್ಯಾರ್ಥದಲ್ಲಿ ನಯನ ಮಾಡದಿದ್ದರೆ ಅರ್ಧಜರತೀಯ ನ್ಯಾಯವನ್ನು ಅನುಸರಿಸುವ ನಿನ್ನನ್ನು ಪಂಡಿತರು ಪರಿಹಾಸ ಮಾಡುತ್ತಾರೆ. ಆದ್ದರಿಂದ ದೇಶಾಂತರಕ್ಕೆ ಹೊರಟು ಹೋಗು. ಇದು ಮೂರನೆಯ ಕಲ್ಪನೆ. ದೇಶಾಂತರಕ್ಕೆ ಹೋಗಲು ಇಷ್ಟವಿಲ್ಲದೆ ಅಥವಾ ಅರ್ಧಜರತೀಯ ನ್ಯಾಯವನ್ನು ಅನುಸರಿಸಲು ಇಷ್ಟವಿಲ್ಲದೇ ಇದ್ದರೆ ವಿದ್ವದ್ಸಭೆಯಲ್ಲಿ ಮಾತನಾಡುವುದನ್ನು ಬಿಟ್ಟು ಮೌನವಾಗಿರು ಎಂದು ಅಭಿಪ್ರಾಯ. ಈ ಶ್ಲೋಕದಲ್ಲಿ ತ್ಯಜ, ವ್ರಜ, ಭಜ ಮುಂತಾದ ಅನುಪ್ರಾಸವಿರುವುದರಿಂದ ಅನುಪ್ರಾಸರೂಪವಾದ ಶಬ್ದಾಲಂಕಾರವಿದೆ. ಉಭಯಪಾಶಾರಜ್ಜುವಾಗಿರುವುದರಿಂದ ಅರ್ಥಾಲಂಕಾರವೂ ಇದೆ. ವಕ್ತೃವು ಆಪ್ತನೆಂದು ನಿಶ್ಚಯವಾಗಿದ್ದರೆ ಅವನ ವಾಕ್ಯಕ್ಕೆ ಅಪ್ರಾಮಾಣ್ಯವನ್ನು ಹೇಳಲು ಸಾಧ್ಯವಿಲ್ಲವಾದ್ದರಿಂದ ಆ ವಾಕ್ಯದ ಮುಖ್ಯಾರ್ಥವು ಬಾಧಿತವಾದರೆ ಅಬಾಧಿತವಾದ ಅರ್ಥಾಂತರವನ್ನು ಹೇಳುತ್ತಾರೆ. ಅರ್ಥಾಂತರವನ್ನು ಹೇಳದಿದ್ದರೆ ಆಪ್ತನ ವಾಕ್ಯವೇ ಅಪ್ರಮಾಣವಾಗುತ್ತದೆ. ಆಗ ಆಕಾಶೇ ಘೋಷಃ ಎಂಬ ವಾಕ್ಯಕ್ಕೂ, ಗಂಗಾಯಾಂ ಘೋಷಃ ಎಂಬ ವಾಕ್ಯಕ್ಕೂ ಸಮಾನ ಯೋಗಕ್ಷೇಮತ್ವವುಂಟಾಗಿ ಆಪ್ತವಾಕ್ಯವು ಉನ್ಮತ್ತವಾಕ್ಯಕ್ಕೆ ಸಮವಾಗುತ್ತದೆ. ಹೀಗಾಗಿ ಆಪ್ತವಾಕ್ಯವು ಪ್ರಾಮಾಣ್ಯ ಉಳ್ಳದ್ದಾಗಿ ಪ್ರಬಲವಾಗಿದ್ದರೂ ಪ್ರತ್ಯಕ್ಷವು ಅದನ್ನು ಬಾಧಿಸುವಾಗ ಶ್ರುತಿಯನ್ನು ಪ್ರತ್ಯಕ್ಷವು ಹೇಗೆ ಬಾಧಿಸದೇ ಇರುತ್ತದೆ? ಯಜಮಾನ ಪ್ರಸ್ತರ ಇತ್ಯಾದಿ ವಾಕ್ಯಗಳಲ್ಲಿ ಅನೇಕ ಕಡೆಗಳಲ್ಲಿ ಅಭೇದವೇ ಆಪಾತತಃ ತೋರಿಬಂದರೂ ಪ್ರತ್ಯಕ್ಷ ವಿರೋಧವು ಬರುವುದರಿಂದಲೇ ಆ ಎಲ್ಲ ಸ್ಥಳಗಳಲ್ಲಿಯೂ ಅರ್ಥಾಂತರವನ್ನು ಮಾಡಲಾಗಿದೆ. ಆದ್ದರಿಂದ ಪ್ರತ್ಯಕ್ಷವಿರೋಧವು ಬರದಂತೆ ಶ್ರುತಿಗೆ ಅರ್ಥವನ್ನು ಮಾಡಬೇಕು. ಆದ್ದರಿಂದ ನಮ್ಮ ಪ್ರಕ್ರಿಯೆಯಲ್ಲಿ ಯಾವ ದೋಷವೂ ಇಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

ದೃಢಭೇದಶ್ರುತೇರ್ವೈರಾದ್ ದೃಢಪ್ರತ್ಯಕ್ಷವೈರತಃ ।
ನಾಭೇದಮಾಗಮೋ ವಕ್ತಿ ಜೀವಸ್ಯ ಪರಮಸ್ಯ ಚ ॥ ೧೩೫ ॥

**ಅರ್ಥ–** ದೃಢಭೇದಶ್ರುತೇಃ ವೈರಾದ್= ಪ್ರಬಲವಾದ ಭೇದಶ್ರುತಿಯ ವಿರೋಧವಿರುವುದರಿಂದ, ದೃಢಪ್ರತ್ಯಕ್ಷವೈರತಃ= ಮತ್ತು ಪ್ರಬಲಪ್ರತ್ಯಕ್ಷವಿರೋಧ ವಿರುವುದರಿಂದ, ಆಗಮಃ= ಶ್ರುತಿಯು, ಜೀವಸ್ಯ ಪರಮಸ್ಯ ಚ= ಜೀವನಿಗೆ ಮತ್ತು ಪರಮಾತ್ಮನಿಗೆ, ಅಭೇದಂ= ಅಭೇದವನ್ನು, ನ ವಕ್ತಿ= ಹೇಳುವುದಿಲ್ಲ.

**ಅನುವಾದ–** ಪ್ರಬಲವಾದ ಭೇದ ಶ್ರುತಿಯ ವಿರೋಧವಿರುವುದರಿಂದ ಮತ್ತು ಪ್ರಬಲವಾದ ಪ್ರತ್ಯಕ್ಷದ ವಿರೋಧವಿರುವುದರಿಂದ ಐಕ್ಯವಾಕ್ಯವು ಜೀವಬ್ರಹ್ಮರ ಅಭೇದವನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ಉಕ್ತಮರ್ಥಮುಪಸಂಹರನ್ ಸರ್ವತ್ರ ಪ್ರತ್ಯಕ್ಷೇಣೈವ ಶ್ರೌತಾರ್ಥ-ಬಾಧನೇಽಜ್ಞಪ್ರತ್ಯಕ್ಷೇಣ ಭಗವತಃ ಸ್ವಾತಂತ್ರ್ಯಾದಿಕಮಪಿ ಬಾಧ್ಯಂ ಸ್ಯಾದಿತ್ಯತೋ ವಿವೇಕಂ ಚ ದರ್ಶಯತಿ – **ದೃಢೇತಿ** ॥ ೧೩೨೯ ॥

**ವಿವರಣೆ–** ಇದುವರೆಗೆ ಹೇಳಿದ ಪ್ರಮೇಯವನ್ನು ಉಪಸಂಹಾರ ಮಾಡುತ್ತಾ ಕೇವಲ ಪ್ರತ್ಯಕ್ಷದಿಂದ ಶ್ರುತಿವಾಕ್ಯಕ್ಕೆ ಬಾಧವನ್ನು ಹೇಳುವುದಿಲ್ಲ, ಹಾಗೆ ಹೇಳಿದರೆ ಅಜ್ಞ ಪ್ರತ್ಯಕ್ಷದಿಂದ ಹರಿಯ ಸ್ವಾತಂತ್ರ್ಯಾದಿ ಗುಣಗಳಿಗೂ ಬಾಧವನ್ನು ಹೇಳಬೇಕಾದೀತು ಆದರೆ ಪ್ರಬಲ ಪ್ರತ್ಯಕ್ಷದಿಂದ ಶ್ರುತಿಗೆ ಬಾಧವು ಇದ್ದೇ ಇದೆ. ಹರಿಯ ಅಸ್ವಾತಂತ್ರ್ಯಾದಿ ವಿಷಯದಲ್ಲಿ ಭ್ರಾಂತಿರೂಪವಾದ ಅಜ್ಞಪ್ರತ್ಯಕ್ಷವು ಇರಬಹುದೇ ಹೊರತು ಪ್ರಬಲ ಪ್ರತ್ಯಕ್ಷವು ಇಲ್ಲ. ಪ್ರಕೃತದಲ್ಲಿ ಭೇದವನ್ನು ವಿಷಯೀಕರಿಸುವ ನಾನು ಸರ್ವಜ್ಞನಲ್ಲ ಇತ್ಯಾದಿ ಸಾಕ್ಷಿಪ್ರತ್ಯಕ್ಷವು ಅತ್ಯಂತ ಪ್ರಬಲವಾಗಿದೆ. ಹಾಗೆಯೇ ಉಪಕ್ರಮಾದಿಯುಕ್ತವಾದ ಭೇದಶ್ರುತಿಯೂ ಸಹ ಪ್ರಬಲವಾಗಿದೆ. ಅವೆರಡರ ವಿರೋಧವಿರುವುದರಿಂದ ಅಭೇದಾಗಮವು ಎಂದೂ ಜೀವಬ್ರಹ್ಮೈಕ್ಯವನ್ನು ಹೇಳಲು ಸಾಧ್ಯವಿಲ್ಲ ಎಂದು ಉಪಸಂಹಾರ ಮಾಡುತ್ತಾರೆ.

**ಅತಃ ಪ್ರತ್ಯಕ್ಷಯೋಗ್ಯಾರ್ಥೇ ಪ್ರತ್ಯಕ್ಷಂ ಬಲವತ್ ಸದಾ ।**
**ಅತೀಂದ್ರಿಯಾರ್ಥಮಾತ್ರೇ ತು ಪ್ರಬಲಾ ವಾಗಿತಿ ಸ್ಥಿತಂ ॥ ೧೩೬೦ ॥**

**ಅರ್ಥ–** ಅತಃ= ಆದ್ದರಿಂದ, ಪ್ರತ್ಯಕ್ಷಯೋಗ್ಯಾರ್ಥೇ= ಪ್ರತ್ಯಕ್ಷಕ್ಕೆ ಯೋಗ್ಯವಾದ ವಿಷಯದಲ್ಲಿ, ಸದಾ= ಯಾವಾಗಲೂ, ಪ್ರತ್ಯಕ್ಷಂ= ಪ್ರತ್ಯಕ್ಷವೇ, ಬಲವತ್= ಪ್ರಬಲವಾದುದು, ಅತೀಂದ್ರಿಯಾರ್ಥಮಾತ್ರೇ ತು= ಕೇವಲ ಅತೀಂದ್ರಿಯವಿಷಯದಲ್ಲಿ ಮಾತ್ರ, ವಾಕ್= ವಾಕ್ಯವು, ಪ್ರಬಲಾ= ಪ್ರಬಲವಾದುದು, ಇತಿ= ಎಂದು, ಸ್ಥಿತಂ= ಸಿದ್ಧವಾಯಿತು.

**ಅನುವಾದ–** ಆದ್ದರಿಂದ ಪ್ರತ್ಯಕ್ಷಕ್ಕೆ ಯೋಗ್ಯವಾದ ಅರ್ಥದಲ್ಲಿ ಯಾವಾಗಲೂ ಪ್ರತ್ಯಕ್ಷವೇ ಪ್ರಬಲ. ಆಗಮವು ಅತೀಂದ್ರಿಯಾರ್ಥದಲ್ಲಿ ಮಾತ್ರ ಪ್ರಬಲ ಎಂಬುದು ವಸ್ತುಸ್ಥಿತಿ.

**ಭಾವವಿಲಾಸಿನೀ–** ಅತಃ ಗಂಗಾಯಾಂ ಘೋಷ ಇತ್ಯಾದೌ ಲೌಕಿಕೇಽರ್ಥೇ ಪ್ರತ್ಯಕ್ಷಸ್ಯೈವ ಪ್ರಾಬಲ್ಯದರ್ಶನಾತ್ । ಸ್ತಂಭೇ ಪಿಶಾಚತಾದಾತ್ಮ್ಯಾಭಾವವತ್ ಸ್ವಸ್ಮಿನ್ನೀಶ್ವರತಾದಾತ್ಮ್ಯಾಭಾವಸ್ಯ ಚ ಪ್ರತ್ಯಕ್ಷಯೋಗ್ಯತ್ವೇನ ಯೋಗ್ಯೇ ಚ ಸ್ವಾರ್ಥೇ ಆಗಮಾದಪಿ ಪ್ರತ್ಯಕ್ಷಸ್ಯೈವ ಪ್ರಬಲತ್ವಮ್ । ಲೋಕಮೋಹನಾಯಾನ್ಯಾನನುಸರತಿ ಗುರುಮುಖಾತ್ ಪಠತಿ ಚ ಕೃಷ್ಣೇ ಮಾಯಯಾ ನಿಗೂಹಿತಸ್ವಾತಂತ್ರ್ಯ ಸಾರ್ವಜ್ಞಾದೇರಸ್ಮದಾದಿಪ್ರತ್ಯಕ್ಷಾಯೋಗ್ಯತ್ವಾತ್ ನ ತತ್ರ ಪ್ರತ್ಯಕ್ಷಸ್ಯ ಬಾಧಕತೇತಿ ಭಾವಃ ॥ ೧೩೬೦ ॥

**ವಿವರಣೆ–** ಗಂಗಾಯಾಂ ಘೋಷಃ ಇತ್ಯಾದಿ ವಾಕ್ಯಸ್ಥಳಗಳಲ್ಲಿ ಪ್ರತ್ಯಕ್ಷಕ್ಕೆ ಪ್ರಾಬಲ್ಯವು ದೃಷ್ಟವಾಗಿದೆ. ಸ್ಥಂಭದಲ್ಲಿ ಪಿಶಾಚತಾದಾತ್ಮ್ಯಾಭಾವವು ಯೋಗ್ಯವಾದಂತೆ ತನ್ನಲ್ಲಿ (ಜೀವನಲ್ಲಿ) ಈಶ್ವರ ತಾದಾತ್ಮ್ಯಾಭಾವವು ಯೋಗ್ಯವೇ ಆಗಿದೆ. ತಾದಾತ್ಮ್ಯಾಭಾವವೆಂದರೆ ಭೇದವೇ. ಆದ್ದರಿಂದ ಈ ಭೇದವೇ ಈಶ್ವರಭೇದ. ಇದು ಸಾಕ್ಷಿ ಪ್ರತ್ಯಕ್ಷ ವಿಷಯವಾಗಿದೆ. ಸಾಕ್ಷಿಯು ಬಲವತ್ತರವಾದುದು. ಆದ್ದರಿಂದ ಸಾಕ್ಷಿ ಪ್ರತ್ಯಕ್ಷಕ್ಕೆ ಅನುಗುಣವಾಗಿಯೇ ವಸ್ತು ಸಿದ್ಧವಾಗಬೇಕು. ಕೃಷ್ಣಾವತಾರದ ಕಾಲದಲ್ಲಿ ಲೋಕಮೋಹನೆಗೋಸ್ಕರವಾಗಿ ಕೃಷ್ಣದೇವರು ಇನ್ನೊಬ್ಬರ ಆಜ್ಞಾಪರಿಪಾಲನೆ, ಗುರು ಮುಖದಿಂದ ಅಧ್ಯಯನ ಮೊದಲಾದವುಗಳನ್ನು ಮಾಡಿದರೂ ಅದರಿಂದ ಸ್ವಾತಂತ್ರ್ಯಾಭಾವವನ್ನಾಗಲೀ, ಸಾರ್ವಜ್ಞ್ಯಾಭಾವವನ್ನಾಗಲೀ ಸಾಧಿಸಲು ಸಾಧ್ಯವಿಲ್ಲ. ಏಕೆಂದರೆ ಸ್ವಾತಂತ್ರ್ಯ, ಸಾರ್ವಜ್ಞಗಳು ನಮ್ಮ ಪ್ರತ್ಯಕ್ಷಕ್ಕೆ ಯೋಗ್ಯವಾದ ವಿಷಯವಲ್ಲ. ಆದ್ದರಿಂದ ಅಲ್ಲಿ ಅಸ್ವಾತಂತ್ರ್ಯವನ್ನು ಅಸಾರ್ವಜ್ಞವನ್ನು ವಿಷಯೀಕರಿಸುವ ಅಜ್ಞ ಪ್ರತ್ಯಕ್ಷಗಳೇ ಆಗಮದಿಂದ ಬಾಧಿತವಾಗುತ್ತವೆ.

**ಅಕ್ಷಸಿದ್ಧಾನುವಾದೇಽಪಿ ಕಾ ಹಾನಿರಿತಿ ಚಿಂತ್ಯತೇ ।**
**ಯಾಥಾರ್ಥ್ಯಮೇವ ಮಾನತ್ವಂ ತಸ್ಯ ಹಾನಿರ್ನ ಕಾಚನ ।**
**ನ ಚೇತ್ ಸ್ಮೃತಿರಮಾನಂ ಸ್ಯಾತ್ ಸ್ಮೃತಿಕರ್ತ್ರ್ಯವ್ಯಪೇಕ್ಷಯಾ ॥ ೧೩೬೧ ॥**

**ಅರ್ಥ–** ಅಕ್ಷಸಿದ್ಧಾನುವಾದೇಽಪಿ= ಶ್ರುತಿಯು ಪ್ರತ್ಯಕ್ಷಸಿದ್ಧವಾದುದನ್ನು ಅನುವಾದ ಮಾಡಿದರೂ, ಕಾ ಹಾನಿರಿತಿ= ಏನು ದೋಷವೆಂದು, ಚಿಂತ್ಯತೇ= ವಿಚಾರಮಾಡಲ್ಪಡುತ್ತದೆ, ಮಾನತ್ವಂ= ಪ್ರಾಮಾಣ್ಯವೆಂದರೆ, ಯಾಥಾರ್ಥ್ಯಮೇವ= ಯಥಾರ್ಥತ್ವರೂಪವಾದುದೆ, ತಸ್ಯ= ಆ ಪ್ರಾಮಾಣ್ಯಕ್ಕೆ, ಕಾಚನ ಹಾನಿಃ= ಯಾವ ಹಾನಿಯು, ನ= ಇಲ್ಲ, ನ ಚೇತ್= ಇಲ್ಲದಿದ್ದರೆ, ಸ್ಮೃತಿಕರ್ತ್ರ್ಯವ್ಯಪೇಕ್ಷಯಾ= ಸ್ಮೃತಿಕಾರಣದೃಷ್ಟಿಯಲ್ಲಿ, ಸ್ಮೃತಿಃ= ಅವನು ರಚಿಸಿದ ಸ್ಮೃತಿಯು, ಅಮಾನಂ ಸ್ಯಾತ್= ಅಪ್ರಮಾಣವಾಗಬೇಕಾದೀತು.

**ಅನುವಾದ–** ಇನ್ನು ಭೇದ ಶ್ರುತಿಯು ಪ್ರತ್ಯಕ್ಷಸಿದ್ಧವಾದ ಭೇದವನ್ನು ಅನುವಾದ ಮಾಡಿದರೂ ಏನು ದೋಷವು ಬರುತ್ತದೆ ಎಂದು ವಿಚಾರ ಮಾಡೋಣ. ನಮಗೆ

**ಯಾಥಾರ್ಥ್ಯವೇ ಪ್ರಾಮಾಣ್ಯ. ಅನುವಾದ ಮಾಡಿದರೆ ಯಾಥಾರ್ಥ್ಯಕ್ಕೆ ಹಾನಿಯಿಲ್ಲ. ಅನುವಾದ ಮಾಡುವುದರಿಂದ ಅಪ್ರಾಮಾಣ್ಯವು ಬರುವುದಾದರೆ ಮನ್ವಾದಿ ಸ್ಮೃತಿಗಳು ಮನ್ವಾದಿಗಳ ದೃಷ್ಟಿಯಲ್ಲಿ ಅಪ್ರಮಾಣವಾಗಬೇಕಾಗುತ್ತದೆ.**

**ಭಾವವಿಲಾಸಿನೀ– ಪ್ರಕಾರಾಂತರೇಣಾಪಿ ಪ್ರತ್ಯಕ್ಷಾನುವಾದತ್ವಪಕ್ಷಂ ದೂಷಯತಿ – ಅಕ್ಷಸಿದ್ಧೇತಿ ॥ ನಚೇತ್ ಅನುವಾದೇऽಪಿ ಯಾಥಾರ್ಥ್ಯಸ್ಯ ಹಾನಿಶ್ಚೇತ್ । ಸ್ಮೃತಿಃ ಮನ್ವಾದಿಸ್ಮೃತಿಃ । ಸ್ಮೃತಿಕರ್ತೄಣಾಂ ಮನ್ವಾದೀನಾಂ ವ್ಯಪೇಕ್ಷಯಾ । ಸ್ವಸಾಕ್ಷಿಣಾರ್ಥಮುಪಲಭ್ಯ ಹಿ ವಾಕ್ಯಂ ರಚಯಂತಿ । ಅತಸ್ತಾಸಾಂ ಪ್ರತ್ಯಕ್ಷಸಿದ್ಧಾನುವಾದರೂಪತ್ವಾತ್ ಅಪ್ರಾಮಾಣ್ಯಂ ಸ್ಯಾದಿತಿ ಭಾವಃ ॥ ೧೩೬೧ ॥**

**ವಿವರಣೆ–** ಭೇದಶ್ರುತಿಗಳು ತಮ್ಮ ಸಾಮರ್ಥ್ಯದಿಂದಲೇ ಭೇದವನ್ನು ಹೇಳುತ್ತವೆ. ಪ್ರತ್ಯಕ್ಷ ಸಿದ್ಧವಾದ ಭೇದವನ್ನು ಅನುವಾದ ಮಾಡುವುದಿಲ್ಲ. ಏಕೆಂದರೆ ಅವುಗಳಿಗೆ ಪ್ರತ್ಯಕ್ಷದ ಅಪೇಕ್ಷೆಯಿಲ್ಲ ಎಂದು ಹಿಂದೆ ತಿಳಿಸಿದ್ದಾರೆ. ಈಗ ಭೇದಶ್ರುತಿಗಳು ಪ್ರತ್ಯಕ್ಷ ಸಿದ್ಧವಾದ ಭೇದವನ್ನೇ ಅನುವಾದ ಮಾಡುತ್ತವೆಂದು ಅಂಗೀಕರಿಸೋಣ. ಆದರೂ ಯಾವ ದೋಷವೂ ಇಲ್ಲ ಎಂದು ಹೇಳುತ್ತಾರೆ. ಅನುವಾದ ಮಾಡಿದರೆ ದೋಷವನ್ನು ಹೇಳುವುದಾದರೆ ಅಪ್ರಾಮಾಣ್ಯರೂಪವಾದ ದೋಷವನ್ನು ಹೇಳಬೇಕು. ಆದರೆ ಅನುವಾದ ಮಾಡಿದರೆ ಅಪ್ರಾಮಾಣ್ಯವು ಬರುವುದಿಲ್ಲ. ಪ್ರಾಮಾಣ್ಯವು ಯಥಾವಸ್ಥಿತ ವಿಷಯಕಾರಿತ್ವರೂಪವಾದುದರಿಂದ ಅನುವಾದ ಮಾಡಿದರೂ ಅಂತಹ ಪ್ರಾಮಾಣ್ಯಕ್ಕೆ ಯಾವ ಭಂಗವೂ ಇಲ್ಲ. ಅನುವಾದ ಮಾಡಿದ ಮಾತ್ರದಿಂದಲೇ ಅಪ್ರಮಾಣವಾಗುವುದಾದರೆ ಮನು ಮೊದಲಾದವರು ತಮ್ಮ ಪ್ರತ್ಯಕ್ಷದಿಂದ ಧರ್ಮಾದಿಗಳನ್ನು ವಿಷಯೀಕರಿಸಿಕೊಂಡು ಅದನ್ನು ಮನುಸ್ಮೃತ್ಯಾದಿವಾಕ್ಯಗಳಲ್ಲಿ ನಿರೂಪಿಸುವಾಗ ಮನುಸ್ಮೃತ್ಯಾದಿ ವಾಕ್ಯಗಳಿಗೆ ಮನ್ವಾದಿಗಳ ದೃಷ್ಟಿಯಲ್ಲಿ ಅಪ್ರಾಮಾಣ್ಯವು ಬರಬೇಕಾಗುತ್ತದೆ.

**ಏಕಸ್ಯಾಮಾನಮನ್ಯಸ್ಯ ಕಥಂ ಮಾನಂ ಭವೇದ್ ವದ ।**
**ಪ್ರಮಾತ್ವಮಪ್ರಮಾತ್ವಂ ಚ ನ ಹ್ಯೈಕತ್ರೈವ ಧರ್ಮಿಣಿ ॥ ೧೩೬೨ ॥**

**ಅರ್ಥ–** ಏಕಸ್ಯ= ಒಬ್ಬನಿಗೆ, ಅಮಾನಂ= ಅಪ್ರಮಾಣವಾದುದು, ಅನ್ಯಸ್ಯ= ಇನ್ನೊಬ್ಬನಿಗೆ, ಕಥಂ= ಹೇಗೆ, ಮಾನಂ ಭವೇತ್= ಪ್ರಮಾಣವಾಗುತ್ತದೆ ಎಂದು, ವದ= ಹೇಳು, ಏಕತ್ರೈವ ಧರ್ಮಿಣಿ= ಒಂದೇ ಧರ್ಮಿಯಲ್ಲಿ, ಪ್ರಮಾತ್ವಮಪ್ರಮಾತ್ವಂ ಚ= ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯಗಳು, ನಹಿ= ಇರುವುದಿಲ್ಲವಷ್ಟೆ?

**ಅನುವಾದ–** ಒಬ್ಬನಿಗೆ ಒಂದು ವಾಕ್ಯವು ಅಪ್ರಮಾಣವಾಗುವುದಾದರೆ ಇನ್ನೊಬ್ಬನಿಗೆ ಅದು ಹೇಗೆ ಪ್ರಮಾಣವಾಗುತ್ತದೆ ಎಂದು ಹೇಳು. ಪ್ರಮಾತ್ವ ಮತ್ತು ಅಪ್ರಮಾತ್ವ ಒಂದೇ ಧರ್ಮಿಯಲ್ಲಿ ಬರುವುದಿಲ್ಲವಷ್ಟೇ?

**ಭಾವವಿಲಾಸಿನೀ–** **ನನು ಸ್ಮೃತಿಕರ್ತ್ರ್ಯಣಾಮಪ್ರಮಾಣಮಪಿ ಅನ್ಯೇಷಾಂ ಪ್ರಮಾಣಂ ಭವಿಷ್ಯತೀತ್ಯತ ಆಹ – ಏಕಸ್ಯೇತಿ ॥ ಏಕಸ್ಯ ಪ್ರತ್ಯಕ್ಷೇಣ ಭೇದಸಿದ್ಧಿಮತಃ ಪುರುಷಸ್ಯ ॥ ೧೩.೬.೨ ॥**

**ವಿವರಣೆ–** ಮನ್ವಾದಿ ಸ್ಮೃತಿಗಳು ಮನು ಮೊದಲಾದವರ ದೃಷ್ಟಿಯಲ್ಲಿ ಅನುವಾದಕ ವಾದ್ದರಿಂದ ಅಪ್ರಮಾಣವಾದರೂ ಉಳಿದವರ ದೃಷ್ಟಿಯಲ್ಲಿ ಅನುವಾದಕವಲ್ಲವಾದ್ದರಿಂದ ಅಪ್ರಮಾಣವಾಗುವುದಿಲ್ಲ ಎಂದು ಹೇಳುವುದಾದರೆ ಒಂದೇ ವಾಕ್ಯದಲ್ಲಿ ಪ್ರಾಮಾಣ್ಯ ಮತ್ತು ಅಪ್ರಾಮಾಣ್ಯ ಒಂದೇ ಕಾಲದಲ್ಲಿ ಬರಬೇಕಾಗುತ್ತದೆ. ಇದು ವಿರುದ್ಧವಾದುದು. ಆದ್ದರಿಂದ ಹಾಗೆ ಅಂಗೀಕಾರ ಮಾಡಲು ಬರುವುದಿಲ್ಲ ಎಂದು ನಮ್ಮ ಉತ್ತರ.

**ಅನಪೇಕ್ಷಿತಮೇಕಸ್ಯ ಪರಂ ಸ್ಯಾನ್ನತ್ವಮಾನತಾ ।**
**ಪರಬೋಧನಕಾಲೇ ತು ತಸ್ಯಾಪಿ ತದಪೇಕ್ಷಿತಂ ॥ ೧೩.೬.೩ ॥**

**ಅರ್ಥ–** ಏಕಸ್ಯ= ಒಬ್ಬನಿಗೆ, ಅನಪೇಕ್ಷಿತಂ ಸ್ಯಾತ್= ಅನಪೇಕ್ಷಿತವಾಗಬಹುದು, ಪರಂ= ಆದರೆ, ಅಮಾನತಾ ಅಪ್ರಾಮಾಣ್ಯವು, ನ ತು ಸ್ಯಾತ್= ಉಂಟಾಗುವುದಿಲ್ಲ, ಪರಬೋಧನಕಾಲೇ ತು= ಇನ್ನೊಬ್ಬನಿಗೆ ಬೋಧಿಸಲು ಹೊರಟಾಗ, ತಸ್ಯಾಪಿ= ಅವನಿಗೂ, ತತ್= ಅದು, ಅಪೇಕ್ಷಿತಂ= ಅಪೇಕ್ಷಿತವಾಗುತ್ತದೆ.

**ಅನುವಾದ–** **ಒಂದು ಪಕ್ಷ ಅದು ಒಬ್ಬನಿಗೆ ಅನಪೇಕ್ಷಿತವಾಗಬಹುದು ಹೊರತಾಗಿ ಅಪ್ರಮಾಣವಾಗುವುದಿಲ್ಲ. ಪರಬೋಧವನ್ನು ಮಾಡಲು ಹೊರಟಾಗ ಅವನಿಗೂ ಅದು ಅಪೇಕ್ಷಿತವೇ ಆಗುತ್ತದೆ.**

**ಭಾವವಿಲಾಸಿನೀ–** ತಸ್ಯಾಪಿ ಭೇದಸಿದ್ಧಿಮತೋಽಪಿ । ತತ್ ವಚನಮ್ ॥ ೧೩.೬.೩ ॥

**ವಿವರಣೆ–** ಅನುವಾದತ್ವವಿದ್ದರೆ ಅಪ್ರಾಮಾಣ್ಯವು ಬರುವುದಿಲ್ಲವೆಂಬುದನ್ನು ಸಮರ್ಥನೆ ಮಾಡುತ್ತಾರೆ. ಯಾವ ಮನ್ವಾದಿಗಳು ತಮ್ಮ ಪ್ರತ್ಯಕ್ಷದಿಂದ ಅರ್ಥವನ್ನು ವಿಷಯೀಕರಿಸಿ ಅನಂತರ ಸ್ಮೃತಿಯನ್ನು ರಚನೆ ಮಾಡಿದ್ದಾರೆಯೋ ಅಂತಹ ಮನ್ವಾದಿಗಳಿಗೆ ಆ ಸ್ಮೃತಿಯು ಅನಪೇಕ್ಷಿತವಾಗಬಹುದು. ಆದರೆ ಸ್ಮೃತಿಯು ಅಪ್ರಮಾಣ ವಾಗುವುದಿಲ್ಲ. ತನಗೆ ಜ್ಞಾನವು ಸ್ಮೃತಿ ನಿರಪೇಕ್ಷವಾಗಿ ಬಂದಿದ್ದರೂ, ಇನ್ನೊಬ್ಬರಿಗೆ ಬೋಧವನ್ನು ಮಾಡುವಾಗ ಆ ಸ್ಮೃತಿಯು ಅವನಿಗೂ ಅಪೇಕ್ಷಿತವಾಗುತ್ತದೆ. ಯಾರು ಸ್ವತಃ ಅರ್ಥವನ್ನು ಗ್ರಹಿಸಿ ವಾಕ್ಯವನ್ನು ಪ್ರಯೋಗ ಮಾಡುತ್ತಾನೆಯೋ, ಅವನಿಗೆ ತನ್ನ ಜ್ಞಾನಕ್ಕಾಗಿ ವಾಕ್ಯದ ಅಪೇಕ್ಷೆ ಇಲ್ಲದೇ ಇರಬಹುದು. ಆದರೆ ಇನ್ನೊಬ್ಬರಿಗೆ ಆ ಅರ್ಥದ ಜ್ಞಾನವನ್ನು ಉಂಟು ಮಾಡಲು ಅವನಿಗೂ ಆ ವಾಕ್ಯದ ಅಪೇಕ್ಷೆ ಇದ್ದೇ ಇದೆ. ಆಗ ಅದು ತಾನು ಪ್ರತ್ಯಕ್ಷವಾಗಿ ಗ್ರಹಿಸಿದ ಅರ್ಥದ ಅನುವಾದರೂಪವಾದರೂ ಅಪ್ರಮಾಣ ವಾಗುವುದಿಲ್ಲ ಎಂದು ಅಭಿಪ್ರಾಯ.

**ಪ್ರತ್ಯಕ್ಷಸಿದ್ಧಭೇದಸ್ಯಾಪ್ಯಪಲಾಪೇ ಕೃತೋದ್ಯಮಂ ।**
**ಪರಂ ಬೋಧಯಿತುಂ ಭೇದವಾದೀ ವಾಽದೋಽಪ್ಯಪೇಕ್ಷತೇ ।**
**ಅಕ್ಷಸಿದ್ಧಾನುವಾದಾತ್ ತನ್ನ ದೋಷಃ ಕೋಽಪಿ ದೃಶ್ಯತೇ ॥ ೧೩೬೪ ॥**

**ಅರ್ಥ–** ಪ್ರತ್ಯಕ್ಷಸಿದ್ಧಭೇದಸ್ಯಾಪಿ= ಪ್ರತ್ಯಕ್ಷಸಿದ್ಧವಾದ ಭೇದವನ್ನೂ ಕೂಡ, ಅಪಲಾಪೇ= ಅಪಲಾಪವನ್ನು ಮಾಡುವುದರಲ್ಲಿ, ಕೃತೋದ್ಯಮಂ= ಪ್ರಯತ್ನಿಸುತ್ತಿರುವ, ಪರಂ ಬೋಧಯಿತುಂ= ಪರವಾದಿಗೆ ಬೋಧಿಸಲು, ಭೇದವಾದೀ= ಭೇದವಾದಿಯು, ಅದೋಽಪಿ= ಈ ಭೇದಶ್ರುತಿಯನ್ನೂ ಕುಡ, ಅಪೇಕ್ಷತೇ= ಅಪೇಕ್ಷಿಸುತ್ತಾನೆ, ತತ್= ಆದ್ದರಿಂದ, ಅಕ್ಷಸಿದ್ಧಾನುವಾದಾತ್= ಪ್ರತ್ಯಕ್ಷಸಿದ್ಧವಾದುದನ್ನು ಅನುವಾದ ಮಾಡುವುದರಿಂದ, ಕೋಽಪಿ ದೋಷಃ= ಯಾವ ದೋಷವು, ನ ದೃಶ್ಯತೇ= ಕಾಣುವುದಿಲ್ಲ.

**ಅನುವಾದ– ಪ್ರತ್ಯಕ್ಷ ಸಿದ್ಧವಾದ ಭೇದವನ್ನೂ ಅಪಲಾಪ ಮಾಡಲು ಹೊರಟ ಪರವಾದಿಗೆ ಬೋಧಿಸಲು ಹೇಗೆ ಭೇದಸಾಧಕವಾದ ಅನುಮಾನವು ಅಪೇಕ್ಷಿತ-ವಾಗುತ್ತದೋ, ಹಾಗೆ ಭೇದ ಸಾಧಕವಾದ ವಾಕ್ಯವೂ ಅಪೇಕ್ಷಿತವಾಗುತ್ತದೆ. ಆದ್ದರಿಂದ ಪ್ರತ್ಯಕ್ಷ ಸಿದ್ಧವಾದುದನ್ನು ವಾಕ್ಯವು ಅನುವಾದ ಮಾಡಿದರೆ ವಾಕ್ಯಕ್ಕೆ ಯಾವ ದೋಷವೂ ಬರುವುದಿಲ್ಲ.**

**ಭಾವವಿಲಾಸಿನೀ– ಅಪೇಕ್ಷಾಪ್ರಕಾರಮೇವಾಹ – ಪ್ರತ್ಯಕ್ಷೇತಿ ॥ ಪರಂ ಪ್ರತಿವಾದಿನಮ್ । ಅದಃ ಭೇದಬೋಧಕಶ್ರುತಿವಚನಮ್ । ಯಥಾ ಭೇದವಾದೀ ತಂ ಪ್ರತ್ಯನುಮಾನಾದಿನಾ ಕಥಾಯಾಂ ಭೇದಂ ಸಾಧಯತಿ ತಥಾ ವಚನೇನಾಪಿ ಆಗ್ರಹಮೋಚನಾಯ ಭೇದೋ ಬೋಧ್ಯತೇ ಚೇತ್ ಕಥಮನಪೇಕ್ಷ್ಯತ್ವಮಿತಿ ಭಾವಃ । ತತ್ತಸ್ಮಾತ್ ಉಕ್ತವಿಧಯಾ ಸಾರ್ಥಕ್ಯಾತ್ ॥ ೧೩೬೪ ॥**

**ವಿವರಣೆ–** ಭೇದವನ್ನು ಒಪ್ಪದೇ ಇದ್ದವನನ್ನು ಕುರಿತು ಭೇದವಾದಿಯು ಅನುಮಾನವನ್ನು ಪ್ರಯೋಗ ಮಾಡುತ್ತಾನೆ. ಹಾಗೆಯೇ ಭೇದಬೋಧಕ ಶ್ರುತಿವಾಕ್ಯಗಳನ್ನೂ ಪ್ರಯೋಗ ಮಾಡುತ್ತಾನೆ. ಪರಬೋಧನೆಯನ್ನು ಮಾಡಲು ಅನುಮಾನವು ಹೇಗೆ ಅಪೇಕ್ಷಿತವಾಗಿದೆಯೋ, ಹಾಗೆಯೇ ವಾಕ್ಯವೂ ಅಪೇಕ್ಷಿತ-ವಾಗುತ್ತದೆ. ತಾನಾಗಿ ಅರ್ಥವನ್ನು ತಿಳಿದವನಿಗೆ ತನ್ನ ಜ್ಞಾನಕ್ಕಾಗಿ ವಾಕ್ಯದ ಅಪೇಕ್ಷೆ ಇಲ್ಲದಿದ್ದರೂ, ಪರಬೋಧಕ್ಕಾಗಿ ಅವನಿಗೂ ವಾಕ್ಯವು ಅಪೇಕ್ಷಿತವಾಗುತ್ತದೆ. ಆದ್ದರಿಂದ ಅಂತಹ ಪ್ರಯೋಜನವೇ ಇರುವುದರಿಂದ ಅನುವಾದವಾಕ್ಯಕ್ಕೆ ಯಾವ ದೋಷವೂ ಬರುವುದಿಲ್ಲ.

**ದೂಷಣಾರ್ಥಾನುವಾದೇ ತು ದೂಷಣೇನೈವ ದೂಷ್ಯತಾ ।**
**ಅಕ್ಷಸಿದ್ಧ್ಯಾ ನ ದೋಷೋಽಭೂತ್ ಕಿಂ ಶೂನ್ಯತ್ವಂ ನ ದೂಷ್ಯತೇ ॥ ೧೩೬೫ ॥**

**ಅರ್ಥ–** ದೂಷಣಾರ್ಥಾನುವಾದೇ ತು= ದೂಷಣಾರ್ಥವಾದ ಅನುವಾದದಲ್ಲಾದರೆ, ದೂಷಣೇನೈವ= ದೋಷವನ್ನು ಹೇಳಿದ ಕಾರಣದಿಂದಲೇ, ದೂಷ್ಯತಾ= ಅನುವಾದಿಸಲ್ಪಟ್ಟ ಪ್ರಮೇಯಕ್ಕೆ, ದೋಷವು ಉಂಟಾಗುತ್ತದೆ, ಅಕ್ಷಸಿದ್ಧ್ಯಾ= ಪ್ರಮಾಣಸಿದ್ಧವಾದ ಕಾರಣದಿಂದ, ದೋಷಃ ನ ಅಭೂತ್= ದೋಷವು ಉಂಟಾಗಲಿಲ್ಲ, ಶೂನ್ಯತ್ವಂ= ಶೂನ್ಯವು ಪ್ರತ್ಯಕ್ಷಸಿದ್ಧವಲ್ಲದಿದ್ದರೂ, ನ ದೂಷ್ಯತೇ ಕಿಂ= ದೂಷಿಸಲ್ಪಡುವುದಿಲ್ಲವೇನು?

**ಅನುವಾದ–** ದೂಷಣಾರ್ಥವಾಗಿ ಅನುವಾದವನ್ನು ಮಾಡಿದರೆ ದೂಷಣದಿಂದ ಮಾತ್ರ ಅನುವಾದಕ್ಕೆ ದೂಷ್ಯತ್ವವು ಬರುತ್ತದೆ. ಹೊರತಾಗಿ ಪ್ರತ್ಯಕ್ಷ ಸಿದ್ಧವಾಗಿದೆ ಎಂಬ ಕಾರಣದಿಂದ ದೋಷವು ಬರುವುದಿಲ್ಲ. ಏಕೆಂದರೆ ಪ್ರತ್ಯಕ್ಷ-ಅಸಿದ್ಧವಾದ ಶೂನ್ಯವೂ ಸಹ ದೂಷಿಸಲ್ಪಡುತ್ತದೆಯಷ್ಟೇ?

**ಭಾವವಿಲಾಸಿನೀ–**ದೂಷಣೇನೈವೇತ್ಯೇವಕಾರೇಣಾಕ್ಷಸಿದ್ಧೇರ್ದೂಷ್ಯತ್ವೇ ಹೇತುತಾಂ ವ್ಯವಚ್ಛಿನತ್ತಿ । ತದೇವೋಪಪಾದಯತಿ – **ಅಕ್ಷೇತಿ** ॥ ಯತಃ ಪ್ರತ್ಯಕ್ಷಾಸಿದ್ಧಮಪಿ ಶೂನ್ಯತ್ವಂ ಕೇವಲದೂಷಣೇನೈವ ದೂಷ್ಯತೇ। ಅತೋಽಕ್ಷಸಿದ್ಧಿರಪ್ರಯೋಜಿಕೇತ್ಯರ್ಥಃ ॥ ೧೩೬೫ ॥

**ವಿವರಣೆ–** ದೂಷಣದಿಂದಲೇ ವಾಕ್ಯವು ದುಷ್ಟವೇ ಹೊರತಾಗಿ ಪ್ರತ್ಯಕ್ಷ ಸಿದ್ಧವಾದ್ದರಿಂದ ವಾಕ್ಯವು ದುಷ್ಟವಾಗುವುದಿಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಪ್ರತ್ಯಕ್ಷದಿಂದ ಅಸಿದ್ಧವಾದ ಶೂನ್ಯವನ್ನು ಪ್ರತಿಪಾದನೆ ಮಾಡುವ ವಾಕ್ಯವೂ ಕೂಡ ದೂಷಿಸಲ್ಪಡುತ್ತದೆ. ದೂಷ್ಯತ್ವವನ್ನು ಕುರಿತು ಪ್ರತ್ಯಕ್ಷಸಿದ್ಧತ್ವವೇ ಪ್ರಯೋಜಕ ವಾಗುವುದಾದರೆ ಹಾಗೆ ಮಾಡಬಾರದಾಗಿದ್ದಿತು. ಆದ್ದರಿಂದ ಪ್ರತ್ಯಕ್ಷ ಸಿದ್ಧತ್ವವು ಅಪ್ರಯೋಜಕ. ಬೇರೆ ದೋಷವಿದ್ದರೆ ಅದು ದೂಷ್ಯವಾಗುತ್ತದೆ ಎಂದಿಷ್ಟೇ ಹೇಳಬೇಕು.

ದೂಷಣಂ ನೈವ ಭೇದೇಽಸ್ತಿ ಭೇದಂ ತತ್ ಸಾಧಯೇಚ್ಛ್ರುತಿಃ ।
ಅಕ್ಷಾಸಿನಾ ಛಿನ್ನಪದಾ ಯದ್ ಭಗ್ನಾಽಭೂತ್‌ಪರಶ್ರುತಿಃ ॥ ೧೩೬೬ ॥

**ಅರ್ಥ–** ಭೇದೇ= ಭೇದದ ವಿಷಯದಲ್ಲಿ, ದೂಷಣಂ= ದೂಷಣವು, ನೈವ ಅಸ್ತಿ= ಇಲ್ಲವೇ ಇಲ್ಲ, ತತ್= ಆಕಾರಣದಿಂದ, ಶ್ರುತಿಃ= ಭೇದಶ್ರುತಿಯು, ಭೇದಂ= ಭೇದವನ್ನು, ಸಾಧಯೇತ್= ಸಾಧಿಸುತ್ತದೆ, ಯತ್= ಏಕೆಂದರೆ, ಪರಶ್ರುತಿಃ= ಪರನಿಗೆ ಅಭಿಪ್ರೇತವಾದ ಐಕ್ಯಶ್ರುತಿಯು, ಅಕ್ಷಾಸಿನಾ= ಪ್ರತ್ಯಕ್ಷವೆಂಬ ಖಡ್ಗದಿಂದ, ಛಿನ್ನಪದಾ ಅಭೂತ್= ಪಾದ (ಪದ) ಭೇದವುಳ್ಳದ್ದಾಯಿತು.

**ಅನುವಾದ–** ಭೇದದಲ್ಲಿ ಯಾವ ದೂಷಣವೂ ಇಲ್ಲ. ಆದ್ದರಿಂದ ಶ್ರುತಿಯು ಭೇದವನ್ನು ಸಾಧಿಸುತ್ತದೆ. ಪ್ರತ್ಯಕ್ಷವೆಂಬ ಕತ್ತಿಯಿಂದ ಪದಚ್ಛೇದವನ್ನು ಹೊಂದಿದ ನಿನ್ನ ಐಕ್ಯಶ್ರುತಿಗೆ ಪಾದವು ಭಗ್ನವಾದುದರಿಂದ ಭೇದಶ್ರುತಿಯು ಭೇದವನ್ನು ಸಾಧಿಸು ವುದರಲ್ಲಿ ಯಾವ ಬಾಧಕವೂ ಇಲ್ಲ.

**ಭಾವವಿಲಾಸಿನೀ–** ನನು ತರ್ಹಿ ದೂಷಣೇನೈವ ಭೇದೋ ದೂಷ್ಯೋऽಸ್ತ್ವಿತ್ಯತ ಆಹ – **ದೂಷಣಮಿತಿ** ॥ ಸರ್ವಜ್ಞಾಸರ್ವಜ್ಞಯೋರ್ಭೇದಸ್ಯ ಯೌಕ್ತತ್ವೇನ ವಾಕ್ಯಾತಿರಿಕ್ತದೂಷಣಂ ಕಿಂಚಿದಪಿ ನಾಸ್ತಿ । ವಾಕ್ಯಂ ಚ ಪ್ರತ್ಯಕ್ಷಬಾಧಿತಸ್ವಾರ್ಥಪರಂ ನೇತ್ಯುಕ್ತವ್ । ಅತ ಏವ ನೈವೇತ್ಯವಧಾರಣಮ್ । ಏತದೇವ ದರ್ಶಯತಿ – **ಅಕ್ಷಾಸಿನೇತಿ** ॥ ಭಿನ್ನಪದಾ ಅತತ್ತ್ವಮಸೀತಿ ಪದಚ್ಛೇದವತೀ ॥ ೧೩೬೬ ॥

**ವಿವರಣೆ–** ಭೇದಶ್ರುತಿಗೂ ಸಹ ದೂಷಣವಿದೆ ಎಂಬ ಶಂಕೆಯನ್ನು ಮಾಡಿದರೆ ಅಂತಹ ದೂಷಣವು ಎಲ್ಲೂ ಕಂಡುಬರುವುದಿಲ್ಲ ಎನ್ನುತ್ತಾರೆ. ತತ್ತ್ವಮಸಿ ಎಂಬ ನಿನ್ನ ಪದಚ್ಛೇದಕ್ಕೆ ಪ್ರತ್ಯಕ್ಷ ವಿರೋಧವು ಬರುವುದರಿಂದ ದೃಷ್ಟಾಂತಗಳಿಗೆ ಅನುಗುಣವಾಗಿ ಅತತ್ತ್ವಮಸಿ ಎಂದೇ ಭೇದ ಮಾಡಬೇಕು. ಹೀಗೆ ಭಿನ್ನಪದವುಳ್ಳ ನಿನ್ನ ಶ್ರುತಿಯು ನಿನಗೆ ಅಭಿಮತವಾದ ಅರ್ಥವನ್ನು ಸಾಧಿಸಲಾರದು ಎಂದು ಅಭಿಪ್ರಾಯ.

**ಅಪಿ ಚಾಮಾನತಃ ಸಿದ್ಧಿರ್ದೂಷಣೇನಾಪ್ಯಪೇಕ್ಷ್ಯತೇ ।**
**ದೃಢಮಾನೇನ ಸಿದ್ಧಿಸ್ತು ಭವೇದ್ ದೂಷಣದೂಷಣಂ ॥ ೧೩೬೭ ॥**

**ಅರ್ಥ–** ಅಪಿ ಚ= ಮತ್ತು, ದೂಷಣೇ ನಾಪಿ= ದೂಷಣದಿಂದಲೂ ಸಹ, ಅಮಾನತಃ ಸಿದ್ಧಿಃ= ಅಪ್ರಮಾಣದಿಂದ ಸಿದ್ಧಿಯು, ಅಪೇಕ್ಷ್ಯತೇ= ಅಪೇಕ್ಷಿಸಲ್ಪಡುತ್ತದೆ, ದೃಢಮಾನೇನ ಸಿದ್ಧಿಸ್ತು= ಪ್ರಬಲವಾದ ಪ್ರಮಾಣದಿಂದ ಸಿದ್ಧಿಯಾದರೂ, ದೂಷಣದೂಷಣಂ= ದೂಷಣಕ್ಕೆ ದೂಷಣವಾಗಿ, ಭವೇತ್= ಆಗುತ್ತದೆ.

**ಅನುವಾದ–** ದೂಷಣೆಯನ್ನು ಹೇಳಬೇಕಾದರೆ ಅಪ್ರಮಾಣದಿಂದ ಸಿದ್ಧಿಯು ಅವಶ್ಯಕವಾಗಿದೆ. ಹಾಗಿಲ್ಲದೆ ಪ್ರಬಲ ಪ್ರಮಾಣದಿಂದ ಅರ್ಥವು ಸಿದ್ಧವಾಗಿದ್ದರೆ ಅದಕ್ಕೆ ಹೇಳುವ ದೂಷಣವೇ ದೂಷ್ಯವಾಗುತ್ತದೆ.

**ಭಾವವಿಲಾಸಿನೀ–** ಕಿಮರ್ಥಂ ತರ್ಹ್ಯನೂದ್ಯದೂಷಯಂತೀತ್ಯತ ಆಹ – **ಅಪಿಚೇತಿ** ॥ ಅಮಾನತಃ ವಾದಿವಾಕ್ಯಪ್ರತ್ಯಕ್ಷಾಭಾಸಾದಿನಾ । ದೂಷಣದೂಷಣಂ ದೂಷಣಸ್ಯೈವ ಸ್ವಯಂ ದೂಷಣಂ ಭವತೀತ್ಯರ್ಥಃ। ನಹಿ ನಿರ್ದೋಷಪ್ರತ್ಯಕ್ಷೇಣ ನಿಶ್ಚಿತೋ ಘಟಃ ಕೇನಾಪಿ ವಾದಿನಾ ನೇತಿ ನಿಷಿಧ್ಯ ಪಟೀಕರ್ತುಂ ಶಕ್ಯತ ಇತಿ ಭಾವಃ ॥ ೧೩೬೭ ॥

**ವಿವರಣೆ–** ಹಾಗಾದರೆ ಏಕೆ ಅನುವಾದ ಮಾಡಿ ದೂಷಣೆಯನ್ನು ಹೇಳುತ್ತಾರೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ದೂಷಣೆಯನ್ನು ಮಾಡಲು ಯಾವುದನ್ನು ದೂಷಿಸುತ್ತೇವೆ ಎಂದು ಹೇಳಲು ಅನುವಾದವನ್ನು ಮಾಡಬೇಕು. ಅನುವಾದ ಮಾಡಲ್ಪಟ್ಟ ವಿಷಯವು ಪ್ರಮಾಣದಿಂದ ಪ್ರಾಪ್ತವಾಗಿದ್ದರೆ ಅದಕ್ಕೆ ದೂಷಣವೇ ಕೂಡುವುದಿಲ್ಲ.

ಆದ್ದರಿಂದ ಯಾವುದನ್ನು ದೂಷಣ ಮಾಡುತ್ತಾರೋ ಅದು ಅಪ್ರಮಾಣದಿಂದ ಪ್ರಾಪ್ತವಾಗಿರಬೇಕು ಎಂಬ ನಿಯಮವಿದೆ. ಪ್ರಮಾಣದಿಂದ ಪ್ರಾಪ್ತವಾದುದನ್ನು ದೂಷಣೆ ಮಾಡಲು ಹೊರಟರೆ ಆ ದೂಷಣವೇ ದೂಷ್ಯವಾಗುತ್ತದೆ. ಪ್ರತ್ಯಕ್ಷಾಭಾಸಾದಿಗಳಿಂದ ಪ್ರಾಪ್ತವಾದುದನ್ನು ಯಾರಾದರೂ ದೂಷಣೆ ಮಾಡುತ್ತಾರೆಯೇ ಹೊರತು ನಿರ್ದೋಷ ಪ್ರತ್ಯಕ್ಷದಿಂದ ಸಿದ್ಧವಾದ ಘಟಾದಿಗಳನ್ನು ಯಾವ ವಾದಿಯೂ ದೂಷಣೆಯನ್ನು ಮಾಡಿ ಅದು ಪಟ ಎಂದು ಸಾಧಿಸಲು ಸಾಧ್ಯವಿಲ್ಲವಷ್ಟೇ?

**ದೂಷಣೇನೈವ ಮಾನಸ್ಯಾಮಾನತ್ವೇऽನ್ಯೋನ್ಯಸಂಶ್ರಯಃ ।**
**ಅತೋऽಕ್ಷಸಿದ್ಧ್ಯಾ ದೋಷೋಕ್ತಿರದೋಷಜ್ಞತ್ವಸಾಧಿಕಾ ॥ ೧೩೬೮ ॥**

**ಅರ್ಥ–** ಮಾನಸ್ಯ= ಒಂದು ಪ್ರಮಾಣಕ್ಕೆ, ದೂಷಣೇನೈವ= ಕೇವಲ ದೋಷವನ್ನು ಹೇಳಿದ ಕಾರಣದಿಂದಲೇ, ಅಮಾನತ್ವೇ= ಅಪ್ರಾಮಾಣ್ಯವು ಬರುತ್ತದೆ ಎಂದು ಅಂಗೀಕರಿಸಿದರೆ, ಅನ್ಯೋನ್ಯಸಂಶಯಃ= ಅನ್ಯೋನ್ಯಸಂಶಯವು ಉಂಟಾಗುತ್ತದೆ, ಅತಃ= ಆದ್ದರಿಂದ, ಅಕ್ಷಸಿದ್ಧ್ಯಾ ದೋಷೋಕ್ತಿಃ= ಪ್ರತ್ಯಕ್ಷಸಿದ್ಧವಾದ ಕಾರಣದಿಂದ ದೋಷವನ್ನು ಹೇಳುವ ವಚನವು, ಅದೋಷಜ್ಞತ್ವಸಾಧಿಕಾ= ಅವನು ವಿದ್ವಾಂಸನಲ್ಲವೆಂದೇ ಸಾಧಿಸುತ್ತದೆ.

**ಅನುವಾದ–** **ದೂಷಣೆ ಹೇಳುವುದರಿಂದಲೇ ಒಂದು ಮಾನವು ಅಪ್ರಮಾಣವಾಗುತ್ತದೆ ಎಂದು ಹೇಳುವುದಾದರೆ ಅನ್ಯೋನ್ಯಾಶ್ರಯವು ಬರುತ್ತದೆ. ಆದ್ದರಿಂದ ಭೇದಶ್ರುತಿಯ ವಿಷಯವು ಪ್ರತ್ಯಕ್ಷ ಸಿದ್ಧವಾಗಿದೆ ಎಂದು ದೋಷವನ್ನು ಹೇಳುವ ಪರವಾದಿಗಳ ಉಕ್ತಿಯು ಅವರು ವಿದ್ವಾಂಸರಲ್ಲ ಎಂದು ಸಾಧಿಸುತ್ತದೆ.**

**ಭಾವವಿಲಾಸಿನೀ– ಅತ ಉಭಯಥಾಪ್ರತ್ಯಕ್ಷಸಿದ್ಧೇರ್ದೋಷಾದರ್ಶನಾತ್ । ಅದೋಷಜ್ಞತ್ವಂ ಅಪಂಡಿತತ್ವಂ ತಸ್ಯ ಸಾಧಿಕೇತ್ಯರ್ಥಃ ॥ ೧೩೬೮ ॥**

**ವಿವರಣೆ–** ಅಪ್ರಮಾಣದಿಂದ ಪ್ರಾಪ್ತವಾದರೆ ಆಗ ದೂಷಣವು ಸಿದ್ಧವಾಗುತ್ತದೆ. ದೂಷಣವು ಸಿದ್ಧವಾದರೆ ಪ್ರತ್ಯಕ್ಷಾದಿಗಳು ಅಪ್ರಮಾಣವೆಂದು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯವು ಬರುವುದರಿಂದ ಕೇವಲ ಅನುವಾದ ಮಾಡಿದ ಮಾತ್ರದಿಂದ ಅಪ್ರಮಾಣವಾಗುತ್ತದೆ ಎಂಬ ವಾದವು ಎಂದೂ ಸರಿಯಲ್ಲ.

**ವಿರಜ್ಯೇತೋತ್ತಮಶ್ಲೋಕಗುಣಾನಾಮನುವಾದತಃ ।**
**ಕ ಇತ್ಯಾದಿ ವ್ಯಾಸವಾಕ್ಯಾನ್ಯನುವಾದಂ ಸ್ತುವಂತಿ ಹಿ ॥ ೧೩೬೯ ॥**

**ಅರ್ಥ–** ಕಃ= ಯಾವನು, ಉತ್ತಮಶ್ಲೋಕಗುಣಾನಾಮ್= ಮಹಾತ್ಮರ ಗುಣಗಳ, ಅನುವಾದತಃ= ಅನುವಾದದಲ್ಲಿ, ವಿರಜ್ಯೇತ= ವಿರಕ್ತನಾಗುತ್ತಾನೆ, ಇತ್ಯಾದಿ= ಇವೆ

ಮೊದಲಾದ, ವ್ಯಾಸವಾಕ್ಯಾನಿ= ವ್ಯಾಸವಚನಗಳು, ಅನುವಾದಂ= ಅನುವಾದವನ್ನು, ಸ್ತುವಂತಿ ಹಿ= ಪ್ರಶಂಶಿಸುತ್ತವೆಯಷ್ಟೆ.

**ಅನುವಾದ–** ಯಾವನು ಉತ್ತಮಶ್ಲೋಕನ ಗುಣಗಳ ಅನುವಾದದಲ್ಲಿ ವಿರಕ್ತಿಯನ್ನು ಹೊಂದುತ್ತಾನೆ ಎಂಬ ವ್ಯಾಸವಾಕ್ಯವು ಅನುವಾದವನ್ನು ಪ್ರಶಂಸೆ ಮಾಡುತ್ತದೆ.

**ಭಾವವಿಲಾಸಿನೀ–** ಕಿಂಚ 'ನಿವೃತ್ತತರ್ಷೈರುಪಗೀಯಮಾನಾದ್ ಭವೌಷಧಾತ್ ಶ್ರೋತ್ರ-ಮನೋಭಿರಾಮಾತ್ । ಕ ಉತ್ತಮಶ್ಲೋಕ ಗುಣಾನುವಾದಾತ್ಪುಮಾನ್ವಿರಜ್ಯೇತ ವಿನಾತಿ-ಮುಗ್ಧಾತ್' ಇತಿ ಭಾಗವತೇಽಪರೋಕ್ಷಜ್ಞಾನಿಪ್ರತ್ಯಕ್ಷಸಿದ್ಧಭಗವದ್ಗುಣಾನಾಮನುವಾದಸ್ಯ ಮಹಾಪ್ರಮಾಣ ತಯೋಕ್ತತ್ವಾಚ್ಚ ನಾನುವಾದೋದೂಷಣಮಿತ್ಯಾಹ – **ವಿರಜ್ಯತೇತಿ** ॥೧೩೭೯॥

**ವಿವರಣೆ–** 'ನಿವೃತ್ತತರ್ಷೈರುಪಗೀಯಮನಾತ್ ಭವೌಷಧಾತ್ ಶ್ರೋತ್ರಮನೋಭಿ-ರಾಮಾತ್ । ಕ ಉತ್ತಮಶ್ಲೋಕಗುಣಾನುವಾದಾತ್ ಪುಮಾನ್ ವಿರಜ್ಯೇತ ವಿನಾಽತಿಮುಗ್ಧಾತ್' ಎಂಬ ವ್ಯಾಸವಾಕ್ಯವು ಭಾಗವತದಲ್ಲಿ ಕಂಡುಬರುತ್ತದೆ. ಈ ವಾಕ್ಯದಲ್ಲಿ ಜ್ಞಾನಿಗಳ ಪ್ರತ್ಯಕ್ಷಸಿದ್ಧವಾದ ಭಗವದ್ಗುಣಗಳ ಅನುವಾದವು ಮಹಾಪ್ರಮಾಣವೆಂದು ಹೇಳಲ್ಪಟ್ಟಿರುವುದರಿಂದ ಅನುವಾದವು ದೋಷಾಧಾಯಕವಾಗುವುದಿಲ್ಲ.

ನಿವೃತ್ತತರ್ಷಪ್ರೇಯಸ್ತ್ವಂ ಭವಸ್ಯೌಷಧತಾ ತಥಾ ।
ಮನಃಶ್ರೋತ್ರಪ್ರಿಯತ್ವಂ ಚ ಮಿಥ್ಯಾಜ್ಞಾನ್ಯತಿದೂರತಾ ॥ ೧೩೮೦ ॥

ಮಹಾಮಾನತ್ವ ಏವೈತೇ ಯುಜ್ಯೇರನ್ ಧರ್ಮರಾಶಯಃ ।
ಅಮಾನತ್ವೇ ತು ಭಜ್ಯೇರನ್ನಿತಿ ಮನ್ಯಾಮಹೇ ವಯಂ ॥ ೧೩೮೧ ॥

**ಅರ್ಥ–** ನಿವೃತ್ತತರ್ಷಪ್ರೇಯಸ್ತ್ವಂ= ವಿರಕ್ತರಿಗೆ ಪ್ರಿಯವಾಗಿರುವುದು, ತಥಾ= ಅದರಂತೆ, ಭವಸ್ಯೌಷಧತಾ= ಸಂಸಾರರೋಗಕ್ಕೆ ಔಷಧವಾಗಿರುವುದು, ಮನಃಶ್ರೋತ್ರಪ್ರಿಯತ್ವಂ= ಮನಸ್ಸಿಗೂ ಮತ್ತು ಶ್ರೋತ್ರಕ್ಕೂ ಪ್ರಿಯವಾಗಿರುವುದು, ಚ= ಮತ್ತು, ಮಿಥ್ಯಾಜ್ಞಾನ್ಯತಿದೂರತಾ= ಮಿಥ್ಯಾಜ್ಞಾನಿಗಳಿಗೆ ಬಹುದೂರವಾಗಿರುವುದು, ಏತೇಧರ್ಮರಾಶಯಃ= ಈ ಧರ್ಮರಾಶಿಗಳೆಲ್ಲವೂ, ಮಹಾಮಾನತ್ವ ಏವ= ದೊಡ್ಡಪ್ರಮಾಣವಾದರೆ ಮಾತ್ರ, ಯುಜ್ಯೇರನ್= ಉಪಪನ್ನವಾಗುತ್ತದೆ, ಅಮಾನತ್ವೇ ತು= ಅಪ್ರಮಾಣವಾದರೆ ಮಾತ್ರ, ಭಜ್ಯೇರನ್= ಭಗ್ನವಾಗುತ್ತದೆ, ಇತಿ= ಎಂದು, ವಯಂ= ನಾವು, ಮನ್ಯಾಮಹೇ= ತಿಳಿಯುತ್ತೇವೆ.

**ಅನುವಾದ–** ನಿವೃತ್ತತರ್ಷರಾದ ಸುಜನರಿಗೆ ಅತಿಶಯೇನ ಪ್ರಿಯತ್ವ, ಹಾಗೆಯೇ ಸಂಸಾರ ಔಷಧತ್ವ, ಮನಃಶ್ರೋತ್ರಪ್ರಿಯತ್ವ, ಮಿಥ್ಯಾಜ್ಞಾನಿಗಳಿಗೆ ಅತಿದೂರತ್ವ ಈ

**ಎಲ್ಲ ಧರ್ಮರಾಶಿಗಳು ಮಹಾಪ್ರಮಾಣವಾದರೆ ಮಾತ್ರ ಯುಕ್ತವಾಗುತ್ತವೆ. ಅಪ್ರಮಾಣವಾದರೆ ಎಲ್ಲ ಧರ್ಮಗಳು ನಾಶವಾಗುತ್ತವೆ ಎಂದು ನಮ್ಮ ಅಭಿಪ್ರಾಯ.**

**ಭಾವವಿಲಾಸಿನೀ–** ಏತೇ ನಿವೃತ್ತತರ್ಷೈರಿತ್ಯಾದಿ ವಿಶೇಷಣೈರುಕ್ತಾಃ । ನಿವೃತ್ತಸ್ತರ್ಷೋ ವಿಷಯ-ತೃಷ್ಣಾಯೇಭ್ಯಸ್ತೇ ನಿವೃತ್ತತರ್ಷಾಃ ತೈಃ । ಅತಿಮುಗ್ಧಾತ್ ಮಿಥ್ಯಾಜ್ಞಾನಿನಃ ॥೧೩೭೦-೧೩೭೧॥

**ವಿವರಣೆ–** ಈ ಭಾಗವತ ಶ್ಲೋಕದಲ್ಲಿ ಭಗವದ್ಗುಣಗಳ ಅನುವಾದದ ಮಹಿಮೆಯನ್ನು ಹೇಳಿದ್ದಾರೆ. ನಿವೃತ್ತತರ್ಶರು ಎಂದರೆ ವಿಮುಕ್ತರು, ಇಹಾಮುತ್ರ ವಸ್ತುಗಳ ಆಸೆ ಇಲ್ಲದವರು ಎಂದರ್ಥ. ಅವರಿಂದ ಇಂತಹ ಅನುವಾದವು ಶ್ರೇಷ್ಠವಾಗಿ ಸ್ತೋತ್ರ ಮಾಡಲ್ಪಡುತ್ತದೆ ಎಂದು ಅರ್ಥ. ಭವೌಷಧಾತ್ ಎಂದರೆ ಈ ಅನುವಾದಕ್ಕೆ ಸಂಸಾರವನ್ನು ಪರಿಹಾರ ಮಾಡುವ ಮಹಾಸಾಮರ್ಥ್ಯವಿದೆ ಎಂದು ಅರ್ಥ. ಶ್ರೋತ್ರಮನೋಭಿರಾಮಾತ್ ಎಂದರೆ ಈ ಅನುವಾದವು ಮನಸ್ಸಿಗೂ ಮತ್ತು ಶ್ರೋತ್ರಗಳಿಗೂ ಪ್ರಿಯವಾದುದು ಎಂದು ಅರ್ಥ, ವಿನಾತಿಮುಗ್ಧಾತ್ ಎಂದರೆ ಈ ಅನುವಾದವು ಮಿಥ್ಯಾಜ್ಞಾನಿಗಳಿಗೆ ಬಹಳ ದೂರವಾದುದು ಎಂದು ಅರ್ಥ. ಇಂತಹ ಪದಗಳೆಲ್ಲವೂ ಅನುವಾದಕ್ಕೆ ಪ್ರಾಮಾಣ್ಯವಿದ್ದರೆ ಮಾತ್ರ ಕೂಡುತ್ತದೆ. ಅನುವಾದವು ಅಪ್ರಮಾಣವಾದರೆ ಈ ಎಲ್ಲ ಧರ್ಮಗಳು ನಾಶವಾಗುತ್ತವೆ. ಆದಕಾರಣ ಅನುವಾದ ಮಾಡುವ ಮಾತ್ರದಿಂದಲೇ ಯಾವ ದೋಷವೂ ಬರುವುದಿಲ್ಲವೆಂದು ಸಿದ್ಧವಾಗುತ್ತದೆ.

**ಅತಃ ಪ್ರಮಾಣಸಂವಾದಾದನುವಾದೋ ಮಹತ್ತರಂ ।**
**ಮಾನಮಿತ್ಯೇವ ಜಾನೀಹಿ ನ ಲುನೀಹಿ ಸತಾಂ ಮತಂ ॥ ೧೩೭೨ ॥**

**ಅರ್ಥ–** ಅತಃ= ಆದ್ದರಿಂದ, ಪ್ರಮಾಣಸಂವಾದಾತ್= ಪ್ರಮಾಣಸಂವಾದ ಕಾರಣದಿಂದ, ಅನುವಾದಃ= ಅನುವಾದವು, ಮಹತ್ತರಂ ಮಾನಮಿತ್ಯೇವ= ದೊಡ್ಡಪ್ರಮಾಣವೆಂದೇ, ಜಾನೀಹಿ= ತಿಳಿದುಕೋ, ಸತಾಂ ಮತಂ= ಸಜ್ಜನರ ಮತವನ್ನು, ನ ಲುನೀಹಿ= ಛೇದಿಸಬೇಡ.

**ಅನುವಾದ– ಆದ್ದರಿಂದ ಅನುವಾದವಿದ್ದಲ್ಲಿ ಪ್ರಮಾಣ ಸಂವಾದವಿರುವುದರಿಂದ ಅದು ಶ್ರೇಷ್ಠವಾದ ಪ್ರಮಾಣವಾಗುತ್ತದೆ ಎಂದೇ ತಿಳಿದುಕೋ. ಸಜ್ಜನರ ಮತವನ್ನು ನಾಶ ಮಾಡಲು ಪ್ರಯತ್ನ ಪಡಬೇಡ.**

**ಭಾವವಿಲಾಸಿನೀ–** ಅತಃ ಶುಕವ್ಯಾಸಾದಿಭಿಃ ಸ್ತುತತ್ವಾತ್ ॥ ೧೩೭೨ ॥

**ವಿವರಣೆ–** ಅನುವಾದವು ದೋಷವಲ್ಲ ಎಂಬ ವಿಷಯವನ್ನು ಇಲ್ಲಿ ಉಪಸಂಹಾರ ಮಾಡುತ್ತಾರೆ. ಶುಕಾಚಾರ್ಯರು ಮತ್ತು ವೇದವ್ಯಾಸರು ಮೊದಲಾದವರಿಂದ ಅನುವಾದವು ಪ್ರಶಂಸಿಸಲ್ಪಟ್ಟಿರುವ ಕಾರಣ ಅನುವಾದವು ಎಂದೂ ದೋಷಾಧಾಯಕವಲ್ಲ ಎಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಸ್ಯಾದೇಕೈಕಮತೇ ಶಂಕಾ ಸರ್ವಾಸ್ಯಾಭಿಮತೇ ತು ನ ।**
**ಅನ್ನಂ ಹಿ ಕಸ್ಯ ವಾ ನಾನ್ನಂ ಪ್ರತ್ಯಕ್ಷಂ ಮಾನಮೇವ ತತ್ ॥ ೧೩೭೩ ॥**

**ಅರ್ಥ–** ಏಕೈಕಮತೇ= ಒಬ್ಬೊಬ್ಬನಿಂದ ಜ್ಞಾತವಾದ ವಿಷಯದಲ್ಲಿ, ಶಂಕಾ= ಶಂಕೆಯು, ಸ್ಯಾತ್= ಬರಬಹುದು, ಸರ್ವಸ್ಯಾಭಿಮತೇ ತು= ಎಲ್ಲರಿಂದ ಜ್ಞಾತವಾದ ವಿಷಯದಲ್ಲಿ ಮಾತ್ರ, ನ= ಶಂಕೆವುಂಟಾಗುವುದಿಲ್ಲ, ಅನ್ನಂ ಹಿ= ಅನ್ನವಾದರೂ, ಕಸ್ಯ ವಾ= ಯಾವನಿಗೆ, ನಾನ್ನಂ= ಅನ್ನವಾಗದೆ ಇರುತ್ತದೆ, ತತ್= ಆದ್ದರಿಂದ, ಪ್ರತ್ಯಕ್ಷಂ= ಪ್ರತ್ಯಕ್ಷವು, ಮಾನಮೇವ= ಪ್ರಮಾಣವೇ ಆಗಿದೆ.

**ಅನುವಾದ–** ಒಂದೊಂದು ಮತದಲ್ಲಿ ಸಿದ್ಧವಾದ ಪ್ರಮೇಯದಲ್ಲಿ ಸಂಶಯವಿರಬಹುದು. ಎಲ್ಲ ವಾದಿಗಳಿಗೂ ಸಮ್ಮತವಾದ ವಿಷಯದಲ್ಲಿ ಎಂದೂ ಸಂಶಯವಿರುವುದಿಲ್ಲ. ಅನ್ನವು ಯಾರ ದೃಷ್ಟಿಯಲ್ಲಿ ಅನ್ನವಾಗದೆ ಇರುತ್ತದೆ? ಆದ್ದರಿಂದ ಪ್ರತ್ಯಕ್ಷವು ಪ್ರಮಾಣವೇ ಆಗುತ್ತದೆ.

**ಭಾವವಿಲಾಸಿನೀ–** ಏಕೈಕವಾದಿನಾಂ ಶುಷ್ಕಯುಕ್ತ್ಯಾದಿನಾಭಿಮತೇಽರ್ಥೇತತ್ತತ್ ಪ್ರತಿವಾದಿನಾಂ ವಿವಾದದರ್ಶನಾತ್ ಸರ್ವಪ್ರತ್ಯಕ್ಷೇಣಾನ್ನತಯಾ ಸಿದ್ಧೇಽನ್ನೇ ಕಸ್ಯಾಪಿ ವಿವಾದಾದರ್ಶನಾತ್ ಪ್ರತ್ಯಕ್ಷಮೇವ ಪ್ರಬಲಪ್ರಮಾಣಮಿತ್ಯಾಹ – **ಸ್ಯಾದಿತಿ** ॥ ೧೩೭೩ ॥

**ವಿವರಣೆ–** ಒಬ್ಬೊಬ್ಬ ವಾದಿಗಳು ತಮ್ಮ ಶುಷ್ಕಯುಕ್ತಿಗಳಿಂದ ಪ್ರತಿಪಾದನೆ ಮಾಡುವ ಅರ್ಥದಲ್ಲಿ ವಿವಾದವು ಉಂಟಾಗುತ್ತದೆ. ಆದರೆ ಎಲ್ಲರಿಗೂ ಪ್ರತ್ಯಕ್ಷ ಸಿದ್ಧವಾದ ಅರ್ಥದಲ್ಲಿ ಎಂದೂ ವಿವಾದವು ಉಂಟಾಗುವುದಿಲ್ಲ. ಉದಾಹರಣೆಗೆ ಎಲ್ಲರಿಗೂ ಪ್ರತ್ಯಕ್ಷ ಸಿದ್ಧವಾದ ಅನ್ನದ ವಿಷಯದಲ್ಲಿ ಯಾವ ವಾದಿಯೂ ಇದು ಅನ್ನವಲ್ಲ ಎಂದು ಹೇಳುವುದಿಲ್ಲ. ಆದ್ದರಿಂದ ಪ್ರತ್ಯಕ್ಷವು ಪ್ರಮಾಣವೇ ಆಗುತ್ತದೆ. ಭೇದಶ್ರುತಿಯು ಅನುವಾದವನ್ನು ಮಾಡಿದರೆ ಅದು ಅಪ್ರಮಾಣದಿಂದ ಪ್ರಾಪ್ತವಾದ ಭೇದವನ್ನು ಅನುವಾದ ಮಾಡುವುದಿಲ್ಲ ಪ್ರಮಾಣದಿಂದ ಪ್ರಾಪ್ತವಾದ ಭೇದವನ್ನೇ ಅನುವಾದ ಮಾಡುತ್ತದೆ ಎಂದು ಸಿದ್ಧವಾಗುತ್ತದೆ.

**ಅತೋಽನಾದಿಮತಪ್ರಾಪ್ತತದೈಕ್ಯಸ್ಯಾನುವಾದನಂ ।**
**ತದ್ಧೈಕ ಅಹುರಸದೇವೇದಮಗ್ರ ಇತಿ ಶ್ರುತೌ ।**
**ಬ್ರಹ್ಮಾಸತ್ತ್ವಾನುವಾದಾಭಂ ದೋಷಾರ್ಹಮಿತಿ ಶೋಭತೇ ॥ ೧೩೭೪ ॥**

**ಅರ್ಥ–** ಅತಃ= ಆದ್ದರಿಂದ, ತದ್ಧೈಕ ಆಹುಃ ಅಸದೇವೇದಮಗ್ರ ಇತಿ ಶ್ರುತೌ= ತದ್ಧೈಕ ಆಹುಃ ಅಸದೇವೇದಮಗ್ರ ಆಸೀತ್ ಎಂಬ ಶ್ರುತಿಯಲ್ಲಿ, ಬ್ರಹ್ಮಸತ್ತ್ವಾನುವಾದಾನಂ= ಬ್ರಹ್ಮನ ಅಸತ್ತ್ವವನ್ನು ಅನುವಾದಮಾಡಿದುದಕ್ಕೆ ಸದೃಶವಾದ, ಅನಾದಿಮತಪ್ರಾಪ್ತ-

ತದೈಕ್ಯಸ್ಯಾನುವಾದನಂ= ಅನಾದಿದುರ್ಮತಪ್ರಾಪ್ತವಾದ ಜೀವಬ್ರಹ್ಮೈಕ್ಯಾನುವಾದವು, ದೋಷಾರ್ಹಮಿತಿ= ದೋಷಭಾಜನವೆಂಬುದೇ, ಶೋಭತೇ= ಶೋಭಿಸುತ್ತದೆ.

**ಅನುವಾದ–** ಆದ್ದರಿಂದ ಪ್ರವಾಹತಃ ಅನಾದಿಯಾದ ಮತದ ಪ್ರಕ್ರಿಯೆಯಂತೆ ಪ್ರಸಕ್ತವಾದ ಐಕ್ಯವನ್ನು ಶ್ರುತಿಯು ಅನುವಾದ ಮಾಡುವುದರಿಂದ ಅದು ದೋಷಾರ್ಹವಾಗುತ್ತದೆ ಎಂಬುದೇ ಸರಿಯಾದ ಪಕ್ಷ. 'ತದ್ಧೈಕ ಆಹುಃ ಅಸದೇವೇದಮಗ್ರ ಆಸೀತ್' ಎಂಬ ಶ್ರುತಿಯು ಬೌದ್ಧಮತ ಪ್ರಾಪ್ತವಾದ ಬ್ರಹ್ಮನ ಅಸತ್ವವನ್ನು ಅನುವಾದ ಮಾಡುವುದು ಹೇಗೆ ದೋಷಾರ್ಹವಾಗುತ್ತದೆಯೋ, ಹಾಗೆಯೇ ಐಕ್ಯದ ಅನುವಾದವು ದೋಷಾರ್ಹವಾಗುತ್ತದೆ.

**ಭಾವವಿಲಾಸಿನೀ–** ಅತಃ ಪ್ರಮಾಣಪ್ರಾಪ್ತಾನುವಾದಸ್ಯ ದೋಷಾನರ್ಹತ್ವಾತ್ । ಅನಾದಿಮತಂ ಪ್ರವಾಹತೋನಾದಿಮಾಯಾವಾದ್ಯಾದಿಮತಮ್ । ದೋಷಾರ್ಹಂ ದೂಷಣಾರ್ಹಮ್ । ಪ್ರಮಾಣಾಪ್ರಾಪ್ತತ್ವೇನ ದೂಷಯಿತುಂ ಶಕ್ಯಮಿತಿ ಭಾವಃ ॥ ೧೩೭೪ ॥

**ವಿವರಣೆ–** ಪ್ರಮಾಣಾಭಾಸ ಪ್ರಾಪ್ತವಾದುದೇ ದೋಷಾರ್ಹವಾಗುತ್ತದೆ. ಪ್ರಮಾಣ ಪ್ರಾಪ್ತವಾದುದು ದೋಷವಾಗುವುದಿಲ್ಲ. ಐಕ್ಯವು ಪ್ರವಾಹತಃ ಅನಾದಿಯಾದ ಮಾಯಾವಾದಮತದ ಪ್ರಕ್ರಿಯೆಯಿಂದ ಪ್ರಾಪ್ತವಾಗಿದೆ. ಆ ಪ್ರಕ್ರಿಯೆಯು ಅಪ್ರಮಾಣಿಕವಾದುದರಿಂದ ಆ ಐಕ್ಯಾನುವಾದವು ದೋಷಾರ್ಹವಾಗುತ್ತದೆ.

ದೋಷಾನರ್ಹಾಕ್ಷಸಿದ್ಧಸ್ಯ ತ್ವನುವಾದೋಪಿ ವಾದವತ್ ।
ನ ಚೇದ್ ಬಹುಮಹಾವಾಕ್ಯಶಾಸ್ಯಮೈಕ್ಯಂ ಪರಸ್ಪರಂ ।
ಅನುವಕ್ತಿ ಭಿದಾಶ್ರುತ್ಯಾ ಭೇತ್ತುಂ ಸುಂದೋಪಸುಂದವತ್ ॥ ೧೩೭೫ ॥

ಇತ್ಯೈಕ್ಯಮಪಿ ಶೋಚ್ಯಂ ಸ್ಯಾತ್ ತನ್ಮಾನಾಂತರಸಿದ್ಧತಾ ।
ದಾರ್ಢ್ಯಾಯೈವೇತಿ ವಕ್ತವ್ಯಂ ಸರ್ವೈರಪಿ ವಿವೇಕಿಭಿಃ ॥ ೧೩೭೬ ॥

**ಅರ್ಥ–** ದೋಷಾನರ್ಹಾಕ್ಷಸಿದ್ಧಸ್ಯ= ದೋಷರಹಿತವಾದ ಪ್ರತ್ಯಕ್ಷಸಿದ್ಧವಾದ ವಸ್ತುವಿನ, ಅನುವಾದೋಪಿ= ಅನುವಾದವೂ ಸಹ, ವಾದವತ್= ವಾದದಂತೆಯೇ ಪ್ರಮಾಣವಾಗುತ್ತದೆ, ನ ಚೇದ್= ಇಲ್ಲದಿದ್ದರೆ, ಬಹುಮಹಾವಾಕ್ಯಶಾಸ್ಯಮೈಕ್ಯಂ= ಅನೇಕ ಮಹಾವಾಕ್ಯದಿಂದ ಪ್ರತಿಪಾದಿಸಲ್ಪಡುವ ಐಕ್ಯವನ್ನು, ಸುಂದೋಪಸುಂದವತ್= ಸುಂದೋಪಸುಂದರಂತೆ, ಭಿದಾಶ್ರುತ್ಯಾ ಭೇತ್ತುಂ= ಭೇದಶ್ರುತಿಯಿಂದ ಭೇದಿಸಲು, ಪರಸ್ಪರಂ ಅನುವಕ್ತಿ= ಪರಸ್ಪರವಾಗಿ ಅನುವಾದಮಾಡುತ್ತವೆ, ಇತಿ= ಎಂಬ ಕಾರಣದಿಂದ, ಐಕ್ಯಮಪಿ= ಐಕ್ಯವೂ ಕೂಡ, ಶೋಚ್ಯಂ ಸ್ಯಾತ್= ಶೋಚನೀಯವಾಗುತ್ತದೆ, ತತ್= ಆದ್ದರಿಂದ, ಮಾನಾಂತರಸಿದ್ಧತಾ= ಪ್ರಮಾಣಾಂತರ ಸಿದ್ಧತ್ವವು, ದಾರ್ಢ್ಯಾಯೈವೇತಿ= ದಾರ್ಢ್ಯಕ್ಕೆ

ಕಾರಣವಾಗುತ್ತದೆ ಎಂದು, ಸರ್ವೈರಪಿ ವಿವೇಕಿಭಿಃ= ಎಲ್ಲ ವಿವೇಕಿಗಳಿಂದಲೂ, ವಕ್ತವ್ಯಂ= ಹೇಳಲ್ಪಡಬೇಕು.

**ಅನುವಾದ–** ದೋಷರಹಿತವಾದ ಪ್ರತ್ಯಕ್ಷದಿಂದ ಸಿದ್ಧವಾದ ಅರ್ಥದ ಅನುವಾದವು ವಾದದಂತೆಯೇ ಪ್ರಮಾಣವಾಗುತ್ತದೆ. ಇಲ್ಲದಿದ್ದರೆ ನೀನು ಐಕ್ಯವನ್ನು ಪ್ರತಿಪಾದಿಸಲು ಆಶ್ರಯಿಸುವ ಅನೇಕ ಮಹಾವಾಕ್ಯಗಳು ಅನುವಾದ ರೂಪವಾಗಿದ್ದು ಭೇದಶ್ರುತಿಯು ಸುಂದೋಪಸುಂದ ನ್ಯಾಯದಿಂದ ಅವುಗಳನ್ನು ಭೇದಿಸುತ್ತವೆ ಎಂದು ಸಿದ್ಧವಾಗುತ್ತದೆ. ಹೀಗೆ ನಿನ್ನ ಐಕ್ಯಕ್ಕೂ ಸಹ ಶೋಚನೀಯ ಪರಿಸ್ಥಿತಿ ಬರುತ್ತದೆ. ಆದ್ದರಿಂದ ಪ್ರಮಾಣಾಂತರದಿಂದ ಸಿದ್ಧವಾದರೆ ಅದು ದಾರ್ಢ್ಯಕ್ಕೇ ಕಾರಣವಾಗುವುದೆಂದು ವಿವೇಕವುಳ್ಳ ಸರ್ವವಾದಿಗಳೂ ಹೇಳಲೇಬೇಕು.

**ಭಾವವಿಲಾಸಿನೀ–** ನಚೇತ್ ಪ್ರಮಾಣಾನುವಾದೋಪ್ಯದೋಷೋ ನಚೇತ್ । ಉತ್ತರವಾಕ್ಯಸ್ಯಾನುವಾದಕತ್ವೇಪಿ ಪೂರ್ವವಾಕ್ಯಸ್ಯ ಕಥಮನುವಾದಕತ್ವಮಿತ್ಯತ ಉಕ್ತಂ ॥ **ಸುಂದೋಪಸುಂದವದಿತಿ** ॥ ಯಥಾಸಮಬಲೌ ಸುಂದೋಪಸುಂದೌ ಮಿಥಃ ಕಲಹಂ ಕುರ್ವಾತೇ ತಥಾऽನಾದಿತಯಾ ಪೂರ್ವೋತ್ತರವಿಭಾಗಾಯೋಗಾತ್ ಸಮಬಲಂ ವಾಕ್ಯದ್ವಯ- ಮನ್ಯೋನ್ಯಮನುವಾದಂ ಕೃತ್ವಾದೂಷಣಾರ್ಹಂ ಕರೋತೀತಿ ಭಾವಃ । ತತ್ ಐಕ್ಯಸ್ಯಾಪ್ಯನುವಾದೇನ ದೂಷ್ಯತ್ವಾಪಾತಾತ್ । ನಚ ವಾಚ್ಯಂ ಪ್ರತ್ಯಕ್ಷಪ್ರಾಪ್ತಸ್ಯೈವಾನುವಾದೋ ದೋಷೋ ನ ವಾಕ್ಯಪ್ರಾಪ್ತಸ್ಯೇತಿ । ತದ್ವೈಕ ಆಹುರಸದೇವೇದಮಗ್ರ ಆಸೀದಿತಿ ವಾಕ್ಯಪ್ರಾಪ್ತಸ್ಯಾಪಿ ಕಥಮಸತಃ ಸಜ್ಜಾಯೇತೇತಿ ದೂಷಣದರ್ಶನಾತ್ । ಕಿಂಚ ಮಾನಾಂತರಪ್ರಾಪ್ತಸ್ಯ ಮಾನಾಂತರೇಣಾಪಿ ಪ್ರಮಾಪನೇ ಸಂವಾದೇನ ಪ್ರಾಮಾಣ್ಯಂ ದೃಢೀಕ್ರಿಯತೇ । ಏಕವಾಕ್ಯೇನೋಕ್ತಸ್ಯಾರ್ಥಸ್ಯ ಪುನರ್ವಾಕ್ಯಾಂತರೇಣ ಕಥನೇ ವೈಯರ್ಥ್ಯಸ್ಯ ಪೌನರುಕ್ತ್ಯಾಖ್ಯಶಬ್ದದೋಷಸ್ಯ ಚಾಪಾತೇನ ಮಹಾದೋಷತ್ವಾಚ್ಚ । ಪ್ರಮಾಣಸಮುದಾಯರೂಪತ್ವೇನಾದೋಷತ್ವಂ ಉಭಯತ್ರಾಪಿ ಸಮಮ್ ॥ ೧೩೭೫-೧೩೭೬ ॥

**ವಿವರಣೆ–** ಪ್ರಮಾಣಸಿದ್ಧವಾದ ವಿಷಯವನ್ನು ಅನುವಾದ ಮಾಡಿದರೆ ದೋಷವಿಲ್ಲ ಎಂದು ಹೇಳಬೇಕು. ಇಲ್ಲದಿದ್ದರೆ ಐಕ್ಯವಾಕ್ಯಗಳಿಗೂ ಪರಸ್ಪರಾನುವಾದಕತ್ವವು ಬರುತ್ತದೆ. ಉತ್ತರ ವಾಕ್ಯವು ಪೂರ್ವವಾಕ್ಯವು ಹೇಳಿದುದನ್ನು ಅನುವಾದ ಮಾಡಬಹುದು, ಆದರೆ ಪೂರ್ವವಾಕ್ಯವು ಉತ್ತರ ವಾಕ್ಯವು ಹೇಳಿದ ಅರ್ಥವನ್ನು ಹೇಗೆ ಅನುವಾದ ಮಾಡಲು ಸಾಧ್ಯ ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಏಕೆಂದರೆ ಹೇಗೆ ಸುಂದೋಪಸುಂದರು ಸಮಬಲರೋ ಹಾಗೆ ಅನಾದಿಯಾದ ವೇದದಲ್ಲಿ ಪೂರ್ವೋತ್ತರವಿಭಾಗವಿಲ್ಲವಾದ್ದರಿಂದ ಎಲ್ಲ ವಾಕ್ಯಗಳೂ ಸಮಬಲವಾಗಿರುತ್ತವೆ. ಆದ್ದರಿಂದ ಪೂರ್ವವಾಕ್ಯವು ಉತ್ತರವಾಕ್ಯದ ಅರ್ಥವನ್ನು ಅನುವಾದ ಮಾಡಬಹುದು. ಹಾಗೆ ಇನ್ನೊಂದು ಐಕ್ಯವಾಕ್ಯದ ಅರ್ಥದ

ಅನುವಾದವನ್ನು ಮಾಡುವುದರಿಂದ ಅದೂ ದೂಷ್ಯವಾಗುತ್ತದೆ. ಪ್ರತ್ಯಕ್ಷ ಪ್ರಾಪ್ತವಾದುದರ ಅನುವಾದವು ಮಾತ್ರ ದೂಷ್ಯವಾಗುತ್ತದೆ, ವಾಕ್ಯಪ್ರಾಪ್ತವಾದುದರ ಅನುವಾದವು ದೂಷ್ಯವಾಗುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ತದ್ಧೈಕ ಆಹುಃ ಅಸದೇವೇದಮಗ್ರ ಆಸೀತ್ ಎಂಬ ಶ್ರುತಿಯು ಬೌದ್ಧ ಮತದ ವಾಕ್ಯಗಳಿಂದ ಪ್ರಾಪ್ತವಾದುದನ್ನೇ ಅನುವಾದ ಮಾಡಿ ಕಥಂ ಅಸತಃ ಸಜ್ಜಾಯೇತ ಎಂದು ದೂಷಣೆಯನ್ನು ಮಾಡುತ್ತದೆ. ಅದೂ ಅಲ್ಲದೆ, ಒಂದು ಪ್ರಮಾಣದಿಂದ ಹೇಳಲ್ಪಟ್ಟದ್ದು, ಇನ್ನೊಂದು ಪ್ರಮಾಣದಿಂದಲೂ ಸಿದ್ಧವಾದರೆ ಮೊದಲನೆಯ ಪ್ರಮಾಣದ ಪ್ರಾಮಾಣ್ಯವು ದೃಢವಾಗುತ್ತದೆ. ಹಾಗಿಲ್ಲದಿದ್ದರೆ ಒಂದು ವಾಕ್ಯದಿಂದ ಹೇಳಿದ ಅರ್ಥವನ್ನೇ ಇನ್ನೊಂದು ವಾಕ್ಯವು ಹೇಳಿದರೆ ಅದಕ್ಕೆ ವೈಯರ್ಥ್ಯ ಮತ್ತು ಪೌನರುಕ್ತ್ಯರೂಪವಾದ ಶಬ್ದದೋಷಗಳು ಉಂಟಾಗುತ್ತದೆ. ಒಂದೇ ಅರ್ಥದಲ್ಲಿರುವ ಪ್ರಮಾಣಸಮುದಾಯವಾದ್ದರಿಂದ ದೋಷವಿಲ್ಲವೆಂದು ಹೇಳುವುದಾದರೆ ಅದು ಪ್ರತ್ಯಕ್ಷ ಮತ್ತು ವಾಕ್ಯಗಳಿಗೂ ಸಮವಾದುದು. ನೀನು ಚತ್ವಾರಿ ಮಹಾವಾಕ್ಯಾನಿ ಎಂದು ಹೇಳಿ, ನಾಲ್ಕು ಮಹಾವಾಕ್ಯಗಳು ಐಕ್ಯವನ್ನು ಹೇಳುತ್ತವೆ ಎಂದು ಹೇಳುತ್ತೀಯೆ. ಆಗ ಒಂದು ವಾಕ್ಯದಿಂದ ಪ್ರಾಪ್ತವಾದ ಐಕ್ಯವನ್ನು ಇನ್ನೊಂದು ವಾಕ್ಯವು ಅನುವಾದ ಮಾಡುವುದರಿಂದ ಅನುವಾದಕವಾದ ವಾಕ್ಯವು ಅಪ್ರಮಾಣವಾಗಬೇಕಾಗುತ್ತದೆ. ಹಾಗಲ್ಲ, ಈ ವಾಕ್ಯಗಳೆಲ್ಲವೂ ಐಕ್ಯರೂಪವಾದ ಒಂದೇ ಅರ್ಥದಲ್ಲಿರುವ ಅನೇಕ ಪ್ರಮಾಣಗಳು, ಆದ್ದರಿಂದ ಐಕ್ಯವು ದೃಢವಾಗುತ್ತದೆ ಎಂದು ಹೇಳುವುದಾದರೆ ಭೇದದ ವಿಷಯದಲ್ಲಿ ಪ್ರತ್ಯಕ್ಷವು ಮತ್ತು ಶ್ರುತಿಯು ಇದ್ದರೂ ಅವೂ ಸಹ ಒಂದೇ ಅರ್ಥದಲ್ಲಿರುವ ಅನೇಕ ಪ್ರಮಾಣಗಳು. ಆದ್ದರಿಂದ ಭೇದವೂ ದೃಢವಾಗುತ್ತದೆ ಎಂದು ಒಪ್ಪಬೇಕು.

**ಸರ್ವಾರ್ಥಾನ್ ಸ್ವತ ಏವಾಹ ಪ್ರಲಯೇಪಿ ಸತೀ ಶ್ರುತಿಃ ।**
**ಸೃಷ್ಟೌ ತದುದಿತಾನರ್ಥಾನ್ ಸರ್ವೇ ವೇದಾನುಸಾರತಃ ॥ ೧೩೭೭ ॥**

**ಅನುಮಿನ್ವಂತಿ ಪಶ್ಯಂತಿ ವದಂತಿ ಚ ತತಸ್ತತಃ ।**
**ಅತೋಽನ್ಯದನುವಾದಿ ಸ್ಯಾಚ್ಛ್ರುತಿಸ್ತ್ವನ್ಯಾನಪೇಕ್ಷಿಣೀ ॥ ೧೩೭೮ ॥**

**ಅರ್ಥ–** ಪ್ರಲಯೇಪಿ ಸತೀ= ಪ್ರಲಯಕಾಲದಲ್ಲಿಯೂ ವಿದ್ಯಮಾನವಾದ, ಶ್ರುತಿಃ= ಶ್ರುತಿಯು, ಸರ್ವಾರ್ಥಾನ್= ಎಲ್ಲ ಅರ್ಥಗಳನ್ನು, ಸ್ವತ ಏವ= ಅನ್ಯಾಪೇಕ್ಷೆ ಇಲ್ಲದೆಯೆ, ಆಹ= ಹೇಳುತ್ತದೆ, ಸೃಷ್ಟೌ= ಸೃಷ್ಟಿಯಾದಮೇಲೆ, ಸರ್ವೇ= ಎಲ್ಲರೂ, ತತಸ್ತತಃ= ಅಲ್ಲಲ್ಲಿ, ವೇದಾನುಸಾರತಃ= ವೇದಕ್ಕೆ ಅನುಸಾರವಾಗಿ, ತದುದಿತಾನರ್ಥಾನ್= ವೇದವು ಹೇಳಿದ ಅರ್ಥಗಳನ್ನು, ಪಶ್ಯಂತಿ= ಪ್ರತ್ಯಕ್ಷದಿಂದ ನೋಡುತ್ತಾರೆ, ಅನುಮಿನ್ವಂತಿ= ಅನುಮಾನದಿಂದ ತಿಳಿಯುತ್ತಾರೆ, ವದಂತಿ ಚ= ಮತ್ತು ಶಬ್ದಗಳಿಂದ ತಿಳಿಯುತ್ತಾರೆ, ಅತಃ= ಆದ್ದರಿಂದ, ಅನ್ಯತ್= ಶ್ರುತಿಯನ್ನು ಬಿಟ್ಟು ಬೇರೆ ಪ್ರಮಾಣವು, ಅನುವಾದಿಸ್ಯಾತ್= ಅನುವಾದಕವಾಗಬಹುದು,

ಶ್ರುತಿಸ್ತು= ಶ್ರುತಿಯಾದರೂ, ಅನ್ಯಾನಪೇಕ್ಷಿಣೀ= ಇನ್ನೊಂದರ ಸಹಾಯವನ್ನು ಬಯಸುವುದಿಲ್ಲ (ಆದ್ದರಿಂದ ಅನುವಾದಕವಾಗುವುದಿಲ್ಲ).

**ಅನುವಾದ–** ಪ್ರಳಯಕಾಲದಲ್ಲಿ ವೇದವು ಎಲ್ಲ ಅರ್ಥವನ್ನು ತಾನೇ ಸ್ವತಃ ಹೇಳುತ್ತದೆ. ಸೃಷ್ಟಿಯಾದ ನಂತರ ವೇದವು ಹೇಳಿದ ಅರ್ಥಗಳನ್ನು ಎಲ್ಲ ಜನರೂ ಅನುಮಾನ ಮತ್ತು ಪ್ರತ್ಯಕ್ಷಗಳಿಂದ ತಿಳಿಯುತ್ತಾರೆ. ಆದ್ದರಿಂದ ಪ್ರತ್ಯಕ್ಷ ಮತ್ತು ಅನುಮಾನಗಳು ಅನುವಾದಕವಾಗಬಹುದು. ಅನ್ಯಾನಪೇಕ್ಷಣೆಯಾದ ಶ್ರುತಿಯು ಎಂದೂ ಅನುವಾದಕವಾಗುವುದಿಲ್ಲ.

**ಭಾವವಿಲಾಸಿನೀ–** ಯಚ್ಚ ಶ್ರುತೇರನುವಾದಕತ್ವಮುಕ್ತಮ್ । ತದಪಿ ನ ಯುಕ್ತಿಯುಕ್ತಮಿತ್ಯಾಹ – **ಸರ್ವಾರ್ಥಾನಿತಿ ॥** ಸ್ವತಃ ಪ್ರಮಾಣಾಂತರಮನಪೇಕ್ಷ್ಯ ಸ್ವಶಕ್ತ್ಯೈವ । ಅಪೌರುಷೇಯತ್ವಾದಿತಿ ಭಾವಃ। ಸರ್ವಜ್ಞೇಶ್ವರ ಪ್ರತ್ಯಕ್ಷಸಿದ್ಧತ್ವಮಾತ್ರೇಣಾನುವಾದಿತ್ವೇ ಐಕ್ಯಶ್ರುತೇರಪ್ಯನುವಾದಿತ್ವಂ ಸ್ಯಾದಿತಿ ಚೋಹ್ಯಮ್। ಅತಃ ಶ್ರುತೇರೇವ ಪೂರ್ವಪ್ರಮಾಣತ್ವಾತ್ ॥ ೧೩೭೭-೧೩೭೮ ॥

**ವಿವರಣೆ–** ಶ್ರುತಿಯು ಅನುವಾದಕ ಎಂಬ ಪ್ರಮೇಯವೇ ಮೊದಲು ಸಿದ್ಧವಾಗುವುದಿಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಪ್ರಳಯಕಾಲದಲ್ಲಿರುವ ಶ್ರುತಿಯು ಪ್ರಮಾಣಾದಂತರ ಅಪೇಕ್ಷೆ ಇಲ್ಲದೆ ಎಲ್ಲ ಅರ್ಥಗಳನ್ನೂ ನಿರೂಪಿಸುತ್ತದೆ. ಆದ್ದರಿಂದ ಅದು ಯಾವುದನ್ನೂ ಅನುವಾದ ಮಾಡುವುದಿಲ್ಲ. ಅದೇ ಮೊದಲನೆಯ ಪ್ರಮಾಣ. ಪ್ರತ್ಯಕ್ಷಾನುಮಾನಾದಿಗಳು ಅನಂತರದ ಪ್ರಮಾಣಗಳು. ವೇದವು ತನ್ನ ಸಾಮರ್ಥ್ಯದಿಂದಲೇ ಪ್ರತಿಪಾದನೆಯನ್ನು ಮಾಡಿದರೂ ಈಶ್ವರಪ್ರತ್ಯಕ್ಷಸಿದ್ಧವಾದ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ಅದಕ್ಕೆ ಅನುವಾದಕತ್ವವು ಬರುತ್ತದೆ ಎಂದು ಶಂಕಿಸಿದರೆ, ಹಾಗಾದರೆ ಭೇದವಾಕ್ಯಗಳಿಗೆ ಅನುವಾದಕತ್ವ ಬರುವಂತೆ ಈಶ್ವರಪ್ರತ್ಯಕ್ಷ-ಸಿದ್ಧವಾದ ಐಕ್ಯವನ್ನು ಅನುವಾದ ಮಾಡುವುದರಿಂದ (ನಿನ್ನ ಮತದಂತೆ) ಐಕ್ಯ-ವಾಕ್ಯಗಳಿಗೂ ಅನುವಾದಕತ್ವವು ಬರುವುದರಿಂದ ಐಕ್ಯವೂ ಸಿದ್ಧವಾಗುವುದಿಲ್ಲ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ಶ್ರುತಿಯಲ್ಲಿ ಹೇಳಿದ ವಿಷಯವು ಈಶ್ವರಪ್ರತ್ಯಕ್ಷ-ಸಿದ್ಧವಾದರೂ, ಈಶ್ವರಪ್ರತ್ಯಕ್ಷ ಅನಪೇಕ್ಷವಾಗಿ ಶ್ರುತಿಯು ಹೇಳುವುದರಿಂದ ಶ್ರುತಿಯನ್ನು ಅನುವಾದಕ ಎಂದು ಹೇಳಬಾರದು.

**ಕಿಂಚಾನುವಕ್ತಿ ಯನ್ನಿತ್ಯಂ ನಾನಿತ್ಯಮನುವರ್ತತೇ ॥ ೧೩೭೯ ॥**

**ಅರ್ಥ–** ಕಿಂಚ= ಮತ್ತು, ಯತ್= ಯಾವುದು, ನಿತ್ಯಂ= ನಿತ್ಯವಾದುದೋ, ತತ್= ಅದು, ಅನಿತ್ಯಂ= ಅನಿತ್ಯವಾದುದನ್ನು, ನ ಅನುವರ್ತತೇ= ಅನುಸರಿಸುವುದಿಲ್ಲ ಮತ್ತು, ನ ಅನುವಕ್ತಿ= ಮತ್ತು ಅನುವಾದವನ್ನು ಮಾಡುವುದಿಲ್ಲ.

**ಅನುವಾದ–** ಅದೂ ಅಲ್ಲ... ಅನಿತ್ಯವಾದುದು ನಿತ್ಯವಾದುದು ಹೇಳಿದುದನ್ನು ಅನುವಾದ ಮಾಡುತ್ತದೆ. ನಿತ್ಯವಾದುದು ಅನಿತ್ಯವನ್ನು ಅನುಸರಿಸುವುದಿಲ್ಲ.

**ಭಾವವಿಲಾಸಿನೀ–** ಯತ್ ಯಸ್ಮಾತ್ ॥ ೧೩೭೯ ॥

**ವಿವರಣೆ–** ವೇದವು ನಿತ್ಯ, ಪ್ರತ್ಯಕ್ಷಾನುಮಾನಗಳು ಅನಿತ್ಯ. ಅನಿತ್ಯ ಎಂದರೆ ಜನ್ಯ ಎಂದು ಅರ್ಥ. ಪ್ರತ್ಯಕ್ಷಾನುಮಾನಗಳಿಗಿಂತ ಮೊದಲೇ ಇರುವ ವೇದವು ಪ್ರತ್ಯಕ್ಷಾನುಮಾನಗಳನ್ನು ಅನುಸರಿಸಿ ಅದರ ಅರ್ಥವನ್ನು ಅನುವಾದ ಮಾಡುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಅದಕ್ಕೆ ಬದಲಾಗಿ ನಿತ್ಯಸಿದ್ಧವಾದ ವೇದದ ಅರ್ಥವನ್ನೇ ಪ್ರತ್ಯಕ್ಷಾನುಮಾನಗಳು ವಿಷಯೀಕರಿಸುತ್ತದೆ ಎಂದು ಹೇಳುವುದೇ ಸೂಕ್ತವಾದುದು.

**ಏಕೇಽನ್ಯ ಇತಿ ವಾ ಸಾಽನ್ಯಪ್ರೋಕ್ತತಾಮಪಿ ಯತ್ ಸ್ಫುಟಂ ।**
**ದೂಷ್ಯಾನುವಾದೇ ವದತಿ ತತ್ ಸ್ವೋಕ್ತಂ ನ ನಿಷೇಧತಿ ॥ ೧೩೮೦ ॥**

**ಇತಿ ಮನ್ಯಾಮಹೇ ದೂಷ್ಯಂ ದೂಷಣಂ ಚೈಕವಾಕ್ಯಗಂ ।**
**ಕರೋತಿ ಶಾಖಾಂತರಗಾ ತಚ್ಛಾಖಾಂತರವರ್ತಿನಾಂ ।**
**ನ ದೂಷಣಾಯ ಯತತೇ ವಾಕ್ಯಾನಾಮಿತಿ ಮೇ ಮತಿಃ ॥ ೧೩೮೧ ॥**

**ಅರ್ಥ–** ಯತ್= ಯಾವಕಾರಣದಿಂದ, ದೂಷ್ಯಾನುವಾದೇ= ದೂಷ್ಯವಾದ ಮತವನ್ನು ಅನುವಾದಮಾಡುವಾಗ ಶ್ರುತಿಯು, ಏಕೇ ಅನ್ಯ ಇತಿ ವಾ= ಏಕೇ ಎಂದಾಗಲೀ ಅನ್ಯೇ ಎಂದಾಗಲೀ ಅಥವಾ ಅನ್ಯೈಃ ಎಂದಾಗಲೀ, ಅನ್ಯಪ್ರೋಕ್ತತಾಮಪಿ= ಇನ್ನೊಬ್ಬರಿಂದ ಹೇಳಲ್ಪಟ್ಟಿರುವ ಅಂಶವನ್ನೂ ಸಹ, ಸ್ಫುಟಂ= ಸ್ಫುಟವಾಗಿ, ವದತಿ= ಹೇಳುತ್ತದೆಯೋ, ತತ್= ಆಕಾರಣದಿಂದ, ಸ್ವೋಕ್ತಂ= ತಾನು ಹೇಳಿದ ಅರ್ಥವನ್ನು, ನ ನಿಷೇಧತಿ= ನಿಷೇಧಿಸುವುದಿಲ್ಲ, ಇತಿ= ಎಂದು, ಮನ್ಯಾಮಹೇ= ನಾವು ತಿಳಿಯುತ್ತೇವೆ. ದೂಷ್ಯಂ= ದೂಷ್ಯವಾದ ಅಂಶವನ್ನು, ದೂಷಣಂ ಚ= ಮತ್ತು ದೂಷಣದ ಅಂಶವನ್ನು, ಏಕವಾಕ್ಯಗಂ ಕರೋತಿ= ಒಂದೇ ವಾಕ್ಯದಲ್ಲಿ ಇರುವಂತೆ ಮಾಡುತ್ತದೆ, ತತ್= ಆದ್ದರಿಂದ, ಶಾಖಾಂತರಗಾ= ಇನ್ನೊಂದು ಶಾಖೆಯಲ್ಲಿರುವ ವಾಕ್ಯವು, ಶಾಖಾಂತರವರ್ತಿನಾಂ= ಮತ್ತೊಂದು ಶಾಖೆಯಲ್ಲಿರುವ, ವಾಕ್ಯಾನಾಂ= ವಾಕ್ಯವನ್ನು, ದೂಷಣಾಯ= ದೂಷಣೆ ಮಾಡಲು, ನ ಯತತೇ= ಪ್ರವೃತ್ತವಾಗುವುದಿಲ್ಲ, ಇತಿ= ಎಂದು, ಮೇ ಮತಿಃ= ನನ್ನ ಅಭಿಪ್ರಾಯ.

**ಅನುವಾದ–** ದೂಷ್ಯಾನುವಾದದ ಸಂದರ್ಭದಲ್ಲಿ ಶ್ರುತಿಯು ಅದು ಬೇರೆಯವರ ಮತ ಎಂದು ತಿಳಿಸಲು ಏಕೇ, ಅನ್ಯೇ ಮುಂತಾದ ಶಬ್ದಗಳನ್ನು ಪ್ರಯೋಗಮಾಡುತ್ತದೆ. ಅಂತಹ ಶಬ್ದಗಳನ್ನು ಪ್ರಯೋಗಮಾಡದೆ ಯಾವ ಅರ್ಥವನ್ನು ನಿರೂಪಿಸುತ್ತದೆಯೋ ಅದು ಶ್ರುತಿಯ ಸ್ವಂತ ಅರ್ಥ. ಅದನ್ನು ಶ್ರುತಿಯು ಎಂದೂ ನಿಷೇಧ ಮಾಡುವುದಿಲ್ಲ. ಅಲ್ಲದೇ, ದೂಷಣ ವಾಕ್ಯವು ದೂಷ್ಯವನ್ನೂ, ದೂಷಣವನ್ನೂ ಒಂದೇ ವಾಕ್ಯದಲ್ಲಿ ಇರುವಂತೆ ಮಾಡುತ್ತದೆ. ಒಂದು ಶಾಖೆಯಲ್ಲಿ

ಹೇಳಿದುದನ್ನು ಇನ್ನೊಂದು ಶಾಖೆಯಲ್ಲಿ ದೂಷಣ ಮಾಡುವುದಿಲ್ಲ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಭೇದಶ್ರುತೇರನುವಾದಿತ್ವಾಭಾವೇ ಯುಕ್ತ್ಯಂತರಂ ಚಾಹ – **ಏಕ ಇತಿ** ॥ ಯತ್ ಯಸ್ಮಾತ್ । ತದ್ಧೈಕ ಆಹುರಿತಿ ಸ್ವಪ್ನಮಾಯಾಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತೇತ್ಯಾದೌ ದೂಷ್ಯಾನುವಾದೇ। ತತ್ತಸ್ಮಾತ್ ದೂಷ್ಯಾನುವಾದತ್ವೇಽನ್ಯಪ್ರೋಕ್ತತ್ವ ಜ್ಞಾಪಕಪದಸ್ಯ ಸರ್ವತ್ರ ದರ್ಶನಾತ್ । ಸ್ವೋಕ್ತಂ ತಾದೃಶಪದಂ ವಿನಾ ಸ್ವಮತತಯೈವೋಕ್ತಮ್ । ಯುಕ್ತ್ಯಂತರಂ ಚಾಹ – **ದೂಷ್ಯಮಿತಿ** ॥ ಯಸ್ಮಾತ್ ತದ್ಧೈಕ ಆಹುರಸದೇವೇದಮಗ್ರ ಆಸೀತ್ ಕಥಮಸತಃ ಸಜ್ಜಾಯೇತೇತಿ ವಾಕ್ಯೇ ಸ್ವಪ್ನಮಾಯಾಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ । ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹೇತಿ ವಾಕ್ಯೇಚ ದೂಷ್ಯಂ ದೂಷಣಂ ಚೈಕವಾಕ್ಯಗಂ ಕರೋತಿ । ಯಸ್ಮಿನ್‌ಸ್ಥಲೇ ದೂಷ್ಯಮನುವದತಿ ತತ್ರೈವ ದೂಷಣಮಪಿ ಸ್ಪಷ್ಟಂ ವದತಿ । ಅನ್ಯಥಾ ಸಿದ್ಧಾಂತತ್ವಭ್ರಾಂತ್ಯಾಪಾದಕತಯಾ ಸ್ವಸ್ಯ ವಿಪ್ರಲಂಭಕತ್ವಪ್ರಸಂಗಾತ್ । ತತ್ತಸ್ಮಾತ್ । ಶಾಖಾಂತರಗಾ ಸಾಮಶಾಖೋಪನಿಷದಿ ವಿದ್ಯಮಾನಾ ತತ್ತ್ವಮಸೀತ್ಯಾದಿಕಾ । ಶಾಖಾಂತರವರ್ತಿನಾಂ ಆಥರ್ವಣೋಪನಿಷದಿ ಋಕ್ ಸಂಹಿತಾವಾಮನಸೂಕ್ತೇ ಚ ವಿದ್ಯಮಾನಾನಾಂ ವಾಕ್ಯಾನಾಂ ದ್ವಾಸುಪರ್ಣೇತ್ಯಾದಿ ವಾಕ್ಯಾನಾಮ್ ॥ ೧೩೮೦-೧೩೮೧ ॥

**ವಿವರಣೆ–** 'ತದ್ಧೈಕ ಆಹುಃ' 'ಸೃಷ್ಟಿರನ್ಯೈಃ ವಿಕಲ್ಪಿತಾ' 'ವಿಭೂತಿಂ ಪ್ರಸವಂ ಚಾನ್ಯೇ' ಮೊದಲಾದ ಶ್ರುತಿಗಳಲ್ಲಿ ಯಾವ ಪಕ್ಷಗಳನ್ನು ಶ್ರುತಿಯು ದೂಷಣ ಮಾಡುತ್ತದೆಯೋ ಅದನ್ನು ಅನುವಾದ ಮಾಡುವಾಗ ಇದು ಇನ್ನೊಬ್ಬರ ಪಕ್ಷ ಎಂದು ತಿಳಿಸಲು ಏಕೇ ಅನ್ಯೈಃ ಮೊದಲಾದ ಶಬ್ದಗಳನ್ನು ಪ್ರಯೋಗ ಮಾಡುತ್ತದೆ. ಎಲ್ಲಿ ಅಂತಹ ಪ್ರಯೋಗವನ್ನು ಮಾಡುವುದಿಲ್ಲವೋ ಅಂತಹ ಸ್ಥಳಗಳಲ್ಲಿ ಉದಾಹರಣೆಗೆ 'ಕಥಂ ಅಸತಃ ಸಜ್ಜಾಯೇತ' ಎಂಬ ವಾಕ್ಯದಲ್ಲಿ ಶ್ರುತಿಯು ತನ್ನ ಅಭಿಪ್ರಾಯವನ್ನೇ ತಿಳಿಸುತ್ತದೆ. ಹಾಗೆಯೇ 'ದೇವಸ್ಯೈಷಃ ಸ್ವಭಾವೋಯಂ ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬ ವಾಕ್ಯದಲ್ಲಿಯೂ ಅನ್ಯೇ ಮೊದಲಾದ ಶಬ್ದಗಳಿಲ್ಲದೆ ಶ್ರುತಿಯು ತನ್ನ ಸ್ವಂತ ಅಭಿಪ್ರಾಯವನ್ನೇ ತಿಳಿಸುತ್ತದೆ. ಅದನ್ನು ಎಂದೂ ನಿಷೇಧಿಸುವುದಿಲ್ಲ. ದೂಷ್ಯ ಮತಗಳನ್ನು ಅನುವಾದ ಮಾಡುವಾಗ ಅನ್ಯೈಃ ಏಕೇ ಮೊದಲಾದ ಶಬ್ದಗಳನ್ನು ಬಳಸುತ್ತದೆ. ಏಕೆಂದರೆ ಹಾಗೆ ಮಾಡದಿದ್ದರೆ ಅದು ತನ್ನ ಅಭಿಪ್ರಾಯವೆಂಬ ಭ್ರಾಂತಿ ಬರಬಹುದು ಎಂಬ ಕಾರಣದಿಂದ ಅದನ್ನು ಪರಿಹರಿಸುವುದಕ್ಕಾಗಿ ಅಂತಹ ಶಬ್ದಪ್ರಯೋಗವನ್ನು ಮಾಡುತ್ತದೆ. ಆದ್ದರಿಂದ ಏಕೇ ಅನ್ಯೇ ಮುಂತಾದ ಶಬ್ದಗಳನ್ನು ಹೇಳದೇ ಭೇದಶ್ರುತಿಯು ಭೇದವನ್ನು ಹೇಳುವುದರಿಂದ ಭೇದವು ಶ್ರುತಿಯ ಅರ್ಥವೆಂದೇ ತಿಳಿಯುತ್ತದೆ. 'ವಿಭೂತಿಂ ಪ್ರಸವಂಚಾನ್ಯೇ' ಇತ್ಯಾದಿಗಳನ್ನು ಹೇಳಿ ಅದೇ ವಾಕ್ಯದ ಕೊನೆಯಲ್ಲಿ 'ದೇವಸ್ಯೈಷಃ ಸ್ವಭಾವೋಯಂ ಆಪ್ತಕಾಮಸ್ಯ ಕಾಸ್ಪೃಹಾ' ಎಂದು ವೇದವು ಹೇಳುತ್ತದೆ. ಹೀಗೆ

ದೂಷ್ಯವಾದ ಭಾಗವನ್ನೂ, ದೂಷಣರೂಪವಾದ ಭಾಗವನ್ನೂ ಒಂದೇ ಮಹಾವಾಕ್ಯದಲ್ಲಿ ಸೇರಿಸುತ್ತದೆ. ಹೊರತಾಗಿ ಒಂದು ಶಾಖೆಯಲ್ಲಿರುವ ವಾಕ್ಯವನ್ನು ಅನುವಾದ ಮಾಡಿ ಇನ್ನೊಂದು ಶಾಖೆಯು ದೂಷಿಸುವುದಿಲ್ಲ. ನೀನು ಅಭೇದವನ್ನು ಹೇಳುತ್ತದೆಂದು ಹೇಳುವ ತತ್ತ್ವಮಸಿ ವಾಕ್ಯವು ಸಾಮಶಾಖೆ, ಛಾಂದೋಗ್ಯೋಪನಿಷತ್ತಿನಲ್ಲಿದೆ, ಭೇದವನ್ನು ಹೇಳುವ ದ್ವಾಸುಪರ್ಣಾ ಮೊದಲಾದ ವಾಕ್ಯಗಳು ಅಥರ್ವಣೋಪನಿಷತ್ತಿನಲ್ಲಿಯೂ ಮತ್ತು ವಾಮನೋಪನಿಷತ್ತಿನಲ್ಲಿಯೂ ಇದೆ. ಅಥರ್ವಣೋಪನಿಷತ್ತಿನ ವಾಕ್ಯವನ್ನು ಅನುವಾದ ಮಾಡಿ ಛಾಂದುಗ್ಯೋಪನಿಷತ್ತು ದೂಷಣೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಆಗ ದೂಷ್ಯ ದೂಷಣಗಳಿಗೆ ಏಕವಾಕ್ಯಸ್ಥತ್ವವು ಬರುವುದಿಲ್ಲ. ಆದ್ದರಿಂದ ಭೇದವಾಕ್ಯಗಳು ದೂಷಣಾರ್ಥವಾಗಿ ಮಾಡಿದ ಅನುವಾದಗಳೆಂದು ಹೇಳಬಾರದು.

**ತಸ್ಮಾದೃಕ್ಸಂಹಿತಾವಾಕ್ಯೇ ಸಯುಕ್ತಿಕಮುದೀರಿತಮ್ ।**
**ಕುತಃ ಸಾ ದೂಷಯೇತ್ ಸ್ವಾರ್ಥಂ ಸೂಕ್ತೇಽಸ್ಮಿನ್ನಾಸ್ತಿ ದೂಷಣಮ್ ॥೧೩೮೨॥**

**ಅರ್ಥ–** ತಸ್ಮಾತ್= ಆದ್ದರಿಂದ, ಋಕ್ಸಂಹಿತಾವಾಕ್ಯೇ= ಋಕ್ಸಂಹಿತಾವಾಕ್ಯದಲ್ಲಿ, ಸಯುಕ್ತಿಕಂ= ಯುಕ್ತಿಪುರಸ್ಸರವಾಗಿ, ಉದೀರಿತಂ= ಹೇಳಿದ, ಸ್ವಾರ್ಥಂ= ತನ್ನ ಅರ್ಥವನ್ನು, ಸಾ= ಛಾಂದೋಗ್ಯ ಉಪನಿಷತ್ತಿನ ವಾಕ್ಯವನ್ನು, ಕುತಃ= ಏಕೆ, ದೂಷಯೇತ್= ದೂಷಿಸುತ್ತದೆ, ಅಸ್ಮಿನ್= ಈ, ಸೂಕ್ತೇ= ಸೂಕ್ತದಲ್ಲಿ, ದೂಷಣಂ= ದೂಷಣವು, ನಾಸ್ತಿ= ಇಲ್ಲ.

**ಅನುವಾದ–** ಆದ್ದರಿಂದ ಋಕ್ಸಂಹಿತಾ ವಾಕ್ಯದಲ್ಲಿ ಯುಕ್ತಿಪರಸ್ಸರವಾಗಿ ಹೇಳಿದ ಅರ್ಥವನ್ನು ಛಾಂದೋಗ್ಯೋಪನಿಷತ್ತು ಹೇಗೆ ದೂಷಿಸುತ್ತದೆ? ಋಕ್ ಸಂಹಿತೆಯ ವಾಮನ ಸೂಕ್ತದ ಈ ವಾಕ್ಯವು ದೂಷಣಾರ್ಹವಲ್ಲ.

**ಭಾವವಿಲಾಸಿನೀ–** ತಸ್ಮಾತ್ ಶಾಖಾಂತರೋಕ್ತಸ್ಯ ಶಾಖಾಂತರೇ ದೂಷಣಾಯೋಗಾತ್ । ಸ್ವಾರ್ಥಂ ಅನ್ಯ ಇತ್ಯಾದ್ಯನ್ಯೋಕ್ತಿತ್ವ ಜ್ಞಾಪಕಂ ವಿನೈವೋಕ್ತಮರ್ಥಮ್ । ದೂಷ್ಯಸ್ಥಲ ಏವ ದೂಷಣಂ ಚ ನಾತ್ರಾಸ್ತೀತ್ಯಾಹ – **ಸೂಕ್ತ** ಇತಿ ॥ ೧೩೮೨ ॥

**ವಿವರಣೆ–** ಶಾಖಾಂತರೋಕ್ತವಾದುದನ್ನು ಶಾಖಾಂತರವು ದೂಷಣ ಮಾಡುವುದಿಲ್ಲವಾದ ಕಾರಣ ಅಥರ್ವಣವೇದದಲ್ಲಿ ಮತ್ತು ಋಗ್ವೇದದಲ್ಲಿ ಹೇಳಿದ ಭೇದವನ್ನು ಸಾಮವೇದದ ವಾಕ್ಯವು ದೂಷಣೆ ಮಾಡಲು ಸಾಧ್ಯವಿಲ್ಲ. ಮತ್ತು ಅನುವಾದತ್ವವನ್ನು ಸೂಚಿಸುವ ಅನ್ಯೈಃ ಇತ್ಯಾದಿ ಶಬ್ದಗಳೂ ಇಲ್ಲ. ಮತ್ತು ಅನುವಾದ ಮಾಡುವ ಸ್ಥಳದಲ್ಲಿ ಯಾವ ದೂಷಣವನ್ನೂ ಹೇಳಿಲ್ಲ. ಆದ್ದರಿಂದ ಭೇದವಾಕ್ಯಗಳು ದೂಷ್ಯವಲ್ಲ ಎಂದು ಸಿದ್ಧವಾಗುತ್ತದೆ.

**ಸೂಕ್ತಂ ಚೇದಂ ತದೈವ ಸ್ಯಾತ್ ತತ್ವಮೇವ ವದೇದ್ ಯದಿ ।**
**ಅತತ್ವಕಥಕಂ ಸೂಕ್ತಮಿತಿ ಚ ವ್ಯಾಹತಂ ವಚಃ ॥ ೧೩೮೩ ॥**

**ಅರ್ಥ–** ಯದಿ= ಒಂದು ಪಕ್ಷ, ಇದಂ= ಈ ವಾಕ್ಯ ಸಮೂಹವು, ತತ್ತ್ವಮೇವ ವದೇತ್= ತತ್ತ್ವವನ್ನು ಹೇಳಿದರೆ ಮಾತ್ರ, ತದೈವ= ಆಗಲೇ, ಸೂಕ್ತಂ ಸ್ಯಾತ್= ಸೂಕ್ತವೆಂದು ಕರೆಯಲ್ಪಡುತ್ತದೆ, ಸೂಕ್ತಂ= ಸುವಚನವು, ಅತತ್ತ್ವಕಥಕಂ ಇತಿ= ಅತತ್ತ್ವವನ್ನು ಹೇಳುತ್ತದೆ ಎಂಬುದು, ವ್ಯಾಹತಂ ವಚಃ= ವ್ಯಾಹತವಾದ ಮಾತು.

**ಅನುವಾದ– ಈ ವಾಕ್ಯ ಸಮೂಹವು ತತ್ತ್ವವನ್ನು ಹೇಳಿದರೆ ಮಾತ್ರ ಸೂಕ್ತವೆಂದು ಕರೆಯಲ್ಪಡುತ್ತದೆ. ಇದು ಅತತ್ತ್ವವನ್ನು ಹೇಳುವ ಸಮೀಚೀನವಚನ ಎಂಬ ಮಾತು ವ್ಯಾಹತವಾದುದು.**

**ಭಾವವಿಲಾಸಿನೀ– ಯುಕ್ತ್ಯಂತರಂ ಚಾಹ – ಸೂಕ್ತಂ ಚೇದಮಿತಿ ॥ ೧೩೮೩ ॥**

**ವಿವರಣೆ–** ಇದಕ್ಕೆ ಸೂಕ್ತ ಎಂಬ ಹೆಸರಿರುವುದರಿಂದಲೂ, ಸೂಕ್ತ ಎಂದರೆ ಒಳ್ಳೆಯ ವಚನ ಎಂಬ ಅರ್ಥವಿರುವುದರಿಂದಲೂ ಇಲ್ಲಿ ಹೇಳಿದ ಅರ್ಥವು ಅತತ್ತ್ವವಾಗಲು ಸಾಧ್ಯವಿಲ್ಲ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

**ಉದಿತೇಽನುದಿತೇ ಹೋಮವಿಧಾತ್ರ್ಯಪಿ ನ ದೂಷ್ಯತೇ ।**
**ಅವಿರುದ್ಧಾ ತ್ವಿಯಂ ವಾಣೀ ಕುತೋ ವಾ ದೂಷ್ಯತಾಂ ವ್ರಜೇತ್॥ ೧೩೮೪ ॥**

**ಅರ್ಥ–** ಉದಿತೇಽನುದಿತೇ ಹೋಮವಿಧಾತ್ರ್ಯಪಿ= ಸೂರ್ಯೋದಯಕ್ಕೆ ಮೊದಲು ಮತ್ತು ಸೂರ್ಯೋದಯದ ನಂತರ ಹೋಮವನ್ನು ವಿಧಾನ ಮಾಡುವ ವಾಕ್ಯವೂ ಸಹ, ನ ದೂಷ್ಯತೇ= ದೂಷಿಸಲ್ಪಡುವುದಿಲ್ಲ, ಅವಿರುದ್ಧಾತು ಇಯಂ ವಾಣೀ= ವಿರೋಧವಿಲ್ಲದ ಈ ವಾಕ್ಯವು, ಕುತೋ ವಾ= ಹೇಗೆ ತಾನೆ, ದೂಷ್ಯತಾಂ ವ್ರಜೇತ್= ದೂಷ್ಯತ್ವವನ್ನು ಹೊಂದುತ್ತದೆ.

**ಅನುವಾದ– ಉದಿತೇ ಜುಹೋತಿ, ಅನುದಿತೇ ಜುಹೋತಿ ಎಂದು ಸೂರ್ಯೋದಯಕ್ಕಿಂತ ಮೊದಲು ಮತ್ತು ಸೂರ್ಯೋದಯದ ನಂತರ ಹೋಮವನ್ನು ವಿಧಾನ ಮಾಡುವ ವಾಕ್ಯವೂ ದೂಷಿಸಲ್ಪಡುವುದಿಲ್ಲ. ಹೀಗಿರುವಾಗ ಯಾವ ವಿರೋಧವೂ ಇಲ್ಲದ ದ್ವಾಸುಪರ್ಣಾ ಎಂಬ ಶ್ರುತಿಯು ಹೇಗೆ ದೂಷ್ಯವಾಗುತ್ತದೆ?**

**ಭಾವವಿಲಾಸಿನೀ–ಭೇದವಾಕ್ಯಸ್ಯಾದೂಷ್ಯತ್ವೇಕೈಮುತ್ಯಮಾಹ–ಉದಿತ ಇತಿ॥** ಉದಿತೇ ಜುಹೋತಿ ಅನುದಿತೇ ಜುಹೋತೀತಿ ಸ್ಪಷ್ಟಂ ವಿರುದ್ಧಾಪಿ ವಾಙ್ನದೂಷ್ಯತೇ । ಕಿಂತು ಶಾಖಾಭೇದೇನ ಸಮಾಧೀಯತೇ । ತದ್ವತ್ ದ್ವಾಸುಪರ್ಣಾ ನದ್ವಾಸುಪರ್ಣೇತಿ ವಾಕ್ಯದ್ವಯಾಭಾವಾತ್ ಅವಿರುದ್ಧಾ ಸ್ಪಷ್ಟಂ ವಿರೋಧರಹಿತಾ ॥ ೧೩೮೪ ॥

**ವಿವರಣೆ–** ಭೇದವಾಕ್ಯಗಳು ದೂಷ್ಯವಲ್ಲ ಎಂಬ ವಿಷಯದಲ್ಲಿ ಕೈಮುತ್ಯನ್ಯಾಯವನ್ನು ಹೇಳುತ್ತಾರೆ. ಉದಿತೇ ಜುಹೋತಿ ಅನುದಿತೇ ಜುಹೋತಿ ಎಂಬ ವಾಕ್ಯಗಳು ಪರಸ್ಪರ

ವಿರುದ್ಧವಾಗಿ ಕಾಣುತ್ತವೆ. ಆದರೂ ಅಲ್ಲಿ ಯಾವ ವಾಕ್ಯಕ್ಕೂ ಅಪ್ರಾಮಾಣ್ಯವನ್ನು ಹೇಳದೆ ಶಾಖಾಭೇದದಿಂದ ಎರಡನ್ನೂ ಕೂಡಿಸುತ್ತಾರೆ. ಹೀಗಿರುವಾಗ ದ್ವಾಸುಪರ್ಣಾ ಎಂಬ ಶ್ರುತಿಗೆ ವಿರೋಧಿಯಾದ ನ ದ್ವಾಸುಪರ್ಣಾ ಎಂಬ ಶ್ರುತಿ ಇಲ್ಲದಿರುವುದರಿಂದ ಈ ಶ್ರುತಿಯನ್ನು ದೂಷಿಸಲು ಎಂದರೆ ಈ ಶ್ರುತಿಗೆ ಅಪ್ರಾಮಾಣ್ಯವನ್ನು ಹೇಳಲು ಏನೂ ಕಾರಣವಿಲ್ಲ ಎಂದು ಅಭಿಪ್ರಾಯ.

**ಅತೋ ಭೇದಶ್ರುತೇರಗ್ರೇ ಕ ಏಕಃ ಪ್ರತಿತಿಷ್ಠತಿ ।**
**ವಿರುದ್ಧಧರ್ಮೌ ನೀಚೋಚ್ಚೌ ಜೀವೇಶೌ ದ್ವಾವಿಮೌ ವಿನಾ ॥ ೧೩೮೫ ॥**

**ಅರ್ಥ–** ಅತಃ= ಆದ್ದರಿಂದ, ಭೇದಶ್ರುತೇರಗ್ರೇ= ಭೇದಶ್ರುತಿಯ ಎದುರಿನಲ್ಲಿ, ವಿರುದ್ಧ ಧರ್ಮೌ= ವಿರುದ್ಧ ಧರ್ಮಗಳನ್ನು ಹೊಂದಿದ, ನೀಚೋಚ್ಚೌ= ನೀಚ ಮತ್ತು ಉಚ್ಚರಾದ, ಇಮೌ ದ್ವೌ= ಈ ಎಬ್ಬರು, ಜೀವೇಶೌ ವಿನಾ= ಜೀವೇಶ್ವರರನ್ನು ಬಿಟ್ಟು, ಏಕಃ ಕಃ= ಯಾವ ಒಬ್ಬನು, ಪ್ರತಿತಿಷ್ಠತಿ= ಎದುರಿಗೆ ನಿಲ್ಲುತ್ತಾನೆ?

**ಅನುವಾದ–** ಆದ್ದರಿಂದ ಭೇದಶ್ರುತಿಯ ಎದುರಿನಲ್ಲಿ ವಿರುದ್ಧ ಧರ್ಮವುಳ್ಳ ನೀಚೋಚ್ಚರಾದ ಈ ಎಬ್ಬರು ಜೀವೇಶ್ವರರನ್ನು ಬಿಟ್ಟು ಬೇರೆ ಯಾವ ಒಬ್ಬನು ನಿಲ್ಲುವುದಕ್ಕೆ ಸಾಧ್ಯ?

**ಭಾವವಿಲಾಸಿನೀ–** ಸಾಹಿತ್ಯಮುದ್ರಯೋಪಸಂಹರತಿ ॥ **ಅತ ಇತಿ** ॥ ಉಕ್ತವಿಧಯಾ ಬಹುಯುಕ್ತಿಭರಿತತ್ವಾದಿತ್ಯರ್ಥಃ । ಯಥಾ ವೀರಭಟಾಗ್ರೇ ದ್ವಾವೇವ ಸ್ಥಾತುಂ ಶಕ್ತೌ ನ ತ್ವೇಕಃ । ಏವಮಸ್ಯಾಃ ಶ್ರುತೇರಗ್ರೇಜೀವೇಶಯೋರ್ದ್ವಯೋರೇವ ಚೇತನತಯಾ ಪ್ರಬಲಯೋಃ ಸ್ಥಿತಿರ್ಯುಕ್ತಾ । ನತು ಪರೋಕ್ತಕುಯುಕ್ತ್ಯಾ ಏಕಸ್ಯ ಜೀವಸ್ಯ ನಾಪಿ ದುರ್ಬಲಯೋ-ರ್ಬುದ್ಧಿಜೀವಯೋರ್ವೇತಿ ಭಾವಃ ॥ ೧೩೮೫ ॥

**ವಿವರಣೆ–** ಸಾಹಿತ್ಯ ಮುದ್ರೆಯಿಂದ ಇಲ್ಲಿ ಉಪಸಂಹಾರ ಮಾಡುತ್ತಿದ್ದಾರೆ. ಭೇದ ಶ್ರುತಿಯು ವೀರಭಟ. ಅಂತಹ ವೀರಭಟನ ಎದುರಿನಲ್ಲಿ ಒಬ್ಬನು ನಿಲ್ಲಲು ಸಾಧ್ಯವಿಲ್ಲ, ಇಬ್ಬರೇ ನಿಲ್ಲಬೇಕು. ಆದ್ದರಿಂದ ಪರರು ಹೇಳಿದಂತೆ ಒಬ್ಬ ಜೀವನಾಗಲೀ ಅಥವಾ ಇಬ್ಬರಾದ ಬುದ್ಧಿ ಜೀವರಾಗಲೀ ನಿಲ್ಲಲು ಸಾಧ್ಯವಿಲ್ಲ. ಬುದ್ಧಿ ಜೀವರಲ್ಲಿ ಬುದ್ಧಿಯು ಜಡವಾದ್ದರಿಂದ ಇಂತಹ ವೀರಭಟನ ಎದುರಿಗೆ ಎರಡು ಚೇತನಗಳೇ ನಿಲ್ಲಬೇಕಾದ್ದರಿಂದ ಜೀವೇಶ್ವರರೇ ನಿಲ್ಲುತ್ತಾರೆ. ಜೀವೇಶ್ವರರು ನಿಂತರೆ ಮಾತ್ರ ಈ ಶ್ರುತಿಯು ಸುಮ್ಮನಿರುತ್ತದೆ. ಉಳಿದವರು ಯಾರು ನಿಂತರೂ ಅದನ್ನು ಬಾಧಿಸುತ್ತದೆ ಎಂದು ತಾತ್ಪರ್ಯ.

**ಅನುವಾದಾದಿರೂಪೋಽಯಮಿತ್ಯಾಕಾರಾಸ್ತಿ ನ ಶ್ರುತಿಃ ।**
**ತ್ವದ್ವಾಕ್ಯೇ ನ ಮಮಾಶ್ವಾಸಃ ಕಲ್ಪನಾಬೀಜಮುಚ್ಯತಾಮ್ ॥ ೧೩೮೬ ॥**

**ಅರ್ಥ–** ಅಯಂ= ಈ ವಾಕ್ಯವು, ಅನುವಾದಾದಿರೂಪಃ= ಅನುವಾದ ರೂಪವಾಗಿದೆ ಅಥವಾ ವ್ಯಾವಹಾರಿಕ ಭೇದವನ್ನು ಹೇಳುತ್ತದೆ, ಇತ್ಯಾಕಾರಾ= ಎಂಬ ರೀತಿಯಾದ, ಶ್ರುತಿಃ= ಶ್ರುತಿಯು, ನಾಸ್ತಿ= ಇಲ್ಲ, ತ್ವದ್ವಾಕ್ಯೇ= ನಿನ್ನ ಮಾತಿನಲ್ಲಿ, ಮಮ ಆಶ್ವಾಸಃ ನ= ನನಗೆ ವಿಶ್ವಾಸವಿಲ್ಲ, ಕಲ್ಪನಾ ಬೀಜಂ= ವ್ಯಾವಹಾರಿಕವೆಂದು ಅಥವಾ ಅನುವಾದವೆಂದು ಕಲ್ಪನೆ ಮಾಡುವುದಕ್ಕೆ, ಉಚ್ಯತಾಂ= ಏನು ಕಾರಣವೆಂದು ಹೇಳು.

**ಅನುವಾದ–** ಈ ವಾಕ್ಯವು ಅನುವಾದ ರೂಪವಾಗಿದೆ ಎಂದಾಗಲೀ ಅಥವಾ ವ್ಯಾವಹಾರಿಕ ಭೇದವನ್ನು ಹೇಳುತ್ತದೆ ಎಂದಾಗಲೀ ಹೇಳುವ ಶ್ರುತಿಯಿಲ್ಲ. ನಿನ್ನ ಮಾತಿನಲ್ಲಿ ನನಗೆ ವಿಶ್ವಾಸವಿಲ್ಲ. ಆದ್ದರಿಂದ ಈ ವಚನವು ಅನುವಾದ ರೂಪವಾಗಿದೆ ಎಂದು ಹೇಳುವುದಕ್ಕೆ ಏನು ಕಾರಣವೆಂದು ಹೇಳು.

**ಭಾವವಿಲಾಸಿನೀ–** ಪ್ರಕಾರಾಂತರೇಣ ಅನುವಾದಕತ್ವವ್ಯಾವಹಾರಿಕತ್ವಾದಿಪಕ್ಷಂ ದೂಷಯತಿ– ಅನುವಾದೇತಿ ॥ ಅನುವಾದರೂಪಃ ಆದಿಪದೇನ ವ್ಯಾವಹಾರಿಕಭೇದಪ್ರತಿಪಾದಕರೂಪ ಇತಿ ಗೃಹ್ಯತೇ। ಅಯಂ ಭೇದಪ್ರತಿಪಾದಕಶ್ರುತಿಸಮುದಾಯಃ । ತದ್ವಾಕ್ಯೇ ತವ ಪ್ರತಿವಾದಿನಃ ಅನುವಾದರೂಪೇಯಂ ಶ್ರುತಿರಿತಿ ಸ್ವಕಪೋಲಕಲ್ಪಿತವಾಕ್ಯೇ ॥ ೧೩೮೬ ॥

**ವಿವರಣೆ–** ಶ್ರುತಿಯಲ್ಲಿ ಅನುವಾದ ಎಂದು ಹೇಳುವುದಕ್ಕಾಗಲೀ, ವ್ಯಾವಹಾರಿಕ ಎಂದು ಹೇಳುವುದಕ್ಕಾಗಲೀ ಯಾವ ಸೂಚನೆಯೂ ಇಲ್ಲ, ವಾಕ್ಯಾಂತರ ವಿರೋಧವಿಲ್ಲ. ವ್ಯಾವಹಾರಿಕ ಭೇದವನ್ನು ಹೇಳುತ್ತದೆ ಎಂಬುದು ಕೇವಲ ಅದ್ವೈತಿಗಳ ಮಾತು. ಪ್ರತಿವಾದಿಗಳಾದ ನಾವು ಈ ಮಾತನ್ನು ಒಪ್ಪುವುದಿಲ್ಲವಾದ ಕಾರಣ ಹೀಗೆ ಕಲ್ಪನೆ ಮಾಡಲು ಏನು ಕಾರಣ ಎಂದು ಹೇಳು ಎಂದು ಅಭಿಪ್ರಾಯ.

ಐಕ್ಯೋಕ್ತೇರನ್ಯಥಾಯೋಗಾತ್ ಪರಂ ಕಲ್ಪ್ಯಮಿದಂ ತ್ವಯಾ ।
ಸಾ ತ್ವದ್ಯಾಪಿ ರಣೋದ್ಯೋಗಾದವ್ಯಾವೃತ್ತಪದದ್ವಯಾ ॥ ೧೩೮೭ ॥

ವೃತ್ತ್ಯಂತರೇ ಕ್ಷಿಪ್ತಪದಾ ಮಾನತ್ರಯಭಯಾರ್ದಿತಾ ।
ಮುಖ್ಯಾರ್ಥೇ ನಾಕರೋಚ್ಛ್ರದ್ಧಾಮಗ್ನ್ಯುಸೇಚನವಾಗಿವ ॥ ೧೩೮೮ ॥

**ಅರ್ಥ–** ಪರಂ= ಕೇವಲ, ಅನ್ಯಥಾ= ಅನುವಾದ ಎಂದು ಹೇಳದಿದ್ದರೆ, ಐಕ್ಯೋಕ್ತೇಃ ಅಯೋಗಾತ್= ಐಕ್ಯ ಉಕ್ತಿಯು ಕೂಡುವುದಿಲ್ಲವಾದ ಕಾರಣ, ತ್ವಯಾ= ನಿನ್ನಿಂದ, ಇದಂ ಕಲ್ಪ್ಯಂ= ಇದು ಕಲ್ಪಿಸಲ್ಪಡಬೇಕು, ಸಾತು= ಆ ಐಕ್ಯೋಕ್ತಿಯಾದರೂ, ಅದ್ಯಾಪಿ= ಈಗಲೂ ಕೂಡ, ರಣೋದ್ಯೋಗಾತ್= ಭೇದವಾದಿಗಳ ಜೊತೆಯಲ್ಲಿ ಮಾಡುತ್ತಿರುವ ಯುದ್ಧದ ಪ್ರಯತ್ನದಿಂದ, ಅವ್ಯಾವೃತ್ತಪದದ್ವಯಾ= ಎರಡು ಹೆಜ್ಜೆಗಳನ್ನೂ ಹಿಂದೆ ಇಟ್ಟಿಲ್ಲ, ಅಲ್ಲದೇ, ವೃತ್ತ್ಯಂತರೇ= ಬೇರೆಯ ವೃತ್ತಿಯಲ್ಲಿ (ಬೇರೆ ಸ್ಥಳದಲ್ಲಿ), ಕ್ಷಿಪ್ತಪದಾ= ಪಾದ

ವಿನ್ಯಾಸವುಳ್ಳದ್ದಾಗಿ, ಮಾನತ್ರಯಭಯಾರ್ದಿತಾ= ಪ್ರತ್ಯಕ್ಷ ಅನುಮಾನ ಮತ್ತು ಆಗಮಗಳ ಭಯದಿಂದ ಪೀಡಿತವಾಗಿ, ಅಗ್ನ್ಯಾಸೇಚನವಾಗಿವ= ಅಗ್ನಿಯಿಂದ ಚಿಮುಕಿಸುತ್ತಾನೆ ಎಂಬ ಮಾತಿನಂತೆ, ಮುಖ್ಯಾರ್ಥೇ= ಮುಖ್ಯಾರ್ಥದಲ್ಲಿ, ಶ್ರದ್ಧಾಂ ನಾ ಕರೋತ್= ವಿಶ್ವಾಸವನ್ನು ಮಾಡಲಿಲ್ಲ.

**ಅನುವಾದ–** ಭೇದಶ್ರುತಿಗೆ ಅನುವಾದಾದಿ ರೂಪತ್ವವನ್ನು ಹೇಳದಿದ್ದರೆ ಐಕ್ಯೋಕ್ತಿಯು ಕೂಡುವುದಿಲ್ಲ ಎಂಬ ಒಂದೇ ಕಾರಣದಿಂದ ನೀನು ಇದನ್ನು ಕಲ್ಪನೆ ಮಾಡಬೇಕು. ಆದರೆ ಐಕ್ಯೋಕ್ತಿಯಾದರೂ ಯುದ್ಧಭೂಮಿಯಿಂದ (ಭೇದವಾದಿಗಳ ಜೊತೆಯಲ್ಲಿ ವಾಕ್ಯಾರ್ಥ ಮಾಡುವ ಪ್ರಯತ್ನದಿಂದ) ಎರಡು ಹೆಜ್ಜೆಗಳನ್ನೂ ಹಿಂದೆ ಇಟ್ಟಿಲ್ಲ (ತತ್ ತ್ವಂ ಪದಗಳ ಅರ್ಥವನ್ನೇ ಇನ್ನೂ ನಿಶ್ಚಯಿಸಿಲ್ಲ). ಅಲ್ಲದೇ ಬೇರೆ ಮಾರ್ಗದಲ್ಲಿ (ಬೇರೆ ವೃತ್ತಿಯಲ್ಲಿ) ಹೆಜ್ಜೆಯನ್ನು ಇಡುತ್ತಾ (ಪದವನ್ನು ಪ್ರಯೋಗಿಸುತ್ತಾ) ಪ್ರತ್ಯಕ್ಷ ಅನುಮಾನ ಆಗಮಗಳ ಭಯದಿಂದ ಪೀಡಿತವಾಗಿ ಅಗ್ನಿನಾ ಸಿಂಚತಿ ಎಂಬ ವಾಕ್ಯವು ಹೇಗೆ ಮುಖ್ಯಾರ್ಥವನ್ನು ಪ್ರತಿಪಾದಿಸುವುದಿಲ್ಲವೋ, ಅದರಂತೆ ಐಕ್ಯವಾಕ್ಯವು ಮುಖ್ಯಾರ್ಥದಲ್ಲಿ ವಿಶ್ವಾಸವನ್ನು ಮಾಡಲಿಲ್ಲ (ಮುಖ್ಯಾರ್ಥವನ್ನು ಪ್ರತಿಪಾದಿಸುವುದಿಲ್ಲ).

**ಭಾವವಿಲಾಸಿನೀ–** ಪರಾಭಿಪ್ರಾಯಮುದ್ಘಾಟ್ಯ ದೂಷಯತಿ – ಐಕ್ಯೋಕ್ತೇರಿತ್ಯಾದಿನಾ ॥ ಸಾ ಐಕ್ಯಶ್ರುತಿಃ । ಅವ್ಯಾವೃತ್ತಪದದ್ವಯಾ ಅವ್ಯಾವೃತ್ತಂ ವಾಗ್ಯುದ್ಧಮಧ್ಯ ಏವಸ್ಥಿತಂ ಪದದ್ವಯಂ ತತ್ತ್ವಮಿತಿ ಪದದ್ವಯಂ ಯಸ್ಯಾಃ ಸಾ ತಥೋಕ್ತಾ । ಪಾದವಿನ್ಯಾಸದ್ವಯವತೀತಿ ಧ್ವನಿಃ । ಅತದಿತಿ ಪದಚ್ಛೇದಸ್ಯ ಸಂಭವೇನ ಸ್ವಾನುಕೂಲಪದ ಏವ ಸಂದೇಹಃ। ಐಕ್ಯಪ್ರತಿಪಾದನಂ ದೂರಾಪಾಸ್ತಮಿತಿ ಭಾವಃ । ಉಪಲಕ್ಷಣಂ ಚೈತತ್। ಉಕ್ತರೀತ್ಯಾ ನಿರವಕಾಶಭೇದಶ್ರುತೇರನ್ಯಥಾನುಪಪತ್ತ್ಯಾ ಐಕ್ಯಶ್ರುತೇರೇವ ಕುತೋ ನ ವ್ಯಾವಹಾರಿಕೈಕ್ಯಪರತಾ ಕಲ್ಪ್ಯಾ । ಅತೋ ನೇದಂ ಕಲ್ಪನಾ-ಬೀಜಮಿತ್ಯಪಿ ದ್ರಷ್ಟವ್ಯಮ್ ॥ ೧೩೮೭-೧೩೮೮ ॥

**ವಿವರಣೆ–** ಅದ್ವೈತಿಗಳ ಅಭಿಪ್ರಾಯವನ್ನು ಉದ್ಘಾಟಿಸಿ ದೂಷಿಸುತ್ತಾರೆ. ತತ್ತ್ವಮಸಿ ವಾಕ್ಯದಲ್ಲಿನ ತತ್ ತ್ವಂ ಎಂಬ ಎರಡು ಪದಗಳ ಅರ್ಥವು ಇನ್ನೂ ವಿವಾದದಲ್ಲೇ ಮುಳುಗಿರುವುದರಿಂದ ಅದು ಯಾವ ಅರ್ಥವನ್ನೂ ಸಾಧಿಸುವುದಿಲ್ಲ. ಜೊತೆಗೆ ಪ್ರತ್ಯಕ್ಷಾದಿ ಭಯವಿರುವುದರಿಂದ ಅದು ವೃತ್ತ್ಯಂತರದಲ್ಲಿ ಅಂದರೆ ಅತತ್ ಎಂಬ ಪದಚ್ಛೇದದ ದಾರಿಯನ್ನೇ ನೋಡಿ ಅಲ್ಲಿಯೇ ಕಾಲಿಡಲು ಪ್ರಯತ್ನಪಡುತ್ತಿದೆ. ಐಕ್ಯಪ್ರತಿಪಾದನೆಯಂತೂ ದೂರಾಪಾಸ್ತವಾಯಿತು. ಅಷ್ಟೇ ಅಲ್ಲದೇ, ಭೇದ ಶ್ರುತಿಯು ಪ್ರಬಲವಾಗಿರುವುದರಿಂದ ಅದರ ವಿರೋಧದಿಂದ ಐಕ್ಯಶ್ರುತಿಗೆ ಏಕೆ ವ್ಯಾವಹಾರಿಕ ಐಕ್ಯಪರತ್ವವನ್ನು ಹೇಳಬಾರದು ಎಂದು ಅಭಿಪ್ರಾಯ.

**ಅತೋ ಯಥಾಶ್ರುತೋ ವಾಕ್ಯಸ್ಯಾರ್ಥೋ ವಾಚ್ಯೋ ಮನೀಷಿಭಿಃ ।**
**ಅವಿರುದ್ಧಃ ಸ್ವಪರತಃ ತಥಾ ಮಾನಾಂತರಾದಪಿ ॥ ೧೩೮೯ ॥**

**ಅರ್ಥ–** ಅತಃ= ಆದ್ದರಿಂದ, ಮನೀಷಿಭಿಃ= ವಿವೇಕಿಗಳಿಂದ, ಸ್ವಪರತಃ= ತನ್ನಿಂದಲೂ ಮತ್ತು ಬೇರೆ ವಾಕ್ಯಗಳಿಂದಲೂ, ತಥಾ= ಹಾಗೆಯೇ, ಮಾನಾಂತರಾದಪಿ= ಬೇರೆ ಪ್ರಮಾಣಗಳಿಂದಲೂ, ಅವಿರುದ್ಧಃ= ವಿರೋಧವಿಲ್ಲದ, ಯಥಾಶ್ರುತಃ= ಯಥಾ ಶ್ರುತವಾದ, ಅರ್ಥಃ= ಅರ್ಥವು, ವಾಕ್ಯಸ್ಯ= ವಾಕ್ಯಕ್ಕೆ, ವಾಚ್ಯಃ= ಹೇಳಲ್ಪಡಬೇಕು.

**ಅನುವಾದ– ಆದ್ದರಿಂದ ವಿವೇಕಿಗಳಾದವರು ಅವಿರೋಧವಿಲ್ಲದಂತೆ, ವಾಕ್ಯಾಂತರ ವಿರೋಧವಿಲ್ಲದಂತೆ ಮತ್ತು ಪ್ರಮಾಣಾಂತರವಿರೋಧವಿಲ್ಲದಂತೆ ಇರುವ ಯಥಾಶ್ರುತವಾದ ಅರ್ಥವನ್ನೇ ವಾಕ್ಯಾರ್ಥವೆಂದು ಹೇಳಬೇಕು.**

**ಭಾವವಿಲಾಸಿನೀ– ಉಪಸಂಹರತಿ ॥ ಅತ ಇತಿ ॥ ಅತಃ ವ್ಯಾವಹಾರಿಕತ್ವಾದಿಕಲ್ಪನಾದಿ (ಕಲ್ಪನಾ)ಬೀಜಾಭಾವಾತ್ । ಸ್ವಪದತಃ ವಾಕ್ಯಸ್ಥಿತಪದಾತ್ ಪ್ರತ್ಯಕ್ಷಾದಿಪ್ರಮಾಣಾಂತರಾಚ್ಚ ಅವಿರುದ್ಧೋ ಯೋ ವಾಕ್ಯಸ್ಯಾರ್ಥಃ ಸ ಯಥಾಶ್ರುತ ಏವವಾಚ್ಯಃ । ವಿರುದ್ಧಸ್ತು ನ ಯಥಾಶ್ರುತ ಏವ ವಾಚ್ಯಃ । ಕಿಂತು ವಾಕ್ಯಸ್ಯ ವೃತ್ತ್ಯಂತರಮಂಗೀಕೃತ್ಯಾವಿರುದ್ಧೋ ಯಥಾ ಭವತಿ ತಥೈವ ವಾಚ್ಯಃ । ಅಪ್ರಮಾಣ್ಯಾಪಾದಕಾನುವಾದಕತ್ವ ವ್ಯಾವಹಾರಿಕತ್ವಾದಿಕಂ ತು ನ ಕುತ್ರಾಪಿ ವಾಕ್ಯೇ ವಾಚ್ಯಮಿತಿ ಭಾವಃ ॥ ೧೩೮೯ ॥**

**ವಿವರಣೆ–** ಸ್ವವಿರುದ್ಧವಾದ ಮತ್ತು ಮಾನಾಂತರ ವಿರುದ್ಧವಾದ ಅರ್ಥವು ವಾಕ್ಯದ ಯಥಾಶ್ರುತವಾದ ಅರ್ಥವಲ್ಲ. ವಿರೋಧವು ಬಂದಾಗ ವೃತ್ತ್ಯಂತರವನ್ನು ಅಂಗೀಕರಿಸಿ ವಿರೋಧವು ಬರದಂತೆ ಅರ್ಥವನ್ನು ಮಾಡಬೇಕು. ಅಪ್ರಾಮಾಣ್ಯಾಪಾದಕವಾದ ಅನುವಾದಕತ್ವವನ್ನಾಗಲೀ, ವ್ಯಾವಹಾರಿಕ ಪರತ್ವವನ್ನಾಗಲೀ ಯಾವ ವೇದವಾಕ್ಯಕ್ಕೂ ಹೇಳಬಾರದು ಎಂದು ಅಭಿಪ್ರಾಯ.

**ಅವಿದ್ಯಮಾನೋ ಭೇದೋಽಯಂ ಯದ್ಯುಪಾಸ್ತ್ಯರ್ಥಮುಚ್ಯತೇ ।**
**ತರ್ಹಿ ತ್ರ್ಯಕ್ಷಃ ಸಹಸ್ರಾಕ್ಷಃ ಸಹಸ್ರಾಕ್ಷಸ್ತ್ರಿಲೋಚನಃ ॥ ೧೩೯೦ ॥**

**ಕುತೋ ನ ಕೀರ್ತ್ಯತೇ ಧ್ಯಾತುಂ ತಸ್ಮಾದ್ಯದ್ ವಸ್ತು ಯಾದೃಶಮ್ ।**
**ತತ್ತಥೈವ ವದೇದ್ ವೇದೋ ಧ್ಯಾತುಂ ವಾ ದ್ರಷ್ಟುಮೇವ ವಾ ॥ ೧೩೯೧ ॥**

**ಅರ್ಥ–** ಉಪಾಸ್ತ್ಯರ್ಥಂ= ಉಪಾಸನೆಯ ಸಲುವಾಗಿ, ಅವಿದ್ಯಮಾನಃ ಅಯಂ ಭೇದಃ= ಅವಿದ್ಯಮಾನವಾದ ಈ ಭೇದವು, ಯದಿ= ಒಂದು ಪಕ್ಷ, ಉಚ್ಯತೇ= ಹೇಳಲ್ಪಡುತ್ತದೆ ಎಂದರೆ, ತರ್ಹಿ= ಆಗ, ತ್ರ್ಯಕ್ಷಃ= ಈಶ್ವರನು, ಸಹಸ್ರಾಕ್ಷಃ= ಸಹಸ್ರಾಕ್ಷನಾದ ಇಂದ್ರನೆಂದೂ,

ಸಹಸ್ರಾಕ್ಷ= ಇಂದ್ರನು, ತ್ರಿಲೋಚನಃ= ಈಶ್ವರನೆಂದೂ, ಧ್ಯಾತುಂ= ಧ್ಯಾನ ಮಾಡುವುದಕ್ಕೋಸ್ಕರ, ಕುತಃ= ಏಕೆ, ನ ಕೀರ್ತ್ಯತೇ= ಹೇಳಲ್ಪಡುವುದಿಲ್ಲ, ತಸ್ಮಾತ್= ಆದ್ದರಿಂದ, ಯದ್ವಸ್ತು= ಯಾವ ವಸ್ತುವು, ಯಾದೃಶಂ= ಯಾವ ರೀತಿ ಇದೆಯೋ, ತತ್= ಆ ವಸ್ತುವನ್ನು, ತಥೈವ= ಅದೇ ರೀತಿಯಲ್ಲಿ, ಧ್ಯಾತುಂ ವಾ= ಧ್ಯಾನ ಮಾಡುವುದಕ್ಕಾಗಲೀ, ದ್ರಷ್ಟುಮೇವ ಚ= ದರ್ಶಮಾಡುವುದಕ್ಕಾಗಲೀ, ವೇದಃ= ವೇದವು, ವದೇತ್= ಹೇಳುತ್ತದೆ.

**ಅನುವಾದ–** ಅವಿದ್ಯಮಾನವಾದ ಈ ಭೇದವು ಉಪಾಸನೆಗೋಸ್ಕರವಾಗಿ ಹೇಳಲ್ಪಡುತ್ತದೆ ಎಂದು ಹೇಳಿದರೆ, ಹಾಗಾದರೆ ಉಪಾಸನೆಯ ಸಲುವಾಗಿ ರುದ್ರನನ್ನು ಇಂದ್ರನೆಂದು, ಇಂದ್ರನನ್ನು ರುದ್ರನೆಂದು ಏಕೆ ಹೇಳುವುದಿಲ್ಲ? ಆದ್ದರಿಂದ ಧ್ಯಾನಮಾಡುವುದಕ್ಕಾಗಲೀ ಅಥವಾ ದರ್ಶನ ಮಾಡುವುದಕ್ಕಾಗಲೀ ವೇದವು ಯಾವ ವಸ್ತುವು ಯಾವ ರೀತಿಯಲ್ಲಿದೆಯೋ ಆ ವಸ್ತುವನ್ನು ಅದೇ ರೀತಿಯಲ್ಲಿಯೇ ಹೇಳುತ್ತದೆ.

**ಭಾವವಿಲಾಸಿನೀ–** ಯಚ್ಚಾಸಂಭಾವನಾವಿಪರೀತಭಾವನಾನಿವೃತ್ತ್ಯರ್ಥಂ ಮನನೋಪಾಸನೇ ಇತಿ ವದನ್ಪರಃ ಪುನರವಿದ್ಯಮಾನಸ್ಯೈವೋಪಾಸನಂ ವಕ್ತಿ । ತಚ್ಚ ನ ಕೇವಲಮುಕ್ತವಿಧಯಾ ಸ್ವಮತ-ವಿರುದ್ಧಂ ಕಿಂತು ಯುಕ್ತಿಶ್ರುತಿಸ್ಮೃತಿ ವಿರುದ್ಧಂ ಚೇತ್ಯಾಹ – **ಅವಿದ್ಯಮಾನ ಇತಿ** ॥ ತಸ್ಮಾತ್ ತತ್ತದ್ರೂಪ-ವೈಪರೀತ್ಯೇನ ತೇಷಾಂ ತೇಷಾಂ ಧ್ಯಾನಾಕಥನಾತ್ । ದ್ರಷ್ಟುಮೇವೇತಿ ವದತಾಽತತ್ತ್ವೋ-ಪಾಸನಯಾ ತತ್ತ್ವದರ್ಶನಂ ಚ ವಿರುದ್ಧಮಿತಿ ಸೂಚಯತಿ ॥ ೧೩೬೦-೧೩೬೧ ॥

**ವಿವರಣೆ–** ಅದ್ವೈತಿಗಳು ಅಸಂಭಾವನೆ ಮತ್ತು ವಿಪರೀತಭಾವನೆಗಳನ್ನು ಪರಿಹಾರ ಮಾಡಲು ಮನನ ಮತ್ತು ಉಪಾಸನೆಗಳು ವಿಹಿತವಾಗಿವೆ ಎಂದು ಹೇಳಿ ಪುನಃ ಅವಿದ್ಯಮಾನ ವಸ್ತುವನ್ನು ಉಪಾಸನೆ ಮಾಡುತ್ತಾರೆ. ಅವಿದ್ಯಮಾನ ವಸ್ತುವಿನ ಉಪಾಸನೆಯಿಂದ ವಿಪರೀತ ಭಾವನೆಯು ನಿವೃತ್ತಿಯಾಗುವುದಿಲ್ಲವಾದ್ದರಿಂದ ಅದು ತನ್ನ ಮತಕ್ಕೂ ವಿರುದ್ಧವಾದುದು ಮತ್ತು ಯುಕ್ತಿ-ಶ್ರುತಿ-ಸ್ಮೃತಿ ವಿರುದ್ಧವಾದುದು ಎಂದು ಇಲ್ಲಿ ಉಪಪಾದಿಸುತ್ತಾರೆ.

ಸತ್ಯಂ ವದೇತಿ ಯೋಽನ್ಯಸ್ಯಾಪ್ಯಸತ್ಯೋಕ್ತಿಂ ನಿವಾರಯೇತ್ ।
ಸ ವೇದಃ ಸರ್ವಮರ್ಯಾದಾರಕ್ಷಕೋ ನಾನೃತಂ ವದೇತ್॥ ೧೩೬೨ ॥

**ಅರ್ಥ–** ಯಃ= ಯಾವ ವೇದವು, ಸತ್ಯಂ ವದ ಇತಿ= ಸತ್ಯವನ್ನು ಹೇಳು ಎಂದು, ಅನ್ಯಸ್ಯಾಪಿ= ಇನ್ನೊಬ್ಬರಿಗೂ ಕೂಡ, ಅಸತ್ಯೋಕ್ತಿಂ= ಅಸತ್ಯವಚನವನ್ನು, ನಿವಾರಯೇತ್= ನಿವಾರಿಸುತ್ತದೆಯೋ, ಸರ್ವಮರ್ಯಾದಾರಕ್ಷಕಃ= ಎಲ್ಲಾ ಧರ್ಮಗಳ ವ್ಯವಸ್ಥಾಪಕವಾದ, ಸ ವೇದಃ= ಆ ವೇದವು, ಅನೃತಂ= ಸುಳ್ಳನ್ನು, ನ ವದೇತ್= ಹೇಳುವುದಿಲ್ಲ.

**ಅನುವಾದ–** ಸತ್ಯವನ್ನು ಹೇಳು ಎಂದು ಹೇಳಿ ಇನ್ನೊಬ್ಬನಿಗೂ ಅಸತ್ಯ ವಚನವನ್ನು ನಿಷೇಧ ಮಾಡುವ ಸರ್ವ ಮರ್ಯಾದಾ ರಕ್ಷಕ ವೇದವು ಎಂದೂ ಸುಳ್ಳನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ಅನೃತಂ ಧ್ಯಾನಾರ್ಥಮವಿದ್ಯಮಾನಮ್ । ಪರೇಷಾಮನೃತಕೀರ್ತನಂ ನಿವಾರಯನ್ವೇದಃ ಸ್ವಯಂ ಕಥಮನೃತಂ ಕೀರ್ತಯೇದಿತಿ ಭಾವಃ ॥ ೧೩೯೨ ॥

**ಯೋ ಯೋ ದೇವೋ ಯಯಾಽಽಕೃತ್ಯಾ ಯೇನ ಲಿಂಗೇನ ಯೈರ್ಗುಣೈಃ।**
**ವರ್ತತೇ ಶ್ರುತಿರಪ್ಯೇಷಾ ತಂ ತಂ ಬ್ರೂತೇ ತಥಾ ತಥಾ ।**
**ನ ವ್ಯತ್ಯಾಸಾತ್ ಕ್ವಚಿದ್ ವಕ್ತಿ ತತಃ ಸತ್ಯವ್ರತೈವ ಸಾ ॥ ೧೩೯೩ ॥**

**ಅರ್ಥ–** ಯೋ ಯೋ ದೇವಃ= ಯಾವ ಯಾವ ದೇವತೆಯು, ಯಯಾಕೃತ್ಯಾ= ಯಾವ ಆಕಾರದಿಂದ, ಯೇನ ಲಿಂಗೇನ= ಯಾವ ಚಿಹ್ನೆಗಳಿಂದ, ಯೈರ್ಗುಣೈಃ= ಮತ್ತು ಯಾವ ಗುಣಗಳಿಂದ, ವರ್ತತೇ= ಕೂಡಿರುತ್ತಾನೆಯೋ, ಏಷಾ ಶ್ರುತಿರಪಿ= ಈ ಶ್ರುತಿಯೂ ಕೂಡ, ತಂ ತಂ= ಆಯಾ ದೇವತೆಯನ್ನು, ತಥಾ ತಥಾ= ಅದೇ ಅದೇ ರೀತಿಯಲ್ಲಿ, ಬ್ರೂತೇ= ಹೇಳುತ್ತದೆ, ವ್ಯತ್ಯಾಸಾತ್= ವ್ಯತ್ಯಾಸವನ್ನು ಮಾಡಿ, ಕ್ವಚಿತ್= ಎಲ್ಲಿಯೂ, ನ ವಕ್ತಿ= ಹೇಳುವುದಿಲ್ಲ, ತತಃ= ಆ ಕಾರಣದಿಂದ, ಸಾ= ಆ ಶ್ರುತಿಯು, ಸತ್ಯವ್ರತೈವ= ಸತ್ಯವ್ರತವನ್ನು ಧರಿಸಿದುದು.

**ಅನುವಾದ–** ಯಾವ ಯಾವ ದೇವತೆಯು ಯಾವ ಯಾವ ಆಕಾರದಿಂದಲೂ, ಯಾವ ಚಿಹ್ನೆಗಳಿಂದಲೂ ಮತ್ತು ಯಾವ ಗುಣಗಳಿಂದಲೂ ಕೂಡಿರುತ್ತಾನೆಯೋ, ಆಯಾ ದೇವತೆಗಳನ್ನು ಈ ಶ್ರುತಿಯೂ ಕೂಡ ಅದೇ ರೀತಿಯಲ್ಲಿಯೇ ಹೇಳುತ್ತದೆ, ಎಂದೂ ವ್ಯತ್ಯಾಸ ಮಾಡುವುದಿಲ್ಲ. ಆದ್ದರಿಂದ ವೇದವು ಸತ್ಯವ್ರತವನ್ನು ಧರಿಸಿದುದು.

**ಭಾವವಿಲಾಸಿನೀ–** ತತಃ ವ್ಯತ್ಯಾಸೇನಾಕಥನಾತ್ । ಸಾ ಶ್ರುತಿಃ ॥ ೧೩೯೩ ॥

**ವಿವರಣೆ–** ಸತ್ಯವ್ರತಪರಾಯಣವಾದ ವೇದವು ಎಂದೂ ಸುಳ್ಳನ್ನು ಹೇಳುವುದಿಲ್ಲ ಎಂದು ಅಭಿಪ್ರಾಯ.

**ಕಿಂ ಚೋಪಾಸ್ತ್ಯೈ ಭಿದೋಕ್ತಿಶ್ಚೇದೈಕ್ಯೋಕ್ತಿಶ್ಚ ಕಥಂ ನ ತೇ ।**
**ಉಪಾಸೀತೇತಿ ತು ಪದಂ ನೋಭಯತ್ರಾಪಿ ದೃಶ್ಯತೇ ॥ ೧೩೯೪ ॥**

**ಅರ್ಥ–** ಕಿಂಚ= ಮತ್ತು, ತೇ= ನಿನಗೆ, ಭಿದೋಕ್ತಿಃ= ಭೇದ ವಚನವು, ಉಪಾಸ್ತ್ಯೈಚೇತ್= ಉಪಾಸನೆಗೋಸ್ಕರ ಎಂದಾದರೆ, ಐಕ್ಯೋಕ್ತಿಶ್ಚ= ಐಕ್ಯ ವಚನವೂ ಸಹ, ಕಥಂ ನ= ಉಪಾಸನೆಗೋಸ್ಕರವಾಗಿ ಏಕೆ ಅಲ್ಲ, ಉಪಾಸೀತೇತಿ ಪದಂ ತು= ಉಪಾಸನೆ ಮಾಡಿ ಎಂಬ

ಪದವಾದರೋ, ಉಭಯತ್ರಾಪಿ= ಎರಡು ಕಡೆಗಳಲ್ಲಿಯೂ, ನ ದೃಶ್ಯತೇ= ಕಂಡುಬರುವುದಿಲ್ಲ.

**ಅನುವಾದ–** ಮತ್ತು ಉಪಾಸನೆಗೋಸ್ಕರ ಭೇದವಚನ ಎಂದು ಹೇಳುವುದಾದರೆ ಐಕ್ಯ ವಚನವು ಏಕೆ ಉಪಾಸನೆಗೋಸ್ಕರವಾಗಿ ಅಲ್ಲ? ಉಪಾಸೀತ ಎಂಬ ಪದವು ಎರಡು ಕಡೆಗಳಲ್ಲಿಯೂ ಕಂಡುಬರುವುದಿಲ್ಲವಷ್ಟೇ.

**ಭಾವವಿಲಾಸಿನೀ–** ಉಭಯತ್ರ ತತ್ತ್ವಮಸೀತ್ಯಾದೌ ದ್ವಾಸುಪರ್ಣೇತ್ಯಾದೌ ಚ ॥ ೧೩೮ ॥

**ವಿವರಣೆ–** ಉಪಾಸೀತ ಎಂಬ ಪದವು ತತ್ವಮಸಿ ವಾಕ್ಯದಲ್ಲಿಯೂ ದ್ವಾಸುಪರ್ಣಾದಿ ವಾಕ್ಯದಲ್ಲಿಯೂ ಇಲ್ಲದಿರುವಾಗ ಭೇದವು ಮಾತ್ರ ಉಪಾಸನೆಗಾಗಿ, ಐಕ್ಯವು ಉಪಾಸನೆಗಾಗಿ ಅಲ್ಲ ಯಥಾರ್ಥವಾದುದು ಎಂದು ಹೇಳುವುದು ಅಯುಕ್ತವೆಂದು ಅಭಿಪ್ರಾಯ.

ಕಲ್ಪನಾ ಚೇತ್ ಕ್ವ ಸಾ ನ ಸ್ಯಾದ್ ವಸ್ತುತಸ್ತ್ವೈಕ್ಯಮೇವ ತೇ ।
ಸರ್ವಪ್ರತ್ಯಕ್ಷತೋ ಬಾಧಾದುಪಾಸ್ಯಂ ಸ್ಯಾದಸದ್ಧಿ ತತ್ ॥ ೧೩೯ ॥

**ಅರ್ಥ–** ಕಲ್ಪನಾ ಚೇತ್= ಉಪಾಸೀತ ಎಂಬ ಪದವನ್ನು ಕಲ್ಪನೆ ಮಾಡುತ್ತೇವೆ ಎಂದು ಹೇಳಿದರೆ, ಸಾ= ಆ ಕಲ್ಪನೆಯು, ಕ್ವ ನ ಸ್ಯಾತ್= ಎಲ್ಲಿ ಮಾಡಲು ಸಾಧ್ಯವಿಲ್ಲ, ವಸ್ತುತಃ= ನಿಜವಾಗಿ ವಿಚಾರ ಮಾಡಿದರೆ, ತೇ ಐಕ್ಯಮೇವ= ನಿನ್ನ ಐಕ್ಯವೇ, ಸರ್ವಪ್ರತ್ಯಕ್ಷತೋ ಬಾಧಾತ್= ಎಲ್ಲ ಪ್ರತ್ಯಕ್ಷಗಳಿಂದಲೂ ಬಾಧಿತವಾಗಿರುವುದರಿಂದ, ಉಪಾಸ್ಯಂ ಸ್ಯಾತ್= ಉಪಾಸ್ಯವಾಗುತ್ತದೆ, ತತ್= ಆ ಐಕ್ಯವು, ಅಸದ್ಧಿ= ಅಪ್ರಾಮಾಣಿಕವಷ್ಟೇ?

**ಅನುವಾದ–** ಉಪಾಸೀತ ಎಂಬ ಪದವನ್ನು ಕಲ್ಪನೆ ಮಾಡುತ್ತೇವೆ ಎಂದು ಹೇಳಿದರೆ ಆ ಕಲ್ಪನೆಯನ್ನು ಎಲ್ಲಿ ಮಾಡಲು ಸಾಧ್ಯವಿಲ್ಲ? ನಿಜವಾಗಿ ವಿಚಾರ ಮಾಡಿದರೆ ನಿನ್ನ ಐಕ್ಯವೇ ಸರ್ವ ಪ್ರತ್ಯಕ್ಷ ಬಾಧಿತವಾದುದರಿಂದ ಉಪಾಸನೆಗಾಗಿ ಹೇಳಲ್ಪಟ್ಟಿದೆ ಎಂದು ಅಂಗೀಕರಿಸಬೇಕು. ಐಕ್ಯವು ಅಪ್ರಾಮಾಣಿಕವಷ್ಟೇ?

**ಭಾವವಿಲಾಸಿನೀ–** ಸಾ ಕಲ್ಪನಾ । ತತ್ ಪ್ರಮಾಣಬಾಧಿತಮೈಕ್ಯಮ್ । ಅವಿದ್ಯಮಾನಸ್ಯೈವೋಪಾಸನಮಿತಿ ಮತೇ ಐಕ್ಯಸ್ಯೈವೋಪಾಸ್ಯತ್ವಂ ನ್ಯಾಯ್ಯಮ್ । ಸರ್ವಾನುಭವಬಾಧಿತತ್ವೇನ ತಸ್ಯೈವಾವಿದ್ಯಮಾನತ್ವಾತ್। ನತು ಭೇದಸ್ಯೇತಿ ಭಾವಃ ॥ ೧೩೯ ॥

**ವಿವರಣೆ–** ಭೇದವಾಕ್ಯದಲ್ಲಿ ಉಪಾಸೀತ ಎಂಬ ಪದವನ್ನು ಕಲ್ಪನೆ ಮಾಡುತ್ತೇವೆ ಎಂದು ಹೇಳಿದರೆ ಆ ಪದವನ್ನು ಅವಿದ್ಯಮಾನವಾದ ವಸ್ತುವಿನದ್ದೇ ಉಪಾಸನೆ ಎಂದು ಹೇಳುವ ನಿನ್ನ ಮತದಲ್ಲಿ ಐಕ್ಯವಾಕ್ಯದಲ್ಲಿಯೇ ಕಲ್ಪನೆ ಮಾಡುವುದು ಉಚಿತ. ಏಕೆಂದರೆ ಐಕ್ಯವು ಸರ್ವಪ್ರಮಾಣವಿರುದ್ಧವಾದುದು ಎಂದು ಇಲ್ಲಿ ಹೇಳುತ್ತಾರೆ.

**ಅನೃತಾತ್ ಪಾತಕಂ ವಕ್ತಿ ಯೋ ವೇದೋ ನ ಸ ಕುತ್ರಚಿತ್ ।**
**ವದೇದನೃತಮನ್ಯಾರ್ಥಮಿತಿ ಮನ್ಯಾಮಹೇ ವಯಂ ॥ ೧೩೯೬ ॥**

**ಅರ್ಥ–** ಯಃ ವೇದಃ= ಯಾವ ವೇದವು, ಅನೃತಾತ್= ಅನೃತ ವಚನದಿಂದ, ಪಾತಕಂ ವಕ್ತಿ= ಪಾಪವನ್ನು ಹೇಳುತ್ತದೆಯೋ, ಸಃ= ಅಂತಹ ವೇದವು, ಕುತ್ರಚಿತ್= ಎಲ್ಲಿಯೂ ಕೂಡ, ಅನ್ಯಾರ್ಥಂ= ಬೇರೆ ಪ್ರಯೋಜನಕ್ಕಾದರೂ ಎಂದರೆ ಉಪಾಸನೆ ಮಾಡುವುದಕ್ಕಾದರೂ, ಅನೃತಂ= ಅನೃತವನ್ನು, ನ ವದೇತ್= ಹೇಳುವುದಿಲ್ಲ, ಇತಿ= ಎಂದು, ವಯಂ= ನಾವು, ಮನ್ಯಾಮಹೇ= ತಿಳಿಯುತ್ತೇವೆ.

**ಅನುವಾದ– ಯಾವ ವೇದವು ಅನೃತವಚನದಿಂದ ಪಾಪವುಂಟಾಗುತ್ತದೆ ಎಂದು ಹೇಳುತ್ತದೆಯೋ ಅಂತಹ ವೇದವು ಎಲ್ಲಿಯೂ ಉಪಾಸನಾರೂಪವಾದ ಇನ್ನೊಂದು ಉದ್ದೇಶದಿಂದಲೂ ಅನೃತವನ್ನು ಹೇಳುವುದಿಲ್ಲ ಎಂದು ನಮ್ಮ ಅಭಿಪ್ರಾಯ.**

**ಭಾವವಿಲಾಸಿನೀ–** ಕಿಂಚ ನಾನೃತಾತ್ಪಾತಕಂ ಪರಮಿತ್ಯನೃತಸ್ಯ ಮಹಾಪಾಪರೂಪತ್ವಂ ವದನ್ವೇದಃ ಕಥಮನೃತಂ ವದೇದಿತ್ಯಾಹ – **ಅನೃತಾದಿತಿ** ॥ ೧೩೯೬ ॥

**ನ ಚೇನ್ಮೋಹಾರ್ಥಮನೃತಂ ವೇದೋ ವಕ್ತೀತಿ ವಾದಿನಃ ।**
**ಬೌದ್ಧಾದ್ಯಾಃ ಕೇನ ದೂಷ್ಯಂತೇ ಭೂಷ್ಯಂತೇ ವಾ ಶ್ರುತೇರ್ಗುಣಾಃ ॥೧೩೯೭॥**

**ಅರ್ಥ–** ನ ಚೇತ್= ಹಾಗಿಲ್ಲದಿದ್ದರೆ, ವೇದಃ= ವೇದವು, ಮೋಹಾರ್ಥಂ= ಭ್ರಾಂತಿಯನ್ನು ಉಂಟು ಮಾಡುವ ಸಲುವಾಗಿ, ಅನೃತಂ ವಕ್ತಿ= ಅನೃತವನ್ನು ಹೇಳುತ್ತದೆ, ಇತಿ ವಾದಿನಃ ಬೌದ್ಧಾದ್ಯಾಃ= ಎಂದು ಹೇಳುವ ಬೌದ್ಧಾದಿಗಳು, ಕೇನ ದೂಷ್ಯಂತೇ= ಹೇಗೆ ದೂಷಿಸಲ್ಪಡುತ್ತಾರೆ, ವಾ= ಅಥವಾ, ಶ್ರುತೇರ್ಗುಣಾಃ= ಶ್ರುತಿಯ ಗುಣಗಳು, ಕೇನ ಭೂಷ್ಯಂತೇ= ಹೇಗೆ ಅಲಂಕರಿಸಲ್ಪಡುತ್ತವೆ?

**ಅನುವಾದ– ಶ್ರುತಿಯು ಅನೃತವನ್ನು ಹೇಳುತ್ತದೆ ಎಂದಾದರೆ ಭ್ರಾಂತಿಯನ್ನು ಉಂಟು ಮಾಡುವ ಸಲುವಾಗಿ ಶ್ರುತಿಯು ಸುಳ್ಳನ್ನು ಹೇಳುತ್ತದೆ ಎಂದು ಹೇಳುವ ಬೌದ್ಧಾದಿಗಳನ್ನು ಹೇಗೆ ದೂಷಿಸುತ್ತೀಯೆ? ಅಥವಾ ಶ್ರುತಿಗೆ ಪ್ರಾಮಾಣ್ಯಾದಿ ಗುಣಗಳನ್ನು ಹೇಗೆ ಸಮರ್ಥಿಸುತ್ತೀಯೆ?**

**ಭಾವವಿಲಾಸಿನೀ– ನಚೇತ್ ಅನೃತಮವದನ್ನಚೇತ್ ವೇದಸ್ಯಾಪ್ಯನೃತಪ್ರತಿಪಾದಕತ್ವಮಸ್ತ್ವಿತಿ ಚೇತ್ಯರ್ಥಃ। ಗುಣಾಃ ಪ್ರಮಾಣ್ಯಾದಯಃ ॥ ೧೩೯೭ ॥**

**ಶ್ರುತೇರನೃತತಾಂ ಕ್ವಾಪಿ ವದತೀತಿ ವಚಸ್ತು ಯತ್ ।**
**ಶ್ರುತಿಪ್ರಾಮಾಣ್ಯರಕ್ಷಾಯೈ ತದನ್ಯಾರ್ಥಂ ವದೇದ್ ಬುಧಃ ॥ ೧೩೯೮ ॥**

**ಅರ್ಥ–** ಶ್ರುತೇಃ= ಶ್ರುತಿಗೆ, ಕ್ವಾಪಿ= ಕೆಲವೊಮ್ಮೆ, ಅನೃತತಾಂ ವದತಿ= ಅನೃತತ್ವವನ್ನು ಹೇಳುತ್ತದೆ, ಇತಿ ಯದ್ವಚಸ್ತು= ಇಂತಹ ಯಾವ ವಾಕ್ಯವಿದೆಯೋ, ತತ್= ಅದನ್ನು (ಅದಕ್ಕೆ), ಶ್ರುತಿಪ್ರಾಮಾಣ್ಯರಕ್ಷಾಯೈ= ಶ್ರುತಿಪ್ರಾಮಾಣ್ಯವನ್ನು ರಕ್ಷಿಸುವುದಕ್ಕೋಸ್ಕರ, ಬುಧಃ= ವಿವೇಕಿಯಾದವನು, ಅನ್ಯಾರ್ಥಂ= ಬೇರೆ ಅರ್ಥವನ್ನು, ವದೇತ್= ಹೇಳಬೇಕು.

**ಅನುವಾದ–** ಶ್ರುತಿಯಲ್ಲಿ ಎಲ್ಲಿಯಾದರೂ ಅನೃತವನ್ನು ಹೇಳುವಂತೆ ತೋರುವ ಒಂದು ವಾಕ್ಯವಿದ್ದರೆ, ವಿವೇಕಿಯಾದವನು ಶ್ರುತಿಪ್ರಾಮಾಣ್ಯ ರಕ್ಷಣೆಗೋಸ್ಕರವಾಗಿ ಅದಕ್ಕೆ ಬೇರೆ ಅರ್ಥವನ್ನೇ ಹೇಳಬೇಕು.

**ಭಾವವಿಲಾಸಿನೀ– ನನು ನೇದಂ ಯದಿದಮುಪಾಸತ ಇತಿ ಶ್ರುತಿಃ ಸ್ವಯಮೇವೋಪಾಸ್ಯಮಾನಂ ಅವಿದ್ಯಮಾನಂ ವದತಿ । ಅತಃ ಶ್ರುತ್ಯಾ ಕಥಿತಮಪಿ ಕಥಂ ನಾನೃತಮಿತ್ಯತ ಆಹ – ಶ್ರುತೇರಿತಿ ॥ ತತ್ ನೇದಂ ಯದಿದಮುಪಾಸತ ಇತಿ ವಾಕ್ಯಮ್ ॥ ೧೩೪೮ ॥**

**ವಿವರಣೆ–** 'ನೇದಂ ಯದಿದಂ ಉಪಾಸತೇ' ಎಂಬ ಶ್ರುತಿಯೇ ಉಪಾಸ್ಯಮಾನವಾದುದು ಮಿಥ್ಯಾಭೂತವೆಂದು ಹೇಳುತ್ತಿರುವಾಗ ಶ್ರುತಿಯು ಎಲ್ಲಿಯೂ ಅನೃತವನ್ನು ಹೇಳುವುದಿಲ್ಲವೆಂದು ಹೇಗೆ ಸಿದ್ಧವಾಗುತ್ತದೆ. ಉಪಾಸನಮಾನ್ಯವಾದುದು ಮಿಥ್ಯಭೂತವೆಂದು ಹೇಳಿದ ಮೇಲೆ ಉಪಾಸನಾ ವಾಕ್ಯಗಳೆಲ್ಲಾ ಅನೃತವನ್ನೇ ಹೇಳುವುವಷ್ಟೇ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಅಪೌರುಷೇಯವಾದ ಶ್ರುತಿಯ ಪ್ರಾಮಾಣ್ಯವನ್ನು ನೀನೂ ರಕ್ಷಿಸಬೇಕು ಮತ್ತು ನಾನೂ ರಕ್ಷಿಸಬೇಕು. ಶ್ರುತಿಯು ಅನೃತವನ್ನು ಹೇಳಿದರೆ ಪ್ರಾಮಾಣ್ಯವೇ ಭಗ್ನವಾಗುವುದರಿಂದ ಶ್ರುತಿಗೆ ಅನ್ಯಾರ್ಥವನ್ನು ಹೇಳಿ ಪ್ರಾಮಾಣ್ಯವನ್ನು ರಕ್ಷಿಸಬೇಕು ಎಂದು ಅಭಿಪ್ರಾಯ.

**ಅತೋ ನೇದಂ ಯದಿದಮಿತ್ಯಾದಿ ವಾಕ್ಯಂ ನ ಬಾಧಕಂ ।**
**ವಾಚ್ಯೋಽನ್ಯೋಽರ್ಥಃ ಶ್ರುತೇರ್ಗುಪ್ತ್ಯೈ ತ್ವಯಾಪಿ ಚ ಮಯಾಪಿ ಚ ॥**
**॥ ೧೩೪೯ ॥**

**ಅರ್ಥ–** ಅತಃ= ಆದ್ದರಿಂದ, ನೇದಂ ಯದಿದಮಿತ್ಯಾದಿ ವಾಕ್ಯಂ= ನೇದಂ ಯದಿದಂ ಉಪಾಸತೇ ಮೊದಲಾದ ವಾಕ್ಯಗಳು, ಬಾಧಕಂ ನ= ನಮಗೆ ಬಾಧಕವಾಗುವುದಿಲ್ಲ, ಶ್ರುತೇರ್ಗುಪ್ತ್ಯೈ= ಶ್ರುತಿಯ ಪ್ರಾಮಾಣ್ಯವನ್ನು ರಕ್ಷಣೆ ಮಾಡುವುದಕ್ಕೋಸ್ಕರ, ಅನ್ಯೋ ಅರ್ಥಃ= ಬೇರೆ ಅರ್ಥವು, ತ್ವಯಾಪಿ ಚ= ನಿನ್ನಿಂದಲೂ, ಮಯಾಪಿ ಚ= ಮತ್ತು ನನ್ನಿಂದಲೂ, ವಾಚ್ಯಃ= ಹೇಳಲ್ಪಡಬೇಕು.

**ಅನುವಾದ–** ಆದ್ದರಿಂದ, 'ನೇದಂ ಯದಿದಂ ಉಪಾಸತೇ' ಮೊದಲಾದ ವಾಕ್ಯಗಳು ನಮಗೆ ಬಾಧಕವಾಗುವುದಿಲ್ಲ. ಶ್ರುತಿಯ ಪ್ರಾಮಾಣ್ಯವನ್ನು ರಕ್ಷಿಸುವುದಕ್ಕೋಸ್ಕರ ನೀನೂ ಮತ್ತು ನಾನೂ ಆ ವಾಕ್ಯಕ್ಕೆ ಬೇರೆಯೇ ಅರ್ಥವನ್ನು ಹೇಳಬೇಕು.

**ಭಾವವಿಲಾಸಿನೀ—ಅತಃ** ಅನುಕೂಲಾರ್ಥತಯಾ ಯೋಜಯಿತುಂ ಶಕ್ಯತ್ವೇನ ಸಾವಕಾಶತ್ವಾತ್ । ಪ್ರಾಗುಕ್ತಶ್ರುತಿಯುಕ್ತೀನಾಂ ನಿರವಕಾಶತ್ವಾದ್ವಾ । ಶ್ರುತೇರ್ಗುಪ್ತ್ಯೈ ಶ್ರುತಿಪ್ರಾಮಾಣ್ಯರಕ್ಷಾಯೈ । ಉಪಾಸ್ಯಮಾನಸ್ಯಾವಿದ್ಯಮಾನತ್ವೇ ಉಪಾಸನಾಪಾದೋಕ್ತ ಸಕಲಶ್ರುತೀನಾಮಪ್ರಾಮಾಣ್ಯ-ಪ್ರಸಂಗಾತ್ ಇದಮೇವ ವಾಕ್ಯಮನ್ಯಥಾ ಯೋಜನೀಯಮಿತಿ ಭಾವಃ ॥ ೧೩೯೯ ॥

**ವಿವರಣೆ–** 'ನೇದಂ ಯದಿದಂ ಉಪಾಸತೇ' ಎಂಬ ಶ್ರುತಿಗೆ ಯಾವುದು ಉಪಾಸನೆ ಮಾಡಲ್ಪಡುತ್ತದೆಯೋ ಅದು ಮಿಥ್ಯಾಭೂತವಾದುದು ಎಂದು ಅದ್ವೈತಿಗಳ ವ್ಯಾಖ್ಯಾನ. ಯಾವ ರೂಪವು ಉಪಾಸಕನಾದ ನಿನ್ನ ಮನಸ್ಸಿನಲ್ಲಿ ತೋರುತ್ತಿದೆಯೋ ಅದೇ ಬ್ರಹ್ಮನಲ್ಲ ಎಂದು ನಮ್ಮ ವ್ಯಾಖ್ಯಾನ. ಆದ್ದರಿಂದ ಈ ಶ್ರುತಿಗೆ ಪ್ರಾಮಾಣ್ಯಕ್ಕೆ ಭಂಗ ಬರದಂತೆ ಪ್ರತ್ಯಕ್ಷಾದಿ ವಿರೋಧವಿಲ್ಲದಂತೆ ಅನ್ಯಾರ್ಥವನ್ನು ಹೇಳಲು ಬರುವಾಗ ಇದು ನಮಗೆ ಬಾಧಕವಾಗುವುದಿಲ್ಲ ಎಂದು ಅಭಿಪ್ರಾಯ.

**ಉಪಾಸನಾರ್ಥಂ ಧನವಾನ್ ಕಿಮನುಶ್ರಿ(ಸ್ರಿ)ಯತೇ ತ್ವಯಾ ।**
**ಅಧನೋ ವಾ ನರಃ ಕಶ್ಚಿತ್ ಸ್ವಾನುಭೂತಿಂ ವಿಚಾರಯ ॥ ೧೪೦೦ ॥**

**ವಿಷನಿರ್ಹರಣೇ ಶಕ್ತೋ ಧ್ಯಾತವ್ಯೋ ಗರುಡಸ್ತ್ವಯಾ ।**
**ಸರ್ಪದಷ್ಟೇನ ಕಿಮುತ ಕಾಕೋಲೂಕಾದಿಪಕ್ಷಿಣಃ ॥ ೧೪೦೧ ॥**

**ವಿಘ್ನಧ್ವಂಸಾಯ ವಿಘ್ನೇಶೋ ವಿದ್ಯಾಪ್ತ್ಯೈ ಶಾರದಾ ತ್ವಯಾ ।**
**ಮೃತ್ಯುಂಜಯೋ ಮೃತ್ಯುಜಿತ್ಯೈ ಕುತಃ ಸಂಸೇವ್ಯತೇ ವದ ॥ ೧೪೦೨ ॥**

**ಅರ್ಥ–** ಉಪಾಸನಾರ್ಥಂ= ಉಪಾಸನೆಯ ಸಲುವಾಗಿ, ತ್ವಯಾ= ನಿನ್ನಿಂದ, ಧನವಾನ್= ಧನವಂತನಾದವನು, ಕಿಮನುಶ್ರಿಯತೇ= ಅನುಸರಿಸಲ್ಪಡುತ್ತಾನೆಯೋ, ವಾ= ಅಥವಾ, ಅಧನಃ= ನಿರ್ಧನನಾದ, ಕಶ್ಚಿನ್ ನರಃ= ಒಬ್ಬ ಮನುಷ್ಯನು, ಅನುಶ್ರಿಯತೇ= ಉಪಾಸನೆ ಮಾಡಲ್ಪಡುತ್ತಾನೆಯೋ ಎಂದು, ವಿಚಾರಯ= ವಿಚಾರ ಮಾಡು, ಸರ್ಪದಷ್ಟೇನ ತ್ವಯಾ= ಸರ್ಪದಿಂದ ಕಚ್ಚಲ್ಪಟ್ಟ ನಿನ್ನಿಂದ, ವಿಷನಿರ್ಹರಣೇ= ವಿಷದ ಪರಿಹಾರಕ್ಕಾಗಿ, ಶಕ್ತಃ= ಸಮರ್ಥನಾದ, ಗರುಡಃ= ಗರುಡನು, ಧ್ಯಾತವ್ಯಃ= ಧ್ಯಾನಮಾಡಲ್ಪಡುತ್ತಾನೋ, ಉತ= ಅಥವಾ, ಕಾಕೋಲೂಕಾದಿ ಪಕ್ಷಿಣಃ= ಕಾಗೆ ಗೂಬೆ ಮೊದಲಾದ ಪಕ್ಷಿಗಳು, ಧ್ಯಾತವ್ಯಾಃ ಕಿಂ= ಧ್ಯಾನ ಮಾಡಲ್ಪಡುತ್ತವೆಯೋ? ತ್ವಯಾ= ನಿನ್ನಿಂದ, ವಿಘ್ನಧ್ವಂಸಾಯ= ವಿಘ್ನ ನಿವಾರಣೆಗಾಗಿ, ವಿಘ್ನೇಶಃ= ವಿಘ್ನೇಶನು, ವಿದ್ಯಾಪ್ತ್ಯೈ= ವಿದ್ಯಾಪ್ರಾಪ್ತಿಗಾಗಿ, ಶಾರದಾ= ಶಾರದೆಯು, ಮೃತ್ಯುಜಿತ್ಯೈ= ಮರಣ ಪರಿಹಾರಕ್ಕಾಗಿ, ಮೃತ್ಯುಂಜಯಃ= ಮೃತ್ಯುಂಜಯನಾದ ಈಶ್ವರನು, ಕುತಃ= ಏತಕ್ಕಾಗಿ, ಸಂಸೇವ್ಯತೇ= ಸಂಸೇವಿಸಲ್ಪಡುತ್ತಾನೆ ಎಂದು, ವದ= ಹೇಳು.

**ಅನುವಾದ–** ದರಿದ್ರನಾದ ನೀನು ಧನಪ್ರಾಪ್ತಿಗಾಗಿ ಒಬ್ಬ ಶ್ರೀಮಂತನನ್ನು ಉಪಾಸನೆ ಮಾಡುತ್ತೀಯೋ ಅಥವಾ ನಿರ್ಧನನಾದ ಯಾವನೋ ಒಬ್ಬ ಮನುಷ್ಯನನ್ನು ಉಪಾಸನೆ ಮಾಡುತ್ತೀಯೋ ಎಂದು ನಿನ್ನ ಅನುಭವವನ್ನೇ ವಿಮರ್ಶಿಸು. ಸರ್ಪದಿಂದ ಕಚ್ಚಲ್ಪಟ್ಟ ನೀನು ವಿಷಪರಿಹಾರಕ್ಕಾಗಿ ವಿಷ ಪರಿಹಾರ ಸಮರ್ಥನಾದ ಗರುಡನನ್ನು ಧ್ಯಾನ ಮಾಡುತ್ತೀಯೋ ಅಥವಾ ಕಾಗೆ ಗೂಬೆ ಮೊದಲಾದ ಪಕ್ಷಿಗಳನ್ನು ಧ್ಯಾನ ಮಾಡುತ್ತೀಯೋ ಎಂದು ನಿನ್ನ ಅನುಭವವನ್ನೇ ವಿಮರ್ಶಿಸು. ನೀನು ವಿಘ್ನ ನಿವಾರಣೆಗಾಗಿ ವಿಘ್ನೇಶನನ್ನು, ವಿದ್ಯಾಪ್ರಾಪ್ತಿಗಾಗಿ ಶಾರದೆಯನ್ನು, ಮೃತ್ಯುಪರಿಹಾರಕ್ಕಾಗಿ ಮೃತ್ಯುಂಜಯನನ್ನು ಏಕೆ ಉಪಾಸನೆ ಮಾಡುತ್ತೀಯೆ ಎಂದು ಹೇಳು.

**ಭಾವವಿಲಾಸಿನೀ–** ಬಹುಧಾ ಸ್ವಾನುಭವವಿರುದ್ಧಂ ಚಾವಿದ್ಯಮಾನಸ್ಯೋಪಾಸನಮಿತ್ಯಾಹ – **ಉಪಾಸನಾರ್ಥಮಿತಿ** ॥ ಅವಿದ್ಯಮಾನೋಪಾಸನೇನ ಫಲಪ್ರಾಪ್ತಿಶ್ಚೇತ್ ಧನಪ್ರಾಪ್ತ್ಯರ್ಥಮಧನಸ್ಯ ಸೇವೈವಕರ್ತವ್ಯೇತಿ ಭಾವಃ ॥ ೧೪೦೦-೧೪೦೨ ॥

**ವಿವರಣೆ–** ಅವಿದ್ಯಮಾನವಾದ ವಸ್ತುವಿನ ಉಪಾಸನೆಯು ಅನುಭವ ವಿರುದ್ಧವಾದುದು ಎಂಬುದನ್ನು ಅನೇಕ ದೃಷ್ಟಾಂತಗಳಿಂದ ಇಲ್ಲಿ ಉಪಪಾದನೆ ಮಾಡುತ್ತಾರೆ. ಧನಪ್ರಾಪ್ತಿಯನ್ನು ಬಯಸುವವನು ಸತ್ಯವಾದ ಧನವಂತನನ್ನೇ ಉಪಾಸನೆ ಮಾಡುತ್ತಾನೆ, ಮಿಥ್ಯಾಭೂತನಾದ ಧನವಂತನನ್ನು ಉಪಾಸನೆ ಮಾಡುವುದಿಲ್ಲ. ಸರ್ಪದಂಶಕ್ಕೆ ಒಳಗಾದವನು ಸತ್ಯವಾದ ವಿಷಪರಿಹಾರ ಸಾಮರ್ಥ್ಯವುಳ್ಳ ಗರುಡನನ್ನೇ ಉಪಾಸನೆ ಮಾಡುತ್ತಾನೆ, ಮಿಥ್ಯಾಭೂತವಾದ ಅಂತಹ ಸಾಮರ್ಥ್ಯವನ್ನು ಹೊಂದಿದ ಕಾಗೆ, ಗೂಬೆ ಮೊದಲಾದ ಪಕ್ಷಿಗಳನ್ನು ಉಪಾಸನೆ ಮಾಡುವುದಿಲ್ಲ. ಅದರಂತೆ ವಿಘ್ನಧ್ವಂಸಾದಿ ಪ್ರಯೋಜನಕ್ಕಾಗಿ ವಿಘ್ನೇಶ ಮೊದಲಾದ ದೇವತೆಗಳನ್ನೇ ಉಪಾಸನೆ ಮಾಡುತ್ತಾನೆ. ಆದ್ದರಿಂದ ಅದ್ವೈತಿಗಳ ಅನುಭವದಂತೆಯೂ ಅವಿದ್ಯಮಾನವಾದ ಅಥವಾ ಅನೃತವಾದ ವಸ್ತುವಿನ ಉಪಾಸನೆ ಇಲ್ಲ ಎಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಅವಿದ್ಯಮಾನಃ ಸವಿತಾ ಸಂಧ್ಯೋಪಾಸ್ತ್ಯೈ ಕಿಮೀರ್ಯತೇ ।
ಸ್ವಾಮಾನತಾಂ ಸ್ವಯಂ ಕರ್ತುಂ ಕಿಮುನ್ಮತ್ತವಚಃ ಶ್ರುತಿಃ ॥ ೧೪೦೩ ॥

**ಅರ್ಥ–** ಸಂಧ್ಯೋಪಾಸ್ತ್ಯೈ= ಸಂಧ್ಯೋಪಾಸನೆಯ ಸಲುವಾಗಿ, ಅವಿದ್ಯಮಾನಃ= ಅವಿದ್ಯಮಾನನಾದ, ಸವಿತಾ= ಸೂರ್ಯನು, ಈರ್ಯತೇ ಕಿಂ= ವೇದಗಳಿಂದ ಹೇಳಲ್ಪಡುತ್ತಾನೇನು? ಸ್ವಯಂ= ತಾನೇ, ಸ್ವಾಮಾನತಾಂ ಕರ್ತುಂ= ತನ್ನ ಅಪ್ರಾಮಾಣ್ಯವನ್ನು ಸಾಧಿಸಲು, ಶ್ರುತಿಃ= ಶ್ರುತಿಯು, ಉನ್ಮತ್ತವಚಃ ಕಿಂ= ಉನ್ಮತ್ತ ವಾಕ್ಯವೇನು?

**ಅನುವಾದ–** ಸಂಧ್ಯೋಪಾಸನೆಯ ಸಲುವಾಗಿ ವೇದವು ಎಲ್ಲಾದರೂ ಅವಿದ್ಯ-
ಮಾನನಾದ ಅಥವಾ ಮಿಥ್ಯಾಭೂತನಾದ ಸೂರ್ಯನನ್ನು ಹೇಳುತ್ತದೆಯೇನು?
ತನ್ನ ಅಪ್ರಾಮಾಣ್ಯವನ್ನು ತಾನೇ ಸಾಧಿಸಿಕೊಳ್ಳಲು ಶ್ರುತಿಯು ಉನ್ಮತ್ತವಾಕ್ಯವೇನು?

**ಭಾವವಿಲಾಸಿನೀ–** ಸ್ವಾಮಾನತಾಮ್ । ವೇದಾಮಾನತಾಂ ಸ್ವಯಂ ನೇದಂ ಯದಿದಮಿತ್ಯಾದಿ-
ರೂಪಾ ॥ ೧೪೦೩ ॥

**ವಿವರಣೆ–** ಅವಿದ್ಯಮಾನವಾದ ವಸ್ತುವನ್ನು ಹೇಳಿದರೆ ಶ್ರುತಿಗೆ ಅತತ್ತ್ವಾವೇದಕತ್ವವು ಬರುತ್ತದೆ. ಆದ್ದರಿಂದ ಅದು ಅಪ್ರಮಾಣವಾಗುತ್ತದೆ. ಶ್ರುತಿ ವಚನವು ಅಂತಹ ಮೂರ್ಖ ವಚನವಲ್ಲ. ಶ್ರುತಿಯು ತನ್ನ ಅಪ್ರಾಮಾಣ್ಯವನ್ನು ತಾನೇ ಸಾಧಿಸಿಕೊಳ್ಳುವುದಿಲ್ಲ ಎಂದು ಅಭಿಪ್ರಾಯ.

ಸತ್ಯಂ ವದೇತಿ ಯಾ ವಾಣೀ ವಕ್ತಿ ಧರ್ಮಾನುಶಾಸನಮ್ ।
ಅಸತ್ಯಂ ಕಿಲ ಸಾ ವಕ್ತಿ ಧ್ಯಾತುಂ ಸರ್ವತ್ರ ಸರ್ವದಾ ॥ ೧೪೦೪ ॥

**ಅರ್ಥ–** ಯಾ ವಾಣೀ= ಯಾವ ವೇದವಾಣಿಯು, ಸತ್ಯಂ ವದ ಇತಿ= ಸತ್ಯವನ್ನು ಹೇಳು ಎಂದು, ಧರ್ಮಾನುಶಾಸನಂ= ಧರ್ಮದ ಅನುಶಾಸನವನ್ನು, ವಕ್ತಿ= ಹೇಳುತ್ತದೆಯೋ, ಸಾ= ಆ ವಾಣಿಯು, ಸರ್ವತ್ರ= ಎಲ್ಲಾ ಕಡೆಗಳಲ್ಲಿಯೂ, ಸರ್ವದಾ= ಯಾವಾಗಲೂ, ಧ್ಯಾತುಂ= ಧ್ಯಾನ ಮಾಡುವುದಕ್ಕೋಸ್ಕರ, ಅಸತ್ಯಂ ವಕ್ತಿ ಕಿಲ= ಅಸತ್ಯವನ್ನು ಹೇಳುತ್ತದೆಯಷ್ಟೇ!

**ಅನುವಾದ–** ಯಾವ ವೇದವಾಣಿಯು ಸತ್ಯವನ್ನು ಹೇಳು ಎಂಬ ಧರ್ಮಾನು-
ಶಾಸನವನ್ನು ಹೇಳುತ್ತದೆಯೋ, ಅದು ಸರ್ವದಾ ಮತ್ತು ಸರ್ವ ಸ್ಥಳಗಳಲ್ಲಿ ಧ್ಯಾನ
ಮಾಡುವುದಕ್ಕೋಸ್ಕರ ಅಸತ್ಯವನ್ನು ಹೇಳುತ್ತದೆಯಷ್ಟೇ!

**ಭಾವವಿಲಾಸಿನೀ–** ಸತ್ಯಂ ವದೇತಿ ವಾಕ್ಯತಾತ್ಪರ್ಯವಿರೋಧಾಚ್ಚ ನೇದಂ ಯದಿದಮಿತಿ ವಾಕ್ಯಂ ನ ಸ್ವಾರ್ಥಪರಮಿತ್ಯಾಹ – **ಸತ್ಯಮಿತಿ** ॥ ಸಾ ನೇದಂ ಯದಿದಮಿತ್ಯಾದಿರೂಪಾ ॥ ೧೪೦೪ ॥

ಯನ್ನ ಪ್ರತೀಕೇ ನ ಹಿ ಸಃ ಇತ್ಥಂ ಸೂತ್ರಕೃತೈವ ಹಿ ।
ಅವಿದ್ಯಮಾನಸ್ಯೋಪಾಸ್ತಿರ್ನ ಕ್ವಾಪ್ಯಸ್ತೀತಿ ಸಾಧಿತಂ ॥ ೧೪೦೫ ॥

**ಅರ್ಥ–** ಯತ್= ಯಾವ ಕಾರಣದಿಂದ, ಸೂತ್ರಕೃತೈವ= ಸೂತ್ರಕಾರರಿಂದಲೇ, ನ ಪ್ರತೀಕೇ ನ ಹಿ ಸಃ= 'ನ ಪ್ರತೀಕೇ ನ ಹಿ ಸಃ' ಎಂಬ ಸೂತ್ರದಲ್ಲಿ, ಇತ್ಥಂ= ಈ ರೀತಿಯಾಗಿ, ಅವಿದ್ಯಮಾನಸ್ಯ= ಅವಿದ್ಯಮಾನ ಪದಾರ್ಥದ, ಉಪಾಸ್ತಿಃ= ಉಪಾಸನೆಯು, ಕ್ವಾಪಿ= ಎಲ್ಲಿಯೂ, ನಾಸ್ತಿ= ಇಲ್ಲ, ಇತಿ= ಎಂದು, ಸಾಧಿತಂ= ಸಾಧಿಸಲ್ಪಟ್ಟಿದೆಯೋ (ಆ ಕಾರಣದಿಂದಲೂ ವೇದವು ಅವಿದ್ಯಮಾನ ವಸ್ತುವಿನ ಉಪಾಸನೆಯನ್ನು ಹೇಳುವುದಿಲ್ಲ).

**ಅನುವಾದ–** 'ನ ಪ್ರತೀಕೇ ನ ಹಿ ಸಃ' ಎಂಬ ಬ್ರಹ್ಮಸೂತ್ರದಲ್ಲಿ ಸೂತ್ರಕಾರರೇ ವೇದದಲ್ಲಿ ಅವಿದ್ಯಮಾನವಾದ ವಸ್ತುವಿನ ಉಪಾಸನೆಯು ಎಲ್ಲಿಯೂ ಹೇಳಲ್ಪಟ್ಟಿಲ್ಲವೆಂದು ಸಾಧಿಸಿರುವುದರಿಂದ ಎಲ್ಲಿಯೂ ವೇದವು ಅವಿದ್ಯಮಾನವಾದ ವಸ್ತುವಿನ ಉಪಾಸನೆಯನ್ನು ಹೇಳುವುದಿಲ್ಲ.

**ಭಾವವಿಲಾಸಿನೀ–** ಬ್ರಹ್ಮಸೂತ್ರವಿರುದ್ಧಂ ಚಾವಿದ್ಯಮಾನೋಪಾಸನಮಿತ್ಯಾಹ – ಯನ್ನ ಪ್ರತೀಕ ಇತಿ ॥ ಯತ್ ಯಸ್ಮಾತ್ ॥ ೧೪೦೫ ॥

**ಯತಃ ಪ್ರತೀಕಂ ನೈವಾತ್ಮಾ ತತ ಆತ್ಮತ್ವಭಾವನಾ ।**
**ನ ತತ್ರೇತಿ ಹಿ ಸೂತ್ರಾರ್ಥಸ್ತವಾಪಿ ಚ ಮಮಾಪಿ ಚ ॥ ೧೪೦೬ ॥**

**ಅರ್ಥ–** ತವಾಪಿ ಚ ಮಮಾಪಿ ಚ= ನಿನಗೂ ಮತ್ತು ನನಗೂ ಕೂಡ, ಯತಃ= ಯಾವ ಕಾರಣದಿಂದ, ಪ್ರತೀಕಂ= ಪ್ರತೀಕವು, ಆತ್ಮಾ ನೈವ= ಬ್ರಹ್ಮನಲ್ಲವೋ, ತತಃ= ಆ ಕಾರಣದಿಂದ, ತತ್ರ= ಪ್ರತೀಕದಲ್ಲಿ, ಆತ್ಮತ್ವ ಭಾವನಾ= ಆತ್ಮತ್ವ ಉಪಾಸನೆಯು, ನ ಹಿ= ಇಲ್ಲ, ಇತಿ= ಎಂದೇ, ಸೂತ್ರಾರ್ಥಃ= ಸೂತ್ರಾರ್ಥವಷ್ಟೇ.

**ಅನುವಾದ–** ಯಾವ ಕಾರಣದಿಂದ ವಾಗಾದಿಪ್ರಾಣಪರ್ಯಂತವಾದ ಪ್ರತೀಕಗಳು ಪರಮಾತ್ಮನಲ್ಲವೋ ಆ ಕಾರಣದಿಂದ ಪ್ರತೀಕದಲ್ಲಿ ಬ್ರಹ್ಮತ್ವ ಭಾವನೆಯನ್ನು ಮಾಡಬಾರದು ಎಂದೇ ನಿನಗೂ ಮತ್ತು ನನಗೂ ಸೂತ್ರಾರ್ಥವಷ್ಟೇ?

**ಭಾವವಿಲಾಸಿನೀ–** ಯತಃ ಸ ಆತ್ಮಾ ಪರಮಾತ್ಮಾ ಪ್ರತೀಕಂ ವಾಗಾದಿಪ್ರಾಣಾಂತಪ್ರತಿಮಾ ನೈವ ತತಃ ಪ್ರತೀಕಸ್ಯಾತ್ಮತ್ವಾಭಾವಾತ್ ಆತ್ಮತ್ವಭಾವನಾ ಪರಮಾತ್ಮತ್ವಭಾವನಾ । ತತ್ರ ಪ್ರತೀಕೇ ॥ ೧೪೦೬ ॥

**ವಿವರಣೆ–** 'ನ ಪ್ರತೀಕೇ ನ ಹಿ ಸಃ' ಎಂಬುದು ಉಪಾಸಾನಾಪಾದದ ಬ್ರಹ್ಮಸೂತ್ರ. ಪ್ರತೀಕೇ= ಪ್ರತೀಕದಲ್ಲಿ, ನः= ಬ್ರಹ್ಮದೃಷ್ಟಿಯನ್ನು ಮಾಡಬಾರದು, ಹಿ= ಏಕೆಂದರೆ, ಸಃ= ಆ ಪ್ರತೀಕವು, ನः= ಬ್ರಹ್ಮನಲ್ಲ ಎಂದು ಸೂತ್ರಾರ್ಥ. ಇದು ಇಬ್ಬರಿಗೂ ಸಮ್ಮತವಾದುದು. ಆದ್ದರಿಂದ ಬ್ರಹ್ಮತ್ವವು ಇಲ್ಲದಿದ್ದಲ್ಲಿ ಬ್ರಹ್ಮತ್ವದ ಉಪಾಸನೆಯನ್ನು ಮಾಡಬಾರದು. ಆದ್ದರಿಂದ ಅವಿದ್ಯಮಾನವಸ್ತುವಿನ ಉಪಾಸನೆಯು ವೇದಗಳಲ್ಲಿ ಎಲ್ಲಿಯೂ ಹೇಳಲ್ಪಡುವುದಿಲ್ಲ ಎಂದು ಅಭಿಪ್ರಾಯ.

**ತಸ್ಮಾದವಿದ್ಯಮಾನಸ್ಯ ಭೇದಸ್ಯೋತ್ಕೀರ್ತನಂ ಶ್ರುತೌ ।**
**ಉಪಾಸನಾರ್ಥಮಿತಿ ಯನ್ಮತಂ ತಚ್ಚ ವಿಗರ್ಹಿತಂ ॥ ೧೪೦೭ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಶ್ರುತೌ= ವೇದದಲ್ಲಿ, ಅವಿದ್ಯಮಾನಸ್ಯ= ಅವಿದ್ಯಮಾನವಾದ, ಭೇದಸ್ಯ= ಭೇದದ, ಉತ್ಕೀರ್ತನಂ= ವಚನವು, ಉಪಾಸನಾರ್ಥಂ=

ಉಪಾಸನೆಯ ಸಲುವಾಗಿ, ಇತಿ= ಎಂದು, ಯನ್ಮತಂ= ಯಾವ ಮತವಿದೆಯೋ, ತತ್= ಆ ಮತವಾದರೂ, ಅತಿಗರ್ಹಿತಂ= ಅತ್ಯಂತ ನಿಂದ್ಯವಾದುದು.

**ಅನುವಾದ–** ಯುಕ್ತಿಗಳಿಂದಲೂ ಮತ್ತು ಬ್ರಹ್ಮಸೂತ್ರಗಳಿಂದಲೂ ಮತ್ತು ಸ್ವಾನುಭವದಿಂದಲೂ ವಿರೋಧವು ಬರುವುದರಿಂದ ಶ್ರುತಿಗಳು ಕೇವಲ ಉಪಾಸನೆಗೋಸ್ಕರವಾಗಿ ಭೇದವನ್ನು ಹೇಳುತ್ತವೆ ಎಂಬ ಮತವು ಅತ್ಯಂತ ನಿಂದ್ಯವಾದುದು.

**ಭಾವವಿಲಾಸಿನೀ–** ತಸ್ಮಾತ್ತ್ರೀಕೇಽವಿದ್ಯಮಾನಾತ್ಮತ್ವೋಪಾಸನಸ್ಯ ನೇತಿ ನಿಷೇಧೇನ ವಿದ್ಯಮಾನೋಪಾಸನಸ್ಯೈವ ಸೂತ್ರತಾತ್ಪರ್ಯಸಿದ್ಧತ್ವಾತ್ ॥ ೧೪೦೭ ॥

**ಸ್ಥೂಲೋಪಾಸ್ತಾವರುಂಧತ್ಯಾಸ್ತಾರಾಪ್ಯಾರಾತ್ ಸ್ಥಿತೇಕ್ಷ್ಯತಾಮ್ ।**
**ಭೇದೋಪಾಸ್ತ್ಯಾ ತ್ವಭೇದಸ್ಯ ವಿರುದ್ಧಸ್ಯ ಕಥಂ ದೃಶಿಃ ॥ ೧೪೦೮ ॥**

**ಅರ್ಥ–** ಸ್ಥೂಲೋಪಾಸ್ತಾ= ಸ್ಥೂಲೋಪಾಸನೆಯಲ್ಲಿ, ಅರುಂಧತ್ಯಾಃ= ಅರುಂಧತಿಯ, ಆರಾತ್ಸ್ಥಿತಾ= ಸಮೀಪದಲ್ಲಿರುವ, ತಾರಾಪಿ= ನಕ್ಷತ್ರವೂ ಕೂಡ, ಈಕ್ಷ್ಯತಾಂ= ನೋಡಲ್ಪಡಲಿ, ಭೇದೋಪಾಸ್ತ್ಯಾತು= ಭೇದೋಪಾಸನೆಯಿಂದಲಾದರೂ, ವಿರುದ್ಧಸ್ಯ= ವಿರುದ್ಧವಾದ, ಅಭೇದಸ್ಯ= ಅಭೇದದ, ದೃಶಿಃ= ಜ್ಞಾನವು, ಕಥಂ= ಹೇಗೆ ಉಂಟಾಗುತ್ತದೆ.

**ಅನುವಾದ–** ಸ್ಥೂಲೋಪಾಸನೆಯಲ್ಲಿ ಅರುಂಧತಿ ನಕ್ಷತ್ರದ ಸಮೀಪದಲ್ಲಿರುವ ಇನ್ನೊಂದು ನಕ್ಷತ್ರವೂ ಸಹ (ಬೇಕಾದರೆ) ನೋಡಲ್ಪಡಲಿ. ಆದರೆ ಭೇದೋಪಾಸನೆಯಿಂದ ವಿರುದ್ಧವಾದ ಅಭೇದದ ಜ್ಞಾನವು ಹೇಗೆ ಉಂಟಾಗುತ್ತದೆ?

**ಭಾವವಿಲಾಸಿನೀ–** ನನು ಸ್ಥೂಲಾರುಂಧತೀನ್ಯಾಯೇನ ಶಾಖಾಗ್ರಚಂದ್ರನ್ಯಾಯೇ ನಚಾವಿದ್ಯಮಾನಸ್ಯಾಪ್ಯುಪಾಸನಂ ವಿದ್ಯಮಾನಪ್ರಾಪ್ತ್ಯುಪಾಯಭೂತಂ ದೃಷ್ಟಮಿತಿ ಚೇತ್ । ಅತ್ರ ಪ್ರಷ್ಟವ್ಯಮ್ । ಕಿಂ ಸ್ಥೂಲತಾರಾಯಾ ಏವಾರುಂಧತೀತ್ವೋಪಾಸನಾತ್ ಸೂಕ್ಷ್ಮತಾರಾರೂಪಾರುಂಧತೀ- ಪ್ರಾಪ್ತಿರ್ದೃಷ್ಟಾ। ಶಾಖಾಗ್ರಸ್ಯೈವ ಚಂದ್ರತ್ವೋಪಾಸ್ತ್ಯಾ ಚ ಚಂದ್ರತ್ವಪ್ರಾಪ್ತಿರ್ದೃಷ್ಟೇತಿ ಮನ್ಯಸೇ ಉತ ಸೂಕ್ಷ್ಮತಾರಾಯಾಃ ಸ್ಥೂಲತಾರಾಸಮೀಪಸ್ಥತ್ವಾತ್ ಸಮ್ಯಕ್‌ದೃಶ್ಯಮಾನಸ್ಥೂಲತಾರಾಂ ಪ್ರಾಕ್‌ಪ್ರದರ್ಶ್ಯ ಕ್ರಮೇಣ ಸೂಕ್ಷ್ಮತಾರಾಮಪಿ ದರ್ಶಯಂತಿ । ಚಂದ್ರಸ್ಯ ಶಾಖಾಗ್ರಾಭಿಮುಖ್ಯೇನ ಸೂಕ್ಷ್ಮತಯಾಸ್ಥಿತತ್ವಾತ್ ದ್ವಾರೀಭೂತಂ ಸ್ಥೂಲಂ ಶಾಖಾಗ್ರಂ ಪ್ರಾಕ್‌ಪ್ರದರ್ಶ್ಯ ಪಶ್ಚಾತ್ತಮಪಿ ದರ್ಶಯಂತೀತಿ ಬ್ರೂಷೇ । ನಾದ್ಯಃ । ದೃಷ್ಟಾಂತಾಸಿದ್ಧೇಃ । ನಹಿ ಸ್ಥೂಲತಾರಾಮೇವಾರುಂಧತೀತ್ವೇನ ಕೋಪ್ಯುಪದಿಶತಿ । ನವಾಶಾಖಾಗ್ರಮೇವ ಚಂದ್ರತ್ವೇನ । ತಥಾ ಸತಿ ತಾವತೈವ ಚರಿತಾರ್ಥತಯಾ ಪುನಃ ಸೂಕ್ಷ್ಮತಾರಾದರ್ಶನೋತ್ಕಂಠಾಯಾ ಏವ

ಕುಂಠಿತತ್ವಾತ್ತದ್ದರ್ಶನಪ್ರಸಕ್ತೇರೇವಾಭಾವಪ್ರಸಂಗಾತ್ । ಕಿಂತು ಮಂತ್ರಿದರ್ಶನಸ್ಯ ರಾಜದರ್ಶ-ನಾನುಕೂಲತ್ವವತ್ ಏತದ್ದರ್ಶನಸ್ಯಾಪಿ ದರ್ಶನಾನುಕೂಲತ್ವಾದೇವ ಪ್ರಾಗಿದಮುಪದಿಶಂತಿ । ಉಪಾಸತೇಚ । ಅತೋನೇದಮವಿದ್ಯಮಾನೋಪಾಸನಸ್ಯ ನಿದರ್ಶನಮ್ । ಅಸ್ತು ವಾ ಕಥಂಚಿದಯಂ ದೃಷ್ಟಾಂತಸ್ತಥಾಪಿ ತವ ದಾರ್ಷ್ಟಾಂತಿಕೋಽನನುಗುಣ ಏವ । ತ್ವಯಾ ಸಗುಣೇ ನಿರ್ಗುಣತ್ವೋಪಾಸನಸ್ಯ ಭೇದೇಽಭೇದತ್ವೋಪಾಸನಸ್ಯ ಚಾಪ್ಯನಂಗೀಕಾರಾತ್ । ಅಂಗೀಕಾರೇ ಚಾಭೇದಸ್ಯೈವೋಪಾಸ್ಯತ್ವಪ್ರಸಂಗೇನ ತ್ವದಭಿಲಷಿತಾಸಿದ್ಧೇಶ್ಚ । ದ್ವಿತೀಯೇಪಿ ನೇಮೌ ದೃಷ್ಟಾಂತೌ ತವಾನುಗುಣೌ । ಸ್ಥೂಲತಾರಾಯಾಃ ಶಾಖಾಗ್ರಸ್ಯ ಚ ಸೂಕ್ಷ್ಮತಾರಾದ್ಯವಿರುದ್ಧತ್ವೇನ ಪ್ರತ್ಯುತ ಪೂರ್ವೋಕ್ತ ದೃಷ್ಟಾಂತೇನ ತದ್ದರ್ಶನಾನುಕೂಲತ್ವಾಚ್ಚ ಯುಕ್ತಂ ತದುಪಾಸನಮ್ । ತವ ತು ಸಗುಣಸ್ಯ ನಿರ್ಗುಣವಿರೋಧಿತ್ವೇನ ಭೇದಸ್ಯ ಚಾಭೇದವಿರೋಧಿತ್ವೇನ ಕಥಮೇತದುಪಾಸನೇನ ತತ್ಪ್ರಾಪ್ತಿಃ । ನಹ್ಯಂಧಕಾರದರ್ಶನೇನ ಪ್ರದೀಪಪ್ರಾಪ್ತಿಃ ಕ್ವಾಪಿ ದೃಷ್ಟಾ ಕಿಂತು ಪ್ರದೀಪಾನು-ಕೂಲವಹ್ನ್ಯುಪಾಸನೇನೈವ । ಅತಸ್ತವಾದೃಷ್ಟಕಲ್ಪನಮಪರಿಹಾರ್ಯಮೇವೇತ್ಯಾಹ–ಸ್ಥೂಲೇತಿ ॥ ಆರಾತ್ ಸಮೀಪೇ । ಉಪಲಕ್ಷಣಂ ಚೇದಮವಿರುದ್ಧಾಧೀತ್ಯಪಿ ಗ್ರಾಹ್ಯಮ್ ॥ ೧೪೦೮ ॥

**ವಿವರಣೆ–** ಸ್ಥೂಲಾರುಂಧತೀ ನ್ಯಾಯದಿಂದಲೂ ಶಾಖಾಗ್ರಚಂದ್ರನ್ಯಾಯದಿಂದಲೂ ಅವಿದ್ಯಮಾನ ವಸ್ತುವಿನ ಉಪಾಸನೆಯು ವಿದ್ಯಮಾನ ವಸ್ತುವಿನ ಪ್ರಾಪ್ತಿಗೆ ಸಾಧನವಾಗುವುದು ಅನುಭವ ಸಿದ್ಧವಾಗಿದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ :- ಹೀಗೆ ಶಂಕಿಸುವವರನ್ನು ಕುರಿತು ನಾವು ಹೀಗೆ ಪ್ರಶ್ನೆಯನ್ನು ಮಾಡುತ್ತೇವೆ - ಸ್ಥೂಲ ತಾರೆಯನ್ನೇ ಅರುಂಧತಿ ಎಂದು ಉಪಾಸನೆ ಮಾಡುವುದರಿಂದ ಸೂಕ್ಷ್ಮತಾರೆಯಾದ ಅರುಂಧತಿಯ ಪ್ರಾಪ್ತಿಯು ಅನುಭವ ಸಿದ್ಧವಾಗಿದೆಯೇ? ಹಾಗೆಯೇ, ಶಾಖಾಗ್ರವನ್ನೇ ಚಂದ್ರನೆಂದು ಉಪಾಸನೆ ಮಾಡುವುದರಿಂದ ಚಂದ್ರಪ್ರಾಪ್ತಿಯು ದೃಷ್ಟವಾಗಿದೆಯೇ? ಅಥವಾ ಸ್ಥೂಲತಾರೆಯು ಸೂಕ್ಷ್ಮತಾರೆಯ ಸಮೀಪದಲ್ಲಿರುವುದರಿಂದ ಕಣ್ಣಿಗೆ ಚೆನ್ನಾಗಿ ಎದ್ದು ಕಾಣುವ ಸ್ಥೂಲತಾರೆಯನ್ನು ಮೊದಲು ತೋರಿಸಿ ಅನಂತರ ಕ್ರಮವಾಗಿ ಸೂಕ್ಷ್ಮ ತಾರೆಯ ದರ್ಶನವೂ ಆಗುತ್ತದೆಯೇ? ಹಾಗೆಯೇ ಚಂದ್ರನು ಆಕಾಶದಲ್ಲಿ ಶಾಖಾಗ್ರಕ್ಕೆ ಎದುರಾಗಿ ಸೂಕ್ಷ್ಮವಾಗಿ ಇರುವುದರಿಂದ ದ್ವಾರವಾದ ಶಾಖಾಗ್ರವನ್ನು ಮೊದಲು ತೋರಿಸಿ ಅನಂತರ ಚಂದ್ರನನ್ನೂ ತೋರಿಸುತ್ತಾರೆಯೇ ಎಂದು ಅನುಭವ ಸಿದ್ಧವಾಗಿದೆಯೆ? ಈ ಪ್ರಶ್ನೆಗಳಲ್ಲಿ ಮೊದಲನೇ ಪಕ್ಷವನ್ನು ಒಪ್ಪುವುದಕ್ಕೆ ಬರುವುದಿಲ್ಲ. ಸ್ಥೂಲ ತಾರೆಯನ್ನೇ ಅರುಂಧತಿ ಎಂದು ಯಾರೂ ಉಪದೇಶ ಮಾಡುವುದಿಲ್ಲ ಅಥವಾ ಶಾಖಾಗ್ರವನ್ನೇ ಚಂದ್ರನೆಂದು ಯಾರೂ ಉಪದೇಶ ಮಾಡುವುದಿಲ್ಲ. ಹಾಗೇನಾದರೂ ಉಪದೇಶ ಮಾಡುವುದಾದರೆ ಸ್ಥೂಲ ತಾರೆಯ ಜ್ಞಾನದಿಂದಲೇ ಅರುಂಧತಿಯ ಜ್ಞಾನವೂ ಶಾಖಾಗ್ರ ಜ್ಞಾನದಿಂದಲೇ ಚಂದ್ರನು ಜ್ಞಾನವೂ ಉಂಟಾಗುವುದರಿಂದ ಪ್ರಶ್ನೆ ಮಾಡುವವನ ಆಕಾಂಕ್ಷೆಯು ನಿವೃತ್ತವಾಗಿರುವುದರಿಂದ

ಬೇರೆ ಅರುಂಧತಿಯ ದರ್ಶನದ ಅವಕಾಶವಾಗಲಿ, ಅಥವಾ ಬೇರೆ ಚಂದ್ರನ ದರ್ಶನದ ಅವಕಾಶವಾಗಲೀ ಇರುವುದಿಲ್ಲ. ಮತ್ತೇನೆಂದರೆ ಮಂತ್ರಿಯ ದರ್ಶನವು ರಾಜನ ದರ್ಶನಕ್ಕೆ ಅನುಕೂಲವಾಗುವಂತೆ ಸ್ಥೂಲತಾರಾದರ್ಶನ ಮತ್ತು ಶಾಖಾಗ್ರ ದರ್ಶನವು ಅರುಂಧತಿದರ್ಶನ ಮತ್ತು ಚಂದ್ರನ ದರ್ಶನಕ್ಕೆ ಅನುಕೂಲವಾಗುವುದರಿಂದ, ಮೊದಲು ಸ್ಥೂಲತಾರೆಯನ್ನು ಮತ್ತು ಶಾಖಾಗ್ರವನ್ನು ತೋರಿಸುತ್ತಾರೆ. ಅದರಂತೆ ಉಪಾಸನೆಯನ್ನೂ ಮಾಡುತ್ತಾರೆ. ಆದ್ದರಿಂದ ಅವಿದ್ಯಮಾನವಾದ ವಸ್ತುವಿನ ಉಪಾಸನೆಯನ್ನು ಸಮರ್ಥಿಸಲು ಈ ದೃಷ್ಟಾಂತವನ್ನು ಹೇಳಬಾರದು. ಈ ದೃಷ್ಟಾಂತವು ಹೇಗಾದರೂ ಇರಲಿ, ಆದರೆ ನಿನ್ನ ದಾರ್ಷ್ಟಾಂತಿಕವು ಮಾತ್ರ ಬಹಳ ಅನನುಗುಣವಾದುದು. ನೀನು ಸಗುಣನ ನಿರ್ಗುಣತ್ವ ಉಪಾಸನೆಯನ್ನಾಗಲಿ, ಭೇದದಲ್ಲಿ ಅಭೇದತ್ವದ ಉಪಾಸನೆಯನ್ನಾಗಲಿ ಅಂಗೀಕರಿಸುವುದಿಲ್ಲ. ಹಾಗೆ ಅಂಗೀಕರಿಸುವುದಾದರೆ ಅಭೇದವೇ ಉಪಾಸನೆ ಸಲುವಾಗಿ ಹೇಳಿದ್ದು ಎಂದು ಸಿದ್ಧವಾಗಿ ನಿನ್ನ ಅಭೀಷ್ಟವೂ ಸಿದ್ಧವಾಗುವುದಿಲ್ಲ. ಮತ್ತು ನಾವು ಮಾಡಿದ ಪ್ರಶ್ನೆಗೆ ಎರಡನೇ ಪಕ್ಷವನ್ನು ಅಂಗೀಕರಿಸಿದರೆ ಈ ದೃಷ್ಟಾಂತವು ನಿನಗೆ ಅನುಗುಣವಾಗುವುದಿಲ್ಲ. ಸ್ಥೂಲತಾರೆಗೂ ಸೂಕ್ಷ್ಮತಾರೆಗೂ ವಿರೋಧ ವಿಲ್ಲದಿರುವುದರಿಂದ, ಹಾಗೆಯೇ ಶಾಖಾಗ್ರಕ್ಕೂ ಮತ್ತು ಚಂದ್ರನಿಗೂ ವಿರೋಧ ವಿಲ್ಲದಿರುವುದರಿಂದ ಮೊದಲನೆಯದರ ಜ್ಞಾನವು ಎರಡನೇ ಜ್ಞಾನಕ್ಕೆ ಉಪಾಯವಾಗುತ್ತದೆ. ಆದರೆ ಸಗುಣ ಮತ್ತು ನಿರ್ಗುಣಗಳು ಹಾಗೆಯೇ ಭೇದ ಮತ್ತು ಅಭೇದಗಳು ಪರಸ್ಪರ ವಿರುದ್ಧವಾದ್ದರಿಂದ ಸಗುಣೋಪಾಸನೆಯಿಂದ ನಿರ್ಗುಣ ಪ್ರಾಪ್ತಿಯಾಗಲೀ, ಭೇದೋಪಾಸನೆಯಿಂದ ಅಭೇದಪ್ರಾಪ್ತಿಯಾಗಲೀ ಉಂಟಾಗಲು ಸಾಧ್ಯವಿಲ್ಲ. ಅಂಧಕಾರ ದರ್ಶನದಿಂದ ದೀಪ ಪ್ರಾಪ್ತಿಯು ಎಲ್ಲಿಯೂ ಉಂಟಾಗುವುದಿಲ್ಲವಷ್ಟೆ? ಆದರೆ ದೀಪಕ್ಕೆ ಅನುಕೂಲವಾದ ವಹ್ನಿಯ ಉಪಾಸನೆಯನ್ನು ಮಾಡುವುದರಿಂದಲೇ ದೀಪ ಪ್ರಾಪ್ತಿಯು ಉಂಟಾಗುತ್ತದೆ. ಆದ್ದರಿಂದ ಸಗುಣ ಜ್ಞಾನವು ನಿರ್ಗುಣ ಜ್ಞಾನಕ್ಕೆ ಉಪಾಯ ಮುಂತಾದ ನಿನ್ನ ಕಲ್ಪನೆಗಳು ಅಪ್ರಾಮಾಣಿಕಕಲ್ಪನೆಗಳು ಎಂದು ಅಭಿಪ್ರಾಯ.

**ಸೋಪಾಸನೈವ ತಾಂ ಸ್ಥೂಲಾಂ ಕಿಮಣ್ವೀಕೃತ್ಯ ದರ್ಶಯೇತ್ ।**
**ಕಿಂ ವಾ ಭಿನ್ನಕಟಾಹಸ್ಯಾಪ್ಯಭೇದೋ ಭೇದಚಿಂತಯಾ ॥ ೧೪೮ ॥**

**ಅರ್ಥ–** ಸಾ ಉಪಾಸನೈವ= ಆ ಉಪಾಸನೆಯೇ, ಸ್ಥೂಲಾಂ= ಸ್ಥೂಲವಾದ, ತಾಂ= ಆ ತಾರೆಯನ್ನು, ಅಣ್ವೀಕೃತ್ಯ= ಸೂಕ್ಷ್ಮವನ್ನಾಗಿ ಮಾಡಿ, ಕಿಂ ದರ್ಶಯೇತ್= ತೋರಿಸುತ್ತದೆಯೇನು?, ವಾ= ಅಥವಾ, ಅಭೇದಚಿಂತಯಾ= ಅಭೇದ ಚಿಂತನೆಯಿಂದ, ಭಿನ್ನ ಕಟಾಹಸ್ಯ= ಒಡೆದು ಹೋದ ಹಂಡೆಗೆ, ಅಭೇದಃ ಕಿಂ= ಅಭೇದ ಉಂಟಾಗುತ್ತದೆಯೇನು?

**ಅನುವಾದ–** ಸ್ಥೂಲ ತಾರೆಯನ್ನು ಸೂಕ್ಷ್ಮ ಎಂದು ಉಪಾಸನೆ ಮಾಡಿದರೆ ಆ ಉಪಾಸನೆಯೇ ಸ್ಥೂಲ ತಾರೆಯನ್ನೇ ಚಿಕ್ಕದಾಗಿ ಮಾಡಿ ಅರುಂಧತಿ ಎಂದು ತೋರಿಸುತ್ತದೆಯೇನು? ಅಥವಾ ಒಡೆದು ಹೋದ ಹಂಡೆಯಲ್ಲಿ (ಅಥವಾ ಘಟದಲ್ಲಿ) ಅಭೇದ ಚಿಂತನೆಯನ್ನು ಮಾಡಿದರೆ ಅಭೇದವು ಉಂಟಾಗುತ್ತದೆಯೇನು? (ಒಡೆದು ಹೋದ ಭಾಗವು ಕೂಡಿಕೊಳ್ಳುತ್ತದೆಯೇನು?)

**ಭಾವವಿಲಾಸಿನೀ–**ವಿರುದ್ಧೋಪಾಸ್ತ್ಯಾ ತದ್ವಿರುದ್ಧಫಲಾಪ್ರಾಪ್ತೌ ದೃಷ್ಟಾಂತದ್ವಯಮಾಹ–**ಸೇತಿ** ॥ ಸಾ ಸ್ಥೂಲತಾರೋಪಾಸನಾ । ತಾಂ ತಾರಾಮ್ । ಸ್ಥೂಲತ್ವೋಪಾಸನಯಾಸ್ಯೈವ ತಾರಾಽಣ್ವೀಭವತಿ ಚೇತ್ ಸಗುಣತ್ವೋಪಾಸ್ತ್ಯಾ ತದೇವ ಸಗುಣಂ ನಿರ್ಗುಣೀಭವತೀತ್ಯಸ್ಯೇದಂ ನಿದರ್ಶನಂ ಸ್ಯಾತ್ । ನಚ ತದಸ್ತಿ। ಏವಂ ಭಿನ್ನಕಟಾಹಸ್ಥ ಭೇದಸ್ಯೈವ ಪೌನಃಪುನ್ಯೇನ ಚಿಂತಯಾ ಭಾಗದ್ವಯಸ್ಯೈಕೀಭಾವಾಖ್ಯಾಭೇದೋ ಯದಿ ಸ್ಯಾತ್ ತದಾಭೇದೋಪಾಸ್ತ್ಯಾ ಅಭೇದಪ್ರಾಪ್ತಿಃ ಸಂಭಾವ್ಯೇತಾಪಿ । ನೈತದಪಿ ದೃಷ್ಟಮ್ । ಅತೋ ವಿರುದ್ಧೋಪಾಸ್ತ್ಯಾ ತದ್ವಿರುದ್ಧಫಲಪ್ರಾಪ್ತಿರಸಂಭಾವಿತ್ವೈವೇತಿ ಭಾವಃ ॥ ೧೪೦೯ ॥

**ವಿವರಣೆ–** ವಿರುದ್ಧಉಪಾಸನೆಯಿಂದ ಅದಕ್ಕೆ ವಿರುದ್ಧವಾದ ಫಲವು ಪ್ರಾಪ್ತವಾಗುವುದಿಲ್ಲವೆಂಬ ವಿಷಯದಲ್ಲಿ ಎರಡು ದೃಷ್ಟಾಂತಗಳನ್ನು ಹೇಳುತ್ತಾರೆ. ಸ್ಥೂಲತಾರೆಯನ್ನು ಅರುಂಧತಿ ಎಂದು ಉಪಾಸನೆ ಮಾಡಿದರೆ ಅದು ಸೂಕ್ಷ್ಮತಾರೆಯಾದ ಅರುಂಧತಿಯಾಗುವುದಿಲ್ಲ. ಒಡೆದು ಹೋದ ಪಾತ್ರೆಯಲ್ಲಿ ಒಡೆದಿಲ್ಲ ಎಂದು ಉಪಾಸನೆ ಮಾಡಿದರೆ ಉಂಟಾಗಿದ್ದ ಒಡಕು ಮುಚ್ಚಿಹೋಗುವುದಿಲ್ಲ. ಆದ್ದರಿಂದ ವಿರುದ್ಧೋಪಾಸನೆಯಿಂದ ವಿರುದ್ಧಫಲವು ದೊರೆಯುವುದಿಲ್ಲ ಎಂದು ಅಭಿಪ್ರಾಯ.

**ಉತ್ಕರ್ಷಶ್ಚೇದುಪಾಸ್ಯಃ ಸ್ಯಾನ್ಮಿಥ್ಯಾರ್ಥೋಽಪಿ ಮತೇ ತವ ।**
**ನೀಚಜೀವೋಚ್ಚತಾಹೇತುಸ್ತಾದೃಗೈಕ್ಯಂ ನ ನೋ ಭಿದಾ ॥ ೧೪೧೦ ॥**

**ಅವಿದ್ಯಮಾನಭೇದಸ್ಯ ನೋಪಾಸಾ ತೇನ ಶೋಭತೇ ।**
**ಅವಿದ್ಯಮಾನಮೇವೈಕ್ಯಮುಪಾಸ್ಯಂ ಸ್ಯಾತ್ ಸುಖೇನ ತೇ ॥ ೧೪೧೧ ॥**

**ಅರ್ಥ–** ತವ ಮತೇ= ನಿನ್ನ ಮತದಲ್ಲಿ, ಉತ್ಕರ್ಷಶ್ಚೇತ್= ಉತ್ಕರ್ಷ ಉಂಟಾಗುವುದಾದರೆ, ಮಿಥ್ಯಾರ್ಥೋಽಪಿ= ಮಿಥ್ಯಾರ್ಥವೂ ಸಹ, ಉಪಾಸ್ಯಃ ಸ್ಯಾತ್= ಉಪಾಸ್ಯವಾಗುತ್ತದೆಯಷ್ಟೇ ಆದ್ದರಿಂದ, ನೀಚಜೀವೋಚ್ಚತಾಹೇತುಃ= ನೀಚ ಜೀವನ ಉತ್ಕರ್ಷಕ್ಕೆ ಕಾರಣವಾದ, ಐಕ್ಯಂ= ಐಕ್ಯವೇ, ತಾದೃಕ್= ಮಿಥ್ಯಾಭೂತವಾಗಿ ಉಪಾಸನೆಗೆ ಯೋಗ್ಯವಾದುದು, ನೋ ಭಿದಾ= ನಮ್ಮ ಭೇದವು, ನ= ಅಲ್ಲ, ತೇನ= ಆ ಕಾರಣದಿಂದ, ಅವಿದ್ಯಮಾನಭೇದಸ್ಯ= ಮಿಥ್ಯಾಭೇದದ, ಉಪಾಸಾ= ಉಪಾಸನೆಯು, ನ ಶೋಭತೇ=

ಶೋಭಿಸುವುದಿಲ್ಲ, ತೇ= ನಿನ್ನ, ಅವಿದ್ಯಮಾನಂ= ಮಿಥ್ಯಾಭೂತವಾದ, ಐಕ್ಯಂ= ಐಕ್ಯವು, ಸುಖೇನ= ನಿರಾಯಾಸವಾಗಿ, ಉಪಾಸ್ಯಂ ಸ್ಯಾತ್= ಉಪಾಸ್ಯವಾಗುತ್ತದೆ.

**ಅನುವಾದ–** ನಿನ್ನ ಮತದಲ್ಲಿ ಮಿಥ್ಯಾರ್ಥವೂ ಸಹ ಉತ್ಕರ್ಷ ಉಂಟಾಗುವುದಾದರೆ ಉಪಾಸ್ಯವಾಗುವುದಾದರೆ ನೀಚ ಜೀವನ ಉತ್ಕರ್ಷಕ್ಕೆ ಕಾರಣವಾದ ಬ್ರಹ್ಮೈಕ್ಯವೇ ಅಂತಹ ಉಪಾಸನೆಗೆ ಯೋಗ್ಯವಾದ ಮಿಥ್ಯಾರ್ಥವಾಗುತ್ತದೆ. ನಮ್ಮ ಭೇದವು ಅಂತಹ ಉಪಾಸನೆಗೆ ಯೋಗ್ಯವಾಗುವುದಿಲ್ಲ. ಆ ಕಾರಣದಿಂದ ಅವಿದ್ಯಮಾನವಾದ ಎಂದರೆ ಮಿಥ್ಯಾಭೂತವಾದ ಭೇದದ ಉಪಾಸನೆಯು ಶೋಭಿಸುವುದಿಲ್ಲ. ನಿನಗೆ ಅಭಿಮತವಾದ ಅವಿದ್ಯಮಾನವಾದ ಐಕ್ಯದ ಉಪಾಸನೆಯೇ ನಿರಾಯಾಸವಾಗಿ ಶೋಭಿಸುತ್ತದೆ.

**ಭಾವವಿಲಾಸಿನೀ–** ಕಿಂಚ ಮನುಷ್ಯಸ್ಯೇಂದ್ರತ್ವೋಪಾಸನವತ್ ನೀಚಸ್ಯೋತ್ಕರ್ಷಪ್ರಾಪ್ತೌ ಮಿಥ್ಯಾಭೂತತ್ವೇಪ್ಯುಪಾಸ್ಯ ಇತಿ ಬ್ರಹ್ಮದೃಷ್ಟಿರುತ್ಕರ್ಷಾದಿತ್ಯತ್ರ ಭವದ್ಭಾಷ್ಯಕೃತೈವಭಾಷಿತಮ್ । ಏವಂಚ ನೀಚಜೀವಸ್ಯೋಚ್ಚ ಬ್ರಹ್ಮತ್ವಪ್ರಾಪಕಮೈಕ್ಯಮೇವ ಮಿಥ್ಯಾಭೂತತ್ವೇಪ್ಯುಪಾಸ್ಯಂ ಸ್ಯಾತ್ । ನೀಚಜೀವಸ್ಯ ಸುತರಾಂ ನೀಚತ್ವಪ್ರಾಪಕಜೀವಬ್ರಹ್ಮಭೇದಸ್ಯ ಕಥಂ ಮಿಥ್ಯಾಭೂತಸ್ಯಾಪ್ಯುಪಾಸ್ತಿರಿತ್ಯಾಹ–**ಉತ್ಕರ್ಷ ಇತಿ** ॥ ಉತ್ಕರ್ಷಸ್ಯಾಚ್ಚೇದಿತ್ಯರ್ಥಃ। ತಾದೃಕ್ ಉತ್ಕರ್ಷಪ್ರಾಪಕಮ್ । ನೋಽಸ್ಮಾಕಂ ಭಿದಾ ನ । ತಾದೃಶೀನೇತ್ಯರ್ಥಃ। ಅತಃ ಕಥಂ ಮಿಥ್ಯಾಭೂತಸ್ಯಾಪ್ಯುಪಾಸ್ತಿರಿತಿ ಭಾವಃ ॥ ೧೪೧೦-೧೪೧೧ ॥

**ವಿವರಣೆ–** ಮತ್ತು ಮನುಷ್ಯನನ್ನು ಇಂದ್ರನೆಂದು ಉಪಾಸನೆ ಮಾಡಿದರೆ ನೀಚನಾದ ಮನುಷ್ಯನಿಗೆ ಉತ್ಕರ್ಷವು ಉಂಟಾಗುವುದರಿಂದ ಮಿಥ್ಯಾಭೂತವಾದ ಅರ್ಥವು ಉಪಾಸ್ಯವಾಗುತ್ತದೆ ಎಂದು ಬ್ರಹ್ಮದೃಷ್ಟಿರುತ್ಕರ್ಷಾತ್ ಎಂಬ ಬ್ರಹ್ಮಸೂತ್ರದಲ್ಲಿ ನಿಮ್ಮ ಭಾಷ್ಯಕಾರರೇ ಹೇಳಿದ್ದಾರೆ. ಆದ್ದರಿಂದ ಅಭೇದವು ನೀಚನಾದ ಜೀವನಿಗೆ ಉತ್ತಮವಾದ ಬ್ರಹ್ಮತ್ವವನ್ನು ತಂದುಕೊಡುವುದರಿಂದ ಉತ್ಕರ್ಷವನ್ನು ತಂದುಕೊಡುತ್ತದೆ. ಭೇದವಾದರೂ ಮೊದಲೇ ನೀಚನಾಗಿರುವ ಜೀವನಿಗೆ ಇನ್ನೂ ನೀಚತ್ವವನ್ನು ತಂದುಕೊಡುತ್ತದೆ. ಆದ್ದರಿಂದ ನೀನು ಹೇಳುವಂತೆ ಭೇದವು ಅವಿದ್ಯಮಾನ ಎಂದು ಒಪ್ಪಿ ಅಂತಹ ಅವಿದ್ಯಮಾನವಾದ ಭೇದದ ಉಪಾಸನೆಯಿಂದ ನೀಚತ್ವವೇ ಉಂಟಾಗುವುದರಿಂದ ಭೇದವು ಉಪಾಸ್ಯವಲ್ಲ. ಐಕ್ಯದಿಂದ ಉತ್ಕರ್ಷ ಉಂಟಾಗುವುದರಿಂದ ಐಕ್ಯವೇ ಉಪಾಸ್ಯವಾದುದು. ಉಪಾಸ್ಯವಾದುದು ಮಿಥ್ಯಾ ಎಂದು ಅಂಗೀಕರಿಸುವುದರಿಂದ ಮಿಥ್ಯಾಭೂತವಾದ ಐಕ್ಯವೇ ಉಪಾಸನೆಗೆ ಯೋಗ್ಯವೆಂದು ಅಂಗೀಕರಿಸು ಎಂದು ಅಭಿಪ್ರಾಯ.

ಯದಿ ಧ್ಯಾನಾಯ ಮಿಥ್ಯಾರ್ಥಂ ಪ್ರಥಯೇತ್ ಪ್ರಥಿತಾ ಶ್ರುತಿಃ ।
ತದಾ ದೃಷ್ಟ್ಯೈ ತವೈಕ್ಯಂ ಚ ಮಿಥ್ಯಾರ್ಥಂ ನ ಕುತೋ ವದೇತ್॥ ೧೪೧೨ ॥

ಘಟವೃತ್ತ್ಯೇವ ತದ್ವೃತ್ತ್ಯಾಪ್ಯವಿದ್ಯಾನಾಶ ಇಷ್ಯತಾಮ್ ।
ಮಿಥ್ಯಾರ್ಥದೃಷ್ಟ್ಯಾಪ್ಯಾನಂದಃ ಕಿಂ ನ ತಾತ್ಕಾಲಿಕೋ ನೃಣಾಮ್ ।
ಅತಸ್ತಯಾಪಿ ಮುಕ್ತಿಃ ಸ್ಯಾದ್ ಯಥಾ ಪ್ರಾಗುಕ್ತಯಾ ದೃಶಿಃ॥ ೧೪೧೩ ॥

ದ್ವಯೋರೇಕಸ್ಯ ಸತ್ಯತ್ವೇ ನಿರ್ವೈರಸ್ಯಾಸ್ತು ಲಾಘನಾತ್ ।
ಅಭೇದಸ್ತೇ ಜಗದ್ಧಂತಿ ಭೇದಃ ಸರ್ವಂ ಚ ರಕ್ಷತಿ ॥ ೧೪೧೪ ॥

**ಅರ್ಥ–** ಯದಿ= ಒಂದು ಪಕ್ಷ, ಪ್ರಥಿತಾ= ಕೀರ್ತಿಯನ್ನು ಹೊಂದಿದ, ಶ್ರುತಿಃ= ಶ್ರುತಿಯು, ಧ್ಯಾನಾಯ= ಧ್ಯಾನಕ್ಕೋಸ್ಕರವಾಗಿ, ಮಿಥ್ಯಾರ್ಥಂ= ಮಿಥ್ಯಾಭೂತವಾದ ಅರ್ಥವನ್ನು, ಪ್ರಥಯೇತ್= ಹೇಳುವುದಾದರೆ, ತದಾ= ಆಗ, ದೃಷ್ಟ್ಯೈ ಚ= ದರ್ಶನಕ್ಕೋಸ್ಕರವಾಗಿಯೂ ಸಹ, ಮಿಥ್ಯಾರ್ಥಂ= ಮಿಥ್ಯಾರ್ಥವಾದ, ತವೈಕ್ಯಂ= ನಿನ್ನ ಐಕ್ಯವನ್ನು, ಕುತಃ= ಏಕೆ, ನ ವದೇತ್= ಹೇಳುವುದಿಲ್ಲ, ಘಟವೃತ್ತ್ಯೇವ= ಘಟವೃತ್ತಿಯಿಂದ ಉಂಟಾಗುವಂತೆ, ತದ್ವೃತ್ತ್ಯಾಪಿ= ಮಿಥ್ಯಾಭೂತವಾದ ಐಕ್ಯದ ಅಪರೋಕ್ಷ ವೃತ್ತಿಯಿಂದಲೂ, ಅವಿದ್ಯಾನಾಶಃ= ಅವಿದ್ಯಾನಾಶವು, ಇಷ್ಯತಾಂ= ಅಂಗೀಕರಿಸಲ್ಪಡಲಿ, ಮಿಥ್ಯಾರ್ಥದೃಷ್ಟ್ಯಾಪಿ= ಮಿಥ್ಯಾಭೂತವಾದ ರಜತದ ದೃಷ್ಟಿಯಿಂದಲೂ, ನೃಣಾಂ= ಮನುಷ್ಯರಿಗೆ, ತಾತ್ಕಾಲಿಕ ಆನಂದಃ= ಆ ಕಾಲದಲ್ಲಿ ಆನಂದವು, ಕಿಂ ನ= ಉಂಟಾಗುವುದಿಲ್ಲವೇನು? ಅತಃ= ಆದ್ದರಿಂದ, ಯಥಾ= ಹೇಗೆ, ಪ್ರಾಗುಕ್ತಯಾ= ಹಿಂದೆ ಹೇಳಿದ ಭೇದೋಪಾಸನೆಯಿಂದ, ದೃಶಿಃ= ಐಕ್ಯಾಪರೋಕ್ಷ ಜ್ಞಾನವು ಉಂಟಾಗುವಂತೆ, ತಯಾ= ಮಿಥ್ಯಾಭೂತವಾದ ಐಕ್ಯದ ದರ್ಶನದಿಂದಲೂ, ಮುಕ್ತಿಃ ಸ್ಯಾತ್= ಮೋಕ್ಷವು ಉಂಟಾಗಲಿ, ದ್ವಯೋಃ= ಎರಡರಲ್ಲಿ, ಲಾಘವಾತ್= ಲಾಘವದಿಂದ, ಏಕಸ್ಯ= ಒಂದಕ್ಕೆ ಮಾತ್ರ, ಸತ್ಯತ್ವೇ= ಸತ್ಯತ್ವವಿರುವುದಾದರೆ, ನಿರ್ವೈರಸ್ಯ= ವಿರೋಧ ಶೂನ್ಯವಾದ, ಭೇದಃ= ಭೇದಕ್ಕೆ, ಅಸ್ತು= ಸತ್ಯತ್ವವಿರಲಿ, ತೇ= ನಿನ್ನ, ಅಭೇದಃ= ಅಭೇದವು, ಜಗತ್= ಜಗತ್ತನ್ನು, ಹಂತಿ= ನಾಶಮಾಡುತ್ತದೆ, ಭೇದಶ್ಚ= ಭೇದವಾದರೂ, ಸರ್ವಂ= ಎಲ್ಲವನ್ನೂ, ರಕ್ಷತಿ= ರಕ್ಷಿಸುತ್ತದೆ.

**ಅನುವಾದ–** ಕೀರ್ತಿಯನ್ನು ಹೊಂದಿದ ಶ್ರುತಿಯು ಒಂದು ಪಕ್ಷ ಧ್ಯಾನಕ್ಕೋಸ್ಕರವಾಗಿ ಮಿಥ್ಯಾಭೂತವಾದ ಅರ್ಥವನ್ನು ಹೇಳುವುದಾದರೆ ಆಗ ದರ್ಶನಕ್ಕೋಸ್ಕರವಾಗಿ ಮಿಥ್ಯಾಭೂತವಾದ ನಿನ್ನ ಐಕ್ಯವನ್ನು ಏಕೆ ಹೇಳುವುದಿಲ್ಲ? ಮಿಥ್ಯಾಭೂತದ ಅಪರೋಕ್ಷ ವೃತ್ತಿಯಿಂದ ಅಜ್ಞಾನ ನಾಶವಾಗುವಂತೆ ಮಿಥ್ಯಾಭೂತವಾದ ಐಕ್ಯದ ಅಪರೋಕ್ಷ ಜ್ಞಾನದಿಂದಲೂ ಅಜ್ಞಾನ ನಾಶವನ್ನು ಅಂಗೀಕರಿಸು. ಮಿಥ್ಯಾರ್ಥ-ವಾದ ರಜತ ದರ್ಶನದಿಂದಲೂ ತತ್ಕಾಲದಲ್ಲಿ ಮನುಷ್ಯರಿಗೆ ಆನಂದವಾಗು-ವುದಿಲ್ಲವೇನು? ಆದ್ದರಿಂದ ಮಿಥ್ಯಾಭೂತವಾದ ಭೇದೋ- ಪಾಸನೆಯಿಂದ ಐಕ್ಯದ ಅಪರೋಕ್ಷ ಜ್ಞಾನವಾಗುವಂತೆ ಮಿಥ್ಯಾಭೂತವಾದ ಐಕ್ಯದ ದರ್ಶನದಿಂದಲೂ

**ಮುಕ್ತಿ ಉಂಟಾಗಲಿ. ಲಾಘವವಿರುವುದರಿಂದ ಭೇದಾಭೇದ ಇವೆರಡರಲ್ಲಿ ಒಂದಕ್ಕೆ ಮಾತ್ರ ಸತ್ಯತ್ವವೆಂದು ಹೇಳುವುದಾದರೆ ವಿರೋಧ ಶೂನ್ಯವಾದ ಭೇದಕ್ಕೆ ಸತ್ಯತ್ವವಿರಲಿ. ನಿನ್ನ ಅಭೇದವು ಜಗತ್ತನ್ನು ನಾಶ ಮಾಡುತ್ತದೆ. ಭೇದವಾದರೂ ಸಹ ಎಲ್ಲವನ್ನೂ ರಕ್ಷಿಸುತ್ತದೆ.**

**ಭಾವವಿಲಾಸಿನೀ–** ಕಿಂಚ ಧ್ಯಾನಾಯಾವಿದ್ಯಮಾನಭೇದೋಕ್ತೌ ದರ್ಶನಾಯಾಪ್ಯವಿದ್ಯಮಾನಮೇವೈಕ್ಯಮೈಕ್ಯಶ್ರುತ್ಯಾಕಥ್ಯತಾಮ್ । ದ್ವಿಧಾಕಲ್ಪನಾಯಾಂ ಗುರುತ್ವಾತ್ । ಕಾರ್ಯಕಾರಣಯೋರ್ದ್ವೈರೂಪ್ಯಸ್ಯಾಯುಕ್ತತ್ವಾದದ್ವಿತೀಯಶ್ರುತೇಃ ಪಕ್ಷಪಾತಾಭಾವಾಚ್ಚ । ಘಟವೃತ್ತ್ಯಾಽಜ್ಞಾನನಿವೃತ್ತ್ಯಂಗೀಕಾರಾತ್ । ಮಿಥ್ಯಾಭೂತರಜತದೃಷ್ಟ್ಯಾಪಿ ತಾತ್ಕಲಿಕಾನಂದದರ್ಶನಾಚ್ಚ। ದ್ವಿವಿಧಮುಕ್ತೇಶ್ಚ ಮಿಥ್ಯಾಭೂತೈಕ್ಯದರ್ಶನೇನಾಪಿ ಸಂಭವಾತ್ । ಏವಮಪ್ಯೇಕಸ್ಯ ಸತ್ಯತ್ವೇ ವಕ್ತವ್ಯೇ ಜಗದ್ರಕ್ಷಕತಯಾ ನಿರ್ವೈರಸ್ಯ ಭೇದಸ್ಯೈವ ತದಸ್ತು । ಉಪಾಸ್ಯತಯಾ ಪ್ರಥಮೋಪಸ್ಥಿತತ್ವೇನ ಲಾಘವಾಚ್ಚ । ನತ್ವೈಕ್ಯಸ್ಯೇತ್ಯಾಹ – **ಯದೀತಿ** ॥ ತದ್ವೃತ್ತ್ಯಾ ಐಕ್ಯಾಪರೋಕ್ಷಜ್ಞಾನೇನ । ತಯಾ ಮಿಥ್ಯಾಭೂತೈಕ್ಯಸ್ಯ ದೃಷ್ಟ್ಯಾ। ಪ್ರಾಗುಕ್ತಯಾಮಿಥ್ಯಾಭೂತಭೇದೋಪಾಸ್ತ್ಯಾ । ದೃಶಿಃ ಐಕ್ಯಾಪರೋಕ್ಷಜ್ಞಾನಮ್ । ಮಿಥ್ಯಾರ್ಥದರ್ಶನಸ್ಯ ಮೋಕ್ಷಾಸಾಧಕತ್ವೇ ನ್ಯಾಯಸಾಮ್ಯಾದೇತದಪಿ ನ ಸ್ಯಾದಿತಿ ಭಾವಃ ॥ ೧೪೧೨-೧೪೧೪ ॥

**ವಿವರಣೆ–** ಮತ್ತು ಧ್ಯಾನಕ್ಕೋಸ್ಕರವಾಗ ಅವಿದ್ಯಮಾನ ಭೇದವನ್ನು ಹೇಳುವುದಾದರೆ, ದರ್ಶನಕ್ಕೋಸ್ಕರವಾಗಿ ಶ್ರುತಿಯು ಅವಿದ್ಯಮಾನವಾದ ಐಕ್ಯವನ್ನು ಹೇಳುತ್ತದೆ ಎಂದು ಅಂಗೀಕರಿಸಿ ಧ್ಯಾನವು ಮಾತ್ರ ಅವಿದ್ಯಮಾನ ವಿಷಯದ್ದು ಆಗಬಹುದು, ದರ್ಶನವು ವಿದ್ಯಮಾನ ವಿಷಯದ್ದೇ ಆಗಬೇಕು ಎಂದು ಎರಡು ರೀತಿ ಕಲ್ಪನೆ ಮಾಡಿದರೆ ಕಲ್ಪನಾಗೌರವವು ಬರುತ್ತದಷ್ಟೇ. ಮತ್ತು ಎರಡು ರೀತಿಯ ಕಾರ್ಯಕಾರಣಭಾವವನ್ನು ಕಲ್ಪನೆ ಮಾಡಬೇಕಾಗುತ್ತದೆ. ಮತ್ತು ಐಕ್ಯಶ್ರುತಿಗೆ ಐಕ್ಯವನ್ನು ಬಿಟ್ಟು ಉಳಿದ ಎಲ್ಲದರ ನಿಷೇಧವೂ ಅರ್ಥ ಎಂದು ಹೇಳಬೇಕಾಗುವುದರಿಂದ ಪಕ್ಷಪಾತವನ್ನೂ ಕಲ್ಪನೆ ಮಾಡಬೇಕಾಗುತ್ತದೆ. ಐಕ್ಯವು ಮಿಥ್ಯಾಭೂತವಾದರೆ ಅದರ ದರ್ಶನದಿಂದ ಅಜ್ಞಾನನಾಶವಾಗಲೀ ಅಥವಾ ಸುಖ ಪ್ರಾಪ್ತಿಯಾಗಲೀ ಹೇಗೆ ಉಂಟಾದೀತು ಎಂದು ನೀನು ಪ್ರಶ್ನೆಯನ್ನು ಮಾಡಬಹುದು. ಆದರೆ ಮಿಥ್ಯಾಭೂತವಾದ ಘಟದ ವೃತ್ತಿಯಿಂದಲೂ ನೀನು ಅಜ್ಞಾನ ನಾಶವನ್ನು ಒಪ್ಪಿರುವುದರಿಂದ ಮಿಥ್ಯಾಭೂತವಾದ ಐಕ್ಯದ ವೃತ್ತಿಯಿಂದಲೂ ಅಜ್ಞಾನ ನಾಶವನ್ನು ಒಪ್ಪು, ಏನು ತೊಂದರೆಯಿದೆ? ಮಿಥ್ಯಾಭೂತವಾದ ರಜತ ದರ್ಶನದಿಂದ ಮನುಷ್ಯರಲ್ಲಿ ತತ್ಕಾಲದಲ್ಲಿ ಸುಖ ಉಂಟಾಗುವುದು ಅನುಭವ ಸಿದ್ಧವಾಗಿದೆಯಷ್ಟೇ? ಅದರಂತೆ ಮಿಥ್ಯಾಭೂತವಾದ ಐಕ್ಯದ ದರ್ಶನದಿಂದಲೂ ಸುಖವುಂಟಾಗಲಿ. ಆದ್ದರಿಂದ ಈ ಎರಡನೇ ಅನುಪಪತ್ತಿಯೂ ಇಲ್ಲ. ಇಷ್ಟಾದರೂ ಲಾಘವ ಇರುವುದರಿಂದ ಒಂದಕ್ಕೇ ಸತ್ಯತ್ವವನ್ನು

ಹೇಳುವುದಾದರೆ ಅದು ಪ್ರಥಮ ಉಪಸ್ಥಿತವಾದ ಉಪಾಸ್ಯತಯಾ ಪ್ರಾಪ್ತವಾದ ಭೇದಕ್ಕೇ ಇರಲಿ. ಐಕ್ಯಕ್ಕೆ ಸತ್ಯತ್ವವು ಬೇಡ. ಮಿಥ್ಯಾಭೂತವಾದ ಭೇದೋಪಾಸನೆಯಿಂದ ಐಕ್ಯಾಪರೋಕ್ಷ ಜ್ಞಾನವಾಗುತ್ತದೆ ಎಂದು ನೀನು ಒಪ್ಪಿದಂತೆ ಮಿಥ್ಯಾಭೂತವಾದ ಐಕ್ಯಾಪರೋಕ್ಷ ಜ್ಞಾನದಿಂದಲೂ ಮೋಕ್ಷ ವುಂಟಾಗುತ್ತದೆ ಎಂದು ಅಂಗೀಕರಿಸು ಎಂದು ಅಭಿಪ್ರಾಯ.

ಸರ್ವಮಸ್ಮೀತ್ಯುಪಾಸೀತೇತ್ಯೈಕ್ಯೋಪಾಸ್ತಿಸ್ತವ ಶ್ರುತಾ ।
ಭೇದರ್ಕ್ಷು ನಸ್ತಥಾ ನಾಹ ತ್ವನ್ನಯಸ್ತ್ವಾಂ ನಿಹಂತ್ಯಹೋ ॥ ೧೪೧೫ ॥

**ಅರ್ಥ–** ಸರ್ವಮಸ್ಮೀತ್ಯುಪಾಸೀತ= ನಾನು ಎಲ್ಲವೂ ಆಗಿದ್ದೇನೆಂದು ಉಪಾಸನೆ ಮಾಡಬೇಕು, ಇತಿ= ಎಂದು, ತವ= ನಿನ್ನ, ಐಕ್ಯೋಪಾಸ್ತಿಃ= ಐಕ್ಯದ ಉಪಾಸನೆಯೇ, ಶ್ರುತಾ= ಶ್ರುತಿಯಲ್ಲಿ ಹೇಳಲ್ಪಟ್ಟಿದೆ, ನಃ= ನಮ್ಮ, ಭೇದರ್ಕ್ಷು= ಭೇದವನ್ನು ಹೇಳುವ ಮಂತ್ರವಾದರೂ, ತಥಾ= ಹಾಗೆ (ಉಪಾಸನೆಯನ್ನು ಮಾಡು ಎಂದು), ನಾಹ= ಹೇಳಿಲ್ಲ, ತ್ವನ್ನಯಃ= ನಿನ್ನ ನ್ಯಾಯವೇ, ತ್ವಾಂ ನಿಹಂತಿ= ನಿನ್ನನ್ನು ಕೊಲ್ಲುತ್ತದೆ, ಅಹೋ= ಆಶ್ಚರ್ಯವು.

**ಅನುವಾದ–** 'ಸರ್ವಮಸ್ಮಿ ಇತ್ಯುಪಾಸೀತ' ನಾನು ಎಲ್ಲವೂ ಆಗಿದ್ದೇನೆ ಎಂದು ಉಪಾಸನೆಯನ್ನು ಮಾಡು ಎಂಬ ಶ್ರುತಿವಾಕ್ಯವೇ ಐಕ್ಯವನ್ನು ಉಪಾಸ್ಯವೆಂದು ಹೇಳುತ್ತದೆ. ನಮ್ಮ ಭೇದ ಮಂತ್ರವು ಮಾತ್ರ ಭೇದವನ್ನು ಉಪಾಸ್ಯವೆಂದು ಹೇಳುವುದಿಲ್ಲ. ಆದ್ದರಿಂದ ನಿನ್ನ ನ್ಯಾಯವೇ ನಿನ್ನನ್ನು ಕೊಲ್ಲುತ್ತದೆ. ಇದು ಆಶ್ಚರ್ಯ!

**ಭಾವವಿಲಾಸಿನೀ–** ಕಿಂಚ ಸರ್ವಮಸ್ಮೀತ್ಯುಪಾಸೀತ ತದ್ವ್ರತಮಿತಿ ಛಾಂದೋಗ್ಯೋಪನಿಷದಿ ಐಕ್ಯಸ್ಯೈವೋಪಾಸ್ಯತಯಾ ಕಥನಾತ್ ಉಪಾಸ್ಯತಯೋಕ್ತಸ್ಯ ಮಿಥ್ಯಾತ್ವಮಿತಿ ತ್ವದುಕ್ತನ್ಯಾಯೇನೈವ ತವೈಕ್ಯಂ ಮಿಥ್ಯಾಭೂತ್ । ನತು ಭೇದಃ । ಭೇದರ್ಚಿತಾದೃಶಪದಾಭಾವಾದಿತ್ಯಾಹ – ಸರ್ವಮಿತಿ ॥ ಭೇದರ್ಕ್‌ಭೇದಪ್ರತಿಪಾದಿಕಾಋಕ್ । ತಥಾ ಉಪಾಸೀತೇತಿ ॥ ೧೪೧೫ ॥

**ವಿವರಣೆ–** 'ಸರ್ವಮಸ್ಮಿ ಇತ್ಯುಪಾಸೀತ ತದ್‌ವ್ರತಂ' ಎಂಬುದು ಛಾಂದೋಗ್ಯೋಪನಿಷತ್ತಿನ ವಾಕ್ಯ. ಈ ವಾಕ್ಯದಲ್ಲಿ ಐಕ್ಯವನ್ನು ಉಪಾಸ್ಯವೆಂದು ಹೇಳಿದೆ. ಅಲ್ಲಿ ಉಪಾಸೀತ ಎಂದು ಶಬ್ದವಿದೆಯಷ್ಟೇ? ನೀನು ಉಪಾಸ್ಯವಾದುದಕ್ಕೆ ಮಿಥ್ಯಾತ್ವವನ್ನು ಅಂಗೀಕರಿಸಿದ್ದೀಯೆ. ಆದ್ದರಿಂದ ಐಕ್ಯವೇ ಮಿಥ್ಯೆಯಾಗಲಿ. ದ್ವಾಸುಪರ್ಣಾ ಇತ್ಯಾದಿ ಭೇದಮಂತ್ರಗಳಾದರೂ ಉಪಾಸನೆಯನ್ನು ಹೇಳುತ್ತಿಲ್ಲ. ಆ ಮಂತ್ರಗಳಲ್ಲಿ ಉಪಾಸೀತ ಎಂಬ ಪದವಿಲ್ಲ. ಆದ್ದರಿಂದ ಭೇದವು ಸತ್ಯವಾಗಲಿ. ಉಪಾಸ್ಯವಾದುದು ಮಿಥ್ಯಾಭೂತವಾದುದು ಎಂಬ ನಿನ್ನ ನ್ಯಾಯವೇ ನಿನಗೆ ಅಭಿಮತವಾದ ಐಕ್ಯಕ್ಕೆ ಮಿಥ್ಯಾತ್ವವನ್ನು ತಂದುಕೊಡುತ್ತದೆ ಎಂಬುದು ಆಶ್ಚರ್ಯದ ಸಂಗತಿ!

**ಕಿಂಚೋಪಾಸ್ಯಾ ಯದಿ ಭಿದಾ ತದಾ ಸಿದ್ಧಂ ಸಮೀಹಿತಂ ।**
**ತಂ ಯಥೋಪಾಸತೇ ದೇವಂ ತಥೈವ ಭವತೀತಿ ಹಿ ॥ ೧೪೧೬ ॥**

**ಶ್ರುತ್ಯಾ ಮುಕ್ತಾವುಪಾಸ್ಯಸ್ಯ ಯತ್ ಸತ್ತ್ವಮವಧಾರ್ಯತೇ ।**
**ತಸ್ಮಾದುಪಾಸ್ಯೋ ಭೇದೋಽಯಂ ಮುಕ್ತೌ ಚಾಸೀನ್ನಿರಾಕುಲಃ ।**
**ಅತ ಏವ ಮೃಷೋಪಾಸ್ತಿರ್ನ ಚಕಾಸ್ತಿ ಶ್ರುತೇರ್ಮತೇ ॥ ೧೪೧೭ ॥**

**ಅರ್ಥ–** ಕಿಂಚ= ಮತ್ತು, ಯದಿ= ಒಂದು ಪಕ್ಷ, ಭಿದಾ= ಭೇದವು, ಉಪಾಸ್ಯಾ= ಉಪಾಸ್ಯವೆಂದಾದರೆ, ತಯಾ= ಆದರಿಂದ, ಸಮೀಹಿತಂ= ನಮ್ಮ ಅಭೀಷ್ಟವು, ಸಿದ್ಧಂ= ಸಿದ್ಧವಾಯಿತು, ಯತ್= ಏಕೆಂದರೆ, ತಂ ದೇವಂ= ಆ ದೇವನನ್ನು, ಯಥೋಪಾಸತೇ= ಹೇಗೆ ಉಪಾಸನೆ ಮಾಡುತ್ತಾರೆಯೋ, ತಥೈವ ಭವತಿ= ಹಾಗೆಯೇ ಆಗುತ್ತಾರೆ, ಇತಿ ಶ್ರುತ್ಯಾ ಹಿ= ಎಂಬ ಶ್ರುತಿಯಿಂದ, ಮುಕ್ತೌ= ಮೋಕ್ಷದಲ್ಲಿಯೂ, ಉಪಾಸ್ಯಸ್ಯ= ಉಪಾಸ್ಯವಾದುದಕ್ಕೆ, ಸತ್ವಂ= ಸತ್ವವೇ, ಅವಧಾರ್ಯತೇ= ನಿಶ್ಚಯಿಸಲ್ಪಡುತ್ತದೆ, ತಸ್ಮಾತ್= ಆ ಕಾರಣದಿಂದ, ಉಪಾಸ್ಯಃ= ಉಪಾಸ್ಯವಾದ, ಅಯಂ ಭೇದಃ= ಈ ಜೀವೇಶ್ವರ ಭೇದವು, ಮುಕ್ತೌ ಚ= ಮುಕ್ತಿಯಲ್ಲಿಯೂ ಸಹ, ನಿರಾಕುಲಃ= ಪ್ರತಿಬಂಧರಹಿತವಾಗಿ, ಆಸೀತ್= ಆಯಿತು, ಅತ ಏವ= ಆ ಕಾರಣದಿಂದಲೇ, ಶ್ರುತೇರ್ಮತೇ= ಶ್ರುತಿಯ ಅಭಿಪ್ರಾಯದಲ್ಲಿ, ಮಿಥ್ಯೋಪಾಸ್ತಿಃ= ಮಿಥ್ಯಾಭೂತವಾದ ಅರ್ಥದ ಉಪಾಸನೆಯು, ನ ಚಕಾಸ್ತಿ= ಶೋಭಿಸುವುದಿಲ್ಲ.

**ಅನುವಾದ–** ಮತ್ತು ಭೇದವು ಉಪಾಸ್ಯವೆಂದಾದರೆ ನಮ್ಮ ಅಭೀಷ್ಟವು ಸಿದ್ಧವಾಗುತ್ತದೆ. ಏಕೆಂದರೆ ಆ ದೇವನನ್ನು ಹೇಗೆ ಉಪಾಸನೆ ಮಾಡುತ್ತಾರೆಯೋ ಹಾಗೆಯೇ ಮೋಕ್ಷದಲ್ಲೂ ಇರುತ್ತಾರೆ ಎಂದು ಹೇಳುವ ಶ್ರುತಿಯಿಂದ ಮೋಕ್ಷದಲ್ಲಿಯೂ ಸಹ ಉಪಾಸ್ಯವಾದುದಕ್ಕೆ ಸತ್ಯತ್ವವೇ ನಿಶ್ಚಯಿಸಲ್ಪಡುತ್ತದೆ. ಆದ್ದರಿಂದ ಉಪಾಸ್ಯವಾದ ಈ ಜೀವೇಶ್ವರ ಭೇದವು ಮೋಕ್ಷದಲ್ಲಿಯೂ ನಿರ್ಬಾಧವಾಗಿ ಇದೆ ಎಂದು ಸಿದ್ಧವಾಗುತ್ತದೆ. ಆ ಕಾರಣದಿಂದಲೇ ಶ್ರುತಿಯ ಅಭಿಪ್ರಾಯದಲ್ಲಿ ಮಿಥ್ಯಾ-ಭೂತವಾದ ಅರ್ಥದ ಉಪಾಸನೆಯು ಶೋಭಿಸುವುದಿಲ್ಲ.

**ಭಾವವಿಲಾಸಿನೀ–** ಅಪಿ ಚ ತಂ ಯಥಾ ಯಥೋಪಾಸತೇ ತಥೈವ ಭವತೀತಿ ಶ್ರುತೌ ಉಪಾ-ಸ್ಯಾವಸ್ಥಾಯಾಃ ತಥೈವ ಭವತೀತಿ ಫಲಭೂತಮುಕ್ತಾವಪ್ಯವಧಾರಣಾತ್ ತ್ವದುಕ್ತನ್ಯಾಯೇನೈವ ಭೇದಸ್ಯ ಮುಕ್ತಿಕಾಲೀನತ್ವಪ್ರಾಪ್ತ್ಯಾಮದಭೀಷ್ಟಸಿದ್ಧಿ ರರ್ಥಾದನಯೈವ ಶ್ರುತ್ಯಾಮಿಥ್ಯಾಭೂತೋ-ಪಾಸನಸ್ಯ ನಿವಾರಿತತ್ವಾತ್ ತ್ವದಭೀಷ್ಟಾಸಿದ್ಧಿಶ್ಚೇತ್ಯಾಹ – **ಕಿಂಚೇತಿ** ॥ ೧೪೧೬-೧೪೧೭ ॥

**ವಿವರಣೆ–** ತಂ ಯಥೋಪಾಸತೇ ತಥೈವ ಭವತಿ ಎಂಬ ಶ್ರುತಿಯು ಮೋಕ್ಷ ಕಾಲದಲ್ಲಿಯೂ ಉಪಾಸ್ಯಾವಸ್ಥೆಯು ಹಾಗೆಯೇ ಇರುತ್ತದೆ ಎಂದು ಹೇಳುವುದರಿಂದ

ನಿನ್ನ ನ್ಯಾಯದಿಂದಲೇ ಭೇದವು ಮುಕ್ತಿ ಕಾಲದಲ್ಲಿಯೂ ಇದೆ ಎಂದು ಪ್ರಾಪ್ತವಾಗುವುದರಿಂದ ನಮ್ಮ ಅಭೀಷ್ಟವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ. ತಥೈವ ಭವತಿ ಎಂಬ ಶ್ರುತಿಯ ಪದಗಳಿಗೆ ಉಪಾಸಕನು ಹಿಂದೆ ಹೇಗೆ ಹೇಗೆ ಇದ್ದನೋ ಅವೆಲ್ಲವೂ ಮೋಕ್ಷದಲ್ಲಿ ಹಾಗೆಯೇ ಇರುತ್ತವೆ ಎಂಬ ಅರ್ಥವನ್ನು ನಾವು ಹೇಳುವುದರಿಂದ ಉಪಾಸಕನ ಅವಸ್ಥೆಯಲ್ಲಿ ಇದ್ದ ಭೇದವು ಮೋಕ್ಷ ಕಾಲದಲ್ಲಿಯೂ ಇರುತ್ತದೆ. ಮೋಕ್ಷ ಕಾಲದಲ್ಲಿ ಇರುವ ಭೇದವು ಮಿಥ್ಯಾಭೂತವಾಗಲು ಸಾಧ್ಯವಿಲ್ಲವಾದ್ದರಿಂದ ಭೇದವು ಸತ್ಯವೇ ಆಗುತ್ತದೆ ಎಂದು ಅಭಿಪ್ರಾಯ.

**ತತೋऽನುಪಾಸ್ಯಂ ನೈರ್ಗುಣ್ಯಂ ನ ಕದಾಪಿ ಭವೇನ್ನೃಣಾಮ್ ।**
**ಸಗುಣಂ ತು ಸದೋಪಾಸ್ಯಂ ಸ್ವಯಂ ಚ ಸಗುಣೋ ಭವೇತ್ ॥ ೧೪೧೮ ॥**

**ಅರ್ಥ–** ತತಃ= ಆ ಕಾರಣದಿಂದ, ನೈರ್ಗುಣ್ಯಂ= ನಿರ್ಗುಣತ್ವವು ಮತ್ತು ಐಕ್ಯವು, ಅನುಪಾಸ್ಯಂ= ಉಪಾಸ್ಯವಾದುದಲ್ಲ, ನೃಣಾಂ= ಜೀವರಿಗೆ, ಕದಾಪಿ= ಯಾವಾಗಲೂ, ನ= ನೈರ್ಗುಣ್ಯವಾಗಲೀ ಐಕ್ಯವಾಗಲೀ ಉಂಟಾಗುವುದಿಲ್ಲ, ಸಗುಣಂ ತು= ಸಗುಣವಾದದ್ದೇ, ಸದಾ= ಸಂಸಾರ ಕಾಲದಲ್ಲಿಯೂ ಮತ್ತು ಮೋಕ್ಷ ಕಾಲದಲ್ಲಿಯೂ, ಉಪಾಸ್ಯಂ= ಉಪಾಸ್ಯವಾದುದು, ಸ್ವಯಂ ಚ= ಉಪಾಸಕನಾದ ಜೀವನು ತಾನೂ, ಸಗುಣಃ= ಸಗುಣನೇ, ಭವೇತ್= ಆಗುತ್ತಾನೆ.

**ಅನುವಾದ–** ಆದ್ದರಿಂದ ನೈರ್ಗುಣ್ಯವಾಗಲೀ ಮತ್ತು ಐಕ್ಯವಾಗಲೀ ಎಂದೂ ಉಪಾಸ್ಯವಲ್ಲ. ಜೀವರಿಗೆ ಅವು ಎಂದೂ ಉಂಟಾಗುವುದಿಲ್ಲ. ಸಗುಣನಾದವನೇ ಸಂಸಾರದಲ್ಲಿಯೂ ಮತ್ತು ಮೋಕ್ಷದಲ್ಲಿಯೂ ಉಪಾಸ್ಯನಾದವನು. ಅಂತಹ ಉಪಾಸನೆಯಿಂದ ಜೀವನು ಸಗುಣನೇ ಆಗುತ್ತಾನೆ.

**ಭಾವವಿಲಾಸಿನೀ–** ತತಃ ಉಪಾಸ್ಯಸ್ಯೈವಮುಕ್ತಿಕಾಲೀನತ್ವಶ್ರವಣಾತ್ । ನೈರ್ಗುಣ್ಯಮಿತ್ಯು-ಪಲಕ್ಷಣಮೈಕ್ಯಂ ಚೇತ್ಯಪಿ ಗ್ರಾಹ್ಯಮ್ । ಅನುಪಾಸ್ಯಮಿತಿ ಹೇತುಗರ್ಭಂ ವಿಶೇಷಣಮ್ । ತಥೈವ ಭವತಿ ನ ತ್ವನ್ಯಥೇತ್ಯವಧಾರಣಬಲೇನಾನುಪಾಸ್ಯಾಕಾರಸ್ಯ ಮುಕ್ತಾವಸಂಭವಾದನುಪಾಸ್ಯತ್ವಸ್ಯ ಪರೇಣಾಂಗೀಕಾರಾಚ್ಚೇತಿ ಭಾವಃ ॥ ೧೪೧೮ ॥

**ಮುಕ್ತೌ ಚ ಸ್ವಸ್ಯ ನೈರ್ದೋಷ್ಯಂ ಯದವಶ್ಯಮಪೇಕ್ಷಿತಮ್ ।**
**ಅತೋऽಜ್ಞಾನಕ್ಲೇಶನಾಶಜನ್ಮಾದ್ಯಂ ನ ಸ್ಮರೇದ್ಧರೌ ।**
**ಇತಿ ಸಿದ್ಧಂ ತತೋऽವದ್ಯಶೂನ್ಯೋಪ್ಯಾಸೀದ್ ರಮಾಪತಿಃ ॥ ೧೪೧೯ ॥**

**ಅರ್ಥ–** ಯತ್= ಯಾವ ಕಾರಣದಿಂದ, ಮುಕ್ತೌ ಚ= ಮೋಕ್ಷದಲ್ಲಿಯೂ ಸಹ, ಸ್ವಸ್ಯ= ಉಪಾಸಕನಾದ ತನಗೆ, ನೈರ್ದೋಷ್ಯಂ= ದೋಷಾಭಾವವು, ಅವಶ್ಯಂ= ಅವಶ್ಯವಾಗಿ,

ಅಪೇಕ್ಷಿತಂ= ಅಪೇಕ್ಷಿತವಾಗಿದೆಯೋ, ಅತಃ= ಆ ಕಾರಣದಿಂದ, ಹರೌ= ಹರಿಯಲ್ಲಿ, ಅಜ್ಞಾನಕ್ಲೇಶನಾಶಜನ್ಮಾದ್ಯಂ= ಅಜ್ಞಾನ, ದುಃಖ, ನಾಶ, ಜನ್ಮ ಮೊದಲಾದವುಗಳನ್ನು, ನ ಸ್ಮರೇತ್= ಚಿಂತಿಸಬಾರದು, ಇತಿ= ಎಂದು, ಸಿದ್ಧಂ= ಸಿದ್ಧವಾಯಿತು, ತತೋಽಪಿ= ಆ ಕಾರಣದಿಂದಲೂ, ರಮಾಪತಿಃ= ರಮಾಪತಿಯು, ಅವದ್ಯಶೂನ್ಯಃ= ದೋಷದೂರನೆಂದು, ಆಸೀತ್= ಸಿದ್ಧವಾಯಿತು.

**ಅನುವಾದ–** ಮೋಕ್ಷದಲ್ಲಿ ಉಪಾಸಕನಾದ ಜೀವನು ತನಗೆ ದೋಷಾಭಾವವನ್ನು ಅವಶ್ಯವಾಗಿ ಅಪೇಕ್ಷಿಸುವುದರಿಂದಲೂ ಹರಿಯಲ್ಲಿ ಅಜ್ಞಾನ, ದುಃಖ, ನಾಶ ಮತ್ತು ಜನ್ಮಾದಿಗಳನ್ನು ಚಿಂತಿಸಬಾರದು ಎಂದು ಸಿದ್ಧವಾಯಿತು. ಆ ಕಾರಣದಿಂದಲೂ ಸಹ ರಮಾಪತಿಯು ದೋಷದೂರನೆಂದು ಸಿದ್ಧವಾಯಿತು.

**ಭಾವವಿಲಾಸಿನೀ–** ಭಗವತೋ ಜನನಾದಿದೋಷರಾಹಿತ್ಯಂ ಚೈತತ್ ಶ್ರುತಿಬಲಾದೇವ ಸಿದ್ಧಮಿತ್ಯಾಹ – **ಮುಕ್ತೌ ಚೇತಿ** ॥ ಅತಃ ನಿರ್ದೋಷತಯೋಪಾಸಿತಸ್ಯೈವ ಹರೇರ್ನೈರ್ದೋಷ್ಯ-ಪ್ರಾಪಕತ್ವಸ್ಯಾಪ್ಯೇ ತತ್ ಶ್ರುತಿಸಿದ್ಧತ್ವಾತ್ ॥ ೧೪೧೯ ॥

**ವಿವರಣೆ–** ಭಗವಂತನನ್ನು ಹೇಗೆ ಉಪಾಸನೆ ಮಾಡುತ್ತಾನೆಯೋ, ಜೀವನು ಅದರಂತೆಯೇ ಆಗುತ್ತಾನೆ. ಜೀವನಿಗೆ ಮೋಕ್ಷದಲ್ಲಿ ದೋಷಾಭಾವವು ಬೇಕು. ಆದ್ದರಿಂದ ಭಗವಂತನಲ್ಲಿ ದೋಷವನ್ನು ಚಿಂತಿಸಬಾರದು. ಚಿಂತನೆಗೆ ವಿಷಯವಾದುದೆಲ್ಲವೂ ಸತ್ಯವಾದುದೇ. ಆದ್ದರಿಂದ ಹರಿಯು ದೋಷದೂರನೆಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಅನುಪಾಸ್ಯಮತತ್ವಂ ಚ ಕುತೋ ವಕ್ತಿ ಶ್ರುತಿಃ ಕ್ವಚಿತ್ ।**
**ತಸ್ಮಾದಾಪಾತತೋ ದೋಷಶ್ರುತಿವದ್ ಭಾತಿ ಯಾ ಶ್ರುತಿಃ ।**
**ಸಾಪ್ಯುಪಾಸ್ಯಗುಣಾರ್ಥೈವ ನ ದೋಷಾರ್ಥೇತಿ ಚಾಗತಂ ॥ ೧೪೨೦ ॥**

**ಅರ್ಥ–** ಅನುಪಾಸ್ಯಂ= ಉಪಾಸ್ಯವಲ್ಲದ, ಅತತ್ವಂ= ಮಿಥ್ಯಾಭೂತವಾದ ಅರ್ಥವನ್ನು, ಕುತಃ= ಏಕೆ, ಕ್ವಚಿತ್= ಎಲ್ಲಿಯಾದರೂ, ಶ್ರುತಿಃ= ಶ್ರುತಿಯು, ವಕ್ತಿ= ಹೇಳುತ್ತದೆ, ತಸ್ಮಾತ್= ಆ ಕಾರಣದಿಂದ, ಯಾ ಶ್ರುತಿಃ= ಯಾವ ವೇದವಾಕ್ಯವು, ಆಪಾತತಃ= ಮೇಲು ನೋಟಕ್ಕೆ, ದೋಷಶ್ರುತಿವತ್= ದೋಷವನ್ನು ಹೇಳುವ ವಾಕ್ಯದಂತೆ, ಭಾತಿ= ತೋರುತ್ತದೆಯೋ, ಸಾಽಪಿ= ಆ ವಾಕ್ಯವೂ ಕೂಡ, ಉಪಾಸ್ಯಗುಣಾರ್ಥೈವ= ಉಪಾಸನೆಗೆ ಯೋಗ್ಯವಾದ ಗುಣವನ್ನೇ ಹೇಳುತ್ತದೆ, ದೋಷಾರ್ಥಾ= ದೋಷ ರೂಪವಾದ ಅರ್ಥವನ್ನು, ನ= ಅಲ್ಲ, ಇತಿ= ಎಂದೂ, ಆಗತಂ= ಸಿದ್ಧವಾಯಿತು.

**ಅನುವಾದ–** ಶ್ರುತಿಯು ಎಲ್ಲಿಯಾದರೂ ಸಹ ಅನುಪಾಸ್ಯವಾದುದನ್ನು ಮತ್ತು ಅತತ್ತ್ವವಾದುದನ್ನು ಏಕೆ ಹೇಳುತ್ತದೆ? ಆದ್ದರಿಂದ ಮೇಲ್ನೋಟಕ್ಕೆ ದೋಷವನ್ನು

ಹೇಳುವಂತೆ ಕಂಡ ಶ್ರುತಿವಾಕ್ಯಕ್ಕೂ ಸಹ ಗುಣರೂಪವಾದ ಅರ್ಥವನ್ನು ಕಲ್ಪಿಸಿ ಆ ಗುಣವನ್ನೇ ಉಪಾಸನೆ ಮಾಡಬೇಕು. ದೋಷರೂಪವಾದ ಅರ್ಥವನ್ನು ಆ ವಾಕ್ಯಕ್ಕೆ ಕಲ್ಪಿಸಬಾರದು ಎಂದು ಸಿದ್ಧವಾಯಿತು.

**ಭಾವವಿಲಾಸಿನೀ–** ತಸ್ಮಾನ್ನಿರ್ದೋಷಸ್ಯೈವೋಪಾಸ್ಯತ್ವಾತ್ । ಅನುಪಾಸ್ಯಸ್ಯ ಮೋಕ್ಷೈಕಫಲಶ್ರುತೌ ಕಥನಾಯೋಗಾಚ್ಚ ॥ ೧೪೨೦ ॥

**ವಿವರಣೆ–** ತನಗೆ ದೋಷಾಭಾವವನ್ನು ಸಂಪಾದಿಸುವುದಕ್ಕಾಗಿ ನಿರ್ದುಷ್ಟವಾದ ವಸ್ತುವನ್ನೇ ಉಪಾಸನೆ ಮಾಡಬೇಕೆಂದು ಸಿದ್ಧವಾಗಿರುವುದರಿಂದ ಶ್ರುತಿಯು ಅಂತಹ ಬ್ರಹ್ಮನ ನಿರ್ದುಷ್ಟತ್ವ ಜ್ಞಾನವನ್ನೇ ಉಪಾಸನೆಯ ಸಲುವಾಗಿ ಉಂಟು ಮಾಡಿಕೊಡ ಬೇಕಾಗುವುದರಿಂದ ಶ್ರುತಿಯು ಎಲ್ಲಿಯೂ ಸಹ ದೋಷವನ್ನು ಹೇಳಲಾರದು. ದೋಷವನ್ನು ಹೇಳುವಂತೆ ಕಾಣುವ ವಾಕ್ಯಕ್ಕೂ ಅರ್ಥಾಂತರವನ್ನು ಮಾಡಿ ಗುಣ ಪರವಾಗಿಯೇ ಅರ್ಥವನ್ನು ಹೇಳಬೇಕು ಎಂದು ಅಭಿಪ್ರಾಯ.

ಉಪಾಸ್ಯನರ್ಹಮೈಕ್ಯಂ ತೇ ನ ಮೋಕ್ಷೇ ನಾಪಿ ಸಂಸೃತೌ ।
ಉಪಾಸ್ಯಭಾವಾನ್ಮುಕ್ತೌ ನ ನೇದಾನೀಮಾವೃತತ್ವತಃ ॥ ೧೪೨೧ ॥

**ಅರ್ಥ–** ತೇ= ನಿನಗೆ, ಉಪಾಸ್ಯನರ್ಹಂ= ಉಪಾಸನೆಗೆ ಅಯೋಗ್ಯವಾದ, ಮೋಕ್ಷೇ ನ= ಮೋಕ್ಷದಲ್ಲಿಯೂ ಇಲ್ಲ, ಐಕ್ಯಂ= ಐಕ್ಯವು, ಸಂಸೃತೌ ಅಪಿ= ಸಂಸಾರದಲ್ಲಿಯೂ, ನ= ಇಲ್ಲ, ಮುಕ್ತೌ= ಮೋಕ್ಷದಲ್ಲಿ, ಉಪಾಸ್ಯಭಾವ= ಉಪಾಸನೆಯೇ ಇಲ್ಲದಿರುವ ಕಾರಣದಿಂದ, ನ= ಇಲ್ಲ, ಇದಾನೀಂ= ಈಗ ಸಂಸಾರವಸ್ಥೆಯಲ್ಲಿ, ಆವೃತತ್ವತಃ= ಆವೃತವಾಗಿರುವ ಕಾರಣದಿಂದ, ನ= ಉಪಾಸನೆ ಇಲ್ಲ.

**ಅನುವಾದ–** ನಿನಗೆ ಮೋಕ್ಷದಲ್ಲಾಗಲೀ ಅಥವಾ ಸಂಸಾರದಲ್ಲಾಗಲೀ ನಿನ್ನ ಐಕ್ಯವು ಉಪಾಸನೆಗೆ ಅರ್ಹವಲ್ಲ. ಮೋಕ್ಷದಲ್ಲಿ ಉಪಾಸನೆಯೇ ಇಲ್ಲದಿರುವುದರಿಂದ ಉಪಾಸನೆಗೆ ಅರ್ಹವಲ್ಲ. ಈಗ ಸಂಸಾರಾವಸ್ಥೆಯಲ್ಲಿ ಆವೃತವಾಗಿರುವುದರಿಂದ ಉಪಾಸನೆಗೆ ಅರ್ಹವಲ್ಲ.

**ಭಾವವಿಲಾಸಿನೀ–** ಇದಾನೀಂ ಸಂಸಾರೇ । ಆವೃತತ್ವತಃ ಅಜ್ಞಾನಾವೃತತ್ವಾತ್ ॥ ೧೪೨೧ ॥

**ವಿವರಣೆ–** ಮೋಕ್ಷದಲ್ಲಿ ಕರ್ತೃತ್ವಾದಿ ಯಾವ ಧರ್ಮಗಳೂ ಇಲ್ಲದಿರುವುದರಿಂದ ಯಾವ ಉಪಾಸನೆಯೂ ಇಲ್ಲ. ಸಂಸಾರದಲ್ಲಿ ಸಂಸಾರವಿರುವವರೆಗೂ ಐಕ್ಯವು ಆವೃತವಾಗಿರುವುದರಿಂದ ಅದರ ಉಪಾಸನೆ ಇಲ್ಲ. ಒಟ್ಟಿನಲ್ಲಿ ಯಾವಾಗಲೂ ಐಕ್ಯದ ಉಪಾಸನೆಯಿಲ್ಲ ಎಂದಾಗುತ್ತದೆ.

**ತಸ್ಮಾದುಪಾಸ್ಯಂ ಸಗುಣಂ ಬ್ರಹ್ಮೈವಾಸೀದ್ಧಿ ನಿರ್ಮಲಂ ।**
**ಮುಕ್ತಿದತ್ವಾದ್ ವಿಮುಕ್ತಿಶ್ಚ ತಸ್ಯ ಸಾದೃಶ್ಯಮಿತ್ಯಪಿ ॥ ೧೪೨೨ ॥**

**ತಥೈವೇತಿ ವದಂತೀ ಸಾ ಶ್ರುತಿರಾಹ ತತೋಽಪಿ ಮೇ ।**
**ಭಿದೈವ ಸುಸ್ಥಾ ಬ್ರಹ್ಮೈಕ್ಯಂ ಪದಾಹತಮಭೂತ್ ತವ ॥ ೧೪೨೩ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಮುಕ್ತಿದತ್ವಾತ್= ಮುಕ್ತಿಪ್ರದವಾದುದರಿಂದ, ನಿರ್ಮಲಂ= ದೋಷ ದೂರವಾದ, ಸಗುಣಂ= ಗುಣಪೂರ್ಣವಾದ, ಬ್ರಹ್ಮೈವ= ಬ್ರಹ್ಮನೇ, ಉಪಾಸ್ಯಂ= ಉಪಾಸ್ಯನಾಗಿ, ಆಸೀದ್ಧಿ= ಆದನಷ್ಟೇ, ಸಾ ಶ್ರುತಿಃ= ತಂ ಯಥಾಯಥೋಪಾಸತೇ ತಥೈವ ಭವತಿ' ಎಂಬ ಶ್ರುತಿಯು, ತಥೈವೇತಿ ವದಂತೀ= ತಥೈವ ಎಂದು ಹೇಳುತ್ತಾ, ವಿಮುಕ್ತಿಶ್ಚ= ವಿಮುಕ್ತಿಯಾದರೂ, ಸಾದೃಶ್ಯಮಿತ್ಯಪಿ= ಸಾದೃಶ್ಯವೆಂದೇ, ಆಹ= ಹೇಳಿತು. ತತೋಽಪಿ= ಆ ಕಾರಣದಿಂದಲೂ, ಮೇ= ನನಗೆ ಅಭಿಮತವಾದ, ಭಿದೈವ= ಭೇದವೇ, ಸುಸ್ಥಾ= ಭದ್ರವಾಗಿದೆ, ತವ= ನಿನ್ನ, ಬ್ರಹ್ಮೈಕ್ಯಂ= ಬ್ರಹ್ಮೈಕ್ಯವು, ಪದಾಹತಂ= ಕಾಲಿನಿಂದ ಒದೆಯಲ್ಪಟ್ಟದ್ದಾಗಿ (ತಥೈವ ಎಂಬ ಪದದಿಂದ ನಿರಾಕೃತವಾದುದ್ದಾಗಿ), ಅಭೂತ್= ಆಯಿತು.

**ಅನುವಾದ–** ಆದ್ದರಿಂದ ಮೋಕ್ಷಪ್ರದನಾದ ಕಾರಣ ದೋಷದೂರನಾದ ಗುಣಪರಿಪೂರ್ಣನಾದ ಬ್ರಹ್ಮನೇ ಉಪಾಸ್ಯನೆಂದು ಸಿದ್ಧವಾಯಿತು. ಶ್ರುತಿಯಾದರೂ ತಥೈವ ಎಂದು ಹೇಳುತ್ತಾ ಮೋಕ್ಷವು ಸಾದೃಶ್ಯರೂಪವಾದುದು ಎಂದು ಹೇಳಿತು. ಆದ್ದರಿಂದಲೂ ನನ್ನ ಭೇದವು ಸ್ಥಿರವಾಯಿತು. ನಿನ್ನ ಬ್ರಹ್ಮೈಕ್ಯವು ಪಾದದಿಂದ ಒದೆಯಲ್ಪಟ್ಟಿತು. (ತಥೈವ ಎಂಬ ಪದದಿಂದಲೇ ನಿರಾಕೃತವಾಯಿತು).

**ಭಾವವಿಲಾಸಿನೀ–** ತತಃ ಮುಕ್ತಾವಪಿ ಸಾದೃಶ್ಯವಿಧಾನಾತ್ । ಪದಾಹತಂ ತಥೈವೇತಿ ಪದೇನ ನಿರಾಕೃತಮ್ । ಉಪಾಸ್ಯಾದನ್ಯಾಕಾರಸ್ಯ ಮುಕ್ತೌ ತೇನ ಪದೇನ ನಿರಾಕರಣಾತ್ ॥೧೪೨೦-೨೧॥

**ವಿವರಣೆ–** 'ತಂ ಯಥಾಯಥೋಪಾಸತೇ ತಥೈವ ಭವತಿ' ಎಂಬ ಶ್ರುತಿಗೆ ಉಪಾಸಕನು ಬ್ರಹ್ಮನನ್ನು ಹೇಗೆ ಹೇಗೆ ಉಪಾಸನೆಯನ್ನು ಮಾಡುತ್ತಾನೋ, ಅದರಂತೆಯೇ ಆಗುತ್ತಾನೆ ಎಂದು ಅರ್ಥ. ಅದರಂತೆಯೇ ಎಂದು ಹೇಳಿದ್ದರಿಂದ ಮೋಕ್ಷದಲ್ಲಿ ಸಾದೃಶ್ಯವೇ ಲಭ್ಯವಾಯಿತು. ಸಾದೃಶ್ಯವು ಭಿನ್ನವಾದ ವಸ್ತುಗಳಿಗೇ ಇರುವುದರಿಂದ ಮೋಕ್ಷದಲ್ಲಿಯೂ ಭೇದವು ಸಿದ್ಧವಾಯಿತು. ಮೋಕ್ಷದಲ್ಲಿರುವ ಭೇದವು ಪಾರಮಾರ್ಥಿಕವಾದ್ದರಿಂದ ನಿನ್ನ ಐಕ್ಯಕ್ಕೆ ಬಾಧ ಬರುತ್ತದೆ ಎಂದು ಅಭಿಪ್ರಾಯ.

**ಉಪಾಸ್ಯೋಪಾಸಕತ್ವಸ್ಯ ಮುಕ್ತಾವಪ್ಯನುವರ್ತನಮ್ ।**
**ತಥೈವೇತಿ ಹಿ ಸರ್ವಸ್ಯಾಪ್ಯವಧೃತ್ಯಾ ಶ್ರುತಿರ್ಜಗೌ ॥ ೧೪೨೪ ॥**

**ಅರ್ಥ–** ಶ್ರುತಿಃ= ಆ ಶ್ರುತಿಯು, ತಥೈವೇತಿ= ತಥೈವ ಎಂಬ ಪದದಿಂದ, ಸರ್ವಸ್ಯ= ಎಲ್ಲವನ್ನೂ, ಅವಧೃತ್ಯಾ= ಅವಧಾರಣೆಯನ್ನು ಮಾಡುತ್ತಾ, ಮುಕ್ತಾವಪಿ= ಮೋಕ್ಷದಲ್ಲಿಯೂ ಕೂಡ, ಉಪಾಸ್ಯೋಪಾಸಕತ್ವಸ್ಯ= ಉಪಾಸ್ಯತ್ವ ಮತ್ತು ಉಪಾಸಕತ್ವದ, ಅನುವರ್ತನಂ= ಅನುವೃತ್ತಿಯನ್ನು, ಜಗೌ= ಹೇಳಿತು.

**ಅನುವಾದ– ಆ ಶ್ರುತಿಯು ತಥೈವ ಎಂದು ಸಂಸಾರಾವಸ್ಥೆಯಲ್ಲಿದ್ದ ಎಲ್ಲವನ್ನೂ ಅವಧಾರಣೆ ಮಾಡಿ ಮೋಕ್ಷದಲ್ಲಿಯೂ ಉಪಾಸ್ಯತ್ವ ಮತ್ತು ಉಪಾಸಕತ್ವಗಳು ಅನುವೃತ್ತವಾಗಿವೆ ಎಂದು ಹೇಳಿತು.**

**ಭಾವವಿಲಾಸಿನೀ–** ಅನಯೈವ ಶ್ರುತ್ಯಾ ಮುಕ್ತಾವುಪಾಸ್ಯೋಪಾಸಕಭಾವಸ್ಯಾಪಿ ಸಿದ್ಧಿರಿತ್ಯಾಹ ॥ **ಉಪಾಸ್ಯೇತಿ** ॥ ತಂ ಯಥಾ ಯಥೋಪಾಸತೇ ತಥೈವ ಭವತೀತಿ ಶ್ರುತ್ಯಾ ಸಾಂಸಾರಿಕೋಪಾಸನಾವಸ್ಥಾಸದೃಶಸರ್ವಾವಸ್ಥಾಯಾ ಅಪಿ ಸದೃಶಾರ್ಥಕತಥೈವೇತಿಪದೇನ ಮುಕ್ತೌ ವಿಧಾನಾತ್ ಧ್ಯಾನಾಂಗಪ್ರಾಕೃತದೇಹಸದೃಶಾಪ್ರಾಕೃತದೇಹಸ್ಯ ಪ್ರಾಕೃತಾನಂದಪುಲಕಸದೃಶಾಪ್ರಾಕೃತಾನಂದಪುಲಕಾದೇಃ ಪ್ರಾಕೃತೋಪಾಸನಾಸದೃಶಾಪ್ರಾಕೃತೋಪಾಸನಸ್ಯ ಪ್ರಾಕೃತತತ್ಕೃತತತ್ವಸದೃಶಾಪ್ರಾಕೃತತತ್ಕೃತತತ್ವಸ್ಯ ಚ ಮುಕ್ತಜೀವೇಷು ಸಿದ್ಧೇಃ । 'ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್' ಇತಿ ಸೂತ್ರಾತ್ ಸರ್ವಶ್ರುತ್ಯರ್ಥೋಪಾಸಕ ಬ್ರಹ್ಮಣಸ್ತಥೈವೇತಿ ಶ್ರುತೇರ್ಮುಕ್ತಾವಪ್ಯರ್ಥಾತ್ ಪ್ರಾಕೃತೋಪಾಸನಯೋಪಾಸ್ಯತ್ವವದಪ್ರಾಕೃತೋಪಾಸನಯಾಪಿ ಭಗವತ ಉಪಾಸ್ಯತ್ವಸಿದ್ಧಿಶ್ಚೇತಿ ಭಾವಃ । ಏವಂಚ ಪ್ರಾಕೃತ ದೇಹಸ್ಯಾಪಿ ಮುಕ್ತೌ ಪ್ರಸಕ್ತಿರಿತಿ ಶಂಕಗರ್ಭಸ್ತ್ರಾವೇಣೈವ ಗತಾ ॥ ೧೪೨೪ ॥

**ವಿವರಣೆ–** ಈ ಶ್ರುತಿಯಿಂದಲೇ ಇನ್ನೂ ಅನೇಕ ಪ್ರಮೇಯಗಳು ಸಿದ್ಧವಾಗುತ್ತವೆ ಎಂದು ಇಲ್ಲಿ ಹೇಳುತ್ತಾರೆ. ತಥೈವ ಎಂಬ ಪದದಿಂದ ಸಂಸಾರದಲ್ಲಿ ಉಪಾಸಕನಿಗೆ ಯಾವ ಉಪಾಸನೆಯ ಅವಸ್ಥೆಯಿದ್ದಿತೋ ಅದಕ್ಕೆ ಸದೃಶವಾದ ಉಪಾಸನೆಯ ಅವಸ್ಥೆಯೇ ವಿಧಿಸಲ್ಪಡುತ್ತದೆ. ಆದ್ದರಿಂದ ಮೋಕ್ಷದಲ್ಲಿಯೂ ಭೇದೋಪಾಸನೆಯು ಸಿದ್ಧವಾಯಿತು. ಅದರಂತೆ ಧ್ಯಾನಾಂಗವಾದ ಪ್ರಾಕೃತದೇಹಕ್ಕೆ ಸದೃಶವಾದ ಅಪ್ರಾಕೃತ ದೇಹವು ಪ್ರಾಕೃತಾನಂದ ಪುಳಕಕ್ಕೆ ಸದೃಶವಾದ ಅಪ್ರಾಕೃತಾನಂದ ಪುಳಕವು ಪ್ರಾಕೃತೋಪಾಸನೆಯು ಪ್ರಾಕೃತ ದೇಹದಿಂದ ಉಂಟಾದಂತೆ, ಅಪ್ರಾಕೃತೋಪಾಸನೆಯು ಅಪ್ರಾಕೃತ ದೇಹದಿಂದ ಉಂಟಾಗುತ್ತದೆ ಎಂತಲೂ ಸಿದ್ಧವಾಯಿತು. 'ಸರ್ವ ವೇದಾಂತ ಪ್ರತ್ಯಯಂ ಚೋದನಾದ್ಯವಿಶೇಷಾತ್' ಎಂಬ ಸೂತ್ರದಿಂದ ಎಲ್ಲಾ ಶ್ರುತ್ಯರ್ಥವನ್ನು ಉಪಾಸನೆ ಮಾಡುವವ ಮೋಕ್ಷವು ತಥೈವ ಎಂಬ ಪದದಿಂದ ಸಂಸಾರಾವಸ್ಥೆಗೆ ಸದೃಶವಾದ ಅವಸ್ಥೆಯನ್ನೇ ಹೊಂದಿರುತ್ತದೆ ಎಂದು ಹೇಳಿರುವುದರಿಂದ ಬ್ರಹ್ಮನಿಗೆ ಪ್ರಾಕೃತ ಉಪಾಸನೆಯಿಂದ ಉಪಾಸ್ಯತ್ವ ಇರುವಂತೆ, ಅಪ್ರಾಕೃತ ಉಪಾಸನೆಯಿಂದಲೂ ಉಪಾಸ್ಯತ್ವವಿದೆ ಎಂಬುದು ಸಿದ್ಧವಾಯಿತು. ಇದರಿಂದ ಮೋಕ್ಷದಲ್ಲಿ ಪ್ರಾಕೃತ ದೇಹವು

ತಸ್ಮಾದುಪಾಸ್ಯಂ ಸಗುಣಂ ಬ್ರಹ್ಮೈವಾಸೀದ್ಧಿ ನಿರ್ಮಲಂ ।
ಮುಕ್ತಿದತ್ವಾದ್ ವಿಮುಕ್ತಿಶ್ಚ ತಸ್ಯ ಸಾದೃಶ್ಯಮಿತ್ಯಪಿ ॥ ೧೪೨೨ ॥

ತಥೈವೇತಿ ವದಂತೀ ಸಾ ಶ್ರುತಿರಾಹ ತತೋಽಪಿ ಮೇ ।
ಭಿದೈವ ಸುಸ್ಥಾ ಬ್ರಹ್ಮೈಕ್ಯಂ ಪದಾಹತಮಭೂತ್ ತವ ॥ ೧೪೨೩ ॥

**ಅರ್ಥ–** ತಸ್ಮಾತ್= ಆದ್ದರಿಂದ, ಮುಕ್ತಿದತ್ವಾತ್= ಮುಕ್ತಿಪ್ರದವಾದುದರಿಂದ, ನಿರ್ಮಲಂ= ದೋಷ ದೂರವಾದ, ಸಗುಣಂ= ಗುಣಪೂರ್ಣವಾದ, ಬ್ರಹ್ಮೈವ= ಬ್ರಹ್ಮನೇ, ಉಪಾಸ್ಯಂ= ಉಪಾಸ್ಯನಾಗಿ, ಆಸೀದ್ಧಿ= ಆದನಷ್ಟೇ, ಸಾ ಶ್ರುತಿಃ= ತಂ ಯಥಾಯಥೋಪಾಸತೇ ತಥೈವ ಭವತಿ' ಎಂಬ ಶ್ರುತಿಯು, ತಥೈವೇತಿ ವದಂತೀ= ತಥೈವ ಎಂದು ಹೇಳುತ್ತಾ, ವಿಮುಕ್ತಿಶ್ಚ= ವಿಮುಕ್ತಿಯಾದರೂ, ಸಾದೃಶ್ಯಮಿತ್ಯಪಿ= ಸಾದೃಶ್ಯವೆಂದೇ, ಆಹ= ಹೇಳಿತು. ತತೋಽಪಿ= ಆ ಕಾರಣದಿಂದಲೂ, ಮೇ= ನನಗೆ ಅಭಿಮತವಾದ, ಭಿದೈವ= ಭೇದವೇ, ಸುಸ್ಥಾ= ಭದ್ರವಾಗಿದೆ, ತವ= ನಿನ್ನ, ಬ್ರಹ್ಮೈಕ್ಯಂ= ಬ್ರಹ್ಮೈಕ್ಯವು, ಪದಾಹತಂ= ಕಾಲಿನಿಂದ ಒದೆಯಲ್ಪಟ್ಟದ್ದಾಗಿ (ತಥೈವ ಎಂಬ ಪದದಿಂದ ನಿರಾಕೃತವಾದುದ್ದಾಗಿ), ಅಭೂತ್= ಆಯಿತು.

**ಅನುವಾದ–** ಆದ್ದರಿಂದ ಮೋಕ್ಷಪ್ರದನಾದ ಕಾರಣ ದೋಷದೂರನಾದ ಗುಣಪರಿಪೂರ್ಣನಾದ ಬ್ರಹ್ಮನೇ ಉಪಾಸ್ಯನೆಂದು ಸಿದ್ಧವಾಯಿತು. ಶ್ರುತಿಯಾದರೂ ತಥೈವ ಎಂದು ಹೇಳುತ್ತಾ ಮೋಕ್ಷವು ಸಾದೃಶ್ಯರೂಪವಾದುದು ಎಂದು ಹೇಳಿತು. ಆದ್ದರಿಂದಲೂ ನನ್ನ ಭೇದವು ಸ್ಥಿರವಾಯಿತು. ನಿನ್ನ ಬ್ರಹ್ಮೈಕ್ಯವು ಪಾದದಿಂದ ಒದೆಯಲ್ಪಟ್ಟಿತು. (ತಥೈವ ಎಂಬ ಪದದಿಂದಲೇ ನಿರಾಕೃತವಾಯಿತು).

**ಭಾವವಿಲಾಸಿನೀ–** ತತಃ ಮುಕ್ತಾವಪಿ ಸಾದೃಶ್ಯವಿಧಾನಾತ್ । ಪದಾಹತಂ ತಥೈವೇತಿ ಪದೇನ ನಿರಾಕೃತಮ್ । ಉಪಾಸ್ಯಾದನ್ಯಾಕಾರಸ್ಯ ಮುಕ್ತೌ ತೇನ ಪದೇನ ನಿರಾಕರಣಾತ್ ॥೧೪೨೦-೨೧॥

**ವಿವರಣೆ–** 'ತಂ ಯಥಾಯಥೋಪಾಸತೇ ತಥೈವ ಭವತಿ' ಎಂಬ ಶ್ರುತಿಗೆ ಉಪಾಸಕನು ಬ್ರಹ್ಮನನ್ನು ಹೇಗೆ ಹೇಗೆ ಉಪಾಸನೆಯನ್ನು ಮಾಡುತ್ತಾನೋ, ಅದರಂತೆಯೇ ಆಗುತ್ತಾನೆ ಎಂದು ಅರ್ಥ. ಅದರಂತೆಯೇ ಎಂದು ಹೇಳಿದ್ದರಿಂದ ಮೋಕ್ಷದಲ್ಲಿ ಸಾದೃಶ್ಯವೇ ಲಭ್ಯವಾಯಿತು. ಸಾದೃಶ್ಯವು ಭಿನ್ನವಾದ ವಸ್ತುಗಳಿಗೇ ಇರುವುದರಿಂದ ಮೋಕ್ಷದಲ್ಲಿಯೂ ಭೇದವು ಸಿದ್ಧವಾಯಿತು. ಮೋಕ್ಷದಲ್ಲಿರುವ ಭೇದವು ಪಾರಮಾರ್ಥಿಕವಾದ್ದರಿಂದ ನಿನ್ನ ಐಕ್ಯಕ್ಕೆ ಬಾಧ ಬರುತ್ತದೆ ಎಂದು ಅಭಿಪ್ರಾಯ.

ಉಪಾಸ್ಯೋಪಾಸಕತ್ವಸ್ಯ ಮುಕ್ತಾವಪ್ಯನುವರ್ತನಮ್ ।
ತಥೈವೇತಿ ಹಿ ಸರ್ವಸ್ಯಾಪ್ಯವಧೃತ್ಯಾ ಶ್ರುತಿರ್ಜಗೌ ॥ ೧೪೨೪ ॥

**ಅರ್ಥ—** ಶ್ರುತಿಃ= ಆ ಶ್ರುತಿಯು, ತಥೈವೇತಿ= ತಥೈವ ಎಂಬ ಪದದಿಂದ, ಸರ್ವಸ್ಯ= ಎಲ್ಲವನ್ನೂ, ಅವಧೃತ್ಯಾ= ಅವಧಾರಣೆಯನ್ನು ಮಾಡುತ್ತಾ, ಮುಕ್ತಾವಪಿ= ಮೋಕ್ಷದಲ್ಲಿಯೂ ಕೂಡ, ಉಪಾಸ್ಯೋಪಾಸಕತ್ವಸ್ಯ= ಉಪಾಸ್ಯತ್ವ ಮತ್ತು ಉಪಾಸಕತ್ವದ, ಅನುವರ್ತನಂ= ಅನುವೃತ್ತಿಯನ್ನು, ಜಗೌ= ಹೇಳಿತು.

**ಅನುವಾದ— ಆ ಶ್ರುತಿಯು ತಥೈವ ಎಂದು ಸಂಸಾರಾವಸ್ಥೆಯಲ್ಲಿದ್ದ ಎಲ್ಲವನ್ನೂ ಅವಧಾರಣೆ ಮಾಡಿ ಮೋಕ್ಷದಲ್ಲಿಯೂ ಉಪಾಸ್ಯತ್ವ ಮತ್ತು ಉಪಾಸಕತ್ವಗಳು ಅನುವೃತ್ತವಾಗಿವೆ ಎಂದು ಹೇಳಿತು.**

**ಭಾವವಿಲಾಸಿನೀ—** ಅನಯೈವ ಶ್ರುತ್ಯಾ ಮುಕ್ತಾವುಪಾಸ್ಯೋಪಾಸಕಭಾವಸ್ಯಾಪಿ ಸಿದ್ಧಿರಿತ್ಯಾಹ ॥ **ಉಪಾಸ್ಯೇತಿ** ॥ ತಂ ಯಥಾ ಯಥೋಪಾಸತೇ ತಥೈವ ಭವತೀತಿ ಶ್ರುತ್ಯಾ ಸಾಂಸಾರಿಕೋಪಾಸನಾವಸ್ಥಾಸದೃಶಸರ್ವಾವಸ್ಥಾಯಾ ಅಪಿ ಸದೃಶಾರ್ಥಕತಥೈವೇತಿಪದೇನ ಮುಕ್ತೌ ವಿಧಾನಾತ್ ಧ್ಯಾನಾಂಗಪ್ರಾಕೃತದೇಹಸದೃಶಾಪ್ರಾಕೃತದೇಹಸ್ಯ ಪ್ರಾಕೃತಾನಂದಪುಲಕಸದೃಶಾಪ್ರಾಕೃತಾನಂದಪುಲಕಾದೇಃ ಪ್ರಾಕೃತೋಪಾಸನಾಸದೃಶಾಪ್ರಾಕೃತೋಪಾಸನಸ್ಯ ಪ್ರಾಕೃತತತ್ಕೃತತ್ವಸದೃಶಾಪ್ರಾಕೃತತತ್ಕೃತತ್ವಸ್ಯ ಚ ಮುಕ್ತಜೀವೇಷು ಸಿದ್ಧೇಃ । 'ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್' ಇತಿ ಸೂತ್ರಾತ್ ಸರ್ವಶ್ರುತ್ಯರ್ಥೋಪಾಸಕ ಬ್ರಹ್ಮಣಸ್ತಥೈವೇತಿ ಶ್ರುತೇರ್ಮುಕ್ತಾವಪ್ಯರ್ಥಾತ್ ಪ್ರಾಕೃತೋಪಾಸನಯೋಪಾಸ್ಯತ್ವವದಪ್ರಾಕೃತೋಪಾಸನಯಾಪಿ ಭಗವತ ಉಪಾಸ್ಯತ್ವಸಿದ್ಧಿಶ್ಚೇತಿ ಭಾವಃ । ಏವಂಚ ಪ್ರಾಕೃತ ದೇಹಸ್ಯಾಪಿ ಮುಕ್ತೌ ಪ್ರಸಕ್ತಿರಿತಿ ಶಂಕಗರ್ಭಸ್ತ್ರಾವೇಣೈವ ಗತಾ ॥ ೧೪೨೪ ॥

**ವಿವರಣೆ—** ಈ ಶ್ರುತಿಯಿಂದಲೇ ಇನ್ನೂ ಅನೇಕ ಪ್ರಮೇಯಗಳು ಸಿದ್ಧವಾಗುತ್ತವೆ ಎಂದು ಇಲ್ಲಿ ಹೇಳುತ್ತಾರೆ. ತಥೈವ ಎಂಬ ಪದದಿಂದ ಸಂಸಾರದಲ್ಲಿ ಉಪಾಸಕನಿಗೆ ಯಾವ ಉಪಾಸನೆಯ ಅವಶ್ಯವಿದ್ದಿತೋ ಅದಕ್ಕೆ ಸದೃಶವಾದ ಉಪಾಸನೆಯ ಅವಸ್ಥೆಯೇ ವಿಧಿಸಲ್ಪಡುತ್ತದೆ. ಆದ್ದರಿಂದ ಮೋಕ್ಷದಲ್ಲಿಯೂ ಭೇದೋಪಾಸನೆಯು ಸಿದ್ಧವಾಯಿತು. ಅದರಂತೆ ಧ್ಯಾನಾಂಗವಾದ ಪ್ರಾಕೃತದೇಹಕ್ಕೆ ಸದೃಶವಾದ ಅಪ್ರಾಕೃತ ದೇಹವು ಪ್ರಾಕೃತಾನಂದ ಪುಳಕಕ್ಕೆ ಸದೃಶವಾದ ಅಪ್ರಾಕೃತಾನಂದ ಪುಳಕವು ಪ್ರಾಕೃತೋಪಾಸನೆಯು ಪ್ರಾಕೃತ ದೇಹದಿಂದ ಉಂಟಾದಂತೆ, ಅಪ್ರಾಕೃತೋಪಾಸನೆಯು ಅಪ್ರಾಕೃತ ದೇಹದಿಂದ ಉಂಟಾಗುತ್ತದೆ ಎಂತಲೂ ಸಿದ್ಧವಾಯಿತು. 'ಸರ್ವ ವೇದಾಂತ ಪ್ರತ್ಯಯಂ ಚೋದನಾದ್ಯವಿಶೇಷಾತ್' ಎಂಬ ಸೂತ್ರದಿಂದ ಎಲ್ಲಾ ಶ್ರುತ್ಯರ್ಥವನ್ನು ಉಪಾಸನೆ ಮಾಡುವವ ಮೋಕ್ಷವು ತಥೈವ ಎಂಬ ಪದದಿಂದ ಸಂಸಾರಾವಸ್ಥೆಗೆ ಸದೃಶವಾದ ಅವಸ್ಥೆಯನ್ನೇ ಹೊಂದಿರುತ್ತದೆ ಎಂದು ಹೇಳಿರುವುದರಿಂದ ಬ್ರಹ್ಮನಿಗೆ ಪ್ರಾಕೃತ ಉಪಾಸನೆಯಿಂದ ಉಪಾಸ್ಯತ್ವ ಇರುವಂತೆ, ಅಪ್ರಾಕೃತ ಉಪಾಸನೆಯಿಂದಲೂ ಉಪಾಸ್ಯತ್ವವಿದೆ ಎಂಬುದು ಸಿದ್ಧವಾಯಿತು. ಇದರಿಂದ ಮೋಕ್ಷದಲ್ಲಿ ಪ್ರಾಕೃತ ದೇಹವು

ಇರಲಿ ಎಂಬ ಶಂಕೆಯು ಗರ್ಭಸ್ರಾವದಿಂದ ಹೊರಟು ಹೋಯಿತು. ತಥೈವ ಎಂಬ ಶಬ್ದದಿಂದ ಮೋಕ್ಷದಲ್ಲಿ ಪ್ರಾಕೃತದೇಹಕ್ಕೆ ಸದೃಶವಾದ ದೇಹವೇ ಸಿದ್ಧವಾಗುತ್ತದೆ. ಆ ಸಾದೃಶ್ಯವು ಕರಚರಣಾದಿಅವಯವಗಳನ್ನು ಹೊಂದಿರುವುದರಿಂದ ಸಿದ್ಧವಾಗುತ್ತದೆ. ಆದ್ದರಿಂದ ಮೋಕ್ಷದಲ್ಲಿ ಶ್ರುತಿಬಾಧಿತವಾದುದರಿಂದ, ಪ್ರಾಕೃತದೇಹದ ಪ್ರಸಕ್ತಿ ಇಲ್ಲ ಎಂದು ಅಭಿಪ್ರಾಯ.

**ಯತಃ ಸಾರೂಪ್ಯಮೋಕ್ಷೋಽಯಂ ಸರ್ವೋಪಾಸ್ತಿಕೃತಾಂ ಶ್ರುತಃ ।**
**ಅತಃ ಸಾಲೋಕ್ಯಸಾಮೀಪ್ಯಸಾಯುಜ್ಯೇಷು ಚ ಸ ಧ್ರುವಃ ॥ ೧೪೨೫ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಅಯಂ ಸಾರೂಪ್ಯಮೋಕ್ಷಃ= ಈ ಸಾರೂಪ್ಯ ಮೋಕ್ಷವು, ಸರ್ವೋಪಾಸ್ತಿಕೃತಾಂ= ಉಪಾಸನೆ ಮಾಡುವವರೆಲ್ಲರಿಗೂ, ಶ್ರುತಃ= ಹೇಳಲ್ಪಟ್ಟಿದೆಯೋ, ಅತಃ= ಆದ್ದರಿಂದ, ಸಾಲೋಕ್ಯಸಾಮೀಪ್ಯಸಾಯುಜ್ಯೇಷು= ಸಾಲೋಕ್ಯ, ಸಾಮೀಪ್ಯ ಮತ್ತು ಸಾಯುಜ್ಯರೂಪವಾದ ಮೋಕ್ಷಗಳಲ್ಲಿ, ಸಃ= ಆ ಸಾರೂಪ್ಯಮೋಕ್ಷವು, ಧ್ರುವಃ= ಅವಶ್ಯವಾಗಿ ಇದೆ.

**ಅನುವಾದ–** ಯಾವ ಕಾರಣದಿಂದ ಈ ಸಾರೂಪ್ಯಮೋಕ್ಷವು ಉಪಾಸನೆ ಮಾಡುವವರೆಲ್ಲರಿಗೂ ಶ್ರುತವಾಗಿದೆಯೋ ಆ ಕಾರಣದಿಂದ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ ಮೋಕ್ಷಗಳಲ್ಲಿಯೂ ಸಾರೂಪ್ಯವು ನಿಶ್ಚಿತವಾಗಿ ಇದ್ದೇ ಇದೆ.

**ಭಾವವಿಲಾಸಿನೀ–** ಪ್ರಮೇಯಾಂತರಂ ಚ ಸಿದ್ಧಮಿತ್ಯಾಹ – **ಯತ ಇತಿ** ॥ ಅಯಂ ಏತತ್‌ಶ್ರುತ್ಯುಕ್ತಃ। ಸಾರೂಪ್ಯಮೋಕ್ಷಃ ಉಪಾಸ್ತ್ಯನುಸಾರೇಣ ಸ್ವಸ್ಯಾಪ್ಯಾಕಾರ ಗುಣಾದಿಸಾದೃಶ್ಯರೂಪಫಲ-ಶ್ರವಣಾತ್ । ಸರ್ವೋಪಾಸ್ತಿಕೃತಾಂ ಸರ್ವೇಷಾಮುಪಾಸ್ತಿಕೃತಾಮಧಿಕಾರಿಣಾಂ ಯತಃ ಶ್ರುತಃ । ಉಪಾಸ್ತಿರ್ಹಿಮುಮುಕ್ಷೂಣಾಂ ಸರ್ವೇಷಾಮಪೇಕ್ಷಿತಾ ಏವಚೈತತ್ ಶ್ರುತ್ಯೈವ ಸರ್ವೇಷಾಂ ಸಾರೂಪ್ಯಮೋಕ್ಷೋಽಪಿ ಶ್ರುತ ಇತ್ಯರ್ಥಃ । ಅತ ಇತ್ಯುತ್ತರೇಣಾನ್ವಯಃ । ಸಃ ಸಾರೂಪ್ಯ-ಮೋಕ್ಷಃ ॥ ೧೪೨೫ ॥

**ವಿವರಣೆ–** ಸಾರೂಪ್ಯ ಮೋಕ್ಷವು ಉಪಾಸನೆ ಮಾಡುವವರೆಲ್ಲರಿಗೂ ಇದೆ. ಎಂದರೆ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ ಮೋಕ್ಷವು ಇರುವ ಜೀವರಿಗೂ ಆ ಸಾಲೋಕ್ಯಾದಿಗಳ ಜೊತೆಯಲ್ಲಿ ಸಾರೂಪ್ಯವು ಇದ್ದೇ ಇದೆ. ಸಾರೂಪ್ಯಮೋಕ್ಷವುಳ್ಳವರು ಭಗವಂತನಿಗೆ ಸದೃಶರಾದವರು ಮತ್ತು ಆದ್ದರಿಂದ ಭಿನ್ನರಾದವರು ಎಂದು ಹೇಳಿರುವುದರಿಂದ ಮುಕ್ತರೆಲ್ಲರೂ ಭಗವಂತನಿಂದ ಭಿನ್ನರಾಗಿ ಸದೃಶ್ಯರಾಗಿ ಇರುತ್ತಾರೆ. ತಥೈವ ಎಂಬ ಶಬ್ದವು ಎಲ್ಲ ಮುಕ್ತರಿಗೂ ಸಂಸಾರಾವಸ್ಥೆಯಲ್ಲಿ ಇರುವ ಪ್ರಕಾರಕ್ಕೆ ಸದೃಶವಾದ ಪ್ರಕಾರವನ್ನೇ ಹೇಳುತ್ತದೆ ಎಂದು ಅಭಿಪ್ರಾಯ.

**ಶ್ರುತಿರೇಷಾ ಬಲವತೀ ಸರ್ವಶ್ರುತ್ಯುಕ್ತಸಂಪದಮ್ ।**
**ಸ್ವಜ್ಞಾತಿರಕ್ಷಣೋದ್ಯುಕ್ತಾ ನಾಪಹರ್ತುಂ ವಿಮುಂಚತಿ ॥ ೧೪೨೬ ॥**

**ಅರ್ಥ–** ಸ್ವಜ್ಞಾತಿರಕ್ಷಣೋದ್ಯುಕ್ತಾ= ತನ್ನ ಬಂಧುಗಳ ರಕ್ಷಣೆಯಲ್ಲಿ ಉದ್ಯುಕ್ತವಾದ, ಬಲವತೀ= ಪ್ರಬಲವಾದ, ಏಷಾ ಶ್ರುತಿಃ= ಈ ಶ್ರುತಿಯು, ಸರ್ವಶ್ರುತ್ಯುಕ್ತಸಂಪದಂ= ಶ್ರುತಿಗಳು ಹೇಳಿದ ಎಲ್ಲಾ ಸಂಪತ್ತುಗಳನ್ನು, ಅಪಹರ್ತುಂ= ಅಪಹಾರ ಮಾಡಲು, ನ ವಿಮುಂಚತಿ= ಬಿಟ್ಟುಕೊಡುವುದಿಲ್ಲ.

**ಅನುವಾದ– ತನ್ನ ಬಂಧುಗಳ ರಕ್ಷಣೆಯಲ್ಲಿ ಉದ್ಯುಕ್ತವಾದ ಪ್ರಬಲವಾದ ಈ ಶ್ರುತಿಯು ಶ್ರುತಿಗಳು ಹೇಳಿದ ಎಲ್ಲಾ ಸಂಪತ್ತನ್ನು ಅಪಹಾರ ಮಾಡಲು ಬಿಟ್ಟುಕೊಡುವುದಿಲ್ಲ.**

**ಭಾವವಿಲಾಸಿನೀ– ಬಲವತೀ ಫಲರೂಪತಾತ್ಪರ್ಯಲಿಂಗವತ್ತ್ವಾತ್ ಪ್ರಬಲಾ । ಸರ್ವವೇದಾಂತ ಪ್ರತ್ಯಯಂ ಚೋದನಾದ್ಯವಿಶೇಷಾದಿತಿ ಸೂತ್ರಾತ್ ಸರ್ವಶ್ರುತ್ಯರ್ಥೋಪಾಸಕಬ್ರಹ್ಮಣಸ್ತಥೈವೇತಿ ಶ್ರುತೇರ್ಮುಕ್ತಾವಪಿ ಸರ್ವಶುತ್ಯರ್ಥೋಪಾಸಕತ್ವಾವಶ್ಯಂಭಾವಸ್ಯಾಪಿ ಸಿದ್ಧೇಃ ಸರ್ವಶ್ರುತ್ಯುಕ್ತ ಸಂಪದಮಿತ್ಯುಕ್ತಮ್ । ಅಪಹರ್ತುಂ ಅವಿದ್ಯಮಾನತ್ವೋಕ್ತ್ಯಾ ನಿರಾಕರ್ತುಮ್ । ಉಪಾಸಿತ-ಗುಣಸದೃಶಗುಣಾನಾಂ ಮುಕ್ತೇಷು ಶ್ರವಣಾದುಪಾಸ್ಯೇಸುತರಾಂ ತತ್ಸಿದ್ಧಿಃ । ತತ್ತ್ವಜ್ಞಾನಸ್ಯೈವ ಮೌಕ್ತಫಲಹೇತುತ್ವಾದಿತಿ ಭಾವಃ ॥ ೧೪೨೬ ॥**

**ವಿವರಣೆ–** ಈ ಶ್ರುತಿಯು ತಥೈವ ಭವತಿ ಎಂದು ಫಲವನ್ನು ಹೇಳಿರುವುದರಿಂದ, ಫಲವತ್ತ್ವರೂಪತಾತ್ಪರ್ಯದಿಂದ ಕೂಡಿದದ್ದಾಗಿ ಪ್ರಬಲವಾಗಿದೆ. ಸರ್ವ ವೇದಾಂತ ಪ್ರತ್ಯಯ ಸೂತ್ರವು ಬ್ರಹ್ಮದೇವರಿಂದ ಎಲ್ಲ ವೇದಗಳಲ್ಲಿಯೂ ಹೇಳಿದ ಗುಣಗಳೂ ಉಪಾಸ್ಯವಾಗಿವೆ ಎಂದು ಹೇಳುತ್ತದೆ. ಆದ್ದರಿಂದ ಸಂಸಾರಾವಸ್ಥೆಯಲ್ಲಿ ಬ್ರಹ್ಮದೇವರು ಎಲ್ಲ ಗುಣಗಳನ್ನು ಉಪಾಸನೆ ಮಾಡಿದಂತೆ ಮೋಕ್ಷದಲ್ಲಿಯೂ ಎಲ್ಲ ಗುಣಗಳನ್ನು ಉಪಾಸನೆ ಮಾಡುತ್ತಾರೆ. ಆದ್ದರಿಂದ ಗುಣಗಳನ್ನು ಹೇಳುವ ಎಲ್ಲಾ ಶ್ರುತಿಗಳೂ ಮೋಕ್ಷದಲ್ಲಿಯೂ ರಕ್ಷಿತವಾಗುತ್ತವೆ. ಆದ್ದರಿಂದ ತಥೈವ ಎಂಬ ಈ ಶ್ರುತಿಯು ಉಳಿದೆಲ್ಲಾ ಶ್ರುತಿಗಳನ್ನು ರಕ್ಷಣೆ ಮಾಡುವುದರಿಂದ ಪ್ರಬಲವಾದುದು. ಆದ್ದರಿಂದ ಈ ಸರ್ವಶ್ರುತ್ಯುಕ್ತಗುಣಗಳು ಅವಿದ್ಯಮಾನವಾದರೆ ಮೋಕ್ಷದಲ್ಲಿ ಬ್ರಹ್ಮದೇವರ ಉಪಾಸನೆಯು ಇರುವುದಿಲ್ಲ. ಆದ್ದರಿಂದ ಮೋಕ್ಷದಲ್ಲಿ ಎಲ್ಲ ಶ್ರುತಿಗಳೂ, ಶ್ರುತ್ಯುಕ್ತಗುಣಗಳೂ, ಬ್ರಹ್ಮದೇವರ ಉಪಾಸನೆಯೂ, ಉಪಾಸ್ಯ ಉಪಾಸಕ ಭೇದವೂ ಎಲ್ಲವೂ ಸಿದ್ಧವಾಗುತ್ತವೆ ಎಂದು ಅಭಿಪ್ರಾಯ.

**ಉಪಾಸತೇ ಹಿ ಯದಿದಂ ನೇದಂ ಬ್ರಹ್ಮೇತಿ ತು ಶ್ರುತಿಃ ।**
**ಉಪಾಸ್ಯಮಾನಪ್ರತಿಮಾ ನೈವ ಬ್ರಹ್ಮೇತಿ ಶಂಸತಿ ॥ ೧೪೨೭ ॥**

**ಅರ್ಥ–** ಯದಿದಂ= ಯಾವ ಇದನ್ನು, ಉಪಾಸತೇ= ಉಪಾಸನೆ ಮಾಡುತ್ತಾರೋ, ಇದಂ= ಇದು, ನ ಬ್ರಹ್ಮ= ಬ್ರಹ್ಮನಲ್ಲ, ಇತಿ ಶ್ರುತಿಸ್ತು= ಎಂಬ ಶ್ರುತಿಯಾದರೂ, ಉಪಾಸ್ಯಮಾನ ಪ್ರತಿಮಾ= ಉಪಾಸ್ಯಮಾನವಾದ ಪ್ರತಿಮೆಗೆ, ಬ್ರಹ್ಮ ನೈವ ಇತಿ= ಬ್ರಹ್ಮನು ಅಲ್ಲವೇ ಅಲ್ಲ ಎಂದು, ಶಂಸತಿ= ಹೇಳುತ್ತದೆ.

**ಅನುವಾದ–** 'ನೇದಂ ಯದಿದಂ ಉಪಾಸತೇ' ಎಂಬ ಶ್ರುತಿಯು ನೀನು ಯಾವ ಈ ವಸ್ತುವನ್ನು ಉಪಾಸನೆ ಮಾಡುತ್ತೀಯೋ ಅಂತಹ ಉಪಾಸ್ಯಮಾನವಾದ ಪ್ರತಿಮೆಯು ಬ್ರಹ್ಮನಲ್ಲವೆಂದೇ ಹೇಳುತ್ತದೆ.

**ಭಾವವಿಲಾಸಿನೀ–** ತರ್ಹಿ ನೇದಂ ಯದಿದಮುಪಾಸತ ಇತಿ ಶ್ರುತೇಃ ಕೋಽರ್ಥ ಇತ್ಯತ ಆಹ – ಉಪಾಸತ ಇತಿ ॥ ಉಪಾಸ್ಯಮಾನಪ್ರತಿಮಾ ಧ್ಯಾನಾರ್ಥಂ ರಚಿತಾ ಮನೋಮಯೀ ಭಗವತ್- ಪ್ರತಿಮಾ । ಬಾಹ್ಯಾ ಚ ಸುವರ್ಣಾದಿರಚಿತಾ ಕೃಷ್ಣರಾಮಾದಿಭಗವತ್‌ಪ್ರತಿಮಾ । ಅರ್ಚಾದಿ- ನೋಪಾಸ್ಯಮಾನಾ । ಸಾಕ್ಷಾದ್ಭಗವತಃ ಅಪರೋಕ್ಷಜ್ಞಾನಾತ್ಪೂರ್ವಂ ದ್ರಷ್ಟುಮಶಕ್ಯ- ತ್ವಾತ್ ಸ್ವಬಿಂಬಮೂರ್ತೇಃ ಪ್ರತಿಮಾಮೇವಮನಸಾವಿರಚಯ್ಯ ಧ್ಯಾಯಂತಿ ॥ ೧೪೨೭ ॥

**ವಿವರಣೆ–** 'ನೇದಂ ಯದಿದಮುಪಾಸನೇ' ಎಂಬ ಶ್ರುತಿಗೆ ಹಾಗಾದರೆ ಏನು ಅರ್ಥ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಇದಂ ಎಂದರೆ ಉಪಾಸನೆಯ ಸಲುವಾಗಿ ಮನಸ್ಸಿನಲ್ಲಿ ರಚಿಸಿದ ಮನೋಮಯವಾದ ಎಂದರೆ ಸಂಸ್ಕಾರಜನ್ಯವಾದ ಪ್ರತಿಮೆ ಎಂದು ಅರ್ಥ. ಅದರಂತೆಯೇ ಬಾಹ್ಯವಾದ ಸುವರ್ಣಮಯವಾದ ರಾಮಕೃಷ್ಣಾದಿ ಪ್ರತಿಮೆಗಳು ಎಂದು ಅರ್ಥ. ಬ್ರಹ್ಮನ ಅಪರೋಕ್ಷ ಜ್ಞಾನಕ್ಕಿಂತ ಮೊದಲು ಬ್ರಹ್ಮನು ಕಣ್ಣಿಗೆ ಕಾಣುವುದಿಲ್ಲವಾದ್ದರಿಂದ ಪ್ರತಿಮೆಗಳಲ್ಲಿಯೇ ಅವನ ಉಪಾಸನೆಯನ್ನು ಮಾಡಬೇಕು. ಅಂತಹ ಪ್ರತಿಮೆಗಳು ಬ್ರಹ್ಮನಲ್ಲ ಎಂದು ಈ ಶ್ರುತಿಯು ಹೇಳುತ್ತದೆ ಎಂದು ಅಭಿಪ್ರಾಯ.

**ಬ್ರಹ್ಮಣಃ ಸನ್ನಿಧಾನಾಚ್ಚ ತದುಪಾಸ್ತಿರ್ದಿದೃಕ್ಷತಾಂ ।**
**ರಾಜದ್ವಾರೋಪಾಸ್ತಿತೋಽಪಿ ರಾಜ್ಞಃ ಸ್ಯಾದ್ಧಿ ಪ್ರಸನ್ನತಾ ॥ ೧೪೨೮ ॥**

**ಅರ್ಥ–** ದಿದೃಕ್ಷತಾಂ= ಬ್ರಹ್ಮನನ್ನು ನೋಡಲು ಇಚ್ಛೆಯುಳ್ಳವರಿಗೆ, ಬ್ರಹ್ಮಣಃ ಸನ್ನಿಧಾನಾಚ್ಚ= ಬ್ರಹ್ಮನ ಸನ್ನಿಧಾನವಿರುವುದರಿಂದ, ತದುಪಾಸ್ತಿಃ= ಆ ಪ್ರತಿಮೆಯ ಉಪಾಸನೆಯು ಕೂಡುತ್ತದೆ, ರಾಜದ್ವಾರೋಪಾಸ್ತಿತಃ= ಅರಮನೆಯ ದ್ವಾರದ ಉಪಾಸನೆಯಿಂದಲೂ, ರಾಜ್ಞಃ= ರಾಜನ, ಪ್ರಸನ್ನತಾ= ಪ್ರಸನ್ನತೆಯು, ಸ್ಯಾದ್ಧಿ= ಉಂಟಾಗುವುದಷ್ಟೇ.

**ಅನುವಾದ–** ಬ್ರಹ್ಮನ ಸನ್ನಿಧಾನವಿರುವುದರಿಂದಲೇ ಬ್ರಹ್ಮನನ್ನು ನೋಡಲು ಬಯಸುವವರಿಗೆ ಆ ಪ್ರತೀಕಗಳ ಉಪಾಸನೆಯು ವಿಹಿತವಾಗುತ್ತದೆ. ಅರಮನೆಯ ದ್ವಾರವನ್ನು ಉಪಾಸನೆ ಮಾಡಿದರೆ ರಾಜನ ಪ್ರಸನ್ನತೆಯು ಉಂಟಾಗುವುದಷ್ಟೇ.

**ಭಾವವಿಲಾಸಿನೀ–** ತತ್ಪ್ರತಿಮಾರೂಪಂ ಬ್ರಹ್ಮಸನ್ನಿಧಾನವದೇವ ನತು ಸಾಕ್ಷಾತ್ ಬ್ರಹ್ಮೇತ್ಯರ್ಥಃ । ಅನ್ಯೋಪಾಸ್ತ್ಯಾಽನ್ಯಪ್ರತೀತೌ ದೃಷ್ಟಾಂತಮಾಹ – **ರಾಜದ್ವಾರೇತಿ** ॥ ೧೪೨೮ ॥

**ವಿವರಣೆ–** ಪ್ರತೀಕಗಳು ಬ್ರಹ್ಮನ ಉಪಾಸನೆಗೆ ದ್ವಾರಗಳಿದ್ದಂತೆ. ಪ್ರತೀಕಗಳೇ ಬ್ರಹ್ಮನಲ್ಲ. ಆದರೂ ದ್ವಾರದ ಉಪಾಸನೆಯು ಬ್ರಹ್ಮನ ದರ್ಶನಕ್ಕೆ ಸಹಕಾರಿಯಾಗುವುದರಿಂದ ಪ್ರತೀಕಗಳ ಉಪಾಸನೆಯು ಶ್ರುತಿಯಲ್ಲಿ ಹೇಳಲ್ಪಡುತ್ತದೆ ಎಂದು ಅಭಿಪ್ರಾಯ.

**ಉಪಾಸತೇ ಸದಾ ಭೋಗೈರ್ನರಾ ಯದುದರಂಭರಾಃ ।**
**ಜೀವರೂಪಮಿದಂ ಬ್ರಹ್ಮ ನೇತ್ಯರ್ಥಂ ಚಾಹ ಸಾ ಶ್ರುತಿಃ ॥ ೧೪೨೯ ॥**

**ಅರ್ಥ–** ಉದರಂಭರಾಃ= ವಿಷಯಲಂಪಟರಾದ, ನರಾ= ಮನುಷ್ಯರು, ಸದಾ= ಯಾವಾಗಲೂ, ಭೋಗೈಃ= ಭೋಗಗಳಿಂದ, ಯತ್= ಯಾವ, ಜೀವರೂಪಂ= ಜೀವನನ್ನು, ಉಪಾಸತೇ= ಉಪಾಸನೆ ಮಾಡುತ್ತಾರೋ, ಇದಂ= ಈ ಜೀವರೂಪವಾದುದು, ನ ಬ್ರಹ್ಮ= ಬ್ರಹ್ಮನಲ್ಲ, ಇತಿ= ಎಂಬ, ಅರ್ಥಂ ಚ= ಅರ್ಥವನ್ನೂ ಸಹ, ಸಾ ಶ್ರುತಿಃ= ಆ ಶ್ರುತಿಯು, ಆಹ= ಹೇಳಿತು.

**ಅನುವಾದ–** ವಿಷಯಲಂಪಟರಾದ ಜನರು ಯಾವಾಗಲೂ ಭೋಗಗಳಿಂದ ಯಾವ ಈ ಜೀವನನ್ನು ಉಪಾಸನೆ ಮಾಡುತ್ತಾರೋ ಆ ಜೀವವಸ್ತುವು ಬ್ರಹ್ಮನಲ್ಲ ಎಂಬ ಅರ್ಥವನ್ನು ಈ ಶ್ರುತಿಯು ಹೇಳಿತು.

**ಭಾವವಿಲಾಸಿನೀ–** ಜೀವಬ್ರಹ್ಮಣೋರ್ಭೇದಪ್ರತಿಪಾದಕತ್ವಾತ್ ಇಯಂ ಶ್ರುತಿರಸ್ಮಾಕಮೇವಾನುಕೂಲಾ । ನ ತವೇತಿ ಭಾವೇನ ಶ್ರುತೇರರ್ಥಾಂತರಮಾಹ – **ಉಪಾಸತ ಇತಿ** ॥ **ಭೋಗೈಃ** ಯತ್ ಜೀವಚೈತನ್ಯಂ ಉಪಾಸತೇ ಸೇವಂತೇ ತರ್ಪಯಂತೀತ್ಯರ್ಥಃ । ಇದಂ ಜೀವರೂಪಂ ಜೀವಚೈತನ್ಯಮ್ ॥ ೧೪೨೯ ॥

**ವಿವರಣೆ–** ಇದಂ ಎಂದರೆ ಜೀವವೆಂಬ ವಸ್ತುವೆಂದು ಅರ್ಥಮಾಡಲು ಬರುತ್ತದೆ. ಆದ್ದರಿಂದ ಈ ಶ್ರುತಿಯು ಜೀವಬ್ರಹ್ಮರ ಭೇದವನ್ನೇ ಹೇಳುವುದರಿಂದ ನಮಗೇ ಅನುಕೂಲವಾಗಿದೆ ಮತ್ತು ನಿನಗೆ ಪ್ರತಿಕೂಲವಾಗಿದೆ ಎಂದು ಅಭಿಪ್ರಾಯ.

**ತವ ತ್ವತಿವಿರುದ್ಧಸ್ಯೋಪಾಸ್ತ್ಯೈವ ಸ್ಯಾತ್ ಕಥಂ ಫಲಮ್ ।**
**ಮಹಾವಿರುದ್ಧಮಗ್ನ್ಯರ್ಥೀ ಕಿಮಂಬುಮಥನಂ ಚರೇತ್ ।**
**ಕಿಂ ವಾ ಶುಕ್ತೇರುಪಾಸ್ತ್ಯೈವ ರೂಪ್ಯಪ್ರಾಪ್ತ್ಯಾ ಧನೀ ಭವಾನ್ ॥ ೧೪೩೦ ॥**

**ಅರ್ಥ–** ತವತು= ನಿನಗಾದರೂ, ಅತಿವಿರುದ್ಧಸ್ಯ= ಅತ್ಯಂತ ವಿರುದ್ಧವಾದ, ಉಪಾಸ್ತ್ಯೈವ= ಭೇದೋಪಾಸನೆಯಿಂದಲೇ, ಫಲಂ= ಅದಕ್ಕೆ ವಿರುದ್ಧವಾದ ಅಭೇದ ಪ್ರಾಪ್ತಿರೂಪವಾದ

ಫಲವು, ಕಥಂ ಸ್ಯಾತ್= ಹೇಗಾಗುತ್ತದೆ, ಅಗ್ನ್ಯರ್ಥೀ= ಅಗ್ನಿಯನ್ನು ಬಯಸುವವನು, ಮಹಾವಿರುದ್ಧಂ= ಅದಕ್ಕೆ ಅತ್ಯಂತ ವಿರುದ್ಧವಾದ, ಅಂಬುಮಥನಂ= ಜಲದ ಮಥನವನ್ನು, ಚರೇತ್ ಕಿಂ= ಮಾಡುವನೇನು? ಕಿಂ ವಾ= ಅಥವಾ, ಶುಕ್ತೇರುಪಾಸ್ತ್ಯೈವ= ಶುಕ್ತಿಯ ಉಪಾಸನೆಯಿಂದಲೇ, ರೂಪ್ಯಪ್ರಾಪ್ತ್ಯಾ= ರೂಪ್ಯವನ್ನು ಪಡೆದು, ಭವಾನ್= ನೀನು, ಧನೀ= ಐಶ್ವರ್ಯವಂತನಾಗುತ್ತೀಯಾ?

**ಅನುವಾದ–** ನಿನಗಾದರೆ ಭೇದೋಪಾಸನೆಯಿಂದ ಅದಕ್ಕೆ ಅತ್ಯಂತ ವಿರುದ್ಧವಾದ ಅಭೇದ ಪ್ರಾಪ್ತಿರೂಪವಾದ ಫಲವು ಹೇಗೆ ಉಂಟಾಗುತ್ತದೆ? ಅಗ್ನಿಯನ್ನು ಬಯಸುವವನು ಅದಕ್ಕೆ ಅತ್ಯಂತ ವಿರುದ್ಧವಾದ ಜಲಮಥನವನ್ನು ಮಾಡುತ್ತಾನೆಯೇ? ಅಥವಾ ಶುಕ್ತಿಯ ಉಪಾಸನೆಯಿಂದಲೇ ರೂಪ್ಯವನ್ನು ಪಡೆದು ನೀನು ಧನಿಕನಾಗುತ್ತೀಯಾ?

**ಭಾವವಿಲಾಸಿನೀ–** ಭೇದೋಪಾಸ್ತ್ಯಾದಿನಾ ಅಭೇದಾದಿಪ್ರಾಪ್ತಿಃ ವಿರುದ್ಧತ್ವಾನ್ನ ಭವತೀತ್ಯೇ ತತ್ ದೃಷ್ಟಾಂತೇನೋಪಪಾದಯತಿ – **ತವ ತ್ವಿತಿ** ॥ ಫಲಂ ವಿರುದ್ಧಫಲಮ್ । ಭೇದೋಪಾಸ್ತ್ಯಾಽ-ಭೇದಪ್ರಾಪ್ತಿರಿತ್ಯರ್ಥಃ । ಮಹಾವಿರುದ್ಧಮಂಬುಮಥನಮಿತಿ ಸಂಬಂಧಃ । ಅಂಬುಮಥನೇ-ನಾಗ್ನಿಪ್ರಾಪ್ತೇರದರ್ಶನಾತ್ ವಿರುದ್ಧೋಪಾಸ್ತ್ಯಾ ತದ್ವಿರುದ್ಧಫಲಂ ಕ್ವಾಪಿನಭವತೀತಿ ಭಾವಃ॥ ನಿದರ್ಶನಾಂತರಮಪ್ಯಾಹ – **ಕಿಂವೇತಿ** ॥ ೧೪೩೦ ॥

**ವಿವರಣೆ–** ಅಗ್ನಿಯನ್ನು ಬಯಸುವವನು ಅರಣಿಮಥನವನ್ನು ಮಾಡಿದರೆ ಅಗ್ನಿಯು ದೊರೆಯುತ್ತದೆ. ಜಲಮಥನವನ್ನು ಮಾಡಿದರೆ ಅದು ಅಗ್ನಿ ಪ್ರಾಪ್ತಿಗೆ ವಿರುದ್ಧವಾದುದು. ಅದರಿಂದ ಅಗ್ನಿಯು ದೊರೆಯುವುದಿಲ್ಲ. ಅದರಂತೆ ಅಭೇದ ಪ್ರಾಪ್ತಿಯಾಗಬೇಕಾದರೆ ಅಭೇದ ಪ್ರಾಪ್ತಿಗೆ ಅನುಗುಣವಾದ ಉಪಾಸನೆಯನ್ನು ಮಾಡಬೇಕು. ಭೇದೋಪಾಸನೆಯು ಅಭೇದಕ್ಕೆ ವಿರುದ್ಧವಾದುದು. ಆದ್ದರಿಂದ ಭೇದೋಪಾಸನೆಯಿಂದ ಅಭೇದ ಪ್ರಾಪ್ತಿರೂಪವಾದ ಫಲವು ಉಂಟಾಗುವುದಿಲ್ಲ. ಶುಕ್ತಿ ಮತ್ತು ರೂಪ್ಯಗಳು ವಿರುದ್ಧವಾದವು. ಒಂದರ ಉಪಾಸನೆಯಿಂದ ಇನ್ನೊಂದು ಲಭಿಸುವುದಿಲ್ಲ. ಅದರಂತೆ ಭೇದದ ಉಪಾಸನೆಯಿಂದ ಅಭೇದವು ಲಭಿಸುವುದಿಲ್ಲ ಎಂದು ಅಭಿಪ್ರಾಯ.

**ಕಿಂಚ ಶಾಖಾಗ್ರಚಂದ್ರೈಕ್ಯಂ ಧ್ಯಾತವ್ಯಂ ಕಿಲ ತೇ ಮತೇ ।**
**ಸ್ಥೂಲೈವಾರುಂಧತೀತ್ವೇನ ಧ್ಯೇಯಾ ಸೂಕ್ಷ್ಮತ್ವಸಿದ್ಧಯೇ ।**
**ಏವಂ ಚೈಕ್ಯಮುಪಾಸ್ಯಂ ವಾ ಭೇದೋ ವಾಽಭೂದ್ ವಿಚಾರಯ ॥೧೪೩೧॥**

**ಅರ್ಥ–** ಕಿಂಚ= ಮತ್ತು, ತೇ ಮತೇ= ನಿನ್ನ ಮತದಲ್ಲಿ, ಶಾಖಾಗ್ರಚಂದ್ರೈಕ್ಯಂ= ಶಾಖಾಗ್ರ ಮತ್ತು ಚಂದ್ರರ ಅಭೇದವು, ಧ್ಯಾತವ್ಯಂ ಕಿಲ= ಧ್ಯಾನಮಾಡಲ್ಪಡಬೇಕಷ್ಟೇ, ಅದರಂತೆ, ಸೂಕ್ಷ್ಮತ್ವ ಸಿದ್ಧಯೇ= ಸೂಕ್ಷ್ಮತ್ವವನ್ನು ಸಂಪಾದಿಸಲು, ಸ್ಥೂಲೈವ= ಸ್ಥೂಲತಾರೆಯೇ,

ಅರುಂಧತೀತ್ವೇನ= ಅರುಂಧತಿ ಎಂದು, ಧ್ಯೇಯಾ ಕಿಲ= ಧ್ಯಾನ್ನಮಾಡಲ್ಪಡಬೇಕಷ್ಟೇ, ಏವಂ ಚ= ಹಾಗಾದರೆ, ಉಪಾಸ್ಯಂ= ಉಪಾಸ್ಯಮಾನವಾದುದು, ಐಕ್ಯಂ ವಾ= ಐಕ್ಯವೋ, ಭೇದೋ ವಾ= ಅಥವಾ ಭೇದವೋ ಎಂದು, ವಿಚಾರಯ= ವಿಚಾರ ಮಾಡು.

**ಅನುವಾದ– ಮತ್ತು ನಿನ್ನ ಮತದಲ್ಲಿ ಶಾಖಾಗ್ರ ಮತ್ತು ಚಂದ್ರರ ಅಭೇದವು ಧ್ಯಾನ ಮಾಡಲ್ಪಡಬೇಕು. ಹಾಗೆಯೇ, ಸೂಕ್ಷ್ಮತ್ವದ ಸಿದ್ಧಿಗಾಗಿ ಸ್ಥೂಲನಕ್ಷತ್ರವನ್ನೇ ಅರುಂಧತಿ ಎಂದು ಧ್ಯಾನ ಮಾಡಬೇಕು. ಹೀಗಿರುವಾಗ ಉಪಾಸ್ಯಮಾನವಾದುದು ಐಕ್ಯವೋ ಅಥವಾ ಭೇದವೋ ಎಂದು ನೀನೇ ವಿಚಾರ ಮಾಡು.**

**ಭಾವವಿಲಾಸಿನೀ–** ತ್ವದ್ದೃಷ್ಟಾಂತೇನೈವಾವಿದ್ಯಮಾನೈಕ್ಯಸ್ಯೋಪಾಸ್ಯತ್ವಮಾಗತಂ ನತು ಭೇದಸ್ಯೇತ್ಯಾಹ – **ಕಿಂಚೇತಿ** ॥ ಸ್ಥೂಲಾ ತಾರಾ ॥ ೧೪೩೧ ॥

**ವಿವರಣೆ–** ಉಪಾಸ್ಯಮಾನವಾದುದು ಮಿಥ್ಯೆ ಎಂದು ಅದ್ವೈತಿಗಳ ಮತ. ಅದನ್ನು ಅನುಸರಿಸಿ ಅವರಿಗೆ ಅನಿಷ್ಟ ಪ್ರಸಂಗಗಳನ್ನು ಇಲ್ಲಿ ಹೇಳುತ್ತಾರೆ. ಶಾಖಾಗ್ರ ಚಂದ್ರರ ಅಭೇದವು ಮಿಥ್ಯಾಭೂತವಾದುದು. ಅದು ಅದ್ವೈತಿಗಳಿಂದ ಉಪಾಸ್ಯ. ಸ್ಥೂಲ ನಕ್ಷತ್ರದಲ್ಲಿ ಅರುಂಧತಿಯ ಅಭೇದವು ಮಿಥ್ಯಾಭೂತವಾದುದು. ಅದೂ ಅವರಿಗೆ ಉಪಾಸ್ಯವಾಗಿದೆ. ಆದ್ದರಿಂದ ಉಪಾಸ್ಯಮಾನವಾದುದು ಈ ಸ್ಥಳಗಳಲ್ಲಿ ಐಕ್ಯವೇ ಹೊರತು ಭೇದವಲ್ಲ. ಉಪಾಸ್ಯಮಾನವಾದುದು ಮಿಥ್ಯೆ ಎಂದಾದರೆ ಉಪಾಸ್ಯಮಾನವಾದ ಜೀವಬ್ರಹ್ಮೈಕ್ಯವು ಮಿಥ್ಯೆ ಎಂದೇ ಸಿದ್ಧವಾಗುತ್ತದೆ. ಆಗ ಭೇದವು ಸುತರಾಂ ಸಿದ್ಧಿಸುತ್ತದೆ ಎಂದು ಅಭಿಪ್ರಾಯ.

**ಸ್ಥೂಲಭಾಸ್ವರತಾರಾಯಾ ಧ್ಯಾನೇ ಸೂಕ್ಷ್ಮಾಲ್ಪಭಾಸ್ವರಾ ।**
**ತಾರೈವ ದೃಶ್ಯತೇ ವ್ಯೋಮ ನೀರೂಪಂ ನ ಹಿ ದೃಶ್ಯತೇ ॥ ೧೪೩೨ ॥**

**ಅರ್ಥ–** ಸ್ಥೂಲಭಾಸ್ವರತಾರಾಯಾಃ= ದೊಡ್ಡದಾದ ಹೊಳೆಯುವ ನಕ್ಷತ್ರದ, ಧ್ಯಾನೇ= ಧ್ಯಾನವನ್ನು ಮಾಡಿದರೆ, ಸೂಕ್ಷ್ಮಾಲ್ಪಭಾಸ್ವರಾ= ಸಣ್ಣದಾದ ಅಲ್ಪ ಪ್ರಕಾಶವನ್ನು ಹೊಂದಿರುವ, ತಾರೈವ= ನಕ್ಷತ್ರವೇ, ದೃಶ್ಯತೇ= ಕಾಣುತ್ತದೆ, ನೀರೂಪಂ= ರೂಪರಹಿತವಾದ, ವ್ಯೋಮ= ಆಕಾಶವು, ನ ದೃಶ್ಯತೇ ಹಿ= ಕಾಣುವುದಿಲ್ಲವಷ್ಟೇ?

**ಅನುವಾದ– ಸ್ಥೂಲವಾದ ಹೆಚ್ಚು ಪ್ರಕಾಶವನ್ನು ಹೊಂದಿದ ನಕ್ಷತ್ರದ ಧ್ಯಾನವನ್ನು ಮಾಡಿದರೆ ಸೂಕ್ಷ್ಮವಾದ ಅಲ್ಪಪ್ರಕಾಶವನ್ನು ಹೊಂದಿದ ನಕ್ಷತ್ರದ್ದೇ ದರ್ಶನವಾಗುವುದಷ್ಟೇ. ರೂಪರಹಿತವಾದ ಆಕಾಶವು ಕಾಣುವುದಿಲ್ಲವಷ್ಟೇ?**

**ಭಾವವಿಲಾಸಿನೀ–** ಸಗುಣೋಪಾಸ್ತ್ಯಾ ನಿರ್ಗುಣಪ್ರಾಪ್ತೌ ಚ ನಾಯಂ ದೃಷ್ಟಾಂತೋऽಭೂದಿತ್ಯಾಹ – **ಸ್ಥೂಲಭಾಸ್ವರೇತಿ** ॥ ೧೪೩೨ ॥

**ವಿವರಣೆ–** ಸಗುಣೋಪಾಸನೆಯಿಂದ ನಿರ್ಗುಣಪ್ರಾಪ್ತಿಯನ್ನು ಹೇಳುವ ನಿನಗೆ ಸ್ಥೂಲಾರುಂಧತಿ ದೃಷ್ಟಾಂತವೇ ಅನುಕೂಲವಾಗುವುದಿಲ್ಲ ಎಂದು ಇಲ್ಲಿ ಹೇಳುತ್ತಾರೆ. ಪ್ರಕಾಶವುಳ್ಳ ಒಂದು ತಾರೆಯ ಧ್ಯಾನದಿಂದ ಅಲ್ಪಪ್ರಕಾಶವುಳ್ಳ ಇನ್ನೊಂದು ತಾರೆಯ ದರ್ಶನವಾಗುತ್ತದೆ. ಅದರಂತೆ ಸಗುಣೋಪಾಸನೆಯಿಂದ ಇನ್ನೊಂದು ಸಗುಣದ ಪ್ರಾಪ್ತಿಯಾದೀತೇ ಹೊರತು ನಿರ್ಗುಣದ ಪ್ರಾಪ್ತಿಯಾಗುವುದಿಲ್ಲ ಎಂದು ಅಭಿಪ್ರಾಯ.

**ಏವಂ ಚ ಸಗುಣೋಪಾಸ್ತ್ಯಾ ನಿರ್ಗುಣೇಕ್ಷೋಪಮಾ ನ ಸಾ ।**
**ಯದ್ ಧ್ಯೇಯಃ ಸಗುಣೋಽತ್ರಾಪಿ ಪ್ರಾಪ್ಯೋಽಪಿ ಸಗುಣೋ ಯತಃ ॥೧೪೩೩॥**

**ಅರ್ಥ–** ಏವಂ ಚ= ಆದ್ದರಿಂದ, ಸಾ= ಸ್ಥೂಲಾರುಂಧತೀನ್ಯಾಯವು, ಸಗುಣೋಪಾಸ್ತ್ಯಾ= ಸಗುಣೋಪಾಸನೆಯಿಂದ, ನಿರ್ಗುಣೇಕ್ಷೋಪಮಾ= ನಿರ್ಗುಣಜ್ಞಾನಕ್ಕೆ ಉಪಮಾನವಾಗಿ, ನ= ಆಗುವುದಿಲ್ಲ, ಯತ್= ಏಕೆಂದರೆ, ಅತ್ರಾಪಿ= ಈ ಸ್ಥೂಲಾರುಂಧತಿಯ ದೃಷ್ಟಾಂತದಲ್ಲಿಯೂ, ಸಗುಣಃ= ಸಗುಣವಾದುದ್ದೇ, ಧ್ಯೇಯಃ= ಧ್ಯಾನಿಸಲ್ಪಡುವಂತಹದು, ಪ್ರಾಪ್ಯೋಽಪಿ= ಪ್ರಾಪ್ಯವಾದುದೂ ಸಹ, ಸಗುಣಃ= ಸಗುಣವಾದುದೇ.

**ಅನುವಾದ–** ಆದ್ದರಿಂದ ಸ್ಥೂಲಾರುಂಧತೀ ದೃಷ್ಟಾಂತವು ಸಗುಣೋಪಾಸನೆಯಿಂದ ನಿರ್ಗುಣಪ್ರಾಪ್ತಿಗೆ ಯೋಗ್ಯವಾದ ದೃಷ್ಟಾಂತವಲ್ಲ. ಏಕೆಂದರೆ ಸ್ಥೂಲಾರುಂಧತಿಯ ದೃಷ್ಟಾಂತದಲ್ಲಿ ಸಗುಣವೇ ಉಪಾಸ್ಯಮಾನವಾದುದು ಮತ್ತು ಸಗುಣವೇ ಪ್ರಾಪ್ಯವಾದುದು.

**ಭಾವವಿಲಾಸಿನೀ–** ಸಾ ಸ್ಥೂಲತಾರೋಪಾಸನೇನ ಸೂಕ್ಷ್ಮತಾರಾಪ್ರಾಪ್ತಿಃ । ಯತ್ ಯಸ್ಮಾತ್ । ಅತ್ರ ಸ್ಥೂಲಾರುಂಧತೀದೃಷ್ಟಾಂತೇ ॥ ೧೪೩೩ ॥

**ಅಸ್ಮಾಕಂ ತು ಮನೋರೂಪಪ್ರತಿಮಾ ಸ್ಥೂಲಭಾಸ್ವರಾ ।**
**ಉಪಾಸ್ಯಮಾನಾ ಸ್ವಾಂತಃಸ್ಥಾಂ ಜ್ಞಾನಾನಂದಮಯಪ್ರಭಾಂ ॥ ೧೪೩೪ ॥**

**ಅತಿಸೂಕ್ಷ್ಮಾಂ ಹರೇರ್ಮೂರ್ತಿಂ ದರ್ಶಯೇದಿತಿ ವಾದಿನಾಂ ।**
**ತವೋಪಮೈವಾನುಪಮಾ ಬಲಮಾಸೀದ್ ವಿವೇಚನೇ ॥ ೧೪೩೫ ॥**

**ಅರ್ಥ–** ಅಸ್ಮಾಕಂ ತು= ನಮಗಾದರೂ, ಉಪಾಸ್ಯಮಾನಾ= ಉಪಾಸ್ಯಮಾನವಾದ, ಸ್ಥೂಲಭಾಸ್ವರಾ= ಸ್ಥೂಲವಾದ ಪ್ರಕಾಶದಿಂದ ಕೂಡಿದ, ಮನೋರೂಪಪ್ರತಿಮಾ= ಮನೋಮಯವಾದ ಎಂದರೆ ವಾಸನಾರೂಪವಾದ ಪ್ರತಿಮೆಯೇ, ಸ್ವಾಂತಃಸ್ಥಾಂ= ತನ್ನ ಒಳಗಿರುವ, ಜ್ಞಾನಾನಂದಮಯಪ್ರಭಾಂ= ಜ್ಞಾನಾನಂದರೂಪವಾದ ಪ್ರಕಾಶವನ್ನು

ಹೊಂದಿರುವ, ಅತಿಸೂಕ್ಷ್ಮಾಂ= ಅತ್ಯಂತ ಸೂಕ್ಷ್ಮವಾದ, ಹರೇರ್ಮೂರ್ತಿಂ= ಹರಿಯ ಮೂರ್ತಿಯನ್ನು, ದರ್ಶಯೇದಿತಿ= ತೋರಿಸುತ್ತದೆ ಎಂದು, ವಾದಿನಾಂ= ಹೇಳುವವರಾದ ನಮಗೆ, ವಿವೇಚನೇ= ವಿವೇಚನೆಯನ್ನು ಮಾಡಿದರೆ, ತವ= ನಿನ್ನ, ಅನುಪಮಾ= ಅಸದೃಶವಾದ, ಉಪಮೈವ= ಈ ಸ್ಥೂಲಾರುಂಧತೀ ದೃಷ್ಟಾಂತವೇ, ಬಲಮಾಸೀತ್= ಬಲವಾಯಿತು!

**ಅನುವಾದ–** ಉಪಾಸ್ಯಮಾನವಾದ ಮಾನಸವಾಸನಾಮಯವಾದ ಸ್ಥೂಲವೂ ಪ್ರಕಾಶಮಾನವೂ ಆದ ಪ್ರತಿಮೆಯೇ ತನ್ನೊಳಗಿರುವ ಜ್ಞಾನಾನಂದರೂಪವಾದ ಪ್ರಕಾಶವುಳ್ಳ ಅತ್ಯಂತ ಸೂಕ್ಷ್ಮವಾದ ಹರಿಯ ಮೂರ್ತಿಯನ್ನು ತೋರಿಸುತ್ತದೆ ಎಂದು ಹೇಳುವ ನಮಗಾದರೂ ನಿನ್ನ ಈ ಅಸದೃಶವಾದ ಸ್ಥೂಲಾರುಂಧತಿಯ ದೃಷ್ಟಾಂತವೇ ವಿವೇಚನೆಯನ್ನು ಮಾಡಿದರೆ ಬಲವಾಯಿತಷ್ಟೇ!

**ಭಾವವಿಲಾಸಿನೀ–** ಅತಸ್ತದ್ದೃಷ್ಟಾಂತೋऽಪ್ಯಸ್ಮಾಕಮೇವಾನುಕೂಲ ಇತ್ಯಾಹ – **ಅಸ್ಮಾಕಮಿತಿ** ॥ ಜ್ಞಾನಾನಂದಮಯೀ ಪ್ರಭಾ ಯಸ್ಯಾಃ ಸತಾಮ್ । ಅಪ್ರಾಕೃತಕಾಂತಿಮತೀಮಿತ್ಯರ್ಥಃ । ಅನುಪಮಾ ಅಸದೃಶೀ ತವೋಪಮೈವ ಬಲಮಾಸೀದಿತಿ ಸಂಬಂಧಃ ॥ ೧೪೩೪-೧೪೩೫ ॥

**ವಿವರಣೆ–** ಸ್ಥೂಲಾರುಂಧತೀ ದೃಷ್ಟಾಂತವು ನಿನಗೆ ಅನುಕೂಲವಾಗಿಲ್ಲ ಅದು ನಮಗೇ ಅನುಕೂಲವಾಗಿದೆ ಎಂದು ಅಭಿಪ್ರಾಯ.

ಅರಣೇಸ್ಥಾನಲಪ್ರಾಪ್ತಿರರಣ್ಯೋರ್ಮಥನೇ ಯಥಾ ।
ತಥಾನುಕೂಲಾನ್ಯಸೇವಾಪ್ಯನ್ಯಪ್ರಾಪ್ತ್ಯೈ ಭವೇನ್ಮಮ ।
ತುಹಿನಾನುಸೃತಿಃ ಕಿಂ ಸ್ಯಾದ್ ದಹನಪ್ರಾಪ್ತಯೇ ವದ ॥ ೧೪೩೬ ॥

**ಅರ್ಥ–** ಯಥಾ= ಹೇಗೆ, ಅರಣ್ಯೋಃ= ಅರಣಿಗಳ, ಮಥನೇ= ಮಥನ ಮಾಡಿದರೆ, ಅರಣೇಸ್ಥಾನಲಪ್ರಾಪ್ತಿ= ಅರಣಿಯಲ್ಲಿರುವ ಅಗ್ನಿಯ ಪ್ರಾಪ್ತಿಯಾಗುತ್ತದೆಯೋ, ತಥಾ= ಅದರಂತೆ, ಅನುಕೂಲಾನ್ಯಸೇವಾಪಿ= ಅನುಕೂಲವಾದ ಇನ್ನೊಂದು ವಸ್ತುವಿನ ಸೇವೆಯೂ ಸಹ, ಅನ್ಯಪ್ರಾಪ್ತ್ಯೈ= ಇನ್ನೊಂದರ ಪ್ರಾಪ್ತಿಗೆ ಸಾಧನವಾಗಿ, ಮಮ= ನನಗೆ, ಭವೇತ್= ಆಗುತ್ತದೆ, ದಹನಪ್ರಾಪ್ತಯೇ= ಅಗ್ನಿಯ ಪ್ರಾಪ್ತಿಗಾಗಿ, ತುಹಿನಾನುಸೃತಿಃ= ಹಿಮದ ಅನುಸರಣೆಯು, ಸ್ಯಾತ್ ಕಿಂ= ಆಗುತ್ತದೆಯೇ?, ವದ= ಹೇಳು.

**ಅನುವಾದ–** ಹೇಗೆ ಅರಣಿಗಳ ಮಥನ ಮಾಡಿದರೆ ಅರಣಿಯಲ್ಲಿರುವ ಅಗ್ನಿಯ ಪ್ರಾಪ್ತಿಯಾಗುತ್ತದೆಯೋ ಅದರಂತೆ ನನಗೆ ಅನುಕೂಲವಾದ ಇನ್ನೊಂದು ಪದಾರ್ಥದ ಸೇವೆಯು ಇನ್ನೊಂದು ವಸ್ತುವಿನ ಪ್ರಾಪ್ತಿಗೆ ಸಾಧನವಾಗುತ್ತದೆ. ಆದರೆ ಅಗ್ನಿಯ ಪ್ರಾಪ್ತಿಗಾಗಿ ಹಿಮದ ಅನುಸರಣೆ ಎಂದಾದರೂ ಉಂಟಾಗುತ್ತದೆಯೇ? ಹೇಳು.

**ಅರ್ಥ–** ವಸ್ತುತಃ= ನಿಜವಾಗಿ ವಿಚಾರ ಮಾಡಿದರೆ, ಲೌಕಿಕಾಃ= ಲೌಕಿಕರೂ ಸಹ, ಸೂಕ್ಷ್ಮತಾರಾಯಾಃ= ಸೂಕ್ಷ್ಮವಾದ ಅರುಂಧತಿ ನಕ್ಷತ್ರಕ್ಕೆ, ಸಮೀಪಸ್ಥಾ= ಸಮೀಪದಲ್ಲಿದೆ ಎಂದು, ಸ್ಥೂಲತಾರಾಂ= ಸ್ಥೂಲವಾದ ನಕ್ಷತ್ರವನ್ನು, ದರ್ಶಯಂತಿ= ತೋರಿಸುತ್ತಾರೆ, ತತ್ರ= ಅಲ್ಲಿ, ತದ್ಭಾವಂ= ಸ್ಥೂಲತಾರೆಯೇ ಅರುಂಧತಿ ಎಂದು, ಕಃ= ಯಾವನು ತಾನೇ, ವದೇತ್= ಹೇಳುತ್ತಾನೆ?

**ಅನುವಾದ–** ವಸ್ತುಸ್ಥಿತಿಯಲ್ಲಿ ಲೌಕಿಕರೂ ಸಹ ಸೂಕ್ಷ್ಮವಾದ ಅರುಂಧತಿ ನಕ್ಷತ್ರದ ಸಮೀಪದಲ್ಲಿದೆ ಎಂದೇ ಸ್ಥೂಲತಾರೆಯನ್ನು ತೋರಿಸುತ್ತಾರೆ. ಸ್ಥೂಲತಾರೆಯೇ ಅರುಂಧತಿ ಎಂದು ಯಾವನು ತಾನೆ ಹೇಳುತ್ತಾನೆ?

**ಭಾವವಿಲಾಸಿನೀ–** ಕಿಂಚ ಸ್ಥೂಲತಾರಾಯಾ ಅರುಂಧತೀತ್ವೇನ ಶಾಖಾಗ್ರಸ್ಯ ಚ ಚಂದ್ರತ್ವೇನೋಪಾಸ್ತೌ ಮಿಥ್ಯೋಪಾಸನಮಾಶಾಸ್ಯೇತಾಪಿ ಸೈವ ನಾಸ್ತೀತ್ಯಾಹ ॥ **ವಸ್ತುತ ಇತಿ** ॥ ತದ್ಭಾವಃ ಸೂಕ್ಷ್ಮತಾರಾತ್ವಮ್ । ತತ್ರ ಸ್ಥೂಲತಾರಾಯಾಮ್ ॥ ೧೪೪೦ ॥

**ವಿವರಣೆ–** ಸ್ಥೂಲಾರುಂಧತೀ ದೃಷ್ಟಾಂತದಿಂದ ನೀನು ಮಿಥ್ಯೋಪಾಸನೆಯನ್ನು ಉಪಪಾದನೆ ಮಾಡುತ್ತಿದ್ದೀಯೇ. ಆದರೆ ನೀನು ಹೇಳುವ ಅಭಿಪ್ರಾಯವುಳ್ಳ ಸ್ಥೂಲಾರುಂಧತೀ ನ್ಯಾಯವೇ ಅಪ್ರಾಮಾಣಿಕವಾದುದು ಎಂದು ಅಭಿಪ್ರಾಯ.

**ಶಾಖಾಗ್ರದೇಶೇ ನೇಂದೋಶ್ಚ ಸ್ಯಾದಾದೇಶೋ ವಿವೇಕಿನಾಮ್ ।**
**ಶಾಖಾಗ್ರೈಕ್ಯಂ ತು ಕೋ ವಕ್ತಿ ಮಿಥ್ಯೋಪಾಸ್ತಿಃ ಕ್ವ ತೇಽಸ್ತಿ ತತ್ ॥ ೧೪೪೧ ॥**

**ಅರ್ಥ–** ವಿವೇಕಿನಾಂ= ವಿವೇಕಿಗಳಾದವರಿಗೆ (ವಿವೇಕಿಗಳಾದವರು), ಶಾಖಾಗ್ರದೇಶೇ= ಶಾಖೆಯ ಮೇಲ್ಭಾಗದಲ್ಲಿ, ಇಂದೋಶ್ಚ= ಚಂದ್ರನ, ಆದೇಶಃ= ಉಪದೇಶವು (ಉಪದೇಶವನ್ನು), ನ ಸ್ಯಾತ್= ಇರುವುದಿಲ್ಲ (ಮಾಡುವುದಿಲ್ಲ), ಶಾಖಾಗ್ರೈಕ್ಯಂ ತು= ಶಾಖಾಗ್ರ ಮತ್ತು ಚಂದ್ರನ ಅಭೇದವನ್ನಾದರೂ, ಕೋ ವಕ್ತಿ= ಯಾವನು ಹೇಳುತ್ತಾನೆ, ತತ್= ಆದ್ದರಿಂದ, ತೇ= ನಿನ್ನ, ಮಿಥ್ಯೋಪಾಸ್ತಿಃ= ಮಿಥ್ಯೋಪಾಸನೆಯು, ಕ್ವ ಅಸ್ತಿ= ಎಲ್ಲಿದೆ?

**ಅನುವಾದ–** ವಿವೇಕಿಗಳಾದವರು ಶಾಖೆಯ ಮೇಲ್ಭಾಗದಲ್ಲಿ ಚಂದ್ರನಿದ್ದಾನೆಂದು ಉಪದೇಶ ಮಾಡುವುದಿಲ್ಲ. ಇನ್ನು ಶಾಖಾಗ್ರಕ್ಕೂ ಮತ್ತು ಚಂದ್ರನಿಗೂ ಅಭೇದವನ್ನು ಯಾವನು ಹೇಳುತ್ತಾನೆ? ಆದ್ದರಿಂದ ನಿನಗೆ ಅಭಿಮತವಾದ ಮಿಥ್ಯೋಪಾಸನೆಯು ಎಲ್ಲಿದೆ ಎಂದು ಹೇಳು.

**ಭಾವವಿಲಾಸಿನೀ–** ತತ್ ತಸ್ಮಾತ್ । ಇಂದ್ರಚಂದ್ರೇತಿ ಯಂ ಕಂಚಿದ್ರಾಜಾನಂ ಸ್ತುವಂತೋಪಿ ಗೌಣ್ಯಾ ಇಂದ್ರಾದಿವದೈಶ್ವರ್ಯಸಂಪತ್ತಿಮೇವಾಭಿಪ್ರಯಂತಿ । ಇಂದ್ರಾದ್ಯೈಕ್ಯಂ ತು ಮನಸಾಪಿ ನ ಸ್ಮರಂತಿ । ಅತೋ ಮಿಥ್ಯೋಪಾಸ್ತೌ ನ ಕಿಂಚನ್ನಿದರ್ಶನಮ್ ॥ ೧೪೪೧ ॥

**ವಿವರಣೆ–** ಸ್ಥೂಲಾರುಂಧತೀ ನ್ಯಾಯವನ್ನು ಅಪ್ರಾಮಾಣಿಕವೆಂದು ಹಿಂದಿನ ಶ್ಲೋಕದಲ್ಲಿ ಹೇಳಿ, ಇಲ್ಲಿ ಅದ್ವೈತಿಗಳು ವ್ಯಾಖ್ಯಾನಿಸುವಂತಹ ಶಾಖಾಗ್ರಚಂದ್ರದೃಷ್ಟಾಂತವು ಅಪ್ರಾಮಾಣಿಕವಾದುದೆಂದೇ ಹೇಳುತ್ತಾರೆ. ರಾಜರನ್ನು ಇಂದ್ರ, ಚಂದ್ರನೆಂದು ಸ್ತೋತ್ರ ಮಾಡುವವನು ಇಂದ್ರನ ಅಭೇದವನ್ನು ರಾಜನಲ್ಲಿ ಮನಸ್ಸಿನಲ್ಲಿಯೂ ಎಣಿಸುವುದಿಲ್ಲ. ಇಂದ್ರನ ಐಶ್ವರ್ಯಕ್ಕೆ ಸದೃಶವಾದ ಐಶ್ವರ್ಯವಿದೆ ಎಂದೇ ಭಾವಿಸುತ್ತಾನೆ. ಆದ್ದರಿಂದ ಮಿಥ್ಯೋಪಾಸನೆಯು ಲೋಕದ ಯಾವ ಅನುಭವದಿಂದಲೂ ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಕಿಂ ಚೈವಮಪ್ಯುಪಾಸ್ಯೇಽಸ್ಮಿನ್ ಭೇದೇ ಸ್ಯಾದ್ ಬ್ರಹ್ಮಣೋಽನ್ಯತಾ ।**
**ಮಿಥ್ಯಾತ್ವಂ ತು ಕುತೋ ಹೇತೋರಘಟೋ ನಾಸ್ತಿ ಕಿಂ ಪಟಃ ॥ ೧೪೪೨ ॥**

**ಅರ್ಥ–** ಕಿಂಚ= ಮತ್ತು, ಅಸ್ಮಿನ್= ಈ ಉಪಾಸ್ಯಮಾನವಾದ ವಸ್ತುವಿನಲ್ಲಿ, ಬ್ರಹ್ಮಣೋ ಭೇದೇ= ಬ್ರಹ್ಮನ ಭೇದವಿದ್ದರೆ, ಅನ್ಯತಾ= ಭಿನ್ನತ್ವವೇ, ಸ್ಯಾತ್= ಉಂಟಾಗುತ್ತದೆ, ಮಿಥ್ಯಾತ್ವಂ ತು= ಮಿಥ್ಯಾತ್ವವಾದರೂ, ಕುತೋ ಹೇತೋಃ= ಯಾವ ಹೇತುವಿನಿಂದ ದೊರೆಯುತ್ತದೆ? ಅಘಟಃ= ಘಟಭಿನ್ನವಾದುದು, ಪಟಃ= ಪಟವಾಗಿ, ನಾಸ್ತಿ ಕಿಂ= ಇಲ್ಲವೇನು?

**ಅನುವಾದ–** ಮತ್ತು ಉಪಾಸ್ಯಮಾನವಾದ ಈ ವಸ್ತುವು ಬ್ರಹ್ಮನಲ್ಲವೆಂದು ಹೇಳಿದರೆ ಉಪಾಸ್ಯಮಾನವಾದ ವಸ್ತುವಿಗೆ ಬ್ರಹ್ಮನಿಂದ ಭೇದವೇ ಸಿದ್ಧವಾಗುತ್ತದೆ. ಆದರೆ ಮಿಥ್ಯಾತ್ವವು ಯಾವ ಹೇತುವಿನಿಂದ ಸಿದ್ಧವಾಗುತ್ತದೆ? ಘಟ ಭಿನ್ನವಾದ ಪಟವು ಇರುವುದಿಲ್ಲವೇನು?

**ಭಾವವಿಲಾಸಿನೀ–** ಅಪಿ ಚ ಇದಮುಪಾಸ್ಯಂ ಬ್ರಹ್ಮನೇತಿ ಶ್ರುತಿಃ ಉಪಾಸ್ಯಸ್ಯ ಬ್ರಹ್ಮಣೋನ್ಯತ್ವ-ರೂಪಮಬ್ರಹ್ಮತ್ವಮೇವಾಹ । ನತು ಮಿಥ್ಯಾತ್ವಮ್ । ಏವಂ ಚೈತತ್‌ಶ್ರುತಿಬಲಾನ್ನೋಪಾಸ್ಯಸ್ಯ ಮಿಥ್ಯಾತ್ವಸಿದ್ಧಿಃ । ಕಿಂತು ತವ ವಿವೇಕಸ್ಯೈವ ಮಿಥ್ಯಾತ್ವಸಿದ್ಧಿರಿತ್ಯಾಹ – **ಕಿಂಚೇತಿ** ॥ ಉಪಾಸ್ಯೇ ತ್ವಯೋಪಾಸ್ಯತಯೋಕ್ತೇ । ಅಘಟಃ ಘಟಾದನ್ಯಃ ॥ ೧೪೪೨ ॥

**ವಿವರಣೆ–** 'ನೇದಂ ಯದಿದಂ ಉಪಾಸತೇ' ಎಂಬ ಶ್ರುತಿಯಿಂದ ಉಪಾಸ್ಯಮಾನವಾದ ಜಗತ್ತಿಗೆ ಪ್ರತೀಕಾದಿ ಜಗತ್ತಿನಲ್ಲಿ ಬ್ರಹ್ಮಭೇದವೇ ಸಿದ್ಧವಾದೀತೇ ಹೊರತು ಮಿಥ್ಯಾತ್ವವು ಸಿದ್ಧವಾಗುವುದಿಲ್ಲ ಎಂದು ದೃಷ್ಟಾಂತ ಪುರಸ್ಸರವಾಗಿ ಇಲ್ಲಿ ತಿಳಿಸುತ್ತಾರೆ. ಪಟವನ್ನು ಉದ್ದೇಶಿಸಿ ಇದು ಘಟವಲ್ಲ ಎಂದು ಹೇಳಿದರೆ ಘಟಭೇದವೇ ಸಿದ್ಧಿಸುತ್ತದೆಯೇ ಹೊರತು ಘಟಮಿಥ್ಯಾತ್ವವು ಸಿದ್ಧಿಸುವುದಿಲ್ಲವಷ್ಟೇ. ಅದರಂತೆಯೇ ವಿಶ್ವಮಿಥ್ಯಾತ್ವವು ಸಿದ್ಧಿಸುವುದಿಲ್ಲ ಎಂದು ಅಭಿಪ್ರಾಯ.

**ಉಪಾಸತೇ ತು ಯದಿದಂ ನೇದಂ ಬ್ರಹ್ಮೇತಿ ತು ಶ್ರುತಿಃ ।**
**ಯದುಪಾಸ್ಯಂ ನ ತದ್ ಬ್ರಹ್ಮೇತ್ಯಾಹ ತನ್ನಾಸ್ತಿತಾ ಕುತಃ ॥ ೧೪೪೩ ॥**

**ಅರ್ಥ–** ಆತ್ಮಾವೇತ್ಯೇಕ ವಾಕ್ಯೋಕ್ತೇ= ಆತ್ಮಾವಾರೇ ದ್ರಷ್ಟವ್ಯಃ ಎಂಬ ಒಂದೇ ವಾಕ್ಯದಲ್ಲಿ ಹೇಳಲ್ಪಟ್ಟ, ಜ್ಞಾನೋಪಾಸ್ತೀ= ಜ್ಞಾನ ಮತ್ತು ಉಪಾಸನೆಗಳು, ದ್ವಯೋಃ= ಎರಡು ವಸ್ತುಗಳಿಗೆ, ಕಥಂ= ಹೇಗೆ ಆಗುತ್ತದೆ, ಉಕ್ತಿ ಮಾತ್ರತಃ= ನಿನ್ನ ಕೇವಲ ಒಂದು ಮಾತಿನಿಂದ, ಅನಂತೋಪಾಸ್ತಿವಿಧಯಃ= ಅನಂತವಾದ ಉಪಾಸನಾ ವಿಧಿಗಳು, ನ ಬಾಧ್ಯಂತೇ= ಬಾಧಿಸಲ್ಪಡುವುದಿಲ್ಲ.

**ಅನುವಾದ– ಆತ್ಮಾವಾऽರೇದ್ರಷ್ಟವ್ಯಃ ಎಂಬ ಒಂದೇ ವಾಕ್ಯದಿಂದ ಹೇಳಲ್ಪಟ್ಟ ಜ್ಞಾನ ಮತ್ತು ಉಪಾಸನೆಗಳು ಹೇಗೆ ಭಿನ್ನವಸ್ತುಗಳಿಗೆ ಸಂಬಂಧಿತವಾಗುತ್ತವೆ? ಕೇವಲ ನಿನ್ನ ಮಾತುಗಳಿಂದ ಅನಂತವಾದ ಉಪಾಸನಾವಿಧಿಗಳು ಬಾಧಿತವಾಗುವುದಿಲ್ಲ.**

**ಭಾವವಿಲಾಸಿನೀ–ಆತ್ಮಾವೇತ್ಯನೇನ ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿ-ಧ್ಯಾಸಿತವ್ಯ ಇತಿ ವಾಕ್ಯಂಗೃಹ್ಣಾತಿ । ದ್ರಷ್ಟವ್ಯ ಇತ್ಯಾದಿ ವಿಶೇಷಣಪದಚತುಷ್ಟಯೇಽಪಿ ಆತ್ಮೇತಿ ವಿಶೇಷ್ಯ ಪದಸ್ಯೈವಯೋಜನೀಯತ್ವಾದಿತಿ ಭಾವಃ । ಉಕ್ತಿಮಾತ್ರತಃ ಕೇವಲಂ ತ್ವದ್ವಚನಮಾತ್ರೇಣ । ಶ್ರೌತಾನೇಕವಿಧೀನಾಂ ವಾದಿ ವಾಕ್ಯಮಾತ್ರೇಣ ಬಾಧಾಯೋಗಾದಿತಿ ಭಾವಃ ॥ ೧೪೪೬ ॥**

**ವಿವರಣೆ–** 'ಆತ್ಮಾವಾರೇ ದ್ರಷ್ಟವ್ಯಃ ಶ್ರೋತವ್ಯಃ ಮಂತ್ರವ್ಯಃ ನಿಧಿದ್ಯಾಸಿತವ್ಯಃ' ಎಂಬುದು ಒಂದೇ ವಾಕ್ಯ. ಅಲ್ಲಿ ದ್ರಷ್ಟವ್ಯಃ ಎಂಬ ಪದದಿಂದ ಜ್ಞಾನವನ್ನೂ, ಶ್ರೋತವ್ಯಾದಿ ಮೂರು ಪದಗಳಿಂದ ಉಪಾಸನೆಯನ್ನೂ ಹೇಳಲಾಗಿದೆ. ಶ್ರೋತ್ಯವ್ಯಃ ಮಂತ್ರವ್ಯ ನಿಧಿಧ್ಯಾಸಿತವ್ಯಃ ಎಂಬಲ್ಲಿ ವಿಶೇಷ್ಯ ಪದವಿಲ್ಲ. ಆತ್ಮಾವಾರೇ ದ್ರಷ್ಟವ್ಯಃ ಎಂಬಲ್ಲಿರುವ ಆತ್ಮಪದವನ್ನೇ ಆ ಮೂರು ಕಡೆಗಳಲ್ಲಿಯೂ ಅನುವೃತ್ತಿ ಮಾಡಿಕೊಳ್ಳಬೇಕು. ದ್ರಷ್ಟವ್ಯನಾದವನೂ ಉಪಾಸ್ಯಮಾನವನಾದವನೂ ಒಬ್ಬನೇ ಆತ್ಮನೆಂದು ಸಿದ್ಧವಾಗುತ್ತದೆ. ದರ್ಶನ ವಿಧಿವಿಷಯನಾದವನು ಮಾತ್ರ ಸತ್ಯನಾದ ಆತ್ಮ. ಶ್ರೋತವ್ಯಾದಿ ಉಪಾಸನಾದಿ-ವಿಧಿವಿಷಯನಾದವನು ಸತ್ಯನಾದ ಆತ್ಮನಲ್ಲ ಎಂದು ಹೇಳಿದರೆ ಒಂದೇ ವಾಕ್ಯದಲ್ಲಿರುವ ಆತ್ಮಶಬ್ದಕ್ಕೆ ಎರಡು ಅರ್ಥಗಳನ್ನು ಕಲ್ಪನೆ ಮಾಡಬೇಕಾಗುತ್ತದೆ. ಆಗ ಒಂದು ವಸ್ತುವಿನ ಜ್ಞಾನ, ಇನ್ನೊಂದು ವಸ್ತುವಿನ ಉಪಾಸನೆ ಎಂಬುದು ಅಸಂಗತವಾಗುತ್ತದೆ. ಅದರಂತೆ ಉಪಾಸನಾ ವಿಧಾಯಕ ವಾಕ್ಯಗಳು ಅನಂತವಾಗಿವೆ. ಆ ವಾಕ್ಯಗಳೆಲ್ಲವೂ ನಿನ್ನ ಮಿಥ್ಯಾಭೂತವಾದ ವಿಷಯದ್ದೇ ಎಂಬ ಒಂದು ವಾಕ್ಯದಿಂದ ಬಾಧಿತವಾಗುವುದಿಲ್ಲ ಎಂದು ಅಭಿಪ್ರಾಯ.

**ಅತಃ ಶ್ರುತಿಸ್ಮೃತಿಶತೈರ್ವಿಹಿತೋಪಾಸ್ತಿಗೌರವಾತ್ ।**
**ಅನ್ಯಾರ್ಥಮನುಕೂಲಂ ವಾ ಭಜೇದರ್ಥಮಿಯಂ ಶ್ರುತಿಃ ॥ ೧೪೪೭ ॥**

**ಅರ್ಥ–** ಅತಃ= ಆದ್ದರಿಂದ, ಇಯಂ ಶ್ರುತಿಃ= ನೇದಂ ಯದಿದಂ ಉಪಾಸತೇ ಎಂಬ ಶ್ರುತಿಯು, ಶ್ರುತಿಸ್ಮೃತಿಶತೈಃ= ನೂರಾರು ಶ್ರುತಿಸ್ಮೃತಿಗಳಿಂದ, ವಿಹಿತೋಪಾಸ್ತಿಗೌರವಾತ್=

ವಿಹಿತವಾದ ಉಪಾಸನೆಯ ಬಲದಿಂದ, ಅನುಕೂಲಂ= ಹಿಂದೆ ಹೇಳಿದಂತೆ ಉಪಾಸ್ಯಮಾನವಾದ ವಸ್ತುವಿನ ಸತ್ಯತ್ವಕ್ಕೆ ಅನುಕೂಲವಾದ, ಅರ್ಥಂ= ಅರ್ಥವನ್ನಾಗಲೀ, ಅನ್ಯಾರ್ಥಂ ವಾ= ಅಥವಾ ಇನ್ನೊಂದು ಅರ್ಥವನ್ನಾಗಲೀ, ಭಜೇತ್= ಸ್ವೀಕರಿಸುತ್ತದೆ (ಹೇಳುತ್ತದೆ).

**ಅನುವಾದ–** ಆದ್ದರಿಂದ 'ನೇದಂ ಯದಿದಂ ಉಪಾಸತೇ' ಎಂಬ ಈ ಶ್ರುತಿಯು ಉಪಾಸನೆಯನ್ನು ವಿಧಾನ ಮಾಡುವ ನೂರಾರು ಶ್ರುತಿ-ಸ್ಮೃತಿಗಳ ಬಲದಿಂದ ಉಪಾಸ್ಯಮಾನವಾದ ವಸ್ತುವಿನ ಸತ್ಯತ್ವಕ್ಕೆ ಅನುಕೂಲವಾದ ಅರ್ಥವನ್ನಾಗಲೀ ಅಥವಾ ಅದಕ್ಕೆ ಅವಿರುದ್ಧವಾದ ಇನ್ನೊಂದು ಅರ್ಥವನ್ನಾಗಲೀ ತನ್ನ ಅರ್ಥವಾಗಿ ಸ್ವೀಕರಿಸುತ್ತದೆ.

**ಭಾವವಿಲಾಸಿನೀ–** ಅನ್ಯಾರ್ಥಂ ಉಕ್ತವಿಧಯಾ ಜೀವಬ್ರಹ್ಮಭೇದಾರ್ಥಮ್ । ಅನುಕೂಲಂ ಉಕ್ತವಿಧಯಾ ಉಪಾಸ್ಯಮಾನಸತ್ಯತ್ವಾನುಕೂಲಮರ್ಥಂ ವಾ ॥ ೧೪೪೭ ॥

**ಸಾಕ್ಷಿಸಿದ್ಧಮಿದಂ ಜೀವ ತೇ ರೂಪಂ ಬ್ರಹ್ಮ ನೋಪ ತೇ ।**
**ಯದಾಸ ತತ್ ಪರಂ ಬ್ರಹ್ಮೇತ್ಯಾಹ ಸೇಯಂ ಶ್ರುತಿಃ ಕಿಲ ॥ ೧೪೪೮ ॥**

**ಅರ್ಥ–** ಜೀವ= ಎಲೈ ಜೀವನೇ, ಇದಂ= ಈ ಯಾವ, ತೇ= ನಿನ್ನ, ಸಾಕ್ಷಿಸಿದ್ಧಂ= ಸಾಕ್ಷಿ ಸಿದ್ಧವಾದ, ರೂಪಂ= ರೂಪವು, ನ ಬ್ರಹ್ಮ= ಬ್ರಹ್ಮನಲ್ಲ, ತೇ= ನಿನ್ನ, ಉಪ= ಸಮೀಪದಲ್ಲಿ, ಯತ್= ಯಾವುದು, ಆಸ= ಇದೆಯೋ, ತತ್= ಅದು, ಪರಂ ಬ್ರಹ್ಮ ಇತಿ= ಪರಬ್ರಹ್ಮನೆಂದು, ಸೇಯಂ ಶ್ರುತಿಃ= ಅಂತಹ ಈ ಶ್ರುತಿಯು, ಆಹ ಕಿಲ= ಹೇಳಿದೆಯಷ್ಟೇ.

**ಅನುವಾದ–** ಎಲೈ ಜೀವನೇ! ಸಾಕ್ಷಿಸಿದ್ಧವಾದ ಈ ನಿನ್ನ ಸ್ವರೂಪವೇನಿದೆಯೋ ಅದು ಬ್ರಹ್ಮನಲ್ಲ. ಆದರೆ ನಿನ್ನ ಸಮೀಪದಲ್ಲಿ ಯಾವುದು ಇದೆಯೋ ಅದು ಪರಬ್ರಹ್ಮನೆಂದು ಈ ಶ್ರುತಿಯು ಹೇಳುತ್ತದೆ.

**ಭಾವವಿಲಾಸಿನೀ–** ಶ್ರುತೇರರ್ಥಾಂತರಂ ಚಾಹ – **ಸಾಕ್ಷೀತಿ** ॥ ಹೇ ಜೀವ ಸಾಕ್ಷಿಸಿದ್ಧಂ ಇದಂ ತೇ ರೂಪಂ ಬ್ರಹ್ಮ ನ । ಕಿಂತು ತೇ ಉಪ ಸಮೀಪೇ ವ್ಯಾಪ್ತತಯಾ ತ್ವದ್ವುದಿತವ ಪರಿತಶ್ಚ ಯ ಆಸ ತತ್ಪರಂ ಬ್ರಹ್ಮೇತಿ ಶ್ರುತಿರಾಹೇತಿ ಸಂಬಂಧಃ । ಕಿಲೇತ್ಯನೇನಾಸ್ಮಿನ್ನರ್ಥೇ ಉಪನಿಷದ್ಭಾಷ್ಯಸಮ್ಮತಿಂ ಸೂಚಯತಿ ॥ ೧೪೪೮ ॥

**ವಿವರಣೆ–** 'ನೇದಂ ಯದಿದಂ ಉಪಾಸತೇ' ಎಂಬ ತಲವಕಾರ ವಾಕ್ಯಕ್ಕೆ ವಿಚಿತ್ರವಾದ ಮತ್ತು ಚಮತ್ಕಾರಪೂರ್ಣವಾದ ಅರ್ಥವನ್ನು ಮಾಡಿ ಜೀವ ಬ್ರಹ್ಮ ಭೇದವನ್ನು ಇಲ್ಲಿ ಸ್ಥಾಪಿಸುತ್ತಾರೆ. 'ನೇದಂ ಯದಿದಂ ಉಪಾಸತೇ' ಎಂಬಲ್ಲಿ- ನ ಇದಂ ಯತ್ ಇದಂ ಉಪ ಆಸ ತೇ - ಈ ರೀತಿ ಪದಚ್ಛೇದ. ಸಯುಜೌ, ಸಖಾಯೌ ಎಂದು ಹೇಳಿ ನಿನ್ನ

ಇನ್ನೊಂದು ಕಡೆಯಲ್ಲಿಯೂ ಎಂಬ ನ್ಯಾಯದಿಂದ ಸಕಲ ಜೀವರ ದೇಹದಲ್ಲಿಯೂ ಅಶಕ್ತವಾದ ಜೀವ ಚೈತನ್ಯವಿದೆ ಎಂದು ಈ ತಲವಕಾರ ಉಪನಿಷತ್ತಿನ ಬಲದಿಂದಲೇ ಸಿದ್ಧವಾಗುತ್ತದೆ. ಆ ದೇವತೆಗಳು ಪುನಃ ಪಾರ್ವತಿಯ ಉಪದೇಶದಿಂದ ಸರ್ವಶಕ್ತನಾದ ತಮ್ಮ ಹೃದಯದಲ್ಲಿ ಆವಿಷ್ಟನಾದ ಈಶ್ವರಚೈತನ್ಯವನ್ನು ತಿಳಿದರು. ಕೃಷ್ಣರಾಮಾದಿ ರೂಪಗಳಂತೆ ದೇವಾಸುರರ ಯುದ್ಧದಲ್ಲಿ ಹೊರಗಿನ ರೂಪಗಳಿಂದ ಭಗವಂತನು ಯುದ್ಧವನ್ನು ಮಾಡಿದುದು ಶ್ರುತವಲ್ಲವಾದುದರಿಂದ ಅಶಕ್ತರಾದ ತಮ್ಮ ಹೃದಯದಲ್ಲಿಯೇ ಅಂತರ್ಯಾಮಿಯಾಗಿ ಸರ್ವಶಕ್ತನಾದ ಭಗವಂತನು ಯುದ್ಧವನ್ನು ಮಾಡಿದನು, ಈ ಜಯವು ಅವನದೇ ಜಯ ಎಂಬ ಜ್ಞಾನವು ಅವರಿಗೆ ಪಾರ್ವತಿಯ ಉಪದೇಶದಿಂದ ಉಂಟಾಯಿತು. ಆದ್ದರಿಂದ ತಮ್ಮ ಹೃದಯದಲ್ಲಿ ಅಶಕ್ತವಾದ ತಮ್ಮ ಚೈತನ್ಯವೂ ಸುಶಕ್ತವಾದ ಈಶ್ವರ ಚೈತನ್ಯವೂ ಇದೆ ಎಂದು ಅವರು ತಿಳಿದರು. ಹೀಗೆ ದೇವತೆಗಳ ಹೃದಯದಲ್ಲಿಯೇ ಅತ್ಯಂತ ವಿಲಕ್ಷಣವಾದ ಚೈತನ್ಯದ್ವಯವು ಇರುವಾಗ ಮನುಷ್ಯ ಹೃದಯದಲ್ಲಿ ಚೈತನ್ಯದ್ವಯವಿದೆ ಎಂದು ಪ್ರತ್ಯೇಕವಾಗಿ ಹೇಳಬೇಕಾದ ಆವಶ್ಯಕತೆ ಇಲ್ಲ. ಆದ್ದರಿಂದ ನಿನ್ನ ಸಾಕ್ಷಿಸಿದ್ಧವಾದ ರೂಪವು ಬ್ರಹ್ಮನಲ್ಲ. ನಿನ್ನ ಸಮೀಪದಲ್ಲಿ ಎಂದರೆ ಅಂತರ್ಯಾಮಿಯಾಗಿ ಮತ್ತು ಸುತ್ತಲೂ ವ್ಯಾಪ್ತನಾಗಿ ಇರುವವನು ಮಾತ್ರ ಬ್ರಹ್ಮ ಎಂಬ ಅರ್ಥವು ಅತ್ಯಂತ ಉಪಪನ್ನವಾಗುತ್ತದೆ ಎಂದು ಅಭಿಪ್ರಾಯ.

**ವಿರುದ್ಧಾರ್ಥಕ್ರಿಯಾಕಾರಿ ವೈಲಕ್ಷಣ್ಯಮಿದಂ ತಯೋಃ ।**
**ಕಥಂ ಹ್ಯುಪಾಸ್ತ್ಯಾ ಮಿಥ್ಯಾ ಸ್ಯಾತ್ ಕಿಮುಪಾಸ್ತಿರ್ವಿಷಾಂಕುರಃ ॥ ೧೪೫೨ ॥**

**ಅರ್ಥ–** ತಯೋಃ= ಆ ಜೀವೇಶ್ವರರ, ಇದಂ= ಈ ಯಾವ, ವಿರುದ್ಧಾರ್ಥಕ್ರಿಯಾಕಾರಿ= ವಿರುದ್ಧವಾದ ಕ್ರಿಯೆಗಳಿಗೆ ಕಾರಣವಾದ, ವೈಲಕ್ಷಣ್ಯಂ= ವೈಲಕ್ಷಣ್ಯವು, ಉಪಾಸ್ತ್ಯಾ= ಕೇವಲ ಉಪಾಸನೆಯಿಂದ, ಕಥಂ= ಹೇಗಾದರೂ ತಾನೇ, ಮಿಥ್ಯಾ ಸ್ಯಾತ್ ಹಿ= ಮಿಥ್ಯೆಯಾದೀತು?, ಉಪಾಸ್ತಿಃ= ಉಪಾಸನೆಯು, ವಿಷಾಂಕುರಃ ಕಿಂ= ವಿಷಾಂಕುರವೇನು?

**ಅನುವಾದ–** ವಿರುದ್ಧಾರ್ಥ ಕ್ರಿಯಾಕಾರಿಯಾದ ಜೀವೇಶ್ವರರ ಈ ವೈಲಕ್ಷಣ್ಯವು ಉಪಾಸನೆಯಿಂದ ಹೇಗೆ ಮಿಥ್ಯಾಭೂತವಾದುದಾಗುತ್ತದೆ? ಉಪಾಸನೆಯು ವಿಷಾಂಕುರವೇನು?

**ಭಾವವಿಲಾಸಿನೀ–** ವಿರುದ್ಧಾರ್ಥಕ್ರಿಯಾಕಾರಿ ಶಕ್ತತ್ವಾಶಕ್ತತ್ವಾಖ್ಯವಿರುದ್ಧಕ್ರಿಯಾಕಾರಿ । ವೈಲಕ್ಷಣ್ಯಂ ಭೇದಃ । ಉಪಾಸ್ತ್ಯೇತಿ ಮಿಥ್ಯಾತ್ವೇ ಉಪಾಸ್ತಿಮೇವ ಹೇತುಂ ಕುರ್ವತಾಂ ಶ್ರುತಿಯುಕ್ತ್ಯಾದಿಕಂ ನಾಸ್ತೀತಿ ಸೂಚಿತಮ್। ಮಾಸ್ತು ಪ್ರಮಾಣಂ ಉಪಾಸ್ತಿಶಕ್ತ್ಯೈವ ಮಿಥ್ಯಾತ್ವಮಸ್ತ್ವಿತ್ಯಾಶಂಕಾಂ ಸೋಪಹಾಸಂ ಪರಿಹರತಿ ॥ ಕಿಮಿತಿ ॥ ೧೪೫೨ ॥

**ವಿವರಣೆ–** ಜೀವೇಶ್ವರರಲ್ಲಿರುವ ಈ ಭೇದವು ಶಕ್ತತ್ವ ಮತ್ತು ಅಶಕ್ತತ್ವ ರೂಪವಾದ ವಿರುದ್ಧ ಕ್ರಿಯೆಗಳನ್ನು ಸಂಘಟಿಸುತ್ತದೆ. ಶ್ರುತಿ-ಸ್ಮೃತಿಗಳಲ್ಲಿ ಮಿಥ್ಯಾತ್ವವನ್ನು

ಹೇಳಿರುವುದರಿಂದ ಉಪಾಸನೆ ವಿಷಯವು ಮಿಥ್ಯಾಭೂತವಾದುದು ಎಂಬ ಆಕ್ಷೇಪಕ್ಕೆ ಯಾವ ಶ್ರುತಿ-ಸ್ಮೃತಿಗಳೂ ಮಿಥ್ಯಾಭೂತವಸ್ತುವಿನ ಉಪಾಸನೆಯನ್ನು ಕೇಳುವುದಿಲ್ಲ ಎಂದು ಉತ್ತರವನ್ನು ಕೊಟ್ಟಿದ್ದಾಯಿತು. ಶ್ರುತಿ-ಸ್ಮೃತಿಗಳಿಲ್ಲದಿದ್ದರೂ ಉಪಾಸನೆಯ ಬಲದಿಂದಲೇ ಉಪಾಸ್ಯಮಾನವಾದ ವಸ್ತುವು ಮಿಥ್ಯಾಭೂತವಾಗುತ್ತದೆ ಎಂದು ಹೇಳಿದರೆ ಉಪಾಸನೆ ಎಂಬುದು ತನಗೆ ಸಂಬಂಧಿಸಿದ ವಸ್ತುವನ್ನು ನಾಶಮಾಡುವ ಒಂದು ವಿಷಾಂಕುರವೇನು ಎಂದು ಅಪಹಾಸ ಮಾಡುತ್ತಾರೆ.

**ಯಥಾಯಥಾ ಜ್ಞಾನಿನಸ್ತಮಧೀಶ್ವರಮುಪಾಸತೇ ।**
**ವಸ್ತುಸ್ಥಿತ್ಯಾ ತಥೈವಾಸೌ ಭವತೀಶೋ ನ ಚಾನ್ಯಥಾ ॥ ೧೪೫೩ ॥**

**ಇತ್ಯೇಕವಚನಾಂತಸ್ಯ ಭವತೀತ್ಯಸ್ಯ ಸತ್ತ್ವತಃ ।**
**ಅರ್ಥೋಽಯಮಪಿ ಚ ಶ್ರೌತೋ ಮಿಥ್ಯೋಪಾಸ್ತಿಸ್ತತೋಽಪಿ ನ॥ ೧೪೫೪ ॥**

**ಅರ್ಥ–** ಯಥಾಯಥಾ= ಹೇಗೆ ಹೇಗೆ, ಜ್ಞಾನಿನಃ= ಜ್ಞಾನಿಗಳು, ತಂ ಅಧೀಶ್ವರಂ= ಆ ಅಧೀಶ್ವರನನ್ನು, ಉಪಾಸತೇ= ಉಪಾಸನೆ ಮಾಡುತ್ತಾರೋ, ಅಸೌ ಈಶಃ= ಆ ಈಶ್ವರನು, ವಸ್ತುಸ್ಥಿತ್ಯಾ= ವಾಸ್ತವವಾಗಿ, ತಥೈವ= ಹಾಗೆಯೇ, ಭವತಿ= ಇರುತ್ತಾನೆ, ಚ= ಮತ್ತು, ಅನ್ಯಥಾ ನ= ಬೇರೆ ರೀತಿಯಾಗಿ ಇರುವುದಿಲ್ಲ, ಇತಿ= ಎಂಬುದಾಗಿ, ಏಕವಚನಾಂತಸ್ಯ= ಏಕ-ವಚನಾಂತವಾದ, ಭವತೀತ್ಯಸ್ಯ= ಭವತಿ ಎಂಬ ಕ್ರಿಯಾಪದವು, ಸತ್ತ್ವತಃ= ಇರುವು ದರಿಂದಲೂ, ಅಯಮಪಿ ಚ= ಇದೂ ಸಹ, ಶ್ರೌತಃ ಅರ್ಥಃ= ಶ್ರುತಿಯ ಅರ್ಥವೇ ಆಗಿದೆ, ತತೋಽಪಿ= ಆ ಕಾರಣದಿಂದಲೂ, ಮಿಥ್ಯೋಪಾಸ್ತಿ= ಮಿಥ್ಯೋಪಾಸನೆಯು, ನ= ಇಲ್ಲ.

**ಅನುವಾದ–** ಜ್ಞಾನಿಗಳು ಹೇಗೆ ಹೇಗೆ ಅಧೀಶ್ವರನಾದ ಅವನನ್ನು ಉಪಾಸನೆ ಮಾಡುತ್ತಾರೋ ಆ ಈಶ್ವರನು ವಾಸ್ತವವಾಗಿ ಹಾಗೆಯೇ ಇರುತ್ತಾನೆ. ಬೇರೆ ರೀತಿಯಲ್ಲಿ ಇರುವುದಿಲ್ಲ ಎಂಬುದಾಗಿ ಏಕವಚನಾಂತವಾದ ಭವತಿ ಎಂಬ ಕ್ರಿಯಾಪದದ ಬಲದಿಂದ ಶ್ರುತಿಗೆ ಅರ್ಥವನ್ನು ಮಾಡಬಹುದು. ಆ ಕಾರಣದಿಂದಲೂ ಮಿಥ್ಯೋಪಾಸನೆಯು ಇಲ್ಲವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅಧುನಾ ತಂ ಯಥಾ ಯಥೋಪಾಸತ ಇತಿ ಶ್ರುತೇಃ ಸಯುಕ್ತಿಕಮ-ರ್ಥಾಂತರಂ ವದನ್ಸಾಕ್ಷಾದುಪಾಸ್ಯಸ್ಯೈವ ಸತ್ಯತ್ವಂ ಸ್ಥಿರೀಕರೋತಿ ॥ **ಯಥಾಯಥೇತಿ** ॥ ಉಪಾಸತ ಇತಿ ಬಹುವಚನಬಲಾತ್ ಜ್ಞಾನಿನ ಇತ್ಯುಕ್ತಮ್ । ಸ ಇತ್ಯಸ್ಯಾರ್ಥಕಥನಂ ಅಸಾವೀಶ್ವರ ಇತಿ । ಏವಕಾರಸ್ಯಾರ್ಥಕಥನಂ ನ ಚಾನ್ಯಥೇತಿ ॥ ೧೪೫೩-೧೪೫೪ ॥

**ವಿವರಣೆ–** ಈಗ 'ತಂಯಥಾಯಥೋಪಾಸತೇ' ಎಂಬ ಶ್ರುತಿಗೆ ಅರ್ಥಾಂತರವನ್ನು ಹೇಳಿ ಈ ಶ್ರುತಿಯಿಂದಲೇ ಉಪಾಸ್ಯ ವಸ್ತುವಿನ ಸತ್ಯತ್ವವು ಸಿದ್ಧವಾಗುತ್ತದೆ ಎಂದು

**ಅರ್ಥ–** ಧ್ಯಾನಾಯ= ಧ್ಯಾನಕ್ಕೋಸ್ಕರವಾಗಿ, ಮನನಂ= ಮನನವು, ತಸ್ಮೈ= ಮನನಕ್ಕೋಸ್ಕರವಾಗಿ, ಶ್ರವಣಂ= ಶ್ರವಣವು, ದರ್ಶನಾಯ= ದರ್ಶನಕ್ಕೋಸ್ಕರವಾಗಿ, ತತ್= ಶ್ರವಣವು, ಇತಿ= ಎಂದು, ತೇಪಿ ಮತಂ= ನಿನ್ನ ಮತವೂ ಕೂಡ ಇದೆ, ತಸ್ಮಾತ್= ಆ ಕಾರಣದಿಂದ, ದೃಷ್ಟಿ ಧ್ಯಾನೇ= ದರ್ಶನ ಮತ್ತು ಧ್ಯಾನಗಳು, ಭಿನ್ನಯೋಃ ನ= ಭಿನ್ನ ವಿಷಯಕಗಳಲ್ಲ.

**ಅನುವಾದ–** ಧ್ಯಾನಕ್ಕೋಸ್ಕರವಾಗಿ ಮನನ, ಮನನಕ್ಕೋಸ್ಕರವಾಗಿ ಶ್ರವಣ ಮತ್ತು ದರ್ಶನಕ್ಕೋಸ್ಕರವಾಗಿ ಶ್ರವಣ ಎಂದು ನಿನ್ನ ಮತವೂ ಇದೆ. ಆದ್ದರಿಂದ ದರ್ಶನ ಮತ್ತು ಧ್ಯಾನಗಳು ಭಿನ್ನ ವಸ್ತುಗಳ ವಿಷಯಕವಾಗಿರುವುದಿಲ್ಲ.

**ಭಾವವಿಲಾಸಿನೀ–** ಶ್ರವಣಮನನನಿದಿಧ್ಯಾಸನಾಪರೋಕ್ಷಜ್ಞಾನಾನಾಂ ತ್ವಯಾಪ್ಯೇಕವಿಷಯತ್ವಾಂಗೀಕಾರಾದಪಸಿದ್ಧಾಂತಶ್ಚೇತ್ಯಾಹ– **ಧ್ಯಾನಾಯೇತಿ ॥** ತಸ್ಮೈ ಮನನಾಯ । ತತ್ ಶ್ರವಣಮ್ ॥ ೧೪೫ ॥

**ವಿವರಣೆ–** 'ಆತ್ಮಾವಾ ಅರೇ ದ್ರಷ್ಟವ್ಯಃ' ಎಂಬ ಶ್ರುತಿಯು ಹೇಳಿದ ಶ್ರವಣ, ಮನನ, ನಿದಿಧ್ಯಾಸನ ಸಾಕ್ಷಾತ್ಕಾರಗಳಿಗೆ ಕಾರ್ಯಕಾರಣಭಾವವು ಇರುವುದರಿಂದ ಅವು ಭಿನ್ನ ವಿಷಯಕವಾದರೆ ಕಾರ್ಯಕಾರಣಭಾವವು ಉಪಪನ್ನವಾಗದಿರುವುದರಿಂದ ನೀನೂ ಸಹ ಶ್ರವಣ ಮತ್ತು ಧ್ಯಾನಗಳನ್ನು ಸಮಾನ ವಿಷಯಕ ಎಂದೇ ಒಪ್ಪಬೇಕು ಎಂದು ಅಭಿಪ್ರಾಯ.

**ನ ಚೇತ್ ತವಾಶ್ರುತಧ್ಯಾನಮಶ್ರುತೇಕ್ಷಣಮೇವ ವಾ ।**
**ಆಪತೇತ ದ್ವಯಂ ಚಾಪಿ ನ ಯುಕ್ತಂ ನಾಪಿ ತೇ ಮತಂ ॥ ೧೪೬ ॥**

**ಅರ್ಥ–** ನ ಚೇತ್= ಧ್ಯಾನ ಮತ್ತು ಅಪರೋಕ್ಷಗಳ ಜ್ಞಾನವು ಭಿನ್ನವಿಷಯಕವಾದರೆ, ಅಶ್ರುತ ಧ್ಯಾನಂ= ಶ್ರವಣ ಮಾಡದ ವಸ್ತುವಿನ ಧ್ಯಾನವು, ವಾ= ಮತ್ತು, ಅಶ್ರುತೇಕ್ಷಣಮೇವ= ಶ್ರವಣ ಮಾಡದಿದ್ದ ವಸ್ತುವಿನ ಸಾಕ್ಷಾತ್ಕಾರವು, ಆಪತೇತ= ಉಂಟಾಗುವ ಪ್ರಸಂಗವು ಬರುತ್ತದೆ, ದ್ವಯಂ ಚಾಪಿ= ಈ ಎರಡೂ ಸಹ, ನ ಯುಕ್ತಂ= ಯುಕ್ತವಲ್ಲ, ಅಪಿ= ಮತ್ತು, ತೇ ಮತಂ ನ= ನಿನ್ನ ಮತವೂ ಅಲ್ಲ.

**ಅನುವಾದ–** ಧ್ಯಾನ ಮತ್ತು ಅಪರೋಕ್ಷಗಳು ಭಿನ್ನವಿಷಯಕವಾದರೆ ಅಶ್ರುತವಾದ ವಸ್ತುವಿನ ಧ್ಯಾನವನ್ನು ಮತ್ತು ಅಶ್ರುತವಾದ ವಸ್ತುವಿನ ದರ್ಶನವನ್ನು ಅಂಗೀಕರಿಸಬೇಕಾದ ಪ್ರಸಂಗವು ಬರುತ್ತದೆ. ಇವೆರಡೂ ಯುಕ್ತವೂ ಅಲ್ಲ ಮತ್ತು ನಿನ್ನ ಮತವೂ ಅಲ್ಲ.

**ಭಾವವಿಲಾಸಿನೀ–** ನಚೇತ್ ಧ್ಯಾನಾಪರೋಕ್ಷಜ್ಞಾನೇ ಏಕಸ್ಯ ನಚೇತ್ । ಶ್ರವಣದರ್ಶನಯೋರೇಕವಿಷಯತ್ವೇ (ಭಿನ್ನವಿಷಯತ್ವೇ ?) ಅಶ್ರುತಸ್ಯ ಧ್ಯಾನಮ್ । ಸತ್ಯಾರ್ಥದರ್ಶನಾನು-

**ಗುಣಸತ್ಯಾರ್ಥಶ್ರವಣಸ್ಯಾ ಸತ್ಯಾರ್ಥಧ್ಯಾನಾನನುಗುಣತ್ವಾತ್ । ಏವಮೇವ ಶ್ರವಣಧ್ಯಾನಯೋ-ರೇಕ ವಿಷಯತ್ವೇ (ಭಿನ್ನವಿಷಯತ್ವೇ) ಅಶ್ರುತಸ್ಯೇಕ್ಷಣಮಿತಿ ಭಾವಃ ॥ ೧೪೫೯ ॥**

**ವಿವರಣೆ–** ಶ್ರವಣಾದಿಚತುಷ್ಟಯಕ್ಕೆ ಸಮಾನವಿಷಯಕತ್ವವನ್ನು ಒಪ್ಪದಿದ್ದರೆ ಇಂತಹ ಅನಿಷ್ಟ ಪ್ರಸಂಗವು ಬರುವುದರಿಂದ ಶ್ರುತಿಯಲ್ಲಿ ಸೂಚಿಸಿದ ಕಾರ್ಯಕಾರಣಭಾವವೇ ಅನುಪಪನ್ನವಾಗುತ್ತದೆ ಎಂದು ಅಭಿಪ್ರಾಯ.

**ಶ್ರವಣಂ ಕರಣಂ ತತ್ವಸಾಕ್ಷಾತ್ಕಾರಶ್ಚ ತತ್ಫಲಮ್ ।**
**ಶ್ರವಣಾದೇವ ಚ ಧ್ಯಾನಂ ತತ್ರಾನ್ಯೋಽರ್ಥಃ ಕುತೋಽಪತತ್ ॥ ೧೪೬೦ ॥**

**ಅರ್ಥ–** ಶ್ರವಣಂ= ಶ್ರವಣವು, ಕರಣಂ= ಕರಣವಾದುದು, ತತ್ವಸಾಕ್ಷಾತ್ಕಾರಶ್ಚ= ತತ್ವಸಾಕ್ಷಾತ್ಕಾರವಾದರೂ, ತತ್ಫಲಂ= ಶ್ರವಣದ ಫಲವಾಗಿದೆ, ಶ್ರವಣಾದೇವ= ಶ್ರವಣ ರೂಪ ಕಾರಣದಿಂದಲೇ, ಧ್ಯಾನಂ ಚ= ಧ್ಯಾನವೂ ಉಂಟಾಗುತ್ತದೆ, ತತ್ರ= ಆ ಧ್ಯಾನದಲ್ಲಿ, ಅನ್ಯೋರ್ಥಃ= ಭಿನ್ನವಾದ ವಿಷಯವು, ಕುತಃ ಆಪತತ್= ಎಲ್ಲಿಂದ ಬಂದಿತು?

**ಅನುವಾದ–** ಶ್ರವಣವು ಕರಣ. ತತ್ತ್ವಸಾಕ್ಷಾತ್ಕಾರವು ಅದರ ಫಲ. ಶ್ರವಣವು ಧ್ಯಾನವನ್ನೂ ಕುರಿತು ಕಾರಣ. ಹೀಗಿರುವಾಗ ಧ್ಯಾನದಲ್ಲಿ ಭಿನ್ನವಾದ ವಿಷಯವು ಎಲ್ಲಿಂದ ಬಂದಿತು?

**ಭಾವವಿಲಾಸಿನೀ–** ತತ್ರ ಧ್ಯಾನೇ ॥ ೧೪೬೦ ॥

**ವಿವರಣೆ–** ಶ್ರವಣವು ಕರಣ ಎಂದರೆ ಶ್ರವಣವು ಧ್ಯಾನದ್ವಾರಾ ಅಪರೋಕ್ಷಜ್ಞಾನವನ್ನು ಹುಟ್ಟಿಸುತ್ತದೆ ಎಂದು ಅರ್ಥ. ಧ್ಯಾನವು ಕರಣಕ್ಕೆ ಬೇಕಾದ ಅವಾಂತರ ವ್ಯಾಪಾರ. ಶ್ರವಣಧ್ಯಾನಗಳಿಗೆ ಸಮಾನ ವಿಷಯತ್ವವನ್ನು ಅಂಗೀಕರಿಸಿದರೆ ಮಾತ್ರ ಶ್ರವಣವು ಕರಣವಾಗುತ್ತದೆ. ಹೀಗಿರುವಾಗ ಶ್ರವಣದಲ್ಲಿ ತೋರದಿದ್ದ ವಿಷಯವು ಧ್ಯಾನದಲ್ಲಿ ವಿಷಯವಾಗಿರಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಕಿಂ ಚಾಸಂಭಾವನೋಚ್ಛಿತ್ತ್ಯೈ ಮನನಂ ಕಿಲ ತೇ ಮತೇ ।**
**ಧ್ಯಾನಂ ಚ ವಿಪರೀತಾರ್ಥಭಾವನೋಚ್ಛಿತ್ತಯೇ ಕಿಲ ॥ ೧೪೬೧ ॥**

**ತದ್ಧ್ಯಾನಂ ವಿಪರೀತಾರ್ಥವಿಷಯಂ ಚೇತ್ ಕಥಂ ತತಃ ।**
**ವಿಪರೀತಾರ್ಥವಿಷಯಭಾವನೋಚ್ಛಿದ್ಯತೇ ವದ ॥ ೧೪೬೨ ॥**

**ಅರ್ಥ–** ಕಿಂಚ= ಮತ್ತು, ತೇ ಮತೇ= ನಿನ್ನ ಮತದಲ್ಲಿ, ಮನನಂ= ಮನನವು, ಅಸಂಭಾವನೋಚ್ಛಿತ್ತ್ಯೈ ಕಿಲ= ಅಸಂಭಾವನಾ ಶಂಕೆಯನ್ನು ನಿವಾರಿಸುವುದಕ್ಕಾಗಿ ಇದೆಯಷ್ಟೇ, ಧ್ಯಾನಂ ಚ= ಧ್ಯಾನವಾದರೂ, ವಿಪರೀತಾರ್ಥಭಾವನೋಚ್ಛಿತ್ತಯೇ= ವಿಪರೀತ

ಭಾವನೆಯ ನಾಶಕ್ಕಾಗಿ, ಕಿಲ= ಇದೆಯಷ್ಟೇ, ತತ್= ಆದ್ದರಿಂದ, ಧ್ಯಾನಂ= ಧ್ಯಾನವು, ವಿಪರೀತಾರ್ಥವಿಷಯಂ ಚೇತ್= ವಿಪರೀತಾರ್ಥ ವಿಷಯವಾದರೆ, ತತಃ= ಆ ಧ್ಯಾನದಿಂದ, ಕಥಂ= ಹೇಗೆ, ವಿಪರೀತಾರ್ಥವಿಷಯಭಾವನಾ= ವಿಪರೀತಾರ್ಥ ವಿಷಯಕವಾದ ಭಾವನೆಯು, ಉಚ್ಛಿದ್ಯತೇ= ನಾಶವನ್ನು ಹೊಂದುತ್ತದೆ, ವದ= ಹೇಳು.

**ಅನುವಾದ–** ಮತ್ತು ನಿನ್ನ ಮತದಲ್ಲಿ ಮನನವು ಅಸಂಭಾವನಾ ಸಂಸ್ಕಾರವನ್ನು ನಿವೃತ್ತಿ ಮಾಡಲು ಮತ್ತು ಧ್ಯಾನವು ವಿಪರೀತಭಾವನೆಯನ್ನು ನಾಶಮಾಡಲು ಇವೆಯಷ್ಟೇ. ಆದ್ದರಿಂದ ವಿಪರೀತ ವಿಷಯಕ ಧ್ಯಾನವನ್ನು ಅಂಗೀಕರಿಸಿದರೆ ಅದರಿಂದ ವಿಪರೀತಾರ್ಥ ವಿಷಯವಾದ ಭಾವನೆಯ ನಾಶವನ್ನು ಹೇಗೆ ಹೊಂದಲು ಸಾಧ್ಯ ಎಂದು ಹೇಳು.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪ್ಯಪಸಿದ್ಧಾಂತಮಾಹ – **ಕಿಂಚೇತಿ** ॥ ೧೪೬೧-೧೪೬೨ ॥

**ವಿವರಣೆ–** ವಿಪರೀತ ಭಾವನೆಯನ್ನು ನಿವಾರಿಸಬೇಕಾದ ಧ್ಯಾನವು ತಾನೇ ವಿಪರೀತ ಭಾವನೆಯಾದರೆ ಅದು ಎಂದೂ ವಿಪರೀತ ಭಾವನೆಯನ್ನು ನಿವಾರಿಸಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

ನ ಚೇದುನ್ಮತ್ತವಾರ್ತಾ ಸ್ಯಾಚ್ಛಾಸ್ತ್ರವಾರ್ತಾ ತವಾಖಿಲಾ ॥ ೧೪೬೩ ॥

**ಅರ್ಥ–** ನ ಚೇತ್= ಹಾಗಿಲ್ಲದಿದ್ದರೆ, ತವ= ನಿನ್ನ, ಅಖಿಲಾ= ಸಮಗ್ರವಾದ, ಶಾಸ್ತ್ರವಾರ್ತಾ= ಶಾಸ್ತ್ರವಾರ್ತೆಯು, ಉನ್ಮತ್ತವಾರ್ತಾ ಸ್ಯಾತ್= ಉನ್ಮತ್ತವಾರ್ತೆಯಾದೀತು.

**ಅನುವಾದ–** ಸತ್ಯವಸ್ತುವಿನ ಉಪಾಸನೆಯನ್ನು ಒಪ್ಪದಿದ್ದರೆ ನಿನ್ನ ಸಮಗ್ರವಾದ ಶಾಸ್ತ್ರವು ಪೂರ್ವೋತ್ತರ ವಿರುದ್ಧವಾದುದರಿಂದ ಉನ್ಮತ್ತವಾರ್ತೆಯಾದೀತು.

**ಭಾವವಿಲಾಸಿನೀ–** ನಚೇತ್ ಸತ್ಯಸ್ಯೋಪಾಸನಂ ನಚೇತ್ । ಪೂರ್ವೋತ್ತರವಿರುದ್ಧಭಾಷಿತ್ವಾದಿತಿ ಭಾವಃ। ಏತದೇವಾಭಿಪ್ರೇತ್ಯ ಪ್ರಾಗಸ್ಮಾಭಿಃ ಸಂಗತಿಕಾಲೇ ಕಥಿತಮ್ ॥ ೧೪೬೩ ॥

ತನ್ನಿರ್ಗುಣಾರ್ಥಶ್ರವಣೇ ಧ್ಯಾನಂ ನಿರ್ಗುಣಗೋಚರಂ ।
ತ್ವಯಾಪಿ ಸರ್ವಥಾ ವಾಚ್ಯಂ ನ ಚೇದಂಗಾಂಗಿತ್ವೈವ ನ ॥ ೧೪೬೪ ॥

**ಅರ್ಥ–** ತತ್= ಆದ್ದರಿಂದ, ನಿರ್ಗುಣಾರ್ಥಶ್ರವಣೇ= ನಿರ್ಗುಣ ವಸ್ತುವನ್ನು ಶ್ರವಣ ಮಾಡಿದರೆ, ನಿರ್ಗುಣ ಗೋಚರಂ= ನಿರ್ಗುಣ ವಿಷಯಕವಾದ, ಧ್ಯಾನಂ= ಧ್ಯಾನವು, ತ್ವಯಾಪಿ= ನಿನ್ನಿಂದಲೂ ಕೂಡ, ಸರ್ವಥಾ= ಎಲ್ಲಾ ರೀತಿಯಿಂದಲೂ, ವಾಚ್ಯಂ= ಹೇಳಲ್ಪಡಬೇಕು, ನ ಚೇತ್= ಇಲ್ಲದಿದ್ದರೆ, ಅಂಗಾಂಗಿತ್ವೈವ= ಅಂಗಾಂಗಿ ಭಾವವೇ, ನ= ಇರುವುದಿಲ್ಲ.

**ಅನುವಾದ–** ಆದ್ದರಿಂದ ನೀನೂ ಸಹ ನಿರ್ಗುಣವಸ್ತು ಶ್ರವಣದಿಂದ ನಿರ್ಗುಣ ವಸ್ತುವಿನ ಧ್ಯಾನವನ್ನೇ ಎಲ್ಲಾ ರೀತಿಯಲ್ಲಿಯೂ ಅಂಗೀಕರಿಸಬೇಕು. ಇಲ್ಲದಿದ್ದರೆ ಶ್ರವಣ ಮತ್ತು ಧ್ಯಾನಗಳಿಗೆ ಅಂಗಾಂಗಿ ಭಾವವೇ ಇರುವುದಿಲ್ಲ.

**ಭಾವವಿಲಾಸಿನೀ–** ತತ್ ಸ್ವಗ್ರಂಥ ಏವೋಕ್ತತ್ವಾತ್ ದೂಷಣಾಂತರಂ ಚಾಹ – ನಚೇದಿತಿ ॥ ನಚೇತ್ ಧ್ಯಾನಶ್ರವಣಯೋರೇಕವಿಷಯತಾ ನಚೇತ್ । ಅಂಗಾಂಗಿತಾ । ಧ್ಯಾನಸ್ಯಾಂಗಿತಾ ಶ್ರವಣಸ್ಯಾಂಗತೇತ್ಯರ್ಥಃ ॥ ೧೪೬೪ ॥

**ವಿವರಣೆ–** ಅಂಗಾಂಗಿ ಭಾವವನ್ನು ಅದ್ವೈತಿಗಳು ಒಪ್ಪಿದ್ದಾರೆ. ಭಿನ್ನ ವಿಷಯಕವಾದರೆ ಅಂಗಾಂಗಿಭಾವವು ಕೂಡುವುದಿಲ್ಲ. ಆದ್ದರಿಂದ ಹಿಂದೆ ಹೇಳಿದ ಯುಕ್ತಿಯಿಂದ ಸಮಾನ ವಿಷಯಕವಾಗಬೇಕು ಮತ್ತು ಸತ್ಯವಿಷಯಕವಾಗಬೇಕು ಎಂದೇ ಸಿದ್ಧವಾಗುತ್ತದೆ.

**ಯತಃ ಫಲೈಕ್ಯೇ ಸತಿ ಸಾ ಬೋದ್ಧ್ಯೈಕ್ಯೇ ಚ ಫಲೈಕತಾ ।**
**ಸತ್ಯಾರ್ಥಶ್ರವಣೇ ತಸ್ಮಾತ್ ಸತ್ಯಾರ್ಥಸ್ಯೈವ ಭಾವನಾ ॥ ೧೪೬೫ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಫಲೈಕ್ಯೇ ಸತಿ= ಫಲೈಕ್ಯವಿದ್ದರೆ ಮಾತ್ರ, ಸಾ= ಅಂಗಾಂಗಿ ಭಾವವು ಕೂಡುತ್ತದೆ, ಬೋದ್ಧ್ಯೈಕ್ಯೇ ಚ= ಮತ್ತು ಪ್ರತಿಪಾದ್ಯ ವಸ್ತುವಿನ ಐಕ್ಯವಿದ್ದರೆ ಮಾತ್ರ, ಫಲೈಕತಾ= ಫಲೈಕವು ಕೂಡುತ್ತದೆ, ತಸ್ಮಾತ್= ಆದ್ದರಿಂದ, ಸತ್ಯಾರ್ಥ ಶ್ರವಣೇ= ಸತ್ಯವಾದ ಅರ್ಥದ ಶ್ರವಣದಿಂದ, ಸತ್ಯಾರ್ಥಸ್ಯೈವ= ಸತ್ಯಾರ್ಥದ್ದೇ, ಭಾವನಾ= ಧ್ಯಾನವು ಉಂಟಾಗುತ್ತದೆ.

**ಅನುವಾದ–** ಯಾವ ಕಾರಣದಿಂದ ಎರಡು ಕ್ರಿಯೆಗಳಿಗೆ ಫಲೈಕ್ಯವು ಇದ್ದರೆ ಮಾತ್ರ ಅಂಗಾಂಗಿ ಭಾವ ಉಂಟಾಗುತ್ತದೋ ಮತ್ತು ಪ್ರತಿಪಾದ್ಯೈಕ್ಯವಿದ್ದರೆ ಮಾತ್ರ ಫಲೈಕ್ಯವು ಸಿದ್ಧವಾಗುತ್ತದೋ ಆ ಕಾರಣದಿಂದ ಸತ್ಯಾರ್ಥವನ್ನು ಶ್ರವಣ ಮಾಡಿದರೆ ಅದರಿಂದ ಸತ್ಯಾರ್ಥದ ಭಾವನೆಯೇ ಉಂಟಾಗುತ್ತದೆ.

**ಭಾವವಿಲಾಸಿನೀ–** ಏತದೇವೋಪಪಾದಯತಿ – **ಯತ ಇತಿ** ॥ ಸಾ ಅಂಗಾಂಗಿತಾ । ಫಲವತ್ ಸನ್ನಿಧಾವಫಲಂ ಹ್ಯಂಗಂ, ಅಫಲಂ ಫಲಾಂತರರಹಿತಮಿತ್ಯರ್ಥಃ । ಸರ್ವಥಾಽಫಲತ್ವೇಽಕಾರ್ಯತ್ವಪ್ರಸಂಗಾದಿತಿ ಭಾವಃ ಬೋಧ್ಯೈಕ್ಯೇ ಬೋಧ್ಯಸ್ಯ ಶ್ರವಣವಿಷಯಸ್ಯ ಧ್ಯಾನವಿಷಯಸ್ಯ ಚ ಐಕ್ಯೇ । ವಿಷಯಪ್ರತಿಪಾದನೇನ್ಯೆವ ದಾರ್ಢ್ಯಾಖ್ಯಫಲಜನಕಯೋಃ ಪ್ರಮಾಣದ್ವಯಯೋರೇಕವಿಷಯತ್ವ ನಿಯಮದರ್ಶನಾದಿತಿ ಭಾವಃ । ತಸ್ಮಾತ್ ಶ್ರುತಸ್ಯೈವ ಭಾವಯಿತುಂ ಶಕ್ಯತ್ವಾತ್ ॥ ೧೪೬೫ ॥

**ವಿವರಣೆ–** 'ಫಲವತ್ಸನ್ನಿಧೌ ಅಫಲಂ ತದಂಗಂ' ಈ ನ್ಯಾಯದಿಂದ ಫಲವನ್ನು ಹೇಳುವ ಕರ್ಮದ ಸಮೀಪದಲ್ಲಿ ಫಲವನ್ನು ಹೇಳದ ಇನ್ನೊಂದು ಕರ್ಮವನ್ನು ಹೇಳಿದ್ದರೆ

ಎರಡನೆಯ ಕ್ರಿಯೆಯು ಮೊದಲನೆ ಕ್ರಿಯೆಗೆ ಅಂಗವೆಂದು ತಿಳಿಯುತ್ತದೆ. ಎರಡನೆಯ ಕ್ರಿಯೆಯು ಸರ್ವಥಾ ಫಲರಹಿತವಾಗಲು ಸಾಧ್ಯವಿಲ್ಲ. ಆಗ ಅಂತಹ ಕ್ರಿಯೆಯನ್ನು ಹೇಳುವ ವೇದಕ್ಕೆ ಅಪ್ರಾಮಾಣ್ಯವು ಬರುತ್ತದೆ. ಪ್ರತಿಪಾದ್ಯವಾದ ವಸ್ತುವಿನ ಐಕ್ಯವು ಇದ್ದರೆ ಮಾತ್ರ ಅಂಗಾಂಗಿಗಳಾದ ಶ್ರವಣ, ಧ್ಯಾನಗಳಿಗೆ ಫಲೈಕ್ಯವು ಉಂಟಾಗುತ್ತದೆ. ಶ್ರವಣವು ಸತ್ಯವಾದ ಬ್ರಹ್ಮನ ವಿಷಯಕವೇ ಆಗಬೇಕು. ಅದಕ್ಕಾಗಿಯೇ ವೇದಗಳು ಪ್ರವೃತ್ತವಾಗಿವೆ. ಆದ್ದರಿಂದ ಧ್ಯಾನವು ಮಿಥ್ಯಾವಿಷಯಕವಾಗಿರಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಮಿಥ್ಯಾರ್ಥಶ್ರವಣೇ ತು ಸ್ಯಾನ್ಮಿಥ್ಯಾರ್ಥಸ್ಯಾಪಿ ಭಾವನಾ ।**
**ತಸ್ಮಾದುಪಾಸ್ಯೋ ಭೇದೋಽಸ್ತು ಸತ್ಯೋಽಪ್ಯಸ್ತು ಶ್ರುತೀರಿತಃ ॥ ೧೪೬೬ ॥**

**ಅರ್ಥ–** ಮಿಥ್ಯಾರ್ಥಶ್ರವಣೇ ತು= ಮಿಥ್ಯಾರ್ಥವನ್ನು ಶ್ರವಣಮಾಡಿದರೆ, ಭಾವನಾ= ಧ್ಯಾನವು, ಮಿಥ್ಯಾರ್ಥಸ್ಯಾಪಿ= ಮಿಥ್ಯಾರ್ಥ ವಿಷಯಕವೇ, ಸ್ಯಾತ್= ಆಗಬೇಕು, ತಸ್ಮಾತ್= ಆದ್ದರಿಂದ, ಶ್ರುತೀರಿತಃ= ಶ್ರುತಿಯಿಂದ ಹೇಳಲ್ಪಟ್ಟ, ಭೇದಃ= ಭೇದವು, ಉಪಾಸ್ಯಃ ತು= ಉಪಾಸ್ಯವಾಗಲಿ, ಸತ್ಯೋಽಪ್ಯಸ್ತು= ಸತ್ಯವೂ ಆಗಲಿ.

**ಅನುವಾದ–** ಮಿಥ್ಯಾರ್ಥ ಶ್ರವಣದಿಂದ ಮಿಥ್ಯಾರ್ಥ ವಿಷಯಕವಾದ ಧ್ಯಾನವೇ ಉಂಟಾಗುತ್ತದೆ. ಆದ್ದರಿಂದ ಶ್ರುತಿಯು ಹೇಳಿದ ಭೇದವು ಉಪಾಸ್ಯವೂ ಆಗಲಿ ಮತ್ತು ಸತ್ಯವೂ ಆಗಲಿ.

**ಭಾವವಿಲಾಸಿನೀ–** ತಸ್ಮಾತ್ ಸತ್ಯಶ್ರವಣೇ ಸತ್ಯೋಪಾಸನ ನಿಯಮಾತ್ । ಮಿಥ್ಯಾಶ್ರವಣಸ್ಯ ತ್ವಯಾಪ್ಯನಂಗೀಕಾರಾತ್ ॥ ೧೪೬೬ ॥

**ಉಪಾಸ್ತೇರೇವ ಬಲತೋ ಮಿಥ್ಯಾತ್ವಂ ತು ತವಾಪಿ ನ ।**
**ಅತಃ ಪೂರ್ವೋಕ್ತವೇದರ್ಚೋಽಪ್ಯಾಪಾತಾರ್ಥೋ ನ ಯೌಕ್ತಿಕಃ ॥ ೧೪೬೭ ॥**

**ಅರ್ಥ–** ಉಪಾಸ್ತೇರೇವ ಬಲತಃ= ಉಪಾಸನೆಯ ಬಲದಿಂದಲೇ, ಮಿಥ್ಯಾತ್ವಂ ತು= ಮಿಥ್ಯಾತ್ವವಾದರೂ, ತವಾಪಿ ನ= ನಿನಗೂ ಅಭಿಪ್ರೇತವಲ್ಲ, ಅತಃ= ಆದ್ದರಿಂದ, ಪೂರ್ವೋಕ್ತ ವೇದರ್ಚಃ= ಹಿಂದೆ ಹೇಳಿದ 'ನೇದಂ ಯದಿದಂ ಉಪಾಸತೇ' ಎಂಬ ವೇದ ಮಂತ್ರಕ್ಕೆ, ಆಪಾತಾರ್ಥಃ= ಮೇಲ್ನೋಟಕ್ಕೆ ತೋರುವ ಅರ್ಥವು, ಯೌಕ್ತಿಕಃ ನ= ಯುಕ್ತಿ ಯುಕ್ತವಾದುದಲ್ಲ.

**ಅನುವಾದ–** ಉಪಾಸನೆಯನ್ನು ಹೇಳಿರುವ ಬಲದಿಂದಲೇ ಉಪಾಸ್ಯವಾದುದಕ್ಕೆ ಮಿಥ್ಯಾತ್ವವು ಸಿದ್ಧವಾಗುವುದೆಂದು ನಿನಗೂ ಅಭಿಪ್ರೇತವಲ್ಲ. ಆದ್ದರಿಂದ ಹಿಂದೆ ಹೇಳಿದ 'ನೇದಂ ಯದಿದಂ ಉಪಾಸತೇ' ಎಂಬ ವೇದಮಂತ್ರಕ್ಕೆ ಮೇಲ್ನೋಟಕ್ಕೆ ತೋರುವ ಅರ್ಥವು ಯುಕ್ತಿ ಯುಕ್ತವಾದ ಅರ್ಥವಲ್ಲ.

**ಭಾವವಿಲಾಸಿನೀ–** ಉಪಾಸ್ತೇರ್ವಿಪರೀತಭಾವನಾನಿವಾರಕೋಪಾಸ್ತೇಃ । ಅತಃ ಅಸತ್ಯೋಪಾಸನಸ್ಯಾಯೋಗಾತ್ । ಪೂರ್ವೋಕ್ತವೇದಃ ನೇದಂ ಯದಿದಮಿತಿ ವೇದಃ । ಆಪಾತಾರ್ಥಃ ಉಪಾಸ್ಯಮಿಥ್ಯಾತ್ವಮ್ ॥ ೧೪೬೭ ॥

**ವಿವರಣೆ–** 'ನೇದಂ ಯದಿದಂ ಉಪಾಸತೇ' ಎಂಬ ಶ್ರುತಿಯು ಉಪಾಸ್ಯನಾದವನು ಬ್ರಹ್ಮನಲ್ಲ ಆಪಾತತಃ ಎಂದು ಹೇಳುತ್ತದೆ ಎಂದು ಅದ್ವೈತಿಗಳು ಉಪಾಸ್ಯ ಮಿಥ್ಯಾತ್ವವನ್ನು ಎಂದರೆ ಮಿಥ್ಯೋಪಾಸನೆಯನ್ನು ಅಂಗೀಕರಿಸುತ್ತಾರೆ. ಮಿಥ್ಯೋಪಾಸನೆಯನ್ನು ಅಂಗೀಕರಿಸಿದರೆ ಈ ಮೊದಲು ಹೇಳಿದ ದೋಷಗಳೆಲ್ಲವೂ ಬರುವುದರಿಂದ ಈ ವೇದ ಮಂತ್ರಕ್ಕೆ ಯುಕ್ತಿವಿರುದ್ಧವಾದ ಆಪಾತಾರ್ಥವನ್ನು ಬಿಟ್ಟು ನಾವು ಹೇಳಿದ ಅರ್ಥವನ್ನೇ ಸ್ವೀಕರಿಸಬೇಕು ಎಂದು ಅಭಿಪ್ರಾಯ.

**ಯೋಗ್ಯಾರ್ಥೇ ತಾಂ ನಿನೀಷೋಸ್ತೇ ಗುರುರಾಸೀಜ್ಜಗದ್ಗುರುಃ ।**
**ಅತೋ ಭೇದಶ್ರುತೇರರ್ಥಂ ನ ಭೇತ್ತುಂ ಕೋಪಿ ಶಕ್ನುಯಾತ್ ॥ ೧೪೬೮ ॥**

**ಅರ್ಥ–** ತಾಂ= ಆ ಶ್ರುತಿಯನ್ನು, ಯೋಗ್ಯಾರ್ಥೇ= ಪ್ರಮಾಣಾವಿರುದ್ಧವಾದ ಯೋಗ್ಯವಾದ ಅರ್ಥದಲ್ಲಿ, ನಿನೀಷೋಃ= ತೆಗೆದುಕೊಂಡಿರುವ, ತೇ= ನಿನಗೆ, ಜಗದ್ಗುರುಃ= ಜಗದ್ಗುರುಗಳಾದ ಶ್ರೀಮುಖ್ಯಪ್ರಾಣರು; ಗುರುರಾಸೀತ್= ಗುರುಗಳಾದರು, ಅತಃ= ಆದ್ದರಿಂದ, ಭೇದಶ್ರುತೇಃ= ಭೇದಶ್ರುತಿಯ, ಅರ್ಥಂ= ಅರ್ಥವನ್ನು, ಭೇತ್ತುಂ= ಭೇದಿಸಲು, ಕೋಪಿ= ಯಾವನೂ ಕೂಡ, ನ ಶಕ್ನುಯಾತ್= ಸಮರ್ಥನಾಗುವುದಿಲ್ಲ.

**ಅನುವಾದ–** ಆ ಶ್ರುತಿಯನ್ನು ಯೋಗ್ಯಾರ್ಥದಲ್ಲಿ ತೆಗೆದುಕೊಂಡು ಹೋಗಲು ಬಯಸುವ ನಿನಗೆ ಜಗದ್ಗುರುಗಳಾದ ಮುಖ್ಯಪ್ರಾಣರೇ ಗುರುಗಳಾದರು. ಆದ್ದರಿಂದ ಭೇದ ಶ್ರುತಿಯ ಅರ್ಥವನ್ನು ಬಾಧಿಸಲು ಯಾವನಿಗೂ ಸಾಮರ್ಥ್ಯವಿಲ್ಲ.

**ಭಾವವಿಲಾಸಿನೀ–** ತಾಂ ಶ್ರುತಿಂಜಗದ್ಗುರುಃ ಶ್ರೀಮುಖ್ಯಪ್ರಾಣಃ । ಯೋಗ್ಯಾರ್ಥಸ್ಯ ತ್ವಯಾಪಿ ವಕ್ತವ್ಯತ್ವಾತ್ ಅಸ್ಮದಾಚಾರ್ಯೋಕ್ತಪ್ರಕಾರೇಣೈವ ಶ್ರುತೇರರ್ಥಂ ವದೇತಿ ಭಾವಃ ॥೧೪೬೮॥

**ವಿವರಣೆ–** ಆ ಶ್ರುತಿಗೆ ಯೋಗ್ಯವಾದ ಅರ್ಥವನ್ನು ಮಾಡಬೇಕಾದರೆ ಮನಸ್ಸಿನಲ್ಲಿ ನೀನು ಉಪಾಸನೆ ಮಾಡುವ ಪ್ರತೀಕವು ಬ್ರಹ್ಮನಲ್ಲ ಎಂದೇ ಅರ್ಥವನ್ನು ಮಾಡಬೇಕು. ಇದು ಶ್ರೀಮಧ್ವಾಚಾರ್ಯರು ಹೇಳಿದ ಅರ್ಥವಾದ್ದರಿಂದ ನೀನು ಅದನ್ನು ಅನುಸರಿಸ ಬೇಕಾಗಿರುವುದರಿಂದ ಅವರು ನಿನಗೂ ಗುರುಗಳಾದರು, ಆದ್ದರಿಂದಲೇ ಅವರು ಜಗದ್ಗುರುಗಳಾದರು ಎಂದು ಅಭಿಪ್ರಾಯ.

**ಪದದ್ವಯಾವಿರುದ್ಧೋಽಯಂ ಶ್ರುತ್ಯರ್ಥಃ ಕೇನ ಚಾಲ್ಯತೇ ।**
**ತತ್ಪದಾಭ್ಯಾಂ ವಿರುದ್ಧಂ ತು ತದೈಕ್ಯಂ ಚಲನೋಚಿತಮ್ ॥ ೧೪೬೯ ॥**

**ಅರ್ಥ–** ಪದದ್ವಯಾವಿರುದ್ಧಃ= ಪದದ್ವಯಗಳಿಗೆ ಅವಿರುದ್ಧವಾದ, ಅಯಂ ಶ್ರುತ್ಯರ್ಥಃ= ಈ ಶ್ರುತ್ಯರ್ಥವು, ಕೇನ ಚಾಲ್ಯತೇ= ಯಾರಿಂದ ನಿರಾಕರಿಸಲ್ಪಡುತ್ತದೆ, ತತ್= ಆದ್ದರಿಂದ, ಪದಾಭ್ಯಾಂ= ಎರಡು ಪದಗಳಿಂದಲೂ, ವಿರುದ್ಧಂ= ವಿರುದ್ಧವಾದ, ತದೈಕ್ಯಂ ತು= ಆ ಐಕ್ಯವೇ, ಚಲನೋಚಿತಂ= ನಿರಾಕರಿಸಲು ಯೋಗ್ಯವಾಗಿದೆ.

**ಅನುವಾದ– ತತ್ತ್ವಮಸಿ ಶ್ರುತ್ಯರ್ಥವಾದ ಭೇದವು, ತತ್ ತ್ವಂ ಎರಡು ಪದಗಳಿಗೂ ಅವಿರುದ್ಧವಾಗಿರುವುದರಿಂದ ಅದನ್ನು ಯಾರೂ ನಿರಾಕರಿಸಲು ಸಾಧ್ಯವಿಲ್ಲ. ನೀನು ಹೇಳುವ ಐಕ್ಯವೇ ಎರಡು ಪದಗಳಿಗೂ ವಿರುದ್ಧವಾದುದರಿಂದ ಅದೇ ನಿರಾಕರಿಸಲು ಯೋಗ್ಯವಾದುದು.**

**ಭಾವವಿಲಾಸಿನೀ– ತತ್ತ್ವಮಸೀತಿ ವಾಕ್ಯಸ್ಯ ಭೇದೇ ನಿರವಕಾಶತ್ವಂ, ಐಕ್ಯೇ ತು ಸಾದೃಶ್ಯಾದಿಪರತ್ವೇನ ಸಾವಕಾಶತ್ವಂ ಇತ್ಯಾಹ – ಪದದ್ವಯೇತಿ ॥ ೧೪೬೯ ॥**

**ವಿವರಣೆ–** ತತ್ತ್ವಮಸಿ ಎಂಬ ವಾಕ್ಯವು ನಿರವಕಾಶವಾಗಿ ಭೇದವನ್ನು ಹೇಳುತ್ತದೆ. ಐಕ್ಯ ವಾಕ್ಯಗಳು ಸಾದೃಶ್ಯೈಕ್ಯಾದಿಗಳನ್ನು ಹೇಳಿ ಸಾವಕಾಶವಾಗುವುದರಿಂದ ತತ್ತ್ವಮಸಿ ವಾಕ್ಯೋಕ್ತವಾದ ಭೇದವನ್ನೇ ಅಂಗೀಕರಿಸಬೇಕೆಂದು ಅಭಿಪ್ರಾಯ.

**ಪಶ್ಯೇಜ್ಜೀವೋ ಯದಾ ರುಗ್ಮವರ್ಣಂ ಕರ್ತಾರಮೀಶ್ವರಮ್ ।**
**ಪುರುಷಂ ಬ್ರಹ್ಮಪಿತರಂ ತದಾ ತ್ಯಕ್ತ್ವಾ ತಮೋಽಂಜನಮ್ ।**
**ವಿಧೂಯ ಸಕಲಂ ಕರ್ಮ ಪರಂ ಸಾಮ್ಯಮುಪೈತಿ ಚ ॥ ೧೪೭೦ ॥**

**ಅರ್ಥ–** ಯದಾ = ಯಾವಾಗ, ಜೀವಃ = ಜೀವನು, ರುಗ್ಮವರ್ಣಂ = ಬಂಗಾರದ ಬಣ್ಣವುಳ್ಳ, ಕರ್ತಾರಂ = ಜಗತ್ಕರ್ತೃವಾದ, ಈಶ್ವರಂ = ಸ್ವಾಮಿಯಾದ, ಬ್ರಹ್ಮಪಿತರಂ = ಚತುರ್ಮುಖನ ತಂದೆಯಾದ, ಪುರುಷಂ = ನಾರಾಯಣನನ್ನು ಪಶ್ಯೇತ್ = ನೋಡುತ್ತಾನೋ, ತದಾ = ಆಗ, ಅಂಜನಂ = ಕಡುಕಪ್ಪಾದ (ದುಷ್ಟವಾದ), ತಮಃ = ಕತ್ತಲೆಯನ್ನು (ಅಜ್ಞಾನವನ್ನು), ತ್ಯಕ್ತ್ವಾ = ಬಿಟ್ಟು ಸಕಲಂ = ಪ್ರಾರಬ್ಧವನ್ನು ಬಿಟ್ಟು ಎಲ್ಲಾ ಕರ್ಮಗಳನ್ನೂ, ಕರ್ಮ = ಕರ್ಮಗಳನ್ನು, ವಿಧೂಯ = ಆಚೆಗಟ್ಟಿ ಚ = ಮತ್ತು, ಪರಂ = ಶ್ರೇಷ್ಠವಾದ, ಸಾಮ್ಯಂ = ಸಾದೃಶ್ಯವನ್ನು ಉಪೈತಿ = ಹೊಂದುತ್ತಾನೆ.

**ಅನುವಾದ– ಯಾವಾಗ ಜೀವನು ಚಿನ್ನದ ಬಣ್ಣವುಳ್ಳ, ಕರ್ತೃವಾದ, ಸ್ವಾಮಿಯಾದ, ಪೂರ್ಣಷಡ್ಗುಣನಾದ ನಾರಾಯಣನನ್ನು ಕಾಣುತ್ತಾನೋ ಆಗ ಅಜ್ಞಾನವನ್ನು ದಾಟಿ (ಪ್ರಾರಬ್ಧಭಿನ್ನ) ಕರ್ಮಗಳನ್ನೆಲ್ಲಾ ಆಚೆಗಟ್ಟಿ ಕೊನೆಗೆ ಭಗವಂತನ ಶ್ರೇಷ್ಠ ಸಾದೃಶ್ಯವನ್ನು ಹೊಂದುತ್ತಾನೆ.**

**ವಿವರಣೆ**— **ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥**

ಎಂಬ ಶ್ರುತಿಯನ್ನು ಚೆನ್ನಾಗಿ ಆಲೋಚಿಸಿದರೂ,

1. ಎಲ್ಲಾ ಮಧ್ವಮತರಹಸ್ಯವೂ,

2. ಅದರ ಪಾರಮಾರ್ಥಿಕತ್ವವೂ ಕೂಡ ಸಿದ್ಧವಾಗುತ್ತದೆ ಎಂದು ಹೇಳುತ್ತಿದ್ದಾರೆ.

ಕರ್ತಾರಮೀಶಂ ಎಂಬಲ್ಲಿನ ಕರ್ತೃ ಎಂಬ ಪದವು, ಸೃಷ್ಟಿಯು ಕಾರ್ಯ, ಭಗವಂತನು ಕರ್ತೃ ಎಂದು ಭೇದವನ್ನೇ ಬಣ್ಣಿಸುತ್ತಿದೆ. ಈಶಂ ಎಂಬ ಪದವು ಅವನು ಅಖಿಲಕ್ಕೂ ಸ್ವಾಮಿ ಎಂದು ಸಾರುತ್ತಿರುವಾಗ ಜೀವರಾಶಿಗಳೆಲ್ಲರೂ ದಾಸರೇ ಆಗಿದ್ದಾರೆ ಎಂದು ಭೇದವನ್ನು ತಿಳಿಸುತ್ತಿದೆ. ಬ್ರಹ್ಮಯೋನಿಂ - ಬ್ರಹ್ಮನಿಗೂ ಕಾರಣನಾಗಿದ್ದಾನೆ ಎಂದು ಭೇದವನ್ನು ತಿಳಿಸುತ್ತಿದೆ. ಚತುರ್ಮುಖನೆಂಬ ಜೀವನೊಂದಿಗೂ ಭೇದವೇ ಭದ್ರವಾಗಿದೆ ಎಂದು ಬಿಡಿಸಿ ಹೇಳಿದಂತಾಯಿತು. ಹೀಗೆ ಯುಕ್ತಿಯಿಂದಲೇ ಜೀವೇಶಭೇದವನ್ನು ಶ್ರುತಿಯು ಸಾರಿತು.

ಶ್ರೇಷ್ಠ ಸಾದೃಶ್ಯವನ್ನು ಪಡೆಯುವರು ಎಂಬ ಆ ಮಾತಿನಲ್ಲಿ ಸಾದೃಶ್ಯಎಂದ ಮೇಲೆ ಅದರಲ್ಲಿ ಅಡಗಿದ ಭೇದವನ್ನೇ ಹೇಳಿದಂತಾಗಿ ಮುಕ್ತನಿಗೂ ಭೇದವನ್ನೇ ಹೇಳಿದಂತಾಯಿತು.

ನಿರಂಜನಃ ಎಂಬ ಶ್ರುತಿಯು, ಮುಕ್ತನು ಅಂಜನ ಎನಿಸಿದ ಅಜ್ಞಾನ ರೂಪವಾದ ಕತ್ತಲೆಯನ್ನು ಕಳೆದುಕೊಂಡವನಾಗುತ್ತಾನೆ. ಎಂದು ಹೇಳುತ್ತಿದೆ. ಅದನ್ನೇ ಅಂಜನಂ ತಮಃ ತ್ಯಕ್ತ್ವಾ ಎಂದು ತಿಳಿಸಲಾಗಿದೆ.

ಲೋಕನೀತಿ - ಕರ್ತೃವು ಎಂದೂ ಕಾರ್ಯದೊಡನೆ ಐಕ್ಯ ಹೊಂದಲಾರ. ಸೇವಕನು ಎಂದೂ ಕೂಡ ಸ್ವಾಮಿಯಾಗಲಾರ. ಲೋಕದಲ್ಲೇ ಹೀಗಿರುವಾಗ ಜೀವನೇ ಮುಂದೆ ಬ್ರಹ್ಮನಾಗುವುದಾದರೂ ಹೇಗೆ?

ಮಂತ್ರದಲ್ಲಿ ಬ್ರಹ್ಮಯೋನಿಂ ಎಂದರೆ ಬ್ರಹ್ಮನಿಗೆ ಜನಕ ಎಂದರ್ಥ. ಅದನ್ನು ಹಾಗೆಯೇ ಹೇಳದೆ ಬ್ರಹ್ಮಪಿತರಂ ಎಂದು ಶ್ಲೋಕದಲ್ಲಿ ಪರಿಗಣಿಸಲಾಗಿದೆ. ಭಗವಂತನು ಕೇವಲ ಜನ್ಮನೀಡುವ ಜನಕನಾಗದೆ ಸಾಕಿ ಸಲಹುವ ಪಿತನೂ ಆಗಿದ್ದಾನೆ. ಇದನ್ನು ವಾದಿರಾಜರ ಶಬ್ದವೈಖರಿ ಹೊರಗೆಡಹಿದೆ.

**ಇತಿ ಜೀವೇಶಭೇದಸ್ಯ ಸಾಕ್ಷಾತ್ಕಾರೇಣ ಹಿ ಶ್ರುತಿಃ ।**
**ಪರಮಂ ಮೋಕ್ಷಮಾಚಷ್ಟ ಮುಕ್ತಸ್ಯಾಪಿ ಭಿನ್ನತಾಮ್ ॥ ೧೪೭೧ ॥**

**ಅರ್ಥ–** ಇತಿ = ಈ ರೀತಿಯಾಗಿ, ಶ್ರುತಿಃ = ಶ್ರುತಿಯು, ಜೀವೇಶಭೇದಸ್ಯ = ಜೀವೇಶರುಗಳ ಭೇದದ, ಸಾಕ್ಷಾತ್ಕಾರೇಣ = ಸಾಕ್ಷಾತ್ಕಾರದಿಂದಲೇ, ಪರಮಂ = ಶ್ರೇಷ್ಠವಾದ, ಮೋಕ್ಷಂ = ಮುಕ್ತಿಯನ್ನು, ಆಚಷ್ಟ = ಹೇಳಿತು. ಹಿ = ಇದು ಪ್ರಸಿದ್ಧ. ಅಪಿ = ಜೊತೆಗೆ, ಮುಕ್ತಸ್ಯ = ಮುಕ್ತನಿಗೆ, ಭಿನ್ನತಾಂ = ಭೇದವನ್ನು, ಆಚಷ್ಟ= ಹೇಳಿತು.

**ಅನುವಾದ–** ಹೀಗೆ ಶ್ರುತಿಯು ಕರ್ತೃ, ಈಶ, ಬ್ರಹ್ಮಜನಕ ಈ ಶಬ್ದಗಳಿಂದ ಜೀವೇಶರುಗಳಿಗೆ ಭೇದವನ್ನೇ ಹೇಳಿದೆ. ಈ ಭೇದವನ್ನು ಸಾಧಕನು ಸಾಕ್ಷಾತ್ಕರಿಸಿಕೊಂಡಾಗಲೇ ಮುಕ್ತಿ ಎಂದೂ ಶ್ರುತಿಯು ಹೇಳಿದೆ. ಇದು ಪ್ರಸಿದ್ಧ. ಇದರೊಂದಿಗೆ ಮುಕ್ತನು ದೇವರಿಂದ ಭಿನ್ನ ಎಂದೂ ಕೂಡ ಸಾಮ್ಯಶಬ್ದದಿಂದ ಸಾರಲಾಗಿದೆ.

**ಭಾವವಿಲಾಸಿನೀ–** ಅಧುನಾ ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ । ತದಾವಿದ್ವಾನ್ಪುಣ್ಯಪಾಪೇವಿಧೂಯನಿರಂಜನಃ ಪರಮಂ ಸಾಮ್ಯಮುಪೈತೀತಿ ಶ್ರುತೇರರ್ಥಪರ್ಯಾಲೋಚನಾಯಾಂ ಸರ್ವಂ ಮಧ್ವಮತರಹಸ್ಯಂ ತಸ್ಯ ಪಾರಮಾರ್ಥಿಕತಾ ಚ ಸಿದ್ಧೇತ್ಯಾಹ – **ಪಶ್ಯೇದಿತಿ** ॥ ಕರ್ತೃಪದಸೂಚಿತ ಕರ್ತೃಕಾರ್ಯಭಾವೇನ ಈಶಪದ-ಸೂಚಿತಸ್ವಾಮಿ- ಭೃತ್ಯಭಾವೇನ ಚ ಸಕಲಜೀವಭೇದಸ್ಯ ಬ್ರಹ್ಮಯೋನಿಪದೇನಚ ಚತುರ್ಮುಖಾಖ್ಯಜೀವಭೇದಸ್ಯ ಚ ಶ್ರುತ್ಯೈವ ಸಯುಕ್ತಿಕಂ ಸಾಧಿತತ್ವಾಜ್ಜೀವೇಶಭೇದಸ್ಯೇತ್ಯುಕ್ತಮ್ । ಭೇದಸಾಪೇಕ್ಷಸಾಮ್ಯಸ್ಯೈವ ಫಲತಯಾ ಕಥನಾತ್ ಮುಕ್ತಸ್ಯಾಪಿ ಚ ಭಿನ್ನತಾಮಿತ್ಯುಕ್ತಮ್ ॥ ೧೪೭೦-೧೪೭೧ ॥

**ವಿವರಣೆ–** ಯಾವ ಜೀವನು ಈಶ್ವರನನ್ನು ಸ್ವಾಮಿಯೆಂದು ನೋಡುತ್ತಾನೋ ಆಗಲೇ ತನ್ನ ಕರ್ಮಗಳನ್ನು ಕಳೆದುಕೊಳ್ಳುತ್ತಾನೆ ಎಂದ ಮೇಲೆ ಭೇದಸಾಕ್ಷಾತ್ಕಾರದಿಂದಲೇ ಮೋಕ್ಷ ಎಂದು ಖಚಿತವಾಯಿತು.

ಈ ಮೋಕ್ಷವನ್ನು ಅವಾಂತರ ಮೋಕ್ಷ ಎಂದೂ ಕೂಡ ಅಪಲಾಪಮಾಡಲಾಗದು. ಇದು ಪರಮಮೋಕ್ಷವೇ ಆಗಿದೆ ಎಂದೂ ಶ್ರುತಿಯು ಧ್ವನಿಸುತ್ತಿದೆ-

**ನ ಹ್ಯಂಜನಾಖ್ಯತಮಸಃ ಕರ್ಮಣೋಃ ಪುಣ್ಯಪಾಪಯೋಃ ।**
**ಕ್ಷಯಃ ಪರಮಸಾಮ್ಯಂ ಚ ಮಹಾಮೋಕ್ಷಮೃತೇ ಭವೇತ್ ॥ ೧೪೭೨ ॥**

**ಅರ್ಥ–** ಅಂಜನಾಖ್ಯತಮಸಃ = ಕಾಡಿಗೆಯಂತಹ ಅಜ್ಞಾನದ (ಮತ್ತು), ಪುಣ್ಯಪಾಪಯೋಃ = ಪುಣ್ಯಪಾಪಗಳೆಂಬ, ಕರ್ಮಣೋಃ = ಕರ್ಮಗಳ, ಕ್ಷಯಃ = ನಾಶವು, ಚ = ಮತ್ತು, ಪರಮಂ = ಅತ್ಯುತ್ತಮವಾದ, ಸಾಮ್ಯಂ = ಸಾದೃಶ್ಯವು, ಮಹಾಮೋಕ್ಷಂ = ಮಹಾಮೋಕ್ಷವನ್ನು, ಋತೇ = ಬಿಟ್ಟು, ನ ಭವೇತ್ = ಆಗಲಾರದು.

**ಅನುವಾದ–** ಕಾಡಿಗೆಯಂತೆ ಕಗ್ಗತ್ತಲೆಯಾದ ಅಜ್ಞಾನದ ನಾಶ ಅವಾಂತರ ಮೋಕ್ಷದಲ್ಲಿ, ಹಾಗೆಯೇ ಪುಣ್ಯ ಪಾಪಗಳೆಂಬ ಕರ್ಮಗಳನ್ನು ಕಳೆದುಕೊಳ್ಳುವುದೂ ಆಗುವುದಿಲ್ಲ. ಜೊತೆಗೆ ಭಗವಂತನೊಂದಿಗೆ ಅತ್ಯುತ್ತಮವಾದ ಸಾಮ್ಯವನ್ನು ಮುಕ್ತನಿಗೆ ಶ್ರುತಿಯು ಹೇಳಿದೆ. ಇವೆಲ್ಲವೂ ಮಹಾಮೋಕ್ಷದ್ದೇ ಗುಣಗಳಾಗಿವೆ. ಹೀಗಿರುವಾಗ ಮೋಕ್ಷದಲ್ಲಿ ಭೇದವು ಸಹಜ ಎಂದೇ ಸಾರಿದಂತಾಯಿತು. ಅದನ್ನು ಅವಾಂತರ ಮೋಕ್ಷ ಎಂದು ಹೇಳಲಾಗದು.

**ಭಾವವಿಲಾಸಿನೀ–** ಅವಾಂತರಮೋಕ್ಷತ್ವಶಂಕಾಂ ಪರಿಹರತಿ – ನಹೀತಿ ॥ ೧೪೭೨ ॥

**ವಿವರಣೆ–** ವಸ್ತುವಿನ ಗುಣಮಟ್ಟವು ಮೇಲಾದಷ್ಟು ಅದು ಅತ್ಯುತ್ತಮ ಎಂದು ಎಲ್ಲರೂ ಒಪ್ಪುತ್ತಾರೆ. ಅನಾದಿಯಾದ ಆ ಕರ್ಮಬಂಧಕ್ಷಯ, ಅಜ್ಞಾನದ ನಾಶ, ಮುಕ್ತ-ಈಶರ ಪರಮಸಾಮ್ಯ ಎಂಬ ಈ ಅಸಾಧಾರಣಗುಣಗಳು ಇದು ಮಹಾಮುಕ್ತಿಯೇ ಆಗಿದೆ ಎಂದು ದೃಢಪಡಿಸಿವೆ.

ಸಾಕಾರಸ್ಯ ಸವರ್ಣಸ್ಯ ಕರ್ತುಃ ಸರ್ವೇಶ್ವರಸ್ಯ ಚ ।
ಸಾಕ್ಷಾತ್ಕಾರೋಽಸ್ಯ ಭೇದಾದೇಃ ಕಿಂ ನ ಸಾಕ್ಷಾತ್ಕೃತಿರ್ವದ ॥ ೧೪೭೩ ॥

**ಅರ್ಥ–**ಸಾಕಾರಸ್ಯ = ಆಕಾರವಿರುವ, ಸವರ್ಣಸ್ಯ = ಬಣ್ಣದಿಂದೊಡಗೂಡಿದ, ಕರ್ತುಃ= ಕರ್ತೃವೂ ಆದ, ಸರ್ವೇಶ್ವರಸ್ಯ = ಸರ್ವರಿಗೂ ಸ್ವಾಮಿಯಾದ, ಅಸ್ಯ = ಇವನ, ಸಾಕ್ಷಾತ್ಕಾರಃ= ಸಾಕ್ಷಾತ್ಕಾರವು, ಭೇದಾದೇಃ = ಭೇದಮೊದಲಾದವುಗಳ, ಸಾಕ್ಷಾತ್ಕೃತಿಃ = ಸಾಕ್ಷಾತ್ಕಾರವು, ನ ಕಿಂ? = ಅಲ್ಲವೇನು? ವದ= ಹೇಳು.

**ಅನುವಾದ–** ಆಕಾರ ಸಹಿತನಾದ, ವರ್ಣಸಹಿತನಾದ, ಕರ್ತೃತ್ವ ವಿಶಿಷ್ಟನಾದ ಸರ್ವೇಶ್ವರನಾದ ಇವನ ಸಾಕ್ಷಾತ್ಕಾರವು ಭೇದಾದಿಗಳ ಸಾಕ್ಷಾತ್ಕಾರವೇ ಅಲ್ಲವೇ ಎಂದು ಹೇಳು.

**ಭಾವವಿಲಾಸಿನೀ–** ಭೇದಾದೇರಸ್ಯೇತಿ ಸಂಬಂಧಃ । ಅಸ್ಯಾಕಾರವರ್ಣಕರ್ತೃತ್ವೇಶತ್ವ ಬ್ರಹ್ಮಪಿತೃತ್ವಾಖ್ಯಧರ್ಮಸಮುದಾಯಸ್ಯ । ವಿಶಿಷ್ಟಸಾಕ್ಷಾತ್ಕಾರೇ ವಿಶೇಷಣ ಸಾಕ್ಷಾತ್ಕಾರಸ್ಯಾಪ್ಯವಶ್ಯಕತ್ವಾದಿತಿ ಭಾವಃ ॥ ೧೪೭೩ ॥

**ವಿವರಣೆ–** ಸರ್ವರಿಗೂ ಸ್ವಾಮಿ, ಸರ್ವಕ್ಕೂ ಕರ್ತೃ, ಸುವರ್ಣವರ್ಣಮಯ - ಇಂತಹವನ ಸಾಕ್ಷಾತ್ಕಾರ ಎಂದ ಮೇಲೆ ಭೇದವು ಸ್ಪಷ್ಟವೇ ಆಯಿತು. ನೀನೇ ಹೇಳು. ಭೇದವೂ ಜೊತೆಗೇ ಗೊತ್ತಾಗಲಿಲ್ಲವೇ?

ವಿಶಿಷ್ಟಸಾಕ್ಷಾತ್ಕಾರ ಎಂದ ಮೇಲೆ ವಿಶೇಷಣಸಾಕ್ಷಾತ್ಕಾರವಾಗಿರಲೇಬೇಕು.

ಆದ್ದರಿಂದ ಆಕಾರ, ವರ್ಣ, ಕರ್ತೃತ್ವ, ಈಶತ್ವ, ಬ್ರಹ್ಮಪಿತೃತ್ವ ಈ ಧರ್ಮಸಮುದಾಯದ ಸಾಕ್ಷಾತ್ಕಾರವಾದಾಗ ಭೇದವು ತಿಳಿದೇ ಇರುತ್ತದೆ ಎಂದು ಅಭಿಪ್ರಾಯ.

ಇನ್ನು ಸಾಕ್ಷಾತ್ಕಾರವು ಪರಂಪರೆಯಿಂದಾಗಿ ಮೋಕ್ಷಕ್ಕೆ ಕಾರಣ. ಹೀಗಾಗಿ ಭೇದಕ್ಕೂ ಮುಕ್ತಿಗೂ ಸಂಬಂಧವಿಲ್ಲ ಎಂದೂ ಕೂಡ ಹೇಳಲಾಗದು. ಇದನ್ನೇ ಮುಂದಿನ ಶ್ಲೋಕವು ಹೇಳುತ್ತಿದೆ -

ಯದಾ ತದೇತಿ ಶಬ್ದಾಭ್ಯಾಂ ಪಾರಂಪರ್ಯನಿಷೇಧನಾತ್।
ಸಾಕ್ಷಾನ್ಮೋಕ್ಷೋಪಯೋಗಿತ್ವಂ ಜ್ಞಾನಸ್ಯಾಸ್ಯ ನಿಗದ್ಯತೇ ॥ ೧೪೭೪ ॥

**ಅರ್ಥ–** ಯದಾ = ಯಾವಾಗ (ತಿಳಿಯುತ್ತಾನೋ) ತದಾ = ಆಗ (ಪುಣ್ಯಪಾಪರಹಿತನಾಗುವನು), ಇತಿ = ಹೀಗೆಂಬ, ಶಬ್ದಾಭ್ಯಾಂ = ಶಬ್ದಗಳಿಂದ, ಪಾರಂಪರ್ಯನಿಷೇಧಾತ್ = (ನಿಧಾನವಾಗಿ) ಪರಂಪರೆಯಿಂದ ಆದೀತು ಎಂಬುದನ್ನು ನಿಷೇಧಿಸುವುದರಿಂದ, ಅಸ್ಯ = ಈ ಯಾವ, ಜ್ಞಾನಸ್ಯ = ಭೇದಜ್ಞಾನಕ್ಕೆ, ಸಾಕ್ಷಾತ್ = ನೇರವಾಗಿಯೇ, ಮೋಕ್ಷೋಪಯೋಗಿತ್ವಂ = ಮೋಕ್ಷಕಾರಣತ್ವವು, ನಿಗದ್ಯತೇ = ಚೆನ್ನಾಗಿ ಹೇಳಲ್ಪಡುತ್ತದೆ.

**ಅನುವಾದ–** ಯಾವಾಗ ಆ ದೇವನನ್ನು ಸರ್ವಕರ್ತೃ, ಸರ್ವರಿಗೂ ಸ್ವಾಮೀ, ಎಂದು ತಿಳಿಯುತ್ತಾನೋ ಆಗಲೇ ಅವನು ಪುಣ್ಯಪಾಪನಿರ್ಮುಕ್ತನಾಗುತ್ತಾನೆ ಎಂದು ಶ್ರುತಿಯು ಹೇಳಿದೆ. ಯಾವಾಗ - ಆವಾಗ ಈ ಶಬ್ದಗಳು ತತ್‌ಕ್ಷಣವೇ ಫಲಿಸುವುದನ್ನು ತಿಳಿಸುತ್ತದೆ. ಹೀಗಾಗಿ ಪರಂಪರೆಯಿಂದ ಕಾರಣ ಎನ್ನಲಾಗದು. ಹೀಗಾಗಿ ಭೇದಜ್ಞಾನವು ನೇರವಾಗಿಯೇ ಮುಕ್ತಿಕಾರಣ ಎಂಬುದು ಸ್ಪಷ್ಟವಾಗಿ ಹೇಳಲ್ಪಡುತ್ತದೆ.

**ಭಾವವಿಲಾಸಿನೀ–** ಯಸ್ಮಿನ್‌ಕಾಲೇ ದರ್ಶನಂ ತಸ್ಮಿನ್‌ಕಾಲೇ ಸಾಮ್ಯಮುಪೈತೀತ್ಯುಕ್ತ್ಯಾ ದರ್ಶನಮೋಕ್ಷಕಾಲಯೋರವ್ಯವಧಾನಲಾಭಾತ್ ಪಾರಂಪರ್ಯನಿಷೇಧನಾದಿತ್ಯುಕ್ತಮ್ । ಅಸ್ಯ ಜ್ಞಾನಸ್ಯ ಭೇದಾಕಾರಾದಿಜ್ಞಾನಸ್ಯ ॥ ೧೪೭೪ ॥

**ವಿವರಣೆ–** ಯಾವಾಗ ಊಟ ಮಾಡುತ್ತೇವೆಯೋ ಆಗ ಹೊಟ್ಟೆ ತುಂಬುತ್ತದೆ ಎಂದಾಗ ಊಟಕ್ಕೂ, ತೃಪ್ತಿಗೂ ನೇರ ಕಾರ್ಯಕಾರಣಭಾವವನ್ನೇ ಹೇಳುತ್ತಾರಲ್ಲವೇ? ಇಲ್ಲಿಯೂ ಹಾಗೆಯೇ ಇರುವುದರಿಂದ ಭೇದದ ತಿಳುವಳಿಕೆಗೂ ಮುಕ್ತಿಗೂ ನೇರವಾದ ಕಾರ್ಯಕಾರಣಭಾವವಿರಲೇಬೇಕು.

ಅತಃ ಸಾಕಾರತಾ ವರ್ಣಃ ಕರ್ತೃತ್ವೇಶತ್ವಪೂರ್ವಕಃ ।
ಮಹಿಮಾ ಬ್ರಹ್ಮಪಿತೃತಾ ಭಿದಾ ಚಾಬಾಧ್ಯತಾಮಗಾತ್ ॥ ೧೪೭೫ ॥

ಯತಃ ಸಾಮ್ಯಂ ದ್ವಯೋರೇವ ತತೋ ಮೋಕ್ಷೇಽಪಿ ಭಿನ್ನತಾ ॥ ೧೪೭೬ ॥

**ಅರ್ಥ–** ಅತಃ = ಆದ್ದರಿಂದ, ಸಾಕಾರತಾ = ಸಾಕಾರತ್ವವೂ, ವರ್ಣಃ = ಭಗವಂತನಿಗೆ ಹೇಳಿದ ರುಕ್ಮವರ್ಣವೂ, ಕರ್ತೃತ್ವೇಶತ್ವಪೂರ್ವಕಃ = ಅವನು ಕರ್ತಾ, ಸ್ವಾಮಿಯೇ ಆಗಿದ್ದಾನೆ ಇವೇ ಮೊದಲಾದ, ಮಹಿಮಾ = ಮಹಿಮೆಯೂ, ಬ್ರಹ್ಮಪಿತೃತಾ = ಬ್ರಹ್ಮನಿಗೆ ತಂದೆಯಾಗಿರುವುದೂ, ಚ = ಮತ್ತು, ಭಿದಾ = ಭೇದವೂ ಕೂಡ, ಅಬಾಧ್ಯತಾಂ = ಅಬಾಧ್ಯತ್ವವನ್ನು, ಅಗಾತ್ = ಹೊಂದಿತು. ಯತಃ = ಏಕೆಂದರೆ, ದ್ವಯೋಃ ಏವ = ಎರಡು ವಸ್ತುಗಳಿಗೇ, ಸಾಮ್ಯಂ = ಸಾದೃಶ್ಯವಿದೆಯೋ, ತತಃ = ಆದ್ದರಿಂದ, ಮೋಕ್ಷೇ ಅಪಿ = ಮೋಕ್ಷದಲ್ಲಿಯೂ ಕೂಡ, ಭಿನ್ನತಾ = ಭೇದವೇ ಇದೆ ಎಂದಾಯಿತು.

**ಅನುವಾದ–** ಆ ಕಾರಣದಿಂದ ಆಕಾರವೂ, ವರ್ಣವೂ, ಕರ್ತೃತ್ವವೂ, ಈಶ್ವರತ್ವ ಮೊದಲಾದ ಮಹಿಮೆಯೂ, ಬ್ರಹ್ಮಪಿತೃತ್ವವೂ ಮತ್ತು ಭೇದವೂ ಸಹ ಅಬಾಧ್ಯವೆಂದೇ ಆಯಿತು. ಎರಡು ಪದಾರ್ಥಗಳಿಗೇ ಸಾದೃಶ್ಯವಿರುವುದರಿಂದ ಮೋಕ್ಷದಲ್ಲಿಯೂ ಸಾದೃಶ್ಯವನ್ನು ಹೇಳಿರುವ ಕಾರಣದಿಂದ ಮೋಕ್ಷದಲ್ಲಿಯೂ ಭೇದವೇ ಸಿದ್ಧವಾಯಿತು.

**ಭಾವವಿಲಾಸಿನೀ–ಅತಃ ಸಾಕ್ಷಾನ್ಮೋಕ್ಷೋಪಯೋಗಿಜ್ಞಾನವಿಷಯತ್ವಾತ್ ॥೧೪೭೫-೧೪೭೬॥**

**ವಿವರಣೆ–** ಮುಖವು ಚಂದ್ರನಿಗೆ ಸದೃಶವಾಗಿದೆ ಎಂದು ಬಣ್ಣಿಸಿದರೆ ಸಾಮ್ಯವೇನೋ ಸರಿ, ಚಂದ್ರ ಹಾಗೂ ಮುಖಗಳಿಗೆ ಭೇದವೂ ಸ್ಪಷ್ಟವೇ ಆಯಿತು. ಭಿನ್ನವಾಗಿರುವ ಹೋಲಿಕೆ ಇರುವ ವಸ್ತುಗಳಿಗೆ ಮಾತ್ರ ಸಾಮ್ಯವು ತಾನೇ? ಆದ್ದರಿಂದ ಮುಕ್ತರಿಗೂ ಈಶ್ವರನಿಗೂ ಸಾಮ್ಯ ಎಂಬ ಮಾತು ಭೇದವನ್ನೇ ಸಾರುತ್ತಿದೆ.

**ಏವಂ ಚ ತತ್ತ್ವವಾದ್ಯುಕ್ತತತ್ತ್ವಸರ್ವಸ್ವಮೇವ ಹಿ ।**
**ತತ್ತ್ವಮಾಸೀದತತ್ತ್ವಸ್ಯ ದರ್ಶನಾನ್ನ ಹಿ ಮುಕ್ತತಾ ।**
**ಅತೋಽಪಿ ಶಂಕಾಪಂಕಸ್ಯ ನಾವಕಾಶೋಽಸ್ತಿ ಕಶ್ಚನ ॥ ೧೪೭೭ ॥**

**ಅರ್ಥ–** ಏವಂ ಚ = ಹೀಗಾಗಿ, ತತ್ತ್ವವಾದ್ಯುಕ್ತ = ತತ್ತ್ವವಾದಿಯಿಂದ ಹೇಳಲ್ಪಟ್ಟ ತತ್ತ್ವಸರ್ವಸ್ವಂ = ಶಾಸ್ತ್ರದ ಸರ್ವಸ್ವವೂ ಕೂಡ, ತತ್ತ್ವಮೇವ = ಸತ್ಯವಾದುದೇ, ಆಸೀತ್ ಹಿ = ಆಗಿ ಹೋಯಿತು. ಅತತ್ತ್ವಸ್ಯ = ಅಸತ್ಯವಾದುದರ, ದರ್ಶನಾತ್ = ದರ್ಶನದಿಂದ, ಮುಕ್ತತಾ = ಮುಕ್ತಿಯು, ನ ಹಿ = ಸಾಧ್ಯವಲ್ಲವಷ್ಟೇ. ಅತಃ = ಆದ್ದರಿಂದ, ಶಂಕಾಪಂಕಸ್ಯ = ಸಂದೇಹವೆಂಬ ಕೆಸರಿಗೆ, ಕಶ್ಚನ ಅಪಿ = ಸ್ವಲ್ಪವೂ ಕೂಡ, ಅವಕಾಶಃ = ಅವಕಾಶವು, ಅತ್ರ = ಈ ವಿಷಯದಲ್ಲಿ, ನ = ಇಲ್ಲ

**ಅನುವಾದ–** ಈ ರೀತಿಯಲ್ಲಿ ತತ್ತ್ವವಾದಿಗಳು ಹೇಳಿದ ಎಲ್ಲಾ ಪ್ರಮೇಯಗಳೂ ಸತ್ಯವೆಂದೇ ಸಿದ್ಧವಾಯಿತು. ಅತತ್ತ್ವದ ಎಂದರೆ ಅಸತ್ಯದ ಸಾಕ್ಷಾತ್ಕಾರದಿಂದ

ಮೋಕ್ಷವಾಗುವುದಿಲ್ಲವಷ್ಟೇ? ಆದ್ದರಿಂದ ಇಲ್ಲಿ ಶಂಕೆ ಎಂಬ ಕೆಸರಿಗೆ ಸ್ವಲ್ಪವೂ ಅವಕಾಶವಿಲ್ಲ.

**ಭಾವವಿಲಾಸಿನೀ–** ಶಂಕಾಪಂಕಸ್ಯ ಬಾಧಾದಿಶಂಕಾಪಂಕಸ್ಯ । ಅತ್ರ ದ್ವಾಸುಪರ್ಣೇತಿ ಶ್ರುತ್ಯಾಪ್ರತಿಪಾದಿತಭೇದೇ । ಏತತ್‌ಶ್ರುತಿಸಮಾಖ್ಯಯಾ ಸಾಪ್ಯಬಾಧಿತಭೇದಪರ್ಯೆವೇತಿ ಭಾವಃ ॥೧೪೭೭॥

**ವಿವರಣೆ–** ಕೆಸರು ಎರಚಿದಾಗ ಎಂತಹ ಪರಿಶುದ್ಧವಸ್ತುವೂ ಕೂಡ ಮಬ್ಬಾಗುವುದು. ಹಾಗೆಯೇ ಜೀವಬ್ರಹ್ಮರಿಗೆ ಅಭೇದ ಎಂಬ ಅಪಸ್ವರ ಇಲ್ಲೂ ಬಂದೀತೇನು ಎಂದರೆ ಬರಲಾರದು. ಭೇದವು ದ್ವಾಸುಪರ್ಣಾ ಎಂಬ ಶ್ರುತಿಯಿಂದ ಪ್ರತಿಪಾದಿತವಾಗಿದೆ. ಹೀಗಾಗಿ ವೇದದ ಬೆಂಬಲವುಳ್ಳ ಭೇದವಾದವು ಅಬಾಧಿತವೇ ಆಗುವುದು.

ರಾಜನನ್ನು ರಾಜ ಎಂದು ಅರಿತಾಗ ಮಾತ್ರವೇ ಬಂಧನದಿಂದ ಮುಕ್ತಿ ರೋಗವನ್ನು ಸರಿಯಾಗಿ ತಿಳಿದಾಗ ಮಾತ್ರವೇ ಆರೋಗ್ಯದ (ರೋಗಮುಕ್ತಿಯ) ದಾರಿ ಸುಲಭ. ಹೀಗಾಗಿ ತತ್ತ್ವದರ್ಶನದಿಂದ ಮುಕ್ತಿ ಎಂಬ ಯುಕ್ತಿಯೇ ಭೇದವಾದಕ್ಕಿದೆ. ಹಾಗೆಯೇ ಅಸತ್ಯದರ್ಶನದಿಂದ ಮುಕ್ತಿ ಆಗಿದ್ದೂ ಕೂಡ ಎಲ್ಲೂ ಕಂಡಿಲ್ಲ. ಹೀಗಾಗಿ ಪರವಾದಕ್ಕೆ ದೃಷ್ಟಾಂತವೂ ಇಲ್ಲ. ಹೀಗಾಗಿ ಸಂದೇಹಕ್ಕೆ ಆಸ್ಪದವೂ ಇಲ್ಲ. ಸಂದೇಹವೇ ಬಾರದಿರುವಾಗ ಅಪನಂಬಿಕೆಯ ಅಪಸ್ವರಕ್ಕೆ ಅಲ್ಪವೂ ಅವಕಾರಶವಿಲ್ಲ.

ಹೀಗೆ ಭೇದವಾದಕ್ಕೆ ಶ್ರುತಿಯ ಬೆಂಬಲ, ದೃಷ್ಟಾಂತರೂಪಯುಕ್ತಿಯ ಬೆಂಬಲವೂ ಇದೆ.

ಭಿನ್ನಾಭಿನ್ನಾದಿ ಕಲ್ಪೋಕ್ತದೂಷಣೈರ್ಭೇದದೂಷಣಮ್ ।
ಜಾತ್ಯುತ್ತರಂ ಹಿ ತತ್ಸರ್ವಂ ಯತ್ಖಂಡನಕೃತಾ ಕೃತಮ್ ।
ವ್ಯಾವಹಾರಿಕಭೇದಸ್ಯಾಪ್ಯಪಲಾಪಪ್ರಸಂಗತಃ ॥ ೧೪೭೮ ॥

**ಅರ್ಥ–** ಭಿನ್ನಾಭಿನ್ನಾದಿ = ಭಿನ್ನವೋ ಅಭಿನ್ನವೋ ಇದೇ ಮೊದಲಾದ, ಕಲ್ಪೋಕ್ತ = ವಿಕಲ್ಪಗಳಿಂದ ಹೊಳೆದ, ದೂಷಣೈಃ = ದೋಷಗಳಿಂದ, ಖಂಡನಕೃತಾಕೃತಂ = ಖಂಡನಕಾರನಿಂದ ಮಾಡಲ್ಪಟ್ಟ ಯತ್ = ಯಾವ, ಭೇದದೂಷಣಂ = ಭೇದದೋಷಗಳಿವೆಯೋ, ತತ್ಸರ್ವಂ = ಅವೆಲ್ಲವೂ, ವ್ಯಾವಹಾರಿಕಭೇದಸ್ಯ ಅಪಿ = ವ್ಯಾವಹಾರಿಕಭೇದದಲ್ಲೂ ಅಪಿ = ಕೂಡ (ಹೀಗೆಯೇ ವಿಕಲ್ಪಿಸಿ ಆಕ್ಷೇಪಿಸಿ), ಅಪಲಾಪಪ್ರಸಂಗತಃ = ಅಪಲಾಪಮಾಡಬಹುದಾದ್ದರಿಂದ, ಜಾತ್ಯುತ್ತರಂ ಹಿ = ಜಾತ್ಯುತ್ತರವೇ ಆಗಿದೆ, ಹಿ = ಇದು ಪ್ರಸಿದ್ಧ.

**ಅನುವಾದ–** ದ್ವಾಸುಪರ್ಣಾ ಎಂಬ ಶ್ರುತಿಯು ಭೇದವನ್ನು ಹೇಳುತ್ತದೆ ಎಂದು ಸಾಧಿಸಲಾಗಿದೆ. ಅದರ ಮೇಲೆ ಖಂಡನಕಾರನು ಹೀಗೆ ಆಕ್ಷೇಪಿಸುತ್ತಾನೆ. ಅದನ್ನು ಕೂಡ

ವಿಕಲ್ಪಮಾಡಿ ಪ್ರಶ್ನಿಸಿದ್ದಾನೆ. ಭೇದವು ಧರ್ಮಿಯಿಂದ ಭಿನ್ನವೋ, ಅಭಿನ್ನವೋ, ಭಿನ್ನಾಭಿನ್ನವೋ ಎಂದು ಕೇಳಿ ದೋಷವನ್ನು ಹೇಳಿದ್ದಾನೆ. ಆದರೆ ಇದಕ್ಕೆ ಆತಂಕ ಪಡಬೇಕಾದ ಪ್ರಮೇಯವೇ ಇಲ್ಲ. ಏಕೆಂದರೆ ಅವನೂ ಸಹ ವ್ಯಾವಹಾರಿಕವಾದ ಭೇದವನ್ನು ಒಪ್ಪಿದ್ದಾನೆ. ಹೀಗಾಗಿ ಅಲ್ಲೂ ಈ ಆಕ್ಷೇಪವು ಸುಲಭ. ಆದ್ದರಿಂದ ಅವನಿಗೇ ಜಾತ್ಯುತ್ತರ ರೂಪವಾದ ಸ್ವವ್ಯಾಹತಿ ದೋಷವು ಬರುತ್ತದೆ.

**ಭಾವವಿಲಾಸಿನೀ–** ಪ್ರಾಕ್ ಭೇದೇ ಕ್ರಿಯಮಾಣಭಿನ್ನಾದಿವಿಕಲ್ಪಸ್ಯ ದೂಷಣಸ್ಯ ಚ ಐಕ್ಯೇಪಿ ವಕ್ತುಂ ಶಕ್ಯತ್ವಾತ್ ಸ್ವವ್ಯಾಹತಿರಿತ್ಯುಕ್ತಮ್ । ಅಧುನಾ ಏವಂ ವಿಕಲ್ಪ್ಯ ಭೇದದೂಷಣೇ ಕೃತೇ ಸ್ವಾಂಗೀಕೃತ-ವ್ಯಾವಹಾರಿಕತ್ವಸ್ಯಾಪಿ ಭಂಗಪ್ರಸಂಗಾತ್ ಸ್ವವ್ಯಾಹತಿರಿತ್ಯಾಹ – **ಭಿನ್ನಾಭಿನ್ನಾದೀತಿ** ॥ ೧೪೭೮ ॥

ಭೇದಭೇದೇಽನವಸ್ಥಾನಮಭೇದೇ ಚೈಕಶೇಷತಾ ।
ಭೇದಾಭೇದೇ ವಿರೋಧಶ್ಚೇತ್ಯೇತದ್ಧಿ ತವ ದೂಷಣಮ್ ॥ ೧೪೭೯ ॥

**ಅರ್ಥ–** ಭೇದಭೇದೇ = ಭೇದವು ಭೇದವುಳ್ಳ ಧರ್ಮಿಗಿಂತ ಭಿನ್ನವಾಗಿದೆ ಎಂದರೆ, ಅನವಸ್ಥಾನಂ = ಅನವಸ್ಥಾ ಎಂಬ ದೋಷವು ಬರುತ್ತದೆ. ಅಭೇದೇ ಚ = ಜೀವನಿಂದ ಭೇದವು ಅಭಿನ್ನವಾಗಿದೆ ಎಂದರೆ, ಏಕಶೇಷತಾ = ಎರಡರಲ್ಲಿ ಒಂದು ಮಾತ್ರ ಉಳಿಯುತ್ತದೆ. ಭೇದಾಭೇದೇ = ಭೇದ ಮತ್ತು ಅಭೇದವಿದೆಯೆಂದರೆ, ವಿರೋಧಃ ಚ = ಪರಸ್ಪರ ವಿರೋಧವಿದೆ. ಏತತ್ ಹಿ = ಇದು ತಾನೇ, ತವ = ನಿನ್ನ ದೂಷಣಂ = (ನಮ್ಮ ಮೇಲೆ ಮಾಡಿದ) ಆಕ್ಷೇಪವು.

**ಅನುವಾದ–** ಆ ಭೇದವು ಧರ್ಮಿಗಿಂತ ಭಿನ್ನ ಎಂದರೆ ಆ ಭೇದವೂ ಕೂಡ ಭೇದದಿಂದ ಬೇರೆ, ಆ ಭೇದಕ್ಕೂ ಇನ್ನೊಂದು ಭೇದ ಹೀಗೆ ಅನವಸ್ಥಾ ಎಂಬ ದೋಷ, ಇನ್ನು ಭೇದವು ಧರ್ಮಿಯಿಂದ ಅಭಿನ್ನ ಎಂದಾಗ ಎರಡರಲ್ಲಿ ಒಂದೇ ಉಳಿಯಬೇಕು ಎಂದಾಗುತ್ತದೆ. ಇನ್ನು ಭೇದಾಭೇದ ಎಂಬ ಮಾತಂತೂ ಪರಸ್ಪರ ವಿರುದ್ಧ. ಆದ್ದರಿಂದ ಭೇದವು ಕೂಡುವುದಿಲ್ಲ ಎಂಬುದು ನಿನ್ನ ಆಕ್ಷೇಪವಷ್ಟೇ?

**ಭಾವವಿಲಾಸಿನೀ–** ಪ್ರಾಗ್ವಿಕಲ್ಪಾನಾಂ ದೂಷಣಾನಾಂ ಚ ಸ್ಪಷ್ಟಮನುಕ್ತತ್ವಾತ್ ಇದಾನೀಮಾಹ – **ಭೇದಭೇದ ಇತಿ** ॥ ಭೇದಸ್ಯ ಧರ್ಮಿಣಃಸಕಾಶಾತ್ ಭೇದ ಇತ್ಯರ್ಥಃ ॥ ೧೪೭೯ ॥

**ವಿವರಣೆ–** ಜೀವ ಈಶ್ವರರಿಗೆ ಭೇದ ಹೇಳಲಾಗಿದೆ. ಆಗ ಧರ್ಮಿಯಾದ ಜೀವರಿಂದ ಧರ್ಮವಾದ ಭೇದಕ್ಕೆ ಭೇದವಿದೆ ಎಂದಾಗ, ಭೇದಕ್ಕೆ ಅದೇ ಭೇದವೇ ಕಾರಣ ಎಂದರೆ ಆತ್ಮಾಶ್ರಯ, ಪರಂಪರಯನ್ನೇ ಒಪ್ಪಿದರಂತೂ ಅನವಸ್ಥಾದೋಷವು ಬರುತ್ತದೆ.

ಆತ್ಮಾಶ್ರಯಾನವಸ್ಥಾದ್ಯೈಃ ದೋಷೈಃ ಭೇದಸ್ಯ ದೂಷಣೇ ।
ವ್ಯಾವಹಾರಿಕತಾಽಪ್ಯಸ್ಯ ಕಥಂ ಸ್ಯಾತ್ ಯಾ ಮತಾ ತವ ॥ ೧೪೮೦ ॥

**ಅರ್ಥ–** ಆತ್ಮಾಶ್ರಯ = ಆತ್ಮಾಶ್ರಯವು, ಅನವಸ್ಥಾ = ಅನವಸ್ಥೆಯು, ಆದ್ಯೈಃ = ಇವೇ ಮೊದಲಾದ, ದೋಷೈಃ = ದೋಷಗಳಿಂದ, ಭೇದಸ್ಯ ದೂಷಣೇ = ಭೇದವನ್ನು ದೂಷಿಸಿದರೆ ಆಗ, ತವ= ನನಗೆ, ಮತಾ= ಅಭಿಪ್ರೇತವಾದ, ಅಸ್ಯ= ಈ ಭೇದದ, ಯಾ ವ್ಯಾವಹಾರಿಕತಾ= ಯಾವ ವ್ಯಾವಹಾರಿಕತ್ವವಿದೆಯೋ ಅದಾದರೂ, ಕಥಂ ಸ್ಯಾತ್= ಹೇಗೆ ಉಪಪನ್ನವಾಗುತ್ತದೆ.

**ಅನುವಾದ–** ನಮ್ಮ ಶ್ರುತಿಯು ಹೇಳಿದ ಭೇದವನ್ನು ಪರವಾದಿಗಳೇನೋ ಆತ್ಮಾಶ್ರಯ, ಅನವಸ್ಥಾ ಎಂಬ ದೋಷವನ್ನು ಹೇಳಿ ನಿರಾಕರಿಸಿದ್ದಾರೆ. ಆದರೆ ಹಾಗೆ ಹೇಳುವ ಪರವಾದಿಯೂ ಕೂಡ ವ್ಯಾವಹಾರಿಕಭೇದವನ್ನು ಒಪ್ಪಿಯೇ ಇದ್ದಾನೆ. ಆ ಭೇದದಲ್ಲೂ ಇಂತಹ ಆಕ್ಷೇಪವು ಬಂದೇ ಬರುತ್ತದೆ.

**ವಿವರಣೆ–** ಅವನು ಹೇಳಿದ ದೋಷವು ನಮ್ಮನ್ನು ಖಂಡಿಸಬೇಕಾಗಿತ್ತು, ಆದರೆ ಅವನು ವ್ಯಾವಹಾರಿಕಭೇದವನ್ನಂತೂ ಒಪ್ಪಿದ್ದಾನೆ. ಆತ್ಮಾಶ್ರಯಾದಿ ದೋಷಗಳು ಬಂದರೆ ವ್ಯಾವಹಾರಿಕವಾದ ಪದಾರ್ಥ (ಭೇದ)ವನ್ನೂ ಒಪ್ಪುವಂತಿಲ್ಲ. ಆ ಭೇದದ ಮೇಲೂ ಈ ಆಕ್ಷೇಪವು ಸಮಾನ. ಈಗ ಪರನ ಶೂಲವು ಪರನನ್ನೇ ಚುಚ್ಚಿದಂತಾಯಿತು!

**ಕಿಂ ಘಟಃ ಪಟಹೇತುಸ್ತೇ ಪಟೋ ವಾ ಘಟಹೇತುಕಃ ।**
**ಕಿಂ ಸ್ವಯಂ ಸ್ವೋಪರಿ ಘಟಃ ಕಿಂ ಸ್ಯಾತ್ ಘಟಪರಂಪರಾ ॥ ೧೪೮೧ ॥**

**ಅರ್ಥ–** ತೇ = ನಿನಗೆ, ಘಟಃ = ಘಟವು, ಪಟಹೇತುಃ ಕಿಂ? = ಪಟಕ್ಕೆ ಕಾರಣವೇನು? ವಾ = ಅಥವಾ, ಪಟಃ = ಪಟವು, ಘಟಹೇತುಕಃ ಕಿಂ? = ಘಟಕಾರಣವುಳ್ಳದ್ದೇನು? ಅಥವಾ, ಸ್ವಯಂ = ಘಟವೇ, ಸ್ವಯಂ= ತಾನೇ, ಸ್ವೋಪರಿ = ತನ್ನ ಮೇಲೆ, ಸ್ಯಾತ್ ಕಿಂ= ಇರುತ್ತದೇನು? ಹೀಗೆ, ಘಟಪರಂಪರಾ = ಘಟಗಳ ಪರಂಪರೆಯೇ, ಸ್ಯಾತ್ ಕಿಂ? = ಆದೀತೇನು?

**ಅನುವಾದ–** ನೀನು ಘಟವನ್ನು ಪಟ ಹೇತುಕವೆಂದಾಗಲೀ ಅಥವಾ ಪಟವನ್ನು ಘಟ ಹೇತುಕವೆಂದಾಗಲಿ ಒಪ್ಪುತ್ತೀಯಾ? ಘಟವು ತನ್ನ ಮೇಲೆಯೇ ತಾನು ಇರುತ್ತದೆಯೇ? ಅಥವಾ ಘಟದ ಸಂತತಿಯೇ ಉಂಟಾಗುತ್ತದೆಯೇ?

**ಭಾವವಿಲಾಸಿನೀ–** ಭೇದಭಿನ್ನಧರ್ಮಿಣಃ ಪುನರ್ಭೇದಾತ್ ಭಿನ್ನತ್ವಕಥನೇ ಆತ್ಮಾಶ್ರಯಪ್ರಸಕ್ತ್ಯಾ, ಅಭೇದಪಕ್ಷೇ ಆತ್ಮಾಶ್ರಯದೋಷಸ್ಯಾಪಿ ಸತ್ವಾತ್ ಆತ್ಮಾಶ್ರಯಾನವಸ್ಥಾದಿ ದೂಷಣೈರಿ-ತ್ಯುಕ್ತಮ್ । ಅಸ್ಯ ಭೇದಸ್ಯ । ಯಾ ವ್ಯಾವಹಾರಿಕತಾ ॥ ೧೪೮೦-೧೪೮೧ ॥

**ವಿವರಣೆ–** ಭೇದವು ವ್ಯಾವಹಾರಿಕವಾದುದರಿಂದ ಅಲ್ಲಿ ಆತ್ಮಾಶ್ರಯಾದಿ ದೋಷಗಳ ಪ್ರಸಕ್ತಿ ಇಲ್ಲ ಎಂದು ಶಂಕಿಸಿದರೆ ಇಲ್ಲಿ ಅದಕ್ಕೆ ಪ್ರತಿಬಂದಿಗಳನ್ನು ಹೇಳುತ್ತಾರೆ. ವಸ್ತುಗಳು ವ್ಯಾವಹಾರಿಕವಾದರೂ ಆತ್ಮಾಶ್ರಯಾದಿ ದೋಷವಿಲ್ಲದ ಒಂದು ವ್ಯವಸ್ಥೆಯನ್ನು ನೀನೂ

ಸಹ ಒಪ್ಪಬೇಕು. ಘಟಪಟಗಳು ಒಂದಕ್ಕೊಂದು ಕಾರಣವೆಂದು ಒಪ್ಪಿದರೆ ಅನ್ಯೋನ್ಯಾಶ್ರಯವು ಬರುತ್ತದೆ. ಘಟಪಟಗಳು ವ್ಯಾವಹಾರಿಕವಾದ್ದರಿಂದ ಈ ಅನ್ಯೋನ್ಯಾಶ್ರಯವು ದೋಷವಲ್ಲವೆಂದು ಹೇಳುತ್ತೀಯಾ? ಘಟವು ತನ್ನನ್ನು ತಾನೇ ಆಶ್ರಯಿಸಿದೆ ಎಂದು ಹೇಳಿದರೆ ಆತ್ಮಾಶ್ರಯವು ಬರುತ್ತದೆ. ಈ ಆತ್ಮಾಶ್ರಯವು ದೋಷವಲ್ಲವೆಂದು ಹೇಳುತ್ತೀಯಾ? ತನ್ನ ಸಾಮಗ್ರಿಯಿಂದ ಒಂದು ಘಟವು ಉತ್ಪನ್ನವಾದ ಮೇಲೆ ಅಲ್ಲಿಯೇ ಇನ್ನೊಂದು ಘಟವು ಉತ್ಪನ್ನವಾಗುವುದಿಲ್ಲ. ಘಟವು ವ್ಯಾವಹಾರಿಕವಾದ್ದರಿಂದ ಘಟವು ಉತ್ಪನ್ನವಾದ ಸ್ಥಳದಲ್ಲಿ ಘಟವು ಉತ್ಪತ್ತಿಯಾದ ಅನಂತರವೂ ಘಟದ ಪರಂಪರೆಯೇ ಉಂಟಾಗಲಿ ಎಂಬ ಆಪತ್ತಿಯನ್ನು ಸ್ವೀಕರಿಸುತ್ತೀಯಾ? ಇವು ಯಾವುದನ್ನೂ ನೀನು ಸ್ವೀಕರಿಸುವುದಿಲ್ಲ. ಏಕೆಂದರೆ ಇವೆಲ್ಲವೂ ವ್ಯಾವಹಾರಿಕವಾದರೂ ಆತ್ಮಾಶ್ರಯಾದಿ ದೋಷವಿಲ್ಲದ ಒಂದು ವ್ಯವಸ್ಥೆಯನ್ನೇ ನೀನು ಹೇಳಬೇಕು. ಆದ್ದರಿಂದ ಭೇದವು ವ್ಯಾವಹಾರಿಕವಾದ್ದರಿಂದ ಅಲ್ಲಿ ಆತ್ಮಾಶ್ರಯಾದಿಗಳು ದೋಷವಲ್ಲ ಎಂದು ಹೇಳಿ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ವ್ಯಾವಹಾರಿಕ ಭೇದವನ್ನು ಒಪ್ಪುವ ನೀನು ಅಲ್ಲಿಯೂ ಒಂದು ದೋಷವಿಲ್ಲದ ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ ಎಂದು ಅಭಿಪ್ರಾಯ.

**ತದ್ವ್ಯಾವಹಾರಿಕೇಪ್ಯರ್ಥೇ ದೋಷಾಃ ನ ಸ್ಯುರಿಮೇ ಕಥಂ ॥ ೧೪೮೨ ॥**

**ಅರ್ಥ–** ತದ್= ಆದ್ದರಿಂದ, ವ್ಯಾವಹಾರಿಕೇ = ಆ ವ್ಯಾವಹಾರಿಕವಾದ, ಅರ್ಥೇ = ವಿಷಯದಲ್ಲಿಯೂ ಕೂಡ, ಇಮೇ = ಈ ಯಾವ, ದೋಷಾಃ = ದೋಷಗಳು, ಕಥಂ = ಹೇಗೆ, ನ ಸ್ಯುಃ = ಆಗಲಾರವು?

**ಅನುವಾದ–** ಆದ್ದರಿಂದ ವ್ಯಾವಹಾರಿಕವಾದ ಭೇದಾದಿರೂಪವಾದ ಅರ್ಥದಲ್ಲಿಯೂ ಈ ದೋಷಗಳು ಹೇಗೆ ಉಂಟಾಗುವುದಿಲ್ಲ?

**ಭಾವವಿಲಾಸಿನೀ–** ತತ್ ತಸ್ಮಾತ್ ಘಟಾದಿವ್ಯಾವಹಾರಿಕಪದಾರ್ಥೇಷ್ವಪ್ಯಾತ್ಮಾಶ್ರಯಾದೇ-ರ್ದೋಷತ್ವಸ್ಯ ತವಾಪ್ಯಂಗೀಕಾರಾತ್ । ಅರ್ಥೇ ಭೇದರೂಪೇಽರ್ಥೇ ॥ ೧೪೮೨ ॥

**ಅತಸ್ತೇ ವ್ಯವಹಾರಾಯ ಸಮಾಧಾನಂ ಹಿ ಯದ್ ಭವೇತ್ ।**
**ತದೇವ ಪಾರಮಾರ್ಥ್ಯೇಽಪಿ ಸಮಾಧಾನಂ ಭವಿಷ್ಯತಿ ॥ ೧೪೮೩ ॥**

**ಅರ್ಥ–** ಅತಃ = ಆದ್ದರಿಂದ, ತೇ = ನಿನಗೆ, ವ್ಯವಹಾರಾಯ = ವ್ಯಾವಹಾರಿಕ ಭೇದಕ್ಕೆ, ಯತ್ = ಯಾವ, ಸಮಾಧಾನಂ = ಸಮಾಧಾನವು, ಭವೇತ್ = ಆದೀತೋ, ತದೇವ = ಅದೇ, ಪಾರಮಾರ್ಥ್ಯೇ ಅಪಿ = ಪಾರಮಾರ್ಥಿಕಭೇದದಲ್ಲೂ ಸಮಾಧಾನಂ = ಸಮಾಧಾನವು, ಭವಿಷ್ಯತಿ = ಆಗುವುದು.

**ಅನುವಾದ–** ಆದ್ದರಿಂದ ನೀನು ವ್ಯಾವಹಾರಿಕಭೇದವನ್ನು ಉಳಿಸಿಕೊಳ್ಳಲು ಯಾವ ಸಮಾಧಾನವನ್ನು ಹೇಳುತ್ತೀಯೋ ಅದೇ ನಮಗೂ ಕೂಡ ಪಾರಮಾರ್ಥಿಕಭೇದವನ್ನು ಹೇಳಲು ಅನುಕೂಲವಾಗುತ್ತದೆ.

**ಭಾವವಿಲಾಸಿನೀ–** ವ್ಯವಹಾರಾಯ ಭೇದೇ ವ್ಯಾವಹಾರಿಕತ್ವವ್ಯವಹಾರಾಯ । ಪಾರಮಾರ್ಥ್ಯೇ ಭೇದಪಾರಮಾರ್ಥ್ಯೇ । ಭೇದಸ್ಯ ಮಿಥ್ಯಾತ್ವಾತ್ ಅನವಸ್ಥಾದಿಕಂ ನ ದೋಷ ಇತಿ ತ್ವಯಾಪಿ ನ ವಕ್ತುಂ ಶಕ್ಯಮ್ । ಮಿಥ್ಯಾಭೂತಘಟೇಷ್ವೇವ ಏಷಾಂ ದೋಷತ್ವಾಂಗೀಕಾರಾತ್ । ಪ್ರಕಾರಾಂತರೇಣ ಪರಿಹಾರೇ ಮಮಾಪಿ ಸ ಏವ ಪರಿಹಾರೋ ಭವಿಷ್ಯತೀತಿ ಭಾವಃ ॥೧೪೮೩॥

ಕಿಂಚ ತೇ ಪರಮಾರ್ಥ್ಯೈಕ್ಯೇ ವಿಕಲ್ಪೋ ದೂಷಣಾನಿ ಚ ।
ಭವಂತ್ಯೇತಾನಿ ಸರ್ವಾಣಿ ತತಸ್ತಚ್ಚ ಮರಿಷ್ಯತಿ ॥ ೧೪೮೪ ॥

**ಅರ್ಥ–** ಕಿಂ ಚ = ಮತ್ತೂ ಕೂಡ, ತೇ = ನಿನಗೆ, ಪರಮಾರ್ಥ್ಯೈಕ್ಯೇ = ಐಕ್ಯವು ಸತ್ಯ ಎನ್ನುವಾಗ, ವಿಕಲ್ಪಃ = ವಿಕಲ್ಪವೂ, ಏತಾನಿ = ಆತ್ಮಾಶ್ರಯಮೊದಲಾದ, ಸರ್ವಾಣಿ = ಎಲ್ಲಾ ದೂಷಣಾನಿ ಚ = ದೂಷಣಗಳೂ ಕೂಡ, ಭವಂತಿ = ಆಗುತ್ತವೆ. ತತಃ = ಆದ್ದರಿಂದ, ತತ್ ಚ = ಆ ಐಕ್ಯವೂ ಕೂಡ, ಮರಿಷ್ಯತಿ = ಸಾಯುತ್ತದೆ.

**ಅನುವಾದ–** ಮಾಯಾವಾದಿಯು ಐಕ್ಯವನ್ನು ಪರಮಸತ್ಯ ಎಂದೇ ಹೇಳುತ್ತಾನೆ. ಆಗ ನಾವು ಕೂಡ ಆ ಐಕ್ಯವು ಬ್ರಹ್ಮನಿಂದ ಭಿನ್ನವೋ, ಅಭಿನ್ನವೋ ಎಂದೆಲ್ಲಾ ಕೇಳಬಹುದು. ಭಿನ್ನ ಎಂದರೆ ಅನವಸ್ಥಾ ಆತ್ಮಾಶ್ರಯ ಎನ್ನಬಹುದು. ಅಭಿನ್ನ ಎಂದರೆ ಬ್ರಹ್ಮ ಒಂದೇ ಇರಲಿ. ಐಕ್ಯ ಎಂಬ ವಸ್ತು ಏಕೆ ಬೇಕು ಎನ್ನಬಹುದು. ಭಿನ್ನಾಭಿನ್ನವೆಂದರೆ ಪರಸ್ಪರ ವಿರೋಧ. ಆದ್ದರಿಂದ ಐಕ್ಯವು ಕೂಡುವುದಿಲ್ಲ. ಈ ದೋಷಗಳಲ್ಲೂ ಬಂದು ಐಕ್ಯವು ಮರಣಹೊಂದೀತು.

**ಭಾವವಿಲಾಸಿನೀ–** ಪ್ರಾಗುಕ್ತಸ್ವವ್ಯಾಹತಿಂ ಚ ಸ್ಮಾರಯತಿ – **ಕಿಂಚೇತಿ** ॥ ತತ್ ಐಕ್ಯಮ್ ॥೧೪೮೪॥

**ವಿವರಣೆ–** ಪರನಿಗೆ ಬಹಳ ತೊಂದರೆಯಾಗುವುದಾದರೆ ನಮಗೆ ಸ್ವಲ್ಪಕಷ್ಟ ಬಂದರೂ ಸರಿ ಎನ್ನುವುದು ದುಷ್ಟರ ನೀತಿ. ಆದ್ದರಿಂದ ತಮ್ಮ ವ್ಯಾವಹಾರಿಕಭೇದಕ್ಕೆ ತೊಂದರೆ ಬಂದರೂ ಸರಿ ಎನ್ನಬಹುದು. ಆದರೆ ಅಲ್ಪ ಅಪಾಯವಷ್ಟೇ ಆಗದೆ ಪ್ರಾಣಾಪಾಯ ಆಗುವುದು ಉಂಟು. ಹೀಗೆ ಅವನ ಪರಮಾರ್ಥ ಐಕ್ಯವೇ ಅವನೇ ಹೇಳಿದ ತರ್ಕದಿಂದ ತೊಂದರೆಗೆ ಒಳಗಾಗುವುದು ಎಂದು ಅಭಿಪ್ರಾಯ.

ಮೃತಸಂಜೀವನಂ ತತ್ರ ಯತ್ ಸ್ಯಾತ್ ಭೇದೇಽಪಿ ತದ್ ಭವೇತ್ ।
ಅತೋ ಯತ್ಕಿಂಚಿದೇವೈತದಿತಿ ಸರ್ವಂ ಮನೋರಮಮ್ ॥ ೧೪೮೫ ॥

**ಅರ್ಥ–** ತತ್ರ = ಐಕ್ಯದ ವಿಚಾರದಲ್ಲಿ, ಯತ್ = ಯಾವುದು, ಮೃತಸಂಜೀವನಂ = ಸತ್ತವರನ್ನು ಬದುಕಿಸುವ ಔಷಧಿಯಾಗಿ, ಸ್ಯಾತ್ = ನಿನಗೆ ಆದೀತೋ, ತತ್ = ಅದು, ಭೇದೇ= ಭೇದದ ವಿಷಯದಲ್ಲಿ, ಅಪಿ = ಕೂಡ, ಭವೇತ್ = ಆಗುತ್ತದೆ. ಅತಃ = ಆದ್ದರಿಂದ, ಏತತ್= ಈ ನಿನ್ನ ಆಕ್ಷೇಪಣೆಯು, ಯತ್ಕಿಂಚಿದೇವ = ಕ್ಷುಲ್ಲಕವಾದುದು, ಇತಿ = ಹೀಗಾಗಿ, ಸರ್ವಂ= ನಾವು ಹೇಳಿದ ಎಲ್ಲವೂ, ಮನೋರಮಂ = ಮನಸ್ಸಿಗೆ ಸಂತಸಕೊಡುತ್ತದೆ.

**ಅನುವಾದ– ಪರವಾದಿಗೆ ತಾನೇ ಬೇರೆಯವರಿಗೆ ಮಾಡಿದ ಆಕ್ಷೇಪದಿಂದ ತನಗೆ ಅದು ತಿರುಗುಬಾಣವಾಯಿತು. ತನ್ನ ಅತಿ ನೆಚ್ಚಿನ ಜೀವಬ್ರಹ್ಮೈಕ್ಯಕ್ಕೆ ಪ್ರಾಣಾಪಾಯ ಬಂದೊದಗಿತು. ಅದನ್ನು ಹೇಗಾದರೂ ಬದುಕಿಸಲು ಏನಾದರೂ ಸಮಾಧಾನ ಹೇಳಿದರೆ ಅದೇ ಸಮಾಧಾನದಿಂದ ಭೇದವೂ ಕೂಡ ಕೂಡುತ್ತದೆ.**

**ಭಾವವಿಲಾಸಿನೀ– ತತ್ರೈಕ್ಯೇ । ಏತತ್ ವಿಕಲ್ಪೋ ದೂಷಣಂ ಚ ॥ ೧೪೮೫ ॥**

**ಯಾ ಶ್ರುತಿರ್ನೇತಿನೇತ್ಯಾತ್ಮಾಽಗೃಹ್ಯ ಇತ್ಯಾದಿರೂಪಿಣೀ ।**
**ಸಾಪ್ಯಾತ್ಮಾನಂ ಜಡಾಜ್ಜೀವಾದ್ ಭಿನ್ನಂ ಜ್ಞಾಪಯತಿ ಸ್ಫುಟಮ್ ॥ ೧೪೮೬ ॥**

**ಅರ್ಥ–** ನ ಇತಿ = ಆ ವಸ್ತುವಲ್ಲ, ನ ಇತಿ = ಅದೂ ಅಲ್ಲ, ಆತ್ಮಾ= ಎಂದು ಪರಮಾತ್ಮನು, ಗೃಹ್ಯಃ = ತಿಳಿಯಲ್ಪಡಬೇಕು. ಅಗೃಹ್ಯಃ = ಅಚಿಂತ್ಯನು, ಇತ್ಯಾದಿರೂಪಿಣೀ = ಇದೇ ಮೊದಲಾದ, ಯಾ = ಯಾವ, ಶ್ರುತಿಃ = ವೇದವಾಕ್ಯವು ಇದೆಯೋ, ಸಾ = ಅದೂ, ಅಪಿ = ಕೂಡ, ಆತ್ಮಾನಂ = ಪರಮಾತ್ಮನನ್ನು, ಜಡಾತ್ = ಜಡದಿಂದಲೂ, ಜೀವಾತ್ = ಜೀವನಿಂದಲೂ, ಭಿನ್ನಂ = ಭೇದವುಳ್ಳವನೆಂದು, ಸ್ಫುಟಂ = ಸ್ಪಷ್ಟವಾಗಿ, ಜ್ಞಾಪಯತಿ = ತಿಳಿಸುತ್ತದೆ.

**ಅನುವಾದ– ನೇತಿನೇತ್ಯಾತ್ಮಾ ಎಂಬ ಶ್ರುತಿಯು ಭಗವಂತನು ಎಲ್ಲಕ್ಕಿಂತಲೂ ಭಿನ್ನನು, ಅವನು ತಿಳಿಯಲು ಸಾಧ್ಯವಿಲ್ಲ ಎಂದು ಹೇಳುತ್ತಿರುವುದರಿಂದ ಅವನು ಜೀವಕ್ಕಿಂತಲೂ ಭಿನ್ನ, ಜಡಕ್ಕಿಂತಲೂ ಭಿನ್ನ ಎಂದು ಸ್ಪಷ್ಟವಾಗಿ ನಿರೂಪಿಸುತ್ತಿದೆ.**

**ಭಾವವಿಲಾಸಿನೀ– ಶ್ರುತ್ಯಂತರಮಪಿ ಭೇದೇ ಪ್ರಮಾಣಯತಿ – ಯಾ ಶ್ರುತಿರಿತಿ ॥ ೧೪೮೬ ॥**

**ವಿವರಣೆ–**ಅವನುಸರ್ವಕ್ಕಿಂತಲೂ ಭಿನ್ನ ಎಂದು ವೇದವಾಕ್ಯವೇ ಹೇಳುತ್ತಿರುವುದರಿಂದ ಭೇದವನ್ನು ಸ್ವೀಕರಿಸಬೇಕು ಎಂದು ಅಭಿಪ್ರಾಯ.

**ಜಡಂ ನಾತ್ಮಾ ಜೀವಚಿಚ್ಚ ನಾತ್ಮೇತ್ಯರ್ಥೋ ಭವೇನ್ನಮ ।**
**ತವ ದ್ವಿಧಾ ನಿಷೇಧಸ್ಯಾಭಾವೇನ ದ್ವೌ ನಞಾ ವೃಥಾ ॥ ೧೪೮೭ ॥**

**ಅರ್ಥ–** ಆತ್ಮ= ಆತ್ಮನು, ಜಡಂ ನ= ಜಡವಲ್ಲ, ಆತ್ಮ= ಆತ್ಮನು, ಜೀವಚಿಚ್ಚ= ಜೀವ ಚೈತನ್ಯವೂ, ನ= ಅಲ್ಲ, ಇತಿ= ಎಂದು, ಮಮ= ನನಗೆ, ಅರ್ಥಃ= ಅರ್ಥವು, ಭವೇತ್= ಆಗುತ್ತದೆ, ತವ= ನಿನಗಾದರೂ, ದ್ವಿಧಾ= ಎರಡು ರೀತಿಯ, ನಿಷೇಧಸ್ಯ ಅಭಾವೇನ= ನಿಷೇಧವು ಇಲ್ಲದಿರುವುದರಿಂದ, ದ್ವೌ ನಞಾ= ಎರಡು ನಞಾಗಳು, ವೃಥಾ= ವ್ಯರ್ಥವಾಗುತ್ತವೆ.

**ಅನುವಾದ–** ನನಗಾದರೆ ಆತ್ಮನು ಜಡನೂ ಅಲ್ಲ, ಆತ್ಮನು ಜೀವ ಚೈತನ್ಯವೂ ಅಲ್ಲ ಎಂಬ ಅರ್ಥವಾಗುತ್ತದೆ. ನಿನಗಾದರೆ ಎರಡು ನಿಷೇಧಗಳಿಲ್ಲದಿರುವುದರಿಂದ ನಿಷೇಧವನ್ನು ಹೇಳುವ ಎರಡು ನಞ್ ಪದಗಳು ವ್ಯರ್ಥವಾಗುತ್ತವೆ.

**ಭಾವವಿಲಾಸಿನೀ– ಯೋಗ್ಯಶೇಷಂ ಪೂರಯಿತ್ವಾ ಶ್ರುತೇರರ್ಥಮಾಹ – ಜಡಂ ನಾತ್ಮೇತಿ ॥ ಏಕಮೇವಾದ್ವಿತೀಯಂ ನೇಹನಾನೇತ್ಯಾದೌ ದ್ವಿಧಾ ನಿಷೇಧಸ್ಯಾಭಾವೇನ ದ್ವೌ ನಞೋ ವೃಥೇತಿ ಸಂಬಂಧಃ ॥ ೧೪೮೭ ॥**

**ವಿವರಣೆ–** ನಾವು ಸತ್ಯವಾದ ಜಡವನ್ನು ಮತ್ತು ಸತ್ಯವಾದ ಜೀವ ಚೈತನ್ಯವನ್ನು ಒಪ್ಪಿರುವುದರಿಂದ ಮತ್ತು ಬ್ರಹ್ಮನು ಅವೆರಡಕ್ಕಿಂತಲೂ ವಿಲಕ್ಷಣನಾಗಿರುವುದರಿಂದ ಬ್ರಹ್ಮನು ಜಡನಲ್ಲ, ಜೀವನಲ್ಲ ಎಂದು ಎರಡು ನಿಷೇಧಗಳನ್ನು ಹೇಳುವುದು ಉಪಪನ್ನವಾಗುತ್ತದೆ. ನೀನು ಮಾತ್ರ ಜೀವಚೈತನ್ಯಕ್ಕೆ ಬ್ರಹ್ಮಚೈತನ್ಯ ಅಭೇದವನ್ನು ಅಂಗೀಕರಿಸುತ್ತೀಯೆ. ಆದ್ದರಿಂದ ಜಡವನ್ನು ನಿಷೇಧ ಮಾಡಿದರೆ ಸಾಕು. ಒಂದು ನಿಷೇಧವು ಸಾರ್ಥಕವಾಗುತ್ತದೆ. ಇನ್ನೊಂದು ನಿಷೇಧಕ್ಕೆ ವಿಷಯವೇ ಇಲ್ಲದಿರುವುದರಿಂದ ನಿನಗೆ ಎರಡು ನಿಷೇಧಗಳು ವ್ಯರ್ಥವಾಗುತ್ತವೆ.

**ಯಥಾ ಘಟೋ ನೇತಿ ಪಟೋ ಗೃಹ್ಯ ಇತ್ಯುದಿತೇ ಸತಿ ।**
**ಘಟಾದತ್ಯಂತಭಿನ್ನೋಽಸೌ ಪಟಃ ಸಿದ್ಧ್ಯೇನ್ನಚಾಪರಮ್ ॥ ೧೪೮೮ ॥**

**ತಥಾ ಜಡಜಗನ್ನೇತಿ ಗೃಹ್ಯೋ ಜೀವಜಗಚ್ಚ ನ ।**
**ಇತ್ಯಾತ್ಮಾ ಗೃಹ್ಯ ಇತ್ಯುಕ್ತೇ ಕಥಮತ್ಯಂತಭಿನ್ನತಾ ।**
**ಜಡಜೀವಾಖ್ಯಜಗತೋ ನ ಸಿದ್ಧ್ಯೇತ್ ಪರಮಾತ್ಮನಃ ॥ ೧೪೮೯ ॥**

**ಅರ್ಥ–** ಯಥಾ = ಹೇಗೆ, ಪಟಃ = ಬಟ್ಟೆಯು, ಘಟಃ = ಮಡಕೆಯು, ನ = ಅಲ್ಲ, ಇತಿ = ಹೀಗೆಂದು, ಗೃಹ್ಯಃ = ತಿಳಿಯಬೇಕು. ಇತಿ = ಹೀಗೆಂದು, ಉದಿತೇ ಸತಿ = ಹೇಳಿದಾಗ, ಅಸೌ = ಈ, ಪಟಃ = ಬಟ್ಟೆಯು, ಘಟಾತ್ = ಮಡಕೆಗಿಂತ, ಅತ್ಯಂತ ಭಿನ್ನಃ = ಪೂರಾ ಭಿನ್ನ ಇತಿ = ಎಂದು, ಸಿದ್ಧ್ಯೇತ್ = ಸಿದ್ಧಿಸುತ್ತದೆಯೋ, ಚ = ಮತ್ತು, ಅಪರಂ = ಬೇರೇನೂ ಕೂಡ, ನ = ಸಿದ್ಧಿಸುವುದಿಲ್ಲವೋ, ತಥಾ = ಹಾಗೆಯೇ, ಜಡಜಗತ್ = ಜಡಜಗತ್ತು, ನ =

(ಪರಮಾತ್ಮನು) ಅಲ್ಲ, ಇತಿ = ಎಂದು, ಗೃಹ್ಯಃ = ತಿಳಿಯತಕ್ಕದ್ದು. ಜೀವಜಗತ್ = ಜೀವಜಗತ್ತೂ ಕೂಡ, ನ = ಅಲ್ಲ ಇತಿ = ಎಂದು, ಆತ್ಮಾ = ಪರಮಾತ್ಮನು, ಗೃಹ್ಯಃ = ತಿಳಿಯಲ್ಪಡಬೇಕು. ಇತ್ಯುಕ್ತೇ = ಹೀಗೆ ಹೇಳಿದಾಗ, ಜಡಜೀವಾಖ್ಯಜಗತಃ = ಜಡಜೀವಗಳೆಂಬ ಜಗತ್ತಿನ ದೆಸೆಯಿಂದ, ಅತ್ಯಂತಭಿನ್ನತಾ = ಸಂಪೂರ್ಣಭೇದವು, ಕಥಂ = ಹೇಗೆ, ಪರಮಾತ್ಮನಃ= ಪರಮಾತ್ಮನಿಗೆ, ನ ಸಿದ್ಧ್ಯೇತ್ = ಸಿದ್ಧಿಸುವುದಿಲ್ಲ.

**ಅನುವಾದ–** **ಬಟ್ಟೆಯು ಮಡಕೆ ಅಲ್ಲ ಎಂದು ಚೆನ್ನಾಗಿ ತಿಳಿಯಬೇಕು. ಹೀಗೆಂದು ಹೇಳಿದಾಗ ಬಟ್ಟೆಯು ಮಡಕೆಗಿಂತ ಎಲ್ಲಾ ವಿಧದಲ್ಲಿ ಬೇರೆ ಎಂದು ಸ್ಪಷ್ಟವಾಗುತ್ತದೆ, ಹೊರತು ಮಡಕೆಯು ಸುಳ್ಳು ಎಂದೇನೂ ಆಗುವುದಿಲ್ಲ. ಮಡಕೆಗಿಂತ ಬಟ್ಟೆ ಬೇರೆ ಎಂದೇ ಅರ್ಥ ಸಿದ್ಧಿಸುವಂತೆ ಪರಮಾತ್ಮನು ಜಡಜಗತ್ತು ಅಲ್ಲ, ಜೀವಜಗತ್ತು ಕೂಡ ಅಲ್ಲ ಎಂದೇ ತಿಳಿಯಲ್ಪಡಬೇಕು ಎಂದು ಹೇಳಿದಾಗ ಪರಮಾತ್ಮನಿಗೆ ಜೀವಜಗತ್ತು ಮತ್ತು ಜಡಜಗತ್ತಿನ ದೆಸೆಯಿಂದ ಅತ್ಯಂತ ಭೇದವು ಏಕೆ ಸಿದ್ಧಿಸುವುದಿಲ್ಲ?**

**ಭಾವವಿಲಾಸಿನೀ–** ಜಡಂ ನೇತಿ ಆತ್ಮಾಗೃಹ್ಯ ಇತ್ಯುಕ್ತ್ಯಾ ಭೇದಪ್ರಾಪ್ತಿರ್ಭವತೀತ್ಯತ್ರ ದೃಷ್ಟಾಂತಮಾಹ **– ಯಥೇತಿ** ॥ ೧೪೮೮-೧೪೮೯ ॥

**ವಿವರಣೆ–** ಯದ್ಯಪಿ ಆತ್ಮಾಗೃಅಹ್ಯಃ ನ ಹಿ ಗೃಹ್ಯತೇ ಎಂದು ಉಪನಿಷತ್ತಿನ ವಾಕ್ಯವಿದೆ. ಆದನ್ನು ಉಪನಿಷದ್ಭಾಷ್ಯದಲ್ಲಿ ಆತ್ಮ ಅಗೃಹ್ಯಃ ಎಂದು ಪದಚ್ಛೇದ ಮಾಡಿ ಬೇರೆ ಅರ್ಥವನ್ನು ಹೇಳಿದ್ದಾರೆ. ಆದರೆ ಉಪನಿಷತ್ತಿನಲ್ಲಿ ಪದಚ್ಛೇದದ ನಿಯಮವಿಲ್ಲದಿರುವುದರಿಂದ ಇಲ್ಲಿ ವಾದಿರಾಜರು ಆತ್ಮ ಗೃಹ್ಯಃ ಎಂದು ಪದಚ್ಛೇದವನ್ನು ಮಾಡಿ ತಮ್ಮ ಕಲ್ಪನೆಯ ಚಮತ್ಕಾರದಿಂದ ಹೊಸ ಅರ್ಥವನ್ನು ಹೇಳುತ್ತಿದ್ದಾರೆ.

ದ್ವಿರ್ನಿಷೇಧಬಲಾಜ್ಜೀವಜಡಯೋಶ್ಚ ಗ್ರಹೋ ಧ್ರುವಃ ।
ಮಿಥ್ಯಾತ್ವಾಶಾ ತು ಪೂರ್ವೋಕ್ತನಿದರ್ಶನಪರಾಹತಾ ॥ ೧೪೯೦ ॥

**ಅರ್ಥ–** ದ್ವಿಃ = ಎರಡುಸಲ, ನಿಷೇಧಬಲಾತ್ = ನ ನ – ಅಲ್ಲ ಅಲ್ಲ ಎಂದು ನಿಷೇಧಿಸುವ ಬಲದಿಂದಾಗಿ, ಜೀವಜಡಯೋಶ್ಚ= ಜೀವ ಮತ್ತು ಜಡಗಳ, ಗ್ರಹಃ = ಸ್ವೀಕಾರವು, ಧ್ರುವಃ = ನಿಶ್ಚಯವಾಯಿತು. ಮಿಥ್ಯಾತ್ವಾಶಾ = ಜಗತ್ತು ಸುಳ್ಳು ಎಂಬ ಆಶೆಯು, ಪೂರ್ವೋಕ್ತ = ಹಿಂದೆ ಹೇಳಿದ, ನಿದರ್ಶನ = ಪಟಃ ಘಟಃ ನ ಎಂಬ ದೃಷ್ಟಾಂತದಿಂದ, ಪರಾಹತಾ = ನಿರಾಕೃತವಾಯಿತು.

**ಅನುವಾದ–** **ಎರಡು ಬಾರಿ ನಿಷೇಧ ಮಾಡಿದುದರಿಂದ ನಿಷೇಧ ಪ್ರತಿಯೋಗಿಗಳಾಗಿ ಜೀವ ಮತ್ತು ಜಡಗಳನ್ನೇ ಸ್ವೀಕಾರ ಮಾಡಬೇಕೆಂಬುದು ನಿಶ್ಚಯ. ಆದರೆ ಜೀವ-ಜಡಗಳ ಭೇದವನ್ನು ಹೇಳಿದ ಮಾತ್ರದಿಂದ ಅವುಗಳಿಗೆ ಮಿಥ್ಯಾತ್ವದ ಆಶೆಯು ಮಾತ್ರ ಹಿಂದೆ ಹೇಳಿದ ಘಟ ಪಟ ದೃಷ್ಟಾಂತದಿಂದ ನಿರಾಕೃತವಾಗುತ್ತದೆ.**

**ಭಾವವಿಲಾಸಿನೀ–** ಪೂರ್ವೋಕ್ತನಿದರ್ಶನಂ ಯಥಾ ಘಟೋನೇತಿ ಪಟೋ ಗೃಹ್ಯ ಇತಿ ನಿದರ್ಶನಮ್ । ಘಟೋನೇತಿ ಪಟೋ ಗೃಹ್ಯ ಇತ್ಯುಕ್ತೇ ಯಥಾ ಘಟಸ್ಯ ಮಿಥ್ಯಾತ್ವಂ ನಾಯಾತಿ । ಪ್ರತ್ಯುತ ತದ್ಭೇದ ಏವ ಪಟಸ್ಯಾಯಾತಿ । ತಥಾ ಜಗನ್ನೇತ್ಯಾತ್ಮಾಗೃಹ್ಯ ಇತಿ ತ್ವದ್ರೀತ್ಯೋಕ್ತೇಽಪಿ ಜಗತೋನಮಿಥ್ಯಾತ್ವಂ ಕಿಂತು ಜಗದ್ಭೇದ ಏವ ಆತ್ಮನಿಸಿದ್ಧ್ಯತೀತಿ ಭಾವಃ ॥ ೧೪೯೦ ॥

**ವಿವರಣೆ–** ಲೋಕದಲ್ಲಿ ಕಂಡಿರುವಂತೆಯೇ ಶಬ್ದಗಳಿಗೆ ಅರ್ಥೈಸಬೇಕು.ದೇವದತ್ತ ಹೆಂಗಸಲ್ಲ ಎಂದರೆ ಗಂಡಸು ಎಂದರ್ಥವಾಗುತ್ತದೆ, ವಿನಹ ಅವನು ಸುಳ್ಳು ಎಂದಾಗುವುದಿಲ್ಲ. ಹೀಗೆ ವೇದದಲ್ಲಿಯೂ ಇದೇ ಕ್ರಮವನ್ನು ಅನುಸರಿಸಬೇಕು.

**ಅನ್ಯಮೀಶಮಿತಿ ಪ್ರಾಹ ಜೀವಾದನ್ಯಮಧೀಶ್ವರಮ್ ।**
**ಶ್ರುತಿಃ ಪ್ರಾಗ್ ದ್ವಾಸುಪರ್ಣೇತಿ ಪ್ರೋಕ್ತವಾಕ್ಯಸಮಾಖ್ಯಯಾ ॥ ೧೪೯೧ ॥**

**ಅರ್ಥ–** ಶ್ರುತಿಃ= 'ಜುಷ್ಟಂ ಯದಾಪಶ್ಯತ್ಯನ್ಯಮೀಶಂ ಅಸ್ಯಮಹಿಮಾನಮಿತಿ ವೀತಶೋಕಃ' ಎಂಬ ಶ್ರುತಿ ವಾಕ್ಯದಲ್ಲಿರುವ, ಅನ್ಯಮೀಶಂ= ಅನ್ಯಮೀಶಂ ಎಂಬ ವಾಕ್ಯಭಾಗವು, ದ್ವಾಸುಪರ್ಣೇತಿ= ದ್ವಾಸುಪರ್ಣಾ ಎಂದು, ಪ್ರಾಕ್= ಹಿಂದೆ, ಪ್ರೋಕ್ತ ವಾಕ್ಯಸಮಾಖ್ಯಯಾ= ಹೇಳಿದ ಶ್ರುತಿ ವಾಕ್ಯದ ಸಮಾಖ್ಯೆಯಿಂದ, ಜೀವಾದನ್ಯಂ= ಜೀವನಿಗಿಂತ ಭಿನ್ನನಾದ, ಅಧೀಶ್ವರಂ= ಮಹಾಪ್ರಭುವನ್ನು, ಆಹ= ಹೇಳುತ್ತದೆ.

**ಅನುವಾದ–** 'ಜುಷ್ಟಂ ಯದಾಪಶ್ಯತಿ ಅನ್ಯಮೀಶಂ' ಎಂಬ ಶ್ರುತಿಯಲ್ಲಿರುವ ಅನ್ಯಮೀಶಂ ಎಂಬ ಶಬ್ದಗಳು ಹಿಂದೆ ಹೇಳಿದ ದ್ವಾಸುಪರ್ಣಾ ಶ್ರುತಿಯ ಸಮಾಖ್ಯೆಯಿಂದ ಜೀವನಿಗಿಂತ ಭಿನ್ನನಾದ ಮಹಾಪ್ರಭುವನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ಭೇದೇ ಶ್ರುತ್ಯಂತರಂ ಚಾಹ – **ಅನ್ಯಮೀಶಮಿತಿ** ॥ ಶ್ರುತಿಃ ಆಥರ್ವಣೋಪನಿಷತ್ । ಪ್ರಾಕ್‌ಪೂರ್ವಭಾಗೇ ॥ ೧೪೯೧ ॥

**ವಿವರಣೆ–** ಪಟಃ ಘಟೋ ನ ಎಂಬಂತೆಯೇ ಪಟಃ ಘಟಾತ್ ಅನ್ಯಃ ಎಂದೂ ಹೇಳುತ್ತಾರೆ. ನಕಾರ ಹಾಗೂ ಅನ್ಯಶಬ್ದವು ಸಮಾನಾರ್ಥಕ. ಹೀಗಾಗಿ ದ್ವಾಸುಪರ್ಣಾ ಶ್ರುತಿಯೂ ನೇತಿ ನೇತಿ ಆತ್ಮಾ ಎಂಬ ಶ್ರುತಿಯೂ ಭೇದವಾಚಕವೇ ಆಗಿದೆ ಎಂದು ಸುಸ್ಪಷ್ಟ

**ಘಟಕುಡ್ಯವದನ್ಯತ್ವೇ ಸಾಮ್ಯಂ ಸ್ಯಾತ್ ತೇನ ತಂ ಶ್ರುತಿಃ ।**
**ಈಶಮಾಹ ಗುಣಾಖ್ಯಂ ಚ ಮಹಿಮಾನಂ ಪುನರ್ಜಗೌ ॥ ೧೪೯೨ ॥**

**ಅರ್ಥ–** ಘಟಕುಡ್ಯವತ್ = ಮಡಕೆ-ಗೋಡೆಗಳಂತೆ, ಅನ್ಯತ್ವೇ = ಕೇವಲ ಭೇದವನ್ನು ಹೇಳಿದರೆ, ಸಾಮ್ಯಂ = ಸಾಮ್ಯವು, ಸ್ಯಾತ್ = ಆದೀತು. ತೇನ = ಆ ಕಾರಣದಿಂದ,

ಗುಣಾಖ್ಯಂ = ಗುಣ ಎಂಬ, ಮಹಿಮಾನಂ = ಮಹಿಮೆಯುಳ್ಳವನನ್ನಾಗಿ, ಈಶಂ = ಭಗವಂತನನ್ನು, ಆಹ = ಹೇಳಿತು. ಪುನಃ= ಮತ್ತೆ, ಜಗೌ = ಹೇಳಿತು!

**ಅನುವಾದ–** ಕೇವಲ ಭೇದವನ್ನಷ್ಟೇ ಹೇಳಿದರೆ ಘಟಪಟಗಳಿರುವಂತೆ ಸಾಮ್ಯವೇ ಸಿದ್ಧವಾದೀತು. ಅದಕ್ಕಾಗಿ ಶ್ರುತಿಯು ಈಶನೆಂದು ಮೊದಲು ಹೇಳಿ ಅನಂತರ ಅವನ ಮಹಿಮೆಯೆಂಬ ಗುಣವನ್ನೂ ಹೇಳುತ್ತದೆ.

**ಭಾವವಿಲಾಸಿನೀ–** ಅತಃ ಜೀವಾದನ್ಯಮಿತ್ಯುಕ್ತಂ ತಂ ಪರಮಾತ್ಮಾನಮ್ ॥ ೧೪೯೨ ॥

ತ್ರಿತಯಜ್ಞಾನತೋ ಜೀವೋ ವೀತಶೋಕೋ ಭವೇತ್ ಕಿಲ ।
ಇತಿ ಶಬ್ದೇನ ತಜ್‌ಜ್ಞಾನಂ ಸಪ್ರಕಾರಕಮಾಹ ಚ ॥ ೧೪೯೩ ॥

**ಅರ್ಥ–** ತ್ರಿತಯಜ್ಞಾನತಃ = ಜೀವಭಿನ್ನತೆ, ಸರ್ವೇಶ್ವರತ್ವ, ಸಗುಣತ್ವ ಈ ಮೂರರ ಜ್ಞಾನದಿಂದ, ಜೀವಃ = ಜೀವನು, ವೀತಶೋಕಃ = ಶೋಕರಹಿತನು, ಭವೇತ್ ಕಿಲ = ಆಗುತ್ತಾನಷ್ಟೇ, ಇತಿ = ಹೀಗೆ ಎಂಬ, ಶಬ್ದೇನ, = ಶಬ್ದದಿಂದ, ತತ್ = ಆ, ಜ್ಞಾನಂ = ಜ್ಞಾನವು, ಸಪ್ರಕಾರಕಂ= ವಿಶೇಷಣ ವಿಷಯಕವಾದುದೇ ಆಗಿದೆ, ಚ = ಎಂದೂ ಕೂಡ, ಆಹ = ಹೇಳಿತು.

**ಅನುವಾದ–** ಜೀವ ಭೇದ, ಸರ್ವೇಶ್ವರತ್ವ ಮತ್ತು ಸಗುಣತ್ವ ಈ ಮೂರರ ಜ್ಞಾನದಿಂದ ಜೀವನು ವೀತಶೋಕನಾಗುವನಷ್ಟೇ (ಮುಕ್ತನಾಗುವನಷ್ಟೇ). ಆದ್ದರಿಂದ ಇತಿ ವೀತಶೋಕ ಎಂಬಲ್ಲಿರುವ ಇತಿ ಶಬ್ದವು ಮೋಕ್ಷ ಜನಕವಾದ ಬ್ರಹ್ಮವಿಷಯಕವಾದ ಜ್ಞಾನವು ಸಪ್ರಕಾರಕ ಜ್ಞಾನವೆಂದೇ ಹೇಳುತ್ತದೆ.

**ಭಾವವಿಲಾಸಿನೀ–** ತ್ರಿತಯಜ್ಞಾನತಃ ಅನ್ಯತ್ವಸರ್ವೇಶ್ವರತ್ವಸಗುಣತ್ವಜ್ಞಾನತಃ । ಅನ್ಯಮೀಶಂ ಅಸ್ಯ ಪರಪರಮಾತ್ಮನಃ ಮಹಿಮಾನಂ ಚ ಇತಿ ದ್ವಾಸುಪರ್ಣೇತ್ಯಾದಿ ವಾಕ್ಯೋಕ್ತ ಪ್ರಕಾರೇಣ ಯೋ ವೇತ್ತಿ ಸವೀತಶೋಕೋಭವತೀತಿವಾಕ್ಯಾರ್ಥಲಾಭಾತ್‌ತ್ರಿತಯ ಜ್ಞಾನತ ಇತ್ಯುಕ್ತಮ್ ॥೧೪೯೩॥

**ವಿವರಣೆ–** ಅದ್ವೈತಿಗಳು ನಿಷ್ಪ್ರಕಾರಕವಾದ ಚರಮ ಸಾಕ್ಷಾತ್ಕಾರದಿಂದ ಮೋಕ್ಷ ಉಂಟಾಗುವುದೆಂದು ಹೇಳುತ್ತಾರೆ. ಆದರೆ ಜ್ಞಾನದಿಂದ ಮೋಕ್ಷವನ್ನು ಹೇಳುವ ಈ ಶ್ರುತಿಯು ಆ ಜ್ಞಾನವು ಜೀವಭೇದಾದಿ ವಿಷಯಕವೆಂದು ಹೇಳಿ ಸಪ್ರಕಾರಕವೆಂದೇ ಹೇಳುತ್ತಿದೆ. ಆದ್ದರಿಂದ ನಿಷ್ಪ್ರಕಾರಕ ಬ್ರಹ್ಮಜ್ಞಾನದಿಂದ ಮೋಕ್ಷವಾಗುವುದಿಲ್ಲವೆಂದು ಒಂದು ಪ್ರಮೇಯವು ಸಿದ್ಧವಾಗುತ್ತದೆ. ಮತ್ತು ಭೇದವು ಮೋಕ್ಷ ಜನಕ ಜ್ಞಾನ ವಿಷಯವಾದುದರಿಂದ ಸತ್ಯವೆಂದೂ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಸಾಕ್ಷಾನ್ಮೋಕ್ಷಪ್ರದತ್ವೋಕ್ತ್ಯಾ ತತ್ತ್ವಮಾಸೀದಿದಂ ತ್ರಯಮ್ ।
ತಸ್ಮಾದಭೇದಃ ಸಾಮ್ಯಂ ಚ ನೈರ್ಗುಣ್ಯಂ ಚ ನಿರಾಕೃತಂ ॥ ೧೪೯೪ ॥

**ಅರ್ಥ–** ಇದಂ = ಈ ಯಾವ, ತ್ರಯಂ = ಮೂರು ವಸ್ತುಗಳು, ಸಾಕ್ಷಾತ್ = ನೇರವಾಗಿಯೇ, ಮೋಕ್ಷಪ್ರದತ್ವೋಕ್ತ್ಯಾ = ಮೋಕ್ಷವನ್ನು ಕೊಡುವುದು ಎಂದು ಹೇಳಿರುವುದರಿಂದ, ತತ್ತ್ವಂ = ಸತ್ಯವೆಂದೇ, ಆಸೀತ್ = ಆಯಿತು. ತಸ್ಮಾತ್ = ಆದ್ದರಿಂದ, ಅಭೇದಃ = ಅಭೇದವೂ, ಸಾಮ್ಯಂ ಚ = ಜೀವಸಾಮ್ಯವೂ, ನೈರ್ಗುಣ್ಯಂ ಚ = ನಿರ್ಗುಣತೆಯೂ (ಪರಬ್ರಹ್ಮನಿಗೆ) ನಿರಾಕೃತಂ = ನಿರಾಕರಿಸಲ್ಪಟ್ಟಿತು.

**ಅನುವಾದ–** ಜೀವಭಿನ್ನನು, ಸರ್ವೇಶ್ವರನು, ಗುಣಪೂರ್ಣನು ಇದನ್ನು ತಿಳಿದವನು ಕರ್ಮಬಂಧದಿಂದ ಮುಕ್ತನಾಗುವನು ಎಂದಿರುವುದರಿಂದ ಇವು ನೇರವಾಗಿ ಮುಕ್ತಿಗೆ ಕಾರಣ ಎಂದಾಯಿತು. ಹೀಗಿರುವಾಗ ಇದಕ್ಕೆ ವಿರುದ್ಧವಾದ ಜೀವಾಭೇದ, ಜೀವರೊಂದಿಗೆ ಸಾಮ್ಯ, ಈಶ್ವರನ ನಿರ್ಗುಣತ್ವ ಈ ಮೂರು ನಿರಾಕೃತವಾದುವು.

**ಭಾವವಿಲಾಸಿನೀ–** ತಸ್ಮಾದೇತತ್‌ಶ್ರುತಿಬಲಾತ್ ॥ ೧೪೯೪ ॥

**ವೀತಶೋಕ ಇತಿ ಪ್ರಾಹ ಯತಃ ಸ ಜ್ಞಾನಿನಃ ಫಲಂ ।**
**ತತೋ ಜೀವೇಶಭೇದೇಽಸ್ಯ ತಾತ್ಪರ್ಯಂ ಚಾವಗಮ್ಯತೇ ॥ ೧೪೯೫ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಸಃ= ಮಂತ್ರವು, ಜ್ಞಾನಿನಃ = ಜ್ಞಾನಿಯಾದವನಿಗೆ, ವೀತಶೋಕಃ = ಶೋಕರಹಿತನಾಗುತ್ತಾನೆ, ಇತಿ = ಹೀಗೆ, ಫಲಂ = ಫಲವನ್ನು ಪ್ರಾಹ = ಹೇಳಿತೋ, ತತಃ = ಆದ್ದರಿಂದ, ಅಸ್ಯಃ = ಈ ವಾಕ್ಯಕ್ಕೆ, ಜೀವೇಶಭೇದೇ = ಜೀವ - ಈಶ್ವರಭೇದದಲ್ಲಿ, ತಾತ್ಪರ್ಯಂ ಚ = ತಾತ್ಪರ್ಯವೂ ಕೂಡ, ಅವಗಮ್ಯತೇ = ತಿಳಿಯಲ್ಪಡುತ್ತದೆ.

**ಅನುವಾದ–** ಇದನ್ನು ತಿಳಿದವನು ಪುಣ್ಯಪಾಪಗಳಿಂದ ಮುಕ್ತನಾಗುತ್ತಾನೆ ಎಂದು ಫಲವನ್ನು ಹೇಳಿರುವುದರಿಂದ ಶ್ರುತಿವಾಕ್ಯಕ್ಕೆ ಜೀವೇಶ್ವರರ ಭೇದದಲ್ಲಿಯೇ ತಾತ್ಪರ್ಯವಿದೆ ಎಂಬುದು ಸಿದ್ಧವಾಯಿತು.

**ಭಾವವಿಲಾಸಿನೀ–** ಅಸ್ಯಾಃ ಶ್ರುತೇಃ ॥ ೧೪೯೫ ॥

**ವಿವರಣೆ–** 'ಜುಷ್ಟಂ ಯದಾಪಶ್ಯತಿ' ಎನ್ನುವ ವಾಕ್ಯವು ವೀತಶೋಕಃ ಎಂದು ಹೇಳಿ ಅಂತಹ ಜ್ಞಾನಿಗೆ ಶೋಕರಾಹಿತ್ಯರೂಪವಾದ ಮೋಕ್ಷವು ಫಲವೆಂದು ಹೇಳಿದೆ. ಉಪಕ್ರಮಾದಿ ತಾತ್ಪರ್ಯ ಲಿಂಗಗಳಲ್ಲಿ ಫಲವೂ ಒಂದು ಲಿಂಗ ಎಂಬುದು ಸರ್ವಸಮ್ಮತ. ಆದ್ದರಿಂದ ಇಲ್ಲಿ ಫಲವು ಒಂದು ಲಿಂಗವಿರುವುದರಿಂದ ಈ ವಾಕ್ಯದಲ್ಲಿ ಹೇಳಿದ ವಿಷಯವು ಶ್ರುತಿಯ ತಾತ್ಪರ್ಯಕ್ಕೆ ವಿಷಯವಾದುದು ಎಂದು ತಿಳಿಯುತ್ತದೆ. ಆದ್ದರಿಂದ ಸತ್ಯವೆಂದೂ ತಿಳಿಯುತ್ತದೆ. ಇಲ್ಲದಿದ್ದರೆ ಶ್ರುತಿಗೆ ಅತತ್ತ್ವಾವೇದಕತ್ವವು ಬರುತ್ತದೆ. ಈ

ವಾಕ್ಯದಲ್ಲಿ ಹೇಳುವ ವಿಷಯವು ಜೀವೇಶ್ವರ ಭೇದ. ಆದ್ದರಿಂದ ಜೀವೇಶ್ವರ ಭೇದವು ಸತ್ಯವೆಂದು ಸಿದ್ಧವಾಗುತ್ತದೆ.

ಏಷ ಸರ್ವೇಶ್ವರ ಇತಿ ಕಾಚಿದ್ ವಕ್ತಿ ತಮೀಶ್ವರಂ ।
ಸ ಸರ್ವಸ್ಯ ವಶೀ ಸರ್ವಸ್ಯೇಶಾನ ಇತಿ ಚಾಪರಾ ।
ಅತಃ ಸಯುಕ್ತಿಕಃ ಸ್ವಾಮಿಭೃತ್ಯಭೇದಃ ಶ್ರುತೌ ಶ್ರುತಃ ॥ ೧೪೯೬ ॥

**ಅರ್ಥ—** ಏಷಃ = ಈ ಭಗವಂತನು, ಸರ್ವೇಶ್ವರಃ = ಸರ್ವರಿಗೂ ಒಡೆಯನು, ಇತಿ = ಹೀಗೆಂದು, ಕಾಚಿತ್ = ಒಂದು ಶ್ರುತಿಯು, ತಂ = ಆ, ಈಶ್ವರಂ = ಸರ್ವೋತ್ತಮನನ್ನು ವಕ್ತಿ = ಹೇಳುತ್ತದೆ. ಸಃ = ಅವನು, ಸರ್ವಸ್ಯ = ಸರ್ವಕ್ಕೆ, ವಶೀ = ಒಡೆಯನು. ಸರ್ವಸ್ಯ = ಸರ್ವಕ್ಕೂ, ಈಶಾನಃ = ಸ್ವಾಮಿಯು, ಇತಿ ಚ = ಹೀಗೆಂದೂ ಕೂಡ, ಅಪರಾ = ಮತ್ತೊಂದು ಶ್ರುತಿಯು, ವಕ್ತಿ = ಹೇಳುತ್ತದೆ. ಅತಃ = ಆದ್ದರಿಂದ, ಶ್ರುತೌ = ಶ್ರುತಿಯಲ್ಲಿ, ಶ್ರುತಃ = ಹೇಳಿದ, ಸ್ವಾಮಿಭೃತ್ಯಭೇದಃ = ಒಡೆಯ ಸೇವಕನ ಭೇದವು, ಸಯುಕ್ತಿಕಃ = ಯುಕ್ತಿಸಹಿತವಾದುದು.

**ಅನುವಾದ—** ಒಂದು ಶ್ರುತಿಯು ಭಗವಂತನನ್ನು ಸರ್ವೇಶ್ವರನು ಎಂದು ಹೇಳಿದರೆ, ಇನ್ನೊಂದು ಶ್ರುತಿಯು ಅವನನ್ನು ಸರ್ವವನ್ನೂ ವಶಪಡಿಸಿಕೊಂಡಿರುವವನು ಮತ್ತು ಸರ್ವಸ್ವಾಮಿ ಎಂದು ನಿರೂಪಿಸುತ್ತಿದೆ. ಹೀಗಿರುವಾಗ ಶ್ರುತಿಯಲ್ಲಿ ಹೇಳಿದ ಸ್ವಾಮಿಭೃತ್ಯಭೇದವು ಯುಕ್ತಿಸಹಿತವಾದುದು ಎಂದು ಸಿದ್ಧವಾಯಿತು.

**ಭಾವವಿಲಾಸಿನೀ—** ಕಾಚಿತ್ ಮಾಂಡೂಕೋಪನಿಷತ್ । ಅಪರಾ ಸರ್ವಸ್ಯ ವಶೀ ಸರ್ವಸ್ಯೇಶಾನ ಇತ್ಯಾದಿರೂಪಾ ಬೃಹದಾರಣ್ಯಕೋಪನಿಷತ್ । ಮಾಂಡೂಕೋಪನಿಷದಿ ಏಷ ಸರ್ವೇಶ್ವರ ಏಷ ಸರ್ವಜ್ಞ ಏಷ ಸರ್ವಾಂತರ್ಯಾಮ್ಯೇಷಯೋನಿಃ ಸರ್ವಸ್ಯೇತಿ ಸರ್ವೇಶ್ವರತ್ವೇ ಸರ್ವಜ್ಞತ್ವಾದಿ ಯುಕ್ತಿತ್ರಯಕಥನಾತ್ ಬೃಹದಾರಣ್ಯಕೇ ಚ ಸರ್ವವಶಿತ್ವಾದಿ ಯುಕ್ತಿಕಥನಾತ್ ಸಯುಕ್ತಿಕ ಇತ್ಯುಕ್ತಮ್ ॥ ೧೪೯೬ ॥

**ವಿವರಣೆ—** ಮಾಂಡೂಕ ಶ್ರುತಿಯು 'ಏಷ ಸರ್ವೇಶ್ವರಃ' ಎಂದು ಹೇಳುತ್ತದೆ. ಬೃಹದಾರಣ್ಯೋಪನಿಷತ್ತು 'ಏಷ ಸರ್ವಸ್ಯ ವಶೀ ಸರ್ವಸ್ಯೇಶಾನಃ' ಎಂದು ಹೇಳುತ್ತದೆ. ಮಾಂಡೂಕೋಪನಿಷತ್ತಿನಲ್ಲಿ 'ಏಷ ಸರ್ವೇಶ್ವರಃ' ಎಂದು ಸರ್ವೇಶ್ವರತ್ವವನ್ನು, 'ಏಷ ಸರ್ವಜ್ಞಃ' ಎಂದು ಸರ್ವಜ್ಞತ್ವವನ್ನು 'ಏಷ ಸರ್ವಾಂತರ್ಯಾಮೀ' ಎಂದು ಹೇಳಿ ಸರ್ವ ನಿಯಾಮಕತ್ವವನ್ನು ಹೇಳಿ ಈ ಯುಕ್ತಿ ತ್ರಯಗಳಿಂದಲೂ ಮತ್ತು ಬೃಹದಾರಣ್ಯೋಪನಿಷತ್ತಿನಲ್ಲಿ ಹೇಳಿರುವ ಸರ್ವವಶಿತ್ವ ಯುಕ್ತಿಯಿಂದಲೂ ಭೇದವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಯ ಆತ್ಮನಿ ಸದಾ ತಿಷ್ಠನ್ ಆತ್ಮನೋಽಂತರ ಇತ್ಯಪಿ ।**
**ತೇಽಂತ್ಯರ್ಯಾಮ್ಯೇಷ ಇತ್ಯಾದ್ಯಾಃ ಶ್ರುತಯಃ ಸೂತ್ರಸೂಚಿತಾಃ ॥೧೪೯೭॥**

**ಅರ್ಥ–** ಯಃ = ಯಾವನು, ಆತ್ಮನಿ = ಜೀವನ ಒಳಗೆ, ಸದಾ = ಯಾವಾಗಲೂ, ತಿಷ್ಠನ್= ಇರುವವನಾಗಿ, ಆತ್ಮನಃ = ಜೀವನಿಗಿಂತ, ಅಂತರಃ = ಭಿನ್ನನಾಗಿರುವವನು, ಇತಿ = ಹೀಗೆಂಬ, ಅಪಿ = ಶ್ರುತಿಯೂ ಕೂಡ, ಏಷಃ = ಇವನೇ, ತೇ = ನಿನ್ನ ಅಂತರ್ಯಾಮೀ = ಅಂತರ್ಯಾಮಿಯು, ಇತಿ = ಇದೇ, ಆದ್ಯಾಃ = ಮೊದಲಾದ, ಶ್ರುತಯಃ = ಶ್ರುತಿಗಳು, ಸೂತ್ರಸೂಚಿತಾಃ = ಸೂತ್ರದಿಂದ ಸೂಚಿತವಾದವುಗಳು.

**ಅನುವಾದ–** ಯ ಆತ್ಮನಿ ತಿಷ್ಠನ್ ಎಂಬ ಬೃಹದಾರಣ್ಯಕಶ್ರುತಿಯು ಭಗವಂತನನ್ನು ಜೀವನ ಒಳಗೆ ಜೀವನಿಗಿತ ಭಿನ್ನನಾಗಿ ಇರುವವನು ಎಂದು ಹೇಳುತ್ತಿದೆ. ಏಷ ತೇ ಅಂತರ್ಯಾಮೀ ಇವನೇ ನಿನ್ನ ಅಂತರ್ಯಾಮಿ ಎಂಬ ಇದೇ ಶ್ರುತಿಯೂ ನಿರ್ಣಾಯಕವಾದ ಬ್ರಹ್ಮಸೂತ್ರಗಳಿಂದ ಸೂಚಿತವಾಗಿದೆ. ಹೀಗಾಗಿ ನೂರಾರು ಸಾವಿರಾರು ಶ್ರುತಿಗಳು ಜೀವೇಶಭೇದವನ್ನೇ ಹೇಳುತ್ತಿವೆ.

**ಭಾವವಿಲಾಸಿನೀ–** ಯ ಆತ್ಮನೀತ್ಯನೇನ ಯ ಆತ್ಮನಿತಿಷ್ಠನ್ನಾತ್ಮನೋಂತರೋಯಮಾತ್ಮಾನವೇದೇತಿ ಬೃಹದಾರಣ್ಯಕವಾಕ್ಯಂ ಗೃಹ್ಣಾತಿ । ತೇ ಅಂತರ್ಯಾಮೀತ್ಯನೇನ ಏಷ ತ ಆತ್ಮಾಂತರ್ಯಾಮೀತಿ ತತ್ರತ್ಯಂ ವಾಕ್ಯಾಂತರಂಗೃಹ್ಣಾತಿ । ಏತೇಷಾಂ ವಾಕ್ಯಾನಾಂ ಶಾರೀರಶ್ಚೋಭಯೇಪಿ ಹಿ ಭೇದೇನೈನ-ಮಧೀಯತೇ, ಅಂತರ್ಯಾಮ್ಯಧಿದೇವಾದಿಷು ತದ್ಧರ್ಮವ್ಯಪದೇಶಾದಿತಿ ಸೂತ್ರದ್ವಯ-ವಿಷಯವಾಕ್ಯತ್ವಾತ್ ಸೂತ್ರಸೂಚಿತಾ ಇತ್ಯುಕ್ತಮ್ ॥ ೧೪೯೭ ॥

**ವಿವರಣೆ–** 'ಯ ಆತ್ಮನಿತಿಷ್ಠನ್, ಆತ್ಮನೋ ಅಂತರಃ, ಯಮಾತ್ಮಾನವೇದ, ಯ ಆತ್ಮಾನಂ ಅಂತರಾಯಮಯತಿ, ಏಷತ ಆತ್ಮಾ ಅಂತರ್ಯಾಮ್ಯಮೃತಃ' ಎಂಬುದು ಬೃಹದಾರಣ್ಯೋಪನಿಷತ್ತಿನ ಸಮಗ್ರವಾದ ವಾಕ್ಯ. ಯಾವನು ಜೀವನಲ್ಲಿದ್ದಾನೆಯೋ, ಜೀವನಿಗಿಂತ ಭಿನ್ನನೋ, ಯಾವನನ್ನು ಜೀವನು ತಿಳಿಯುವುದಿಲ್ಲವೋ, ಯಾವನು ಒಳಗಿದ್ದುಕೊಂಡೇ ಜೀವನನ್ನು ನಿಯಮಿಸುತ್ತಾನೆಯೋ ಅಂತಹ ಬ್ರಹ್ಮನು ನಿನ್ನ ಅಂತರ್ಯಾಮಿ. ಅವನು ಮುಕ್ತನಾದವನು ಅಥವಾ ಮೋಕ್ಷಪ್ರದನಾದವನು ಎಂದು ಆ ವಾಕ್ಯದ ಅರ್ಥ. ಇಂತಹ ವಾಕ್ಯಗಳು ಸ್ಪಷ್ಟವಾಗಿ ಭೇದವನ್ನೇ ಹೇಳುತ್ತದೆ. ಅಲ್ಲದೇ, ಶಾರೀರಶ್ಚೋಭಯೇಪಿ ಹಿ ಭೇದೇನೈವಮಧೀಯತೇ ಎಂಬ ಬ್ರಹ್ಮಸೂತ್ರವು ಅಂತರ್ಯಾಮೀ ಅಧಿದೈವಾದಿಷು ತದ್ಧರ್ಮವ್ಯಪದೇಶಾತ್ ಎಂಬ ಬ್ರಹ್ಮಸೂತ್ರವು ಇಂತಹ ವಿಷಯವಾಕ್ಯಗಳನ್ನು ಸ್ಪಷ್ಟವಾಗಿ ಜೀವೇಶ್ವರ ಭೇದವನ್ನು ನಿರ್ಣಯಿಸುತ್ತವೆ. ಸೂತ್ರಗಳು ವಿಶ್ವತೋಮುಖವಾದ್ದರಿಂದ ಇಂತಹ ಅನೇಕ ವಾಕ್ಯಗಳನ್ನು ವಿಚಾರ ಮಾಡಿ ಜೀವೇಶ್ವರ ಭೇದವನ್ನು ಸ್ಥಾಪಿಸುವುದರಿಂದ ಭೇದವು ಸತ್ಯವೆಂದು ಸಿದ್ಧವಾಗುತ್ತದೆ.

**ಉತ್ತಮಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಭಿಭರ್ತ್ಯವ್ಯಯ ಈಶ್ವರಃ ।**
**ಇತಿ ಗೀತಾಸು ಭೇದೋಽಯಂ ಸಯುಕ್ತಿಕಮುದಾಹೃತಃ ॥ ೧೪೯೮ ॥**

**ಅರ್ಥ–** ಕ್ಷರ ಅಕ್ಷರಗಳಿಗಿಂತ ಉತ್ತಮಃ = ಶ್ರೇಷ್ಠನಾದ, ಪುರುಷಃ = ಚೇತನನು, ಪರಮಾತ್ಮಾ = ಪರಮಾತ್ಮ ಇತಿ = ಎಂಬುದಾಗಿ, ಉದಾಹೃತಃ = ಹೇಳಲ್ಪಟ್ಟಿದ್ದಾನೆ. ಯಃ = ಯಾವ ಅವನು, ಲೋಕತ್ರಯಂ = ಮೂರುಲೋಕವನ್ನು ಆವಿಶ್ಯ = ಪ್ರವೇಶಿಸಿ, ಭಿಭರ್ತಿ = ರಕ್ಷಿಸುತ್ತಾನೆ. ಅವ್ಯಯಃ = ನಾಶರಹಿತನು, ಈಶ್ವರಃ = ಸಮರ್ಥನು, ಇತಿ = ಹೀಗೆ, ಗೀತಾಸು = ಭಗವದ್ಗೀತೆಯ ಶ್ಲೋಕಗಳಲ್ಲಿ ಅಯಂ = ಈ ಯಾವ (ಜೀವೇಶ್ವರರ) ಭೇದಃ = ಭೇದವು, ಸಯುಕ್ತಿಕಂ = ಯುಕ್ತಿಸಹಿತವಾಗಿ, ಉದಾಹೃತಃ = ನಿರೂಪಿಸಲ್ಪಟ್ಟಿದೆ.

**ಅನುವಾದ– ಕ್ಷರ ಅಕ್ಷರರುಗಳಿಗಿಂತ ಬೇರೆಯಾದವನೇ ಉತ್ತಮಪುರುಷನು. ಅವನನ್ನು ಪರಮಾತ್ಮಾ ಎಂದು ಕರೆಯುತ್ತಾರೆ. ಅವನಂತೂ ಮೂರ್ಲೋಕದ ಒಳಗೂ ಸೇರಿಕೊಂಡು ಜಗತ್ತನ್ನು ರಕ್ಷಿಸುವನು. ನಾಶರಹಿತನು. ಸಾಮರ್ಥ್ಯ-ಶಾಲಿಯು.ಹೀಗೆಂದು ಜೀವೇಶ್ವರಭೇದವನ್ನು ಗೀತಾಶ್ಲೋಕಗಳಲ್ಲಿ ಯುಕ್ತಿ-ಸಹಿತವಾಗಿ ಹೇಳಲಾಗಿದೆ.**

**ಭಾವವಿಲಾಸಿನೀ– ಯೋ ಲೋಕತ್ರಯಮಾವಿಶ್ಯೇತಿ ಯುಕ್ತಿಕಥನಾತ್ ಸಯುಕ್ತಿಕಮಿತ್ಯುಕ್ತಮ್ ॥ ೧೪೯೮ ॥**

**ವಿವರಣೆ–** ಇದನ್ನು ಗೀತೆಯಲ್ಲಿ ಚರ್ಚಿಸುತ್ತಾ ಉತ್ತಮಪುರುಷಸ್ತ್ವನ್ಯಃ - ಉತ್ತಮಪುರುಷನು ಕ್ಷರ - ಅಕ್ಷರಗಳಿಗಿಂತ ಬೇರೆಯಾದವನು ಎನ್ನಲಾಗಿದೆ. ಪರಮ ಆತ್ಮಾ ಎಂಬ ಶಬ್ದವೂ ಅದನ್ನೇ ಪ್ರತಿಧ್ವನಿಸುತ್ತಿದೆ. ಅಷ್ಟನ್ನೇ ಹೇಳದೆ, ಮೂರುಲೋಕದ ಒಳಗೂ ಸೇರಿಕೊಂಡು ಅದನ್ನು ಧರಿಸುತ್ತಿರವವನು ಎಂದು ಭಗವಂತನ ಮಹಿಮೆಯನ್ನು ಹೇಳಿದೆ. ಹಾಗಿದ್ದರೆ ಜಗತ್ತು ನಾಶವಾದಾಗ ಅವನಿಗೆ ನಾಶವಾದೀತೇ ಎಂಬ ಆಕ್ಷೇಪಕ್ಕೆ ಉತ್ತರಿಸುತ್ತಾ ಅವ್ಯಯಃ - ನಾಶವಿಲ್ಲದವನು ಎನ್ನಲಾಗಿದೆ. ಆದೇಕೆ ಅವನಿಗೆ ನಾಶವಿಲ್ಲ ಎಂಬ ಮರು ಆಕ್ಷೇಪಕ್ಕೆ ಅವನು ಈಶ್ವರನು - ಸಾಮರ್ಥ್ಯೋಪೇತನು ಆದ್ದರಿಂದ ಅವನಿಗೆ ನಾಶವಿಲ್ಲ ಎಂಬ ಯುಕ್ತಿಯನ್ನು ನೀಡಲಾಗಿದೆ. ಯುಕ್ತಿಸಹಿತಸಮರ್ಥನೆಯಲ್ಲಿ ವಕ್ತೃತಾತ್ಪರ್ಯವು ಇದ್ದೇ ಇರುತ್ತದೆ. ಅದೂ ಗೀತಾಚಾರ್ಯನ ಮಾತು ಎಂಬ ಮೇಲೆ ಸಕಲಸಮ್ಮತ ಎಂದು ಸಾರಿದಂತಾಯಿತು.

**ವಿದ್ಯಾಽಽತ್ಮನಿ ಭಿದಾಬೋಧ ಇತಿ ಭಾಗವತೇ ಹರಿಃ ।**
**ವಿದ್ಯಾ ಕೇತಿ ಪುರಾ ಪೃಷ್ಟೋ ಭಿದಾಬೋಧಂ ಕಿಲೋಕ್ತವಾನ್ ॥ ೧೪೯೯ ॥**

**ಅರ್ಥ–** ವಿದ್ಯಾ = ವಿದ್ಯೆಯು, ಕಾ = ಯಾವುದು? ಇತಿ = ಎಂದು, ಪುರಾ = ಮೊದಲ ಉದ್ಧವನಿಂದ, ಪೃಷ್ಟಃ = ಪ್ರಶ್ನಿಸಲ್ಪಟ್ಟ ಹರಿಃ = ಕೃಷ್ಣನು, ಆತ್ಮನಿ = ಪರಮಾತ್ಮನಲ್ಲಿ, ಭಿದಾ ಬೋಧಃ = ಜೀವರಿಂದ ಭೇದದ ತಿಳುವಳಿಕೆಯೇ, ವಿದ್ಯಾ = ವಿದ್ಯೆಯು, ಇತಿ = ಹೀಗೆಂದು, ಭಿದಾಬೋಧಃ = ಭೇದಜ್ಞಾನವನ್ನು (ವಿದ್ಯೆಯೆಂದು) ಉಕ್ತವಾನ್ ಕಿಲ = ಹೇಳಿದನಷ್ಟೇ!

**ಅನುವಾದ–** ವಿದ್ಯೆ ಎಂದರೇನು ಎಂಬುದು ಉದ್ಧವನು ಕೃಷ್ಣನನ್ನು ಕುರಿತು ಕೇಳಿದ ಪ್ರಶ್ನೆ. ಆಗ ಕೃಷ್ಣನು ಭಗವಂತನಲ್ಲಿ ಜೀವರಿಂದ ಭೇದವನ್ನು ಅರಿಯುವುದೇ ವಿದ್ಯೆ ಎಂದು ವಿದ್ಯಾತ್ಮನಿ ಭಿದಾಬೋಧಃ ಎಂದು ತಿಳಿಸಿದ್ದಾನಷ್ಟೇ?

**ಭಾವವಿಲಾಸಿನೀ–** ಆತ್ಮಪದಾರ್ಥಮಾಹ – **ಚೇತನೇಷ್ವಿತಿ** ॥ ಅಥವಾ ಆತ್ಮನಿ ಪರಮಾತ್ಮನಿಜೀವಾದಿಭ್ಯೋಭಿದಾಬೋಧ ಇತಿ ಯೋಜನಾ ॥ ೧೪೯೯ ॥

**ಚೇತನೇಷ್ವಾತ್ಮಸು ಭಿದಾ ಜಾತ್ಯೇಕವಚನಾದಿಯಂ ।**
**ಅಬೋಧ ಇತಿ ಚ ಛೇದೇ ಬೋಧಚ್ಛೇದೋ ಭವಿಷ್ಯತಿ ।**
**ಬೋಧಾಭಾವಂ ಹಿ ಕೋ ಬೋದ್ಧಾ ವಿದ್ಯಾಂ ಬುದ್ಧಿಮತೇ ವದೇತ್ ॥**
**॥ ೧೫೦೦ ॥**

**ಅರ್ಥ–** ಇಯಂ ಭಿದಾ = ಈ ಅಭೇದವು, ಆತ್ಮಸು = ಆತ್ಮ ರೆನಿಸಿದ, ಚೇತನೇಷು = ಜೀವರುಗಳಲ್ಲಿ ಹೀಗೆ, ಜಾತ್ಯೇಕವಚನಾತ್ = ಜಾತ್ಯೇಕವಚನದಲ್ಲಿದೆ. ಅಬೋಧಃ = ಅಬೋಧವು, ಇತಿ = ಎಂದು, ಚ್ಛೇದೇ = ಪದಚ್ಛೇದಮಾಡಿದರೆ, ಬೋಧಚ್ಛೇದಃ = ನಿನ್ನ ಜ್ಞಾನವನ್ನೇ ಕತ್ತರಿಸಿದಂತೆ, ಭವಿಷ್ಯತಿ = ಆಗುತ್ತದೆ. ಬೋಧಾಭಾವಂ = ಬೋಧದ ಅಭಾವವನ್ನು, ಬೋದ್ಧಾ = ವಿವೇಕಿಯಾದವನು, ಕಃ = ಯಾವನು ತಾನೇ, ಬುದ್ಧಿಮತೇ = ವಿವೇಕಿಯಾದವನಿಗೆ, ವಿದ್ಯಾಂ = ವಿದ್ಯೆಯೆಂದು, ವದೇತ್ = ಹೇಳಿಯಾನು?

**ಅನುವಾದ–** ಆತ್ಮನಿ ಎಂಬಲ್ಲಿ ಜಾತ್ಯೇಕ ವಚನವಿರುವುದರಿಂದ ಸರ್ವಜೀವನಿಷ್ಠವಾದ ಭೇದವಾಗಿದೆ. ಅಬೋಧ ಎಂದು ಪದಚ್ಛೇದವನ್ನು ಮಾಡಿದರೆ ನಿನ್ನ ಜ್ಞಾನಚ್ಛೇದವೇ ಆಗುತ್ತದೆ. ಯಾವ ವಿವೇಕಿಯಾದವನು ಇನ್ನೊಬ್ಬ ವಿವೇಕಿಯಾದವನನ್ನು ಕುರಿತು ಬೋಧಾಭಾವವನ್ನು ಬೋಧವೆಂದು ಹೇಳುತ್ತಾನೆ?

**ವಿವರಣೆ–** ಆತ್ಮನಿ ಭಿದಾ ಎಂದಿದೆ, ಇಲ್ಲಿ ಆತ್ಮನಿ ಎಂಬಲ್ಲಿರುವ ಏಕವಚನವು ಜಾತ್ಯೇಕ ವಚನ. ಆದ್ದರಿಂದ ಜೀವರಲ್ಲಿರುವ ಭೇದವೆಂದು ಸಿದ್ಧವಾಗುತ್ತದೆ. ಜೀವರಲ್ಲಿರುವ ಪರಮಾತ್ಮ ಪ್ರತಿಯೋಗಿಕವಾದ ಭೇದ ಎಂದು ತಾತ್ಪರ್ಯ. ಈ ಭೇದದ ಜ್ಞಾನವೇ ವಿದ್ಯೆ ಎಂದು ಕೃಷ್ಣನು ಹೇಳಿದ್ದಾನೆ. ಆತ್ಮ ಶಬ್ದಕ್ಕೆ ಪರಮಾತ್ಮನೆಂದು ಅರ್ಥವನ್ನು ಮಾಡಿ ಜೀವ ಪ್ರತಿಯೋಗಿಕವಾದ ಪರಮಾತ್ಮ ಧರ್ಮಿಕವಾದ ಭೇದದ ಜ್ಞಾನವು ವಿದ್ಯೆ ಎಂದು

ಅರ್ಥವನ್ನೂ ಮಾಡಬಹುದು. ಭಿದಾಬೋಧಃ ಎಂಬ ಸಮಸ್ತ ಪದಕ್ಕೆ ಭಿದಾಯಾಃ ಅಬೋಧಃ ಎಂದು ವಿಗ್ರಹವನ್ನು ಮಾಡಿ ಅರ್ಥವನ್ನು ಹೇಳಿದರೆ ಭಿದಾಬೋಧ ಎಂಬ ಶಬ್ದಕ್ಕೆ ಭೇದಜ್ಞಾನಾಭಾವ ಎಂದು ಅರ್ಥವಾಗುತ್ತದೆ. ವಿದ್ಯೆ ಎಂದರೆ ಜ್ಞಾನ. ಭೇದಜ್ಞಾನಾಭಾವವು ಜ್ಞಾನವಾಗುವುದು ಹೇಗೆ? ಆದ್ದರಿಂದ ಅಬೋಧ ಎಂದು ಪದಚ್ಛೇದವನ್ನು ಅನುಸಂಧಾನ ಮಾಡಿದರೆ ಅವನು ಅವಿವೇಕಿ ಎಂದಾಗುತ್ತಾನೆ. ಈ ಮಾತು ಕೃಷ್ಣನು ಉದ್ಧವನಿಗೆ ಹೇಳುತ್ತಿರುವುದು. ಉದ್ಧವನು ಮೇಧಾವಿಗಳಲ್ಲಿ ಶ್ರೇಷ್ಠನಾದವನು. ಕೃಷ್ಣನಂತೂ ಸರ್ವಜ್ಞನಾದವನು. ಸರ್ವಜ್ಞನಾದ ಕೃಷ್ಣನು ಮೇಧಾವಿಗಳಲ್ಲಿ ಶ್ರೇಷ್ಠನಾದ ಉದ್ಧವನನ್ನು ಕುರಿತು ಜ್ಞಾನಾಭಾವವು ಜ್ಞಾನವೆಂದು ಉಪದೇಶ ಮಾಡುತ್ತಾನೆ ಎಂದು ಅರ್ಥವನ್ನು ಮಾಡಿದರೆ ಅದು ಹಾಸ್ಯಾಸ್ಪದವಾಗುತ್ತದೆ ಎಂದು ಒಂದು ಅಭಿಪ್ರಾಯ. ನ ಬೋಧಃ ಅಬೋಧಃ ಎಂದು ತತ್ಪುರುಷವನ್ನು ಮಾಡದೆ, ನ ವಿದ್ಯತೇ ಬೋಧಃ ಯಸ್ಮಾತ್ ಎಂದು ಬಹುವ್ರೀಹಿ ಸಮಾಸವನ್ನು ಆಶ್ರಯಿಸಿದರೂ ವಿರೋಧವು ತಪ್ಪಿದ್ದಲ್ಲ. ಏಕೆಂದರೆ ಆ ಬಹುವ್ರೀಹಿ ಸಮಾಸದೊಳಗೆ ಬೋಧಾಭಾವ ಸೇರಿಕೊಂಡಿದೆ. ಭಾವಾಭಾವಗಳ ವಿರೋಧವು ಇದ್ದೇ ಇದೆ. ಆದ್ದರಿಂದ ಜೀವೇಶ್ವರ ಭೇದಜ್ಞಾನವನ್ನೇ ವಿದ್ಯೆ ಎಂದು ಅಂಗೀಕರಿಸಬೇಕು ಎಂದು ತಾತ್ಪರ್ಯ.

ರಾಜಾ ತತ್ಪುರುಷೋ ಮೇನೇ ನಾನ್ಯಸ್ಯ ಪದಸೇವನಂ ।
ಬಹುವ್ರೀಹೇಸ್ತು ಚೋರಸ್ಯ ಸ್ಯಾಚ್ಚಾಸ್ಯಾನ್ಯಾನುಯಾಯಿತಾ ॥ ೧೫೦೧ ॥

**ಅರ್ಥ–** ರಾಜಾ = ರಾಜನಾದ, ತತ್ಪುರುಷಃ = ತತ್ಪುರುಷಸಮಾಸವು, ಅನ್ಯಸ್ಯ = ಬೇರೆಯವರ, ಪದಸೇವನಂ = ಕಾಲೊತ್ತುವಿಕೆಯನ್ನು ನ ಮೇನೇ = ತಿಳಿಯುವುದಿಲ್ಲ ಅಸ್ಯ = ಈ ಯಾವ, ಚೋರಸ್ಯ = ಕಳ್ಳನಾದ, ಬಹುವ್ರೀಹೇಸ್ತು = ಬಹುವ್ರೀಹಿಸಮಾಸಕ್ಕಾದರೂ, ಅನ್ಯಸ್ಯ = ಬೇರೆಯವರ, ಅನುಯಾಯಿತಾ = ಹಿಂಬಾಲಕಿಸುವಿಕೆಯೂ, ಸ್ಯಾತ್ = ಕೂಡುತ್ತದೆ.

**ಅನುವಾದ–** ಸಮಾಸಗಳ ರಾಜ ಎನಿಸಿದ ತತ್ಪುರುಷ ಸಮಾಸವು ಇನ್ನೊಬ್ಬರಿಗೆ ಕಾಲೊತ್ತುವ ಸ್ವಭಾವವುಳ್ಳದ್ದಲ್ಲ. ಆದರೆ ಬಹುವ್ರೀಹಿಸಮಾಸವಾದರೋ ಅನ್ಯಪದಾರ್ಥ ಪ್ರಧಾನವಾಗಿ ತನ್ನತನವನ್ನು ಮರೆಮಾಚುವ ಕಳ್ಳನಂತೆ. ಹೀಗಾಗಿ ಅವನಿಗೆ ಇತರರ ಅನುಕರಣೆ ಕೂಡೀತು. ಹೀಗಾಗಿ ನಮ್ಮ ಪಕ್ಷವನ್ನೇ ಅವಲಂಬಿಸು.

**ಭಾವವಿಲಾಸಿನೀ–** ಭೇದೇ ಪದಚ್ಛೇದೇ । ಕಥಂ ಬೋಧಚ್ಛೇದ ಇತ್ಯತ ಆಹ – **ಬೋಧಾಭಾವಮಿತಿ** ॥ ಕಾವಿದ್ಯೇತಿ ಪ್ರಶ್ನಸ್ಯ ಬೋಧಾಭಾವೋವಿದ್ಯೇತ್ಯುತ್ತರಸ್ಯ ಚ ವಿದ್ಯಾಭಾವ ಏವ ವಿದ್ಯೇತ್ಯತ್ರ ಪರ್ಯವಸಾನೇನ ಪರಸ್ಪರವಿರುದ್ಧತ್ವಾದಿತಿ ಭಾವಃ । ಉಪಲಕ್ಷಣಂ ಚೈತತ್ । ಭೇದದೃಷ್ಟ್ಯೇತಿ ಪ್ರಾಗುಕ್ತಸಮಾಖ್ಯಾಬೋಧಚ್ಛೇದೋಪಿ ಗ್ರಾಹ್ಯಃ ॥ ನನು ನ ಬೋಧಃ ಅಬೋಧ ಇತ್ಯುಕ್ತೇ

**ಭವತ್ಯೇವ ವಿರೋಧಃ । ನ ವಿದ್ಯತೇ ಬೋಧೋ ಯಸ್ಮಾತ್ ಸ ಇತಿ ಸಮಾಸೇ ಕಥಂ ವಿರೋಧ ಇತಿ ಚೇತ್ । ನ । ತಥಾಪಿ ಬೋಧಾಭಾವ ಪ್ರವೇಶಸ್ಯಾಪರಿಹಾರಾದ್ವಿರೋಧ ಏವ । ಅನ್ಯಪದಾರ್ಥ ಪ್ರಧಾನಬಹುವ್ರೀಹೇಃ ಸ್ವಪದಮಾತ್ರಪ್ರಧಾನಸ್ಯ ತತ್ಪುರುಷಸ್ಯ ಶ್ರೇಷ್ಠತ್ವಾಚ್ಚ ನಾಸೌ ಸಮಾಸ ಇತ್ಯೇತಮರ್ಥಂ ಸಾಹಿತ್ಯಮುದ್ರಯಾಽಽಹ – ರಾಜೇತಿ ॥ ತತ್‌ಪುರುಷಸ್ಯ ಶ್ರೇಷ್ಠತ್ವಾದ್ರಾಜೇತ್ಯುಕ್ತಮ್ । ಅನ್ಯಸ್ಯ ಯಸ್ಯ ಸ ತಥೇತಿ ವಾಕ್ಯಾಂತರಸ್ಯ । ಪದಂ ಯಸ್ಯೇತಿ ಪದಮ್ । ಯದ್ವಾ ಅನ್ಯಸ್ಯ ಪ್ರತಿಪಾದಕಂ ವಾ ಪದಂ ತಸ್ಯ ಸೇವನಮ್ । ಬಹುವ್ರೀಹಿ- ವದನ್ಯಪದಾರ್ಥ-ಪ್ರಧಾನೋನಭವತೀತ್ಯರ್ಥಃ। ರಾಜಾ ಯಥಾಽನ್ಯಪದಾನುಸರಣಂ ನ ಕರೋತಿ ತಥೇತಿ ಧ್ವನಿನಾ ರಾಜೋಪಮಾ । ಚೌರ್ಯೇಣ ಬಹುವ್ರೀಹಿಮಾಂಶ್ಚೋರೋಪಿ ಭವತೀತ್ಯತಶ್ಚೋರಸ್ಯೇತಿ ಬಹುವ್ರೀಹೇರ್ವಿಶೇಷಣಮುಕ್ತಮ್ । ಸ್ವಸ್ಮಿನ್ ಧನಾಭಾವಾತ್ ಚೋರೋಪ್ಯನ್ಯಾನುಯಾಯೀ। ಅಯಮಪಿ ತಥೇತಿ ಭಾವೇನೋಕ್ತಂ ಅನ್ಯಾನುಯಾಯಿತೇತಿ ॥ ೧೫೦೦-೧೫೦೧ ॥**

**ವಿವರಣೆ**– ಅಬೋಧ ಎಂದು ಪದಚ್ಛೇದಮಾಡಿದರೆ ಅಬೋಧ ಎಂಬ ಪದವನ್ನು ನ ಬೋಧಃ ಎಂಬ ವಿಗ್ರಹವನ್ನನುಸರಿಸಿ ತತ್ಪುರುಷವನ್ನಾಗಲೀ, ನ ವಿದ್ಯತೇ ಬೋಧಃ ಯಸ್ಮಾತ್ ಎಂದು ಆಶ್ರಯಿಸಿ ಬಹುವ್ರೀಯನ್ನಾದರೂ ಮಾಡಬಹುದು. ಬಹುವ್ರೀಹಿ ಸಮಾಸವು ದುರ್ಬಲವಾದುದು. ಏಕೆಂದರೆ ಅದು ಅನ್ಯಪದಾರ್ಥಪ್ರಧಾನವಾದುದು. ತನ್ನ ಪದಗಳಿಂದ ದೊರೆಯದಿರುವ ಅರ್ಥವನ್ನು ಇನ್ನೊಂದು ಪದದಿಂದ ಸ್ವೀಕರಿಸುವುದರಿಂದ ಅದು ಚೋರನಿದ್ದಂತೆ. ಚೋರನು ಹೇಗೆ ತನ್ನಲ್ಲಿ ಧನವಿಲ್ಲದೆ ಇನ್ನೊಬ್ಬನ ಧನವನ್ನು ಅಪಹರಿಸುತ್ತಾನೆಯೋ, ಬಹುವ್ರೀಹಿಯು ಹಾಗೆಯೇ ಮಾಡುತ್ತದೆ. ಆದ್ದರಿಂದ ಬಹುವ್ರೀಹಿ ಸಮಾಸಕ್ಕೆ ಅನ್ಯಪದಾರ್ಥದ ಪಾದಸೇವನೆಯು ಎಂದರೆ ಅನ್ಯಪದಾರ್ಥದ ಅನುಯಾಯಿತ್ವವು ಇದೆ. ಆದರೆ ತತ್ಪುರುಷ ಸಮಾಸವು ಹಾಗಲ್ಲ. ಅದು ತನ್ನ ಪದದಿಂದ ಯಾವ ಅರ್ಥವು ದೊರೆಯುತ್ತದೆಯೋ, ಅದನ್ನೇ ಪ್ರಧಾನವಾಗಿ ಹೇಳುತ್ತದೆ. ಇನ್ನೊಂದು ಪದವನ್ನು ಅನುಸರಿಸುವುದಿಲ್ಲ. ಆದ್ದರಿಂದ ಅನ್ಯಪಾದ ಸೇವನೆಯಿಲ್ಲ ಎಂದು ಆಲಂಕಾರಿಕವಾಗಿ ಹೇಳುತ್ತಾರೆ. ಬಹುವ್ರೀಹಿ ಸಮಾಸಕ್ಕಿಂತಲೂ ತತ್ಪುರುಷ ಸಮಾಸವು ಶ್ರೇಷ್ಠವಾದುದರಿಂದ ಇಲ್ಲಿ ತತ್ಪುರುಷವನ್ನೇ ಅಂಗೀಕರಿಸಬೇಕು. ತತ್ಪುರುಷವನ್ನು ಅಂಗೀಕರಿಸಿದರೆ ಅಬೋಧ ಎಂದರೆ ಬೋಧಾಭಾವವನ್ನು ವಿದ್ಯೆಯೆಂದು ಹೇಳಿದಂತಾಗುತ್ತದೆ. ಅದು ವ್ಯಾಹತವಾದುದು. ಆದ್ದರಿಂದ ಬಹುವ್ರೀಹಿಯನ್ನೂ ಅಂಗೀಕರಿಸದೆ ನೀನು ಹೇಳುವ ತತ್ಪುರುಷವನ್ನೂ ಅಂಗೀಕರಿಸದೆ ಭಿದಾಯಾಃ ಬೋಧಃ ಎಂಬ ನಮ್ಮ ತತ್ಪುರುಷವನ್ನು ಅಂಗೀಕರಿಸಬೇಕು. ತತ್ಪುರುಷವನ್ನು ಅಂಗೀಕರಿಸಿದರಂತೂ ಅಬೋಧಃ ಎಂದು ಭೇದವನ್ನು ಮಾಡಲು ಬರುವುದಿಲ್ಲ. ಆದ್ದರಿಂದ ಬೋಧಃ ಎಂದೇ ಭೇದವನ್ನು ಮಾಡಬೇಕು. ಆಗ ಜೀವೇಶ್ವರ ಭೇದಜ್ಞಾನವೇ ವಿದ್ಯೆ ಎಂದು ಸಿದ್ಧವಾಗುತ್ತದೆ.

**ಶ್ರೇಷ್ಠಂ ಪದಂ ಸಮಾರೂಢಃ ಕಥಂ ನೀಚೋ ಬುಭೂಷತಿ ।**
**ಶಂಕಾಸ್ಕಂದಿತಮೂರ್ತಿಃ ಸಾ ವಿದ್ಯಾ ನೋರ್ಧ್ವಂ ಯಿಯಾಸತಿ ॥ ೧೫೦೨ ॥**

**ಅರ್ಥ–** ಶ್ರೇಷ್ಠಂ = ಉತ್ತಮವಾದ, ಪದಂ = ಸ್ಥಾನವನ್ನು, ಸಮಾರೂಢಃ = ಆಶ್ರಯಿಸಿದವನಾಗಿ, ಕಥಂ = ಹೇಗೆ, ನೀಚಃ = ಕನಿಷ್ಠ ಸ್ಥಾನವನ್ನು, ಬುಭೂಷತಿ = ಹೊಂದಲು ಇಚ್ಛಿಸುತ್ತಾನೆ? ಶಂಕಾಸ್ಕಂದಿತಮೂರ್ತಿಃ = ಪ್ರಶ್ನೆಯಲ್ಲಿರುವುದರಿಂದ ಪ್ರಾಧಾನ್ಯವನ್ನು ಹೊಂದಿದ, ಸಾ ವಿದ್ಯಾ = ಆ ವಿದ್ಯೆ ಎಂಬ ಪದವು, ಊರ್ಧ್ವಂ = ಅನಂತರ ಬರುವ ವಿಧಾಯಕವಾಕ್ಯವನ್ನು, ನ ಯಿಯಾಸತಿ = ಹೋಗುವುದಿಲ್ಲ.

**ಅನುವಾದ–** ಶ್ರೇಷ್ಠವಾದ ಸ್ಥಾನವನ್ನು ಹೊಂದಿದವನು ಹೇಗೆ ನೀಚಸ್ಥಾನವನ್ನು ಹೊಂದಲು ಬಯಸುತ್ತಾನೆ. ಆದ್ದರಿಂದ ಪ್ರಶ್ನೆಯಲ್ಲಿರುವುದರಿಂದ ಪ್ರಾಧಾನ್ಯವನ್ನು ಹೊಂದಿದ ವಿದ್ಯಾ ಎಂಬ ಪದವು ಅನಂತರ ಬರುವ ವಿಧೇಯಕವಾಕ್ಯದಲ್ಲಿ ಅನುವೃತ್ತಿಯನ್ನು ಹೊಂದಿ ನೀಚ ಸ್ಥಾನವನ್ನು ಪಡೆಯುವುದಿಲ್ಲ.

**ಭಾವವಿಲಾಸಿನೀ–** ತಥಾಪಿ ಪ್ರಕೃತೇ ಕಿಮಿತ್ಯತ ಆಹ – **ಶ್ರೇಷ್ಠಮಿತಿ** ॥ ಸಮಾರೂಢಃ ಶಬ್ದಃ । ಪ್ರಧಾನಸಮಾಸೇ ಸತ್ಯಪ್ರಧಾನಸಮಾಸಾಯೋಗಾದಿತಿ ಭಾವಃ । ಕಿಂಚ ತತ್ಪುರುಷಪಕ್ಷೇ ದಮ ಇಂದ್ರಿಯನಿಗ್ರಹ ಇತ್ಯಾದಾವಿವ ಪ್ರಾಕ್‌ಶಂಕಿತವಿದ್ಯಾಂ ವಿದ್ಯಾಪದೇನಾನೂದ್ಯ ಭಿದಾಬೋಧ ಇತಿ ಭಿದಾಬೋಧಸ್ಯೈವ ವಿದ್ಯಾತ್ವವಿಧಾನಂ ಕರೋತೀತಿ ವಾಕ್ಯಾರ್ಥಃ ಸಂಭವತಿ । ಅಸ್ಯೈವ ವಿಶೇಷ್ಯಪದತ್ವಾತ್ । ಬಹುವ್ರೀಹೌ ತ್ವಸ್ಯ ವಿಶೇಷಣಪದತ್ವಾತ್ ವಿಶೇಷ್ಯಪದಾಂತರ-ಮಧ್ಯಾಹಾರ್ಯಮ್ । ಅತೋಽಪಿ ತತ್ಪುರುಷ ಏವ ಶ್ರೇಯಾನ್ । ತಥಾ ಚ ಪ್ರಾಯಪಾಠವಿರೋಧಃ । ತತ್‌ಪುರುಷಯೋಶ್ಚ ಭವತ್ತತ್ಪುರುಷಸ್ಯ ವಿರುದ್ಧತ್ವೇನಾಭಾವಘಟಿತ-ತಯಾ ಗುರುತ್ವೇನಾಸಮರ್ಥತಯಾ ಕ್ಲಿಷ್ಟತ್ವೇನ ಚಾಸ್ತತ್ತತ್ಪುರುಷ ಏವ ಶ್ಲಾಘ್ಯಃ । ನನ್ವನುವಾದಕ-ಪದಮೇವ ವಿಧಾಯಕವಾಕ್ಯೇಽಪಿ ವಿಶೇಷ್ಯತಯಾ ಸಂಬಧ್ಯತ ಇತಿ ಚೇತ್ । ತತ್ರಾಹ–**ಶಂಕೇತಿ** ॥ ಶಂಕಾಯಾಂ ಶಂಕಾಗ್ರಂಥೇ ಆಸ್ಕಂದಿತಾ ಪ್ರಾಧಾನ್ಯೇನ ವಿದ್ಯಮಾನಾಮೂರ್ತಿರ್ಯಸ್ಯಾಃ ಸಾ ತಥೋಕ್ತಾ । ಸಾ ವಿದ್ಯಾ ತದನುವಾದರೂಪತಯಾಽಸ್ಮಿನ್ ವಾಕ್ಯೇ ವಿದ್ಯಮಾನಾ ವಿದ್ಯಾ । ವಿದ್ಯಾಪದಮಿತ್ಯರ್ಥಃ । ಊರ್ಧ್ವಂ ವಿಧಾಯಕ ವಾಕ್ಯಮೂರ್ಧನಿ । ಆವೃತ್ತೇರಪಿ ದೋಷತ್ವಾತ್ ಅಯಮಪಿ ಪಕ್ಷೋ ನ ಸಾಧೀಯಾನಿತಿ ಭಾವಃ । ಶಂಕಾಗ್ರಂಥಾದಪಿ ನಾವೃತ್ತಿ ತದನುವಾದ-ರೂಪಾದಸ್ಮಾತ್ ಗ್ರಂಥಾದಪಿ ನಾವೃತ್ತಿರಿತಿ ಸೂಚನಾಯ ಶಂಕಾಸ್ಕಂದಿತಮೂರ್ತಿರಿ-ತ್ಯುಕ್ತಮ್ ॥ ೧೫೦೨ ॥

**ವಿವರಣೆ–** ಬಹುವ್ರೀಹಿ ಸಮಾಸವನ್ನು ಮಾಡಿದರೆ ಭಿದಾಯಾಃ ಅಬೋಧಃ ಯಸ್ಮಾತ್ ತತ್' ಎಂದು ವಿಗ್ರಹವನ್ನು ಮಾಡಿ ಆ ತತ್ ಎಂಬ ಪದಾರ್ಥವನ್ನು ಹೇಳುವ ಇನ್ನೊಂದು ಪದವನ್ನು ಅಧ್ಯಾಹಾರ ಮಾಡಬೇಕು. ಆದ್ದರಿಂದ ಈ ಅಧ್ಯಾಹಾರ

ದೋಷವೂ ಒಂದು ಹೆಚ್ಚಾಗಿದೆ. ಈ ಅಧ್ಯಾಹಾರವನ್ನು ತಪ್ಪಿಸಲು ಪ್ರಶ್ನೆ ವಾಕ್ಯದಲ್ಲಿರುವ ವಿದ್ಯಾ ಎಂಬ ಪದವನ್ನೇ ಅನುವೃತ್ತಿ ಮಾಡಿಕೊಳ್ಳುತ್ತೇವೆ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಹಿಂದಿನ ವಾಕ್ಯಗಳಲ್ಲಿ ಧಮ ಎಂದರೇನು, ಶಮ ಎಂದರೇನು ಎಂದು ಬಂದಂತೆ ವಿದ್ಯೆ ಎಂದರೇನು ಎಂಬ ಪ್ರಶ್ನೆಯಿದೆ. ಅಲ್ಲಿ ಧಮವೆಂದರೆ ಇಂದ್ರಿಯ ನಿಗ್ರಹ, ಶಮವೆಂದರೆ ಭಗವನ್ನಿಷ್ಠ ಬುದ್ಧಿ ಎಂದು ಹೇಳಿ, ದಮ-ಶಮ ಮೊದಲಾದವುಗಳನ್ನು ವಿಶೇಷ್ಯಪದಗಳಾಗಿ ಸ್ವೀಕರಿಸಿ ಇಂದ್ರಿಯ ನಿಗ್ರಹ ಮುಂತಾದ ಅರ್ಥಗಳನ್ನು ವಿಶೇಷಣವಾಗಿ ಹೇಳಲಾಗಿದೆ. ಅದರಂತೆ ಇಲ್ಲಿಯೂ ವಿದ್ಯಾ ಎಂಬ ಪದವನ್ನು ವಿಶೇಷ್ಯ ಪದವಾಗಿಯೇ ಹೇಳಬೇಕೇ ಹೊರತು ಅದು ತತ್ಪದಾರ್ಥವಾದರೆ ವಿಶೇಷಣವಾಗುವುದರಿಂದ ಹಾಗೆ ಹೇಳಲು ಸಾಧ್ಯವಿಲ್ಲ. ಆಗ ಪ್ರಾಯ ಪಾಠದ ವಿರೋಧವು ಬರುತ್ತದೆ ಎನ್ನುವುದು ಒಂದು ದೋಷ. ಜೊತೆಗೆ ಪ್ರಶ್ನೆಯಲ್ಲಿದ್ದುದರಿಂದ ಪ್ರಾಧಾನ್ಯವನ್ನು ಹೊಂದಿದ ಆ ಪದಕ್ಕೆ ಈಗ ಅನುವೃತ್ತಿಯನ್ನು ಮಾಡಿಕೊಂಡು ವಿಧೇಯಕವಾಕ್ಯದಲ್ಲಿಯೂ ಅನ್ವಯವನ್ನು ಹೇಳಿದರೆ ವಿಧೇಯವಾದುದು ಅಪ್ರಧಾನವಾದುದರಿಂದ ಅಪ್ರಧಾನ್ಯರೂಪವಾದ ದೋಷವು ಬರುತ್ತದೆ. ಪ್ರಧಾನವಾದ ಸ್ಥಾನವನ್ನು ಅಲಂಕರಿಸಿದವನು ಹೇಗೆ ಅಪ್ರಧಾನವಾದ ಸ್ಥಾನವನ್ನು ಹೊಂದಲು ಬಯಸುವುದಿಲ್ಲವೋ, ಅದರಂತೆ ಪ್ರಶ್ನೆಯಲ್ಲಿ ವಿಶೇಷ್ಯವಾದ ಪ್ರಯುಕ್ತ ಪ್ರಾಧಾನ್ಯವನ್ನು ಹೊಂದಿದ ವಿದ್ಯಾಶಬ್ದವು ಬಹುವ್ರೀಹಿ ಸಮಾಸದಲ್ಲಿ ಅನ್ಯಪದಾರ್ಥದಲ್ಲಿ ಅನ್ವಯವನ್ನು ಹೊಂದಿ ಅಪ್ರಾಧಾನ್ಯವನ್ನು ಸ್ವೀಕರಿಸಲಾರದು. ಆದ್ದರಿಂದ ಇದು ಇನ್ನೊಂದು ದೋಷ. ಆ ಕಾರಣದಿಂದ ತತ್ಪುರುಷ ಸಮಾಸವನ್ನೇ ಆಶ್ರಯಿಸಬೇಕು ಎಂದು ಅಭಿಪ್ರಾಯ. ಹಿಂದಿನ ಶ್ಲೋಕದಲ್ಲಿ ಅಬೋಧ ಎಂಬ ಪದದ ವಿಚಾರ. ಈ ಶ್ಲೋಕದಲ್ಲಿ ಭಿದಾಬೋಧ ಎಂಬ ಸಮಸ್ತಪದದ ವಿಚಾರ ಎಂದು ತಿಳಿಯಬೇಕು.

**ಸ್ಥಾನಾಂತರೇಷ್ವದೃಷ್ಟೋಽಸ್ಯಾ ನ ಸ್ಥಾನದ್ವಯಸಂಗಮಃ ।**
**ಸೀಪುಂಸಯೋಶ್ಚ ಯೋಗೋಽಯಂ ಸೂತೇ ದೋಷಕುಮಾರಕಂ ॥೧೫೦೩॥**

**ಅರ್ಥ–** ಸ್ಥಾನಾಂತರೇಷು = ಬೇರೆ ಸ್ಥಳಗಳಲ್ಲಿ, ಅದೃಷ್ಟಃ = ಕಾಣಿಸದ, ಸ್ಥಾನದ್ವಯ–ಸಂಗಮಃ = ಅನುವಾದಕತ್ವ ವಿಧೇಯತ್ವ ಎಂಬ ಎರಡರ ಸಂಗಮವು, ಅಸ್ಯ = ಈ ಶಬ್ದಕ್ಕೆ, ನ = ಕೂಡುವುದಿಲ್ಲ, ಸೀಪುಂಸಯೋಃ = ಸೀಲಿಂಗಪುಲ್ಲಿಂಗಗಳ, ಅಯಂ = ಈ ಯಾವ, ಯೋಗಃ = ಸಂಗಮವು, ದೋಷಕುಮಾರಕಂ = ದೋಷ ಎಂಬ ಮಗುವನ್ನು, ಸೂತೇ = ಪ್ರಸವಿಸುತ್ತದೆ.

**ಅನುವಾದ–** ಈ ವಿದ್ಯಾ ಎಂಬ ಪದಕ್ಕೆ ಸ್ಥಳಾಂತರದಲ್ಲಿ ಅದೃಷ್ಟವಾದ ಅನುವಾದಕ ವಾಕ್ಯದಲ್ಲಿಯೂ ಮತ್ತು ವಿಧೇಯಕ ವಾಕ್ಯದಲ್ಲಿಯೂ ಸಂಗಮವು ಕೂಡುವುದಿಲ್ಲ ಮತ್ತು ಈ ಸ್ತ್ರೀಪುಮಾಂಸರ ಯೋಗವು ದೋಷಕುಮಾರಕನನ್ನೇ ಪ್ರಸವಿಸುತ್ತದೆ.

**ಭಾವವಿಲಾಸಿನೀ–** ಅಸ್ಮಿನ್ ಪಕ್ಷೇ ದೋಷಾಂತರಂ ಚಾಹ – **ಸ್ಥಾನಾಂತರೇಷ್ವಿತಿ** ॥ ಜಹ್ವೋಪಸ್ಥ-ಜಯೋಧೃತಿಃ । ಶಮೋಮನ್ನಿಷ್ಠತಾಬುದ್ಧೇರ್ದಮ ಇಂದ್ರಿಯನಿಗ್ರಹ ಇತ್ಯಾದಾವದೃಷ್ಟ್ಯ । ಸ್ಥಾನದ್ವಯಸಂಗಮಃ ಅನುವಾದಸ್ಥಾನೇವಿಧಿಸ್ಥಾನೇಚ ಸಂಗಮಃ । ಅಸ್ಯಾಃ ವಿದ್ಯಾಯಾಃ । ವಿದ್ಯಾಪದಸ್ಯೇತ್ಯರ್ಥಃ । ನೇತಿ ಯೋಜನಾ। ಸ್ಥಲಾಂತರೇಷ್ವಾವೃತ್ತೇರದರ್ಶನಾತ್ ಅತ್ರೈವ ಕಥ-ಮಾವೃತ್ತಿರಿತಿ ಭಾವಃ । ದೋಷಾಂತರಂ ಚಾಹ – **ಸ್ತ್ರೀಪುಂಸಯೋರಿತಿ** ॥ ಸ್ತ್ರೀಲಿಂಗ-ಪುಲ್ಲಿಂಗಯೋರಿತ್ಯರ್ಥಃ । ಬಹುವ್ರೀಹೇರ್ವಿಶೇಷ್ಯಲಿಂಗತ್ವ- ನಿಯಮಾತ್ ವಿಶೇಷ್ಯಸ್ಯ ಚ ಸ್ತ್ರೀಲಿಂಗತ್ವಾತ್ ಭಿದಾಬೋಧೇತಿ ಪದಪ್ರಯೋಗಃ ಸ್ಯಾತ್ । ತತ್‌ಪುರುಷೇತು ಬೋಧಸ್ಯೈವ ವಿಶೇಷ್ಯತ್ವಾತ್ ತಸ್ಯ ಚ ನಿತ್ಯಪುಲ್ಲಿಂಗತ್ವಾತ್ ನ ಕಾಪ್ಯನುಪಪತ್ತಿರಿತಿ ಭಾವಃ । ಸ್ತ್ರೀಪುರುಷಯೋಗೇ ಪುತ್ರೋತ್ಪತ್ತೇರಾವಶ್ಯಕತ್ವಾತ್ ದೋಷಕುಮಾರಕಮಿತ್ಯುಕ್ತಮ್ ॥ ೧೫೦೩ ॥

**ವಿವರಣೆ–** ದಮ ಇಂದ್ರಿಯ ನಿಗ್ರಹಃ ಮುಂತಾದ ಸ್ಥಳಗಳಲ್ಲಿ ದಮ ಎಂಬ ಶಬ್ದಕ್ಕೆ ಅನುವಾದಕ ವಾಕ್ಯಾಂಶದಲ್ಲಿ ಪ್ರವೇಶವಿದೆ. ವಿಧಾಯಕ ವಾಕ್ಯಾಂಶದಲ್ಲಿ ಪ್ರವೇಶವಿಲ್ಲ. 'ಶಮೋ ಮನಿಷ್ಠತಾಬುದ್ಧೇಃ' ಎಂಬಲ್ಲಿ ಶಮ ಎಂಬ ಪದಕ್ಕೆ ಅನುವಾದಕದಲ್ಲಿ ಪ್ರವೇಶವಿದೆ, ವಿಧಾಯಕ ವಾಕ್ಯದಲ್ಲಿ ಪ್ರವೇಶವಿಲ್ಲ. ಆದ್ದರಿಂದ ಒಂದೇ ಪದಕ್ಕೆ ಅನುವಾದಕ ಮತ್ತು ವಿಧಾಯಕ ವಾಕ್ಯಗಳ ಸಂಗಮವು ಉಂಟಾಗಿಲ್ಲ. ಹೀಗಿರುವಾಗ 'ವಿದ್ಯಾತ್ಮನಿ ಭಿದಾಬೋಧಃ' ಎಂಬಲ್ಲಿ ಬಹುವ್ರೀಹಿ ಸಮಾಸವನ್ನು ಮಾಡಿ ಅದಕ್ಕೆ ವಿಶೇಷ್ಯಾಕಾಂಕ್ಷೆ ಇರುವುದರಿಂದ ಪ್ರಶ್ನೆಯಲ್ಲಿರುವ ವಿದ್ಯಾ ಪದವನ್ನೇ ಮತ್ತು ಆ ಕಾರಣದಿಂದ ಇಲ್ಲಿ ಅನುವಾದ ಮಾಡಿರುವ ವಿದ್ಯಾ ಪದವನ್ನೇ ಅನುವೃತ್ತಿ ಮಾಡಿದರೂ ಸಹ ಆ ವಿದ್ಯಾ ಪದಕ್ಕೆ ಎರಡು ಸ್ಥಾನಗಳಲ್ಲಿಯೂ ಪ್ರವೇಶ ಉಂಟಾಗುವುದರಿಂದ ಅನುವಾದಕ ಮತ್ತು ವಿಧಾಯಕಗಳ ಸಂಗಮವು ಉಂಟಾಗುತ್ತದೆ ಎಂಬುದು ಒಂದು ದೋಷ. ಅಲ್ಲದೇ, ಅನುವಾದಕವಾದ ವಿದ್ಯಾ ಶಬ್ದವು ಸ್ತ್ರೀ ಲಿಂಗದಲ್ಲಿದೆ. ಭಿದಾಬೋಧಃ' ಎಂಬ ವಿಧಾಯಕವು ಪುಲ್ಲಿಂಗದಲ್ಲಿದೆ. ಇವು ಪರಸ್ಪರವಾಗಿ ಅನ್ವಯವನ್ನು ಹೊಂದುವುದಿಲ್ಲ. ಈ ಸ್ತ್ರೀಲಿಂಗ ಮತ್ತು ಪುಲ್ಲಿಂಗ ಶಬ್ದಗಳಿಗೆ ಅಭೇದಾನ್ವಯವನ್ನೇ ಮಾಡಬೇಕು. ಆದರೆ ಅಭೇದಾನ್ವಯವನ್ನು ಮಾಡಲು ಹೊರಟರೆ ದೋಷವೇ ಉಂಟಾಗುವುದರಿಂದ ಆಲಂಕಾರಿಕವಾಗಿ ಈ ಸ್ತ್ರೀ-ಪುರುಷ ಸಂಯೋಗವು ದೋಷಕುಮಾರನನ್ನು ಪ್ರಸವಿಸುತ್ತವೆ ಎಂದು ಹೇಳುತ್ತಾರೆ. ದೋಷವೆಂಬುದು ಒಳ್ಳೆಯ ದಲ್ಲವಾದ್ದರಿಂದ ಕುತ್ಸನಾರ್ಥವಾದ ಕಪ್ರತ್ಯಯವನ್ನು ಹೇಳಿ, ದೋಷಕುಮಾರಕ ಎಂದು ಶಬ್ದ ಪ್ರಯೋಗವನ್ನು ಮಾಡಿ, ಈ ಅನ್ವಯವು ದೋಷಾಸ್ಪದವಾಗುವುದೆಂದು ಹೇಳಿದ್ದಾರೆ.

**ಅಧ್ಯಾಹಾರೋ ಬಹುವ್ರೀಹಿವೃದ್ಧ್ಯೈ ಕಿಂ ಸ್ಯಾತ್ ವಿಚಾರಯ ॥ ೧೫೦೪ ॥**

**ಅರ್ಥ–** ಅಧ್ಯಾಹಾರಃ= ಅಧ್ಯಾಹಾರವು, ಬಹುವ್ರೀಹಿ ವೃದ್ಧ್ಯೈ= ಬಹುವ್ರೀಹಿ ಪೋಷಣೆಗಾಗಿ, ಸ್ಯಾತ್ ಕಿಂ= ಆಗುವುದೇನು, ವಿಚಾರಯ= ವಿಚಾರ ಮಾಡು.

**ಅನುವಾದ–** ಅಧ್ಯಾಹಾರವನ್ನು ಮಾಡಿದರೆ ಬಹುವ್ರೀಹಿಯ ಪೋಷಣೆಯಾಗುತ್ತದೆಯೇ? ಎಂದು ವಿಚಾರ ಮಾಡು.

**ಭಾವವಿಲಾಸಿನೀ–** ಕ್ರಿಯಾಪದಾದೇರಧ್ಯಾಹಾರಸಂಭವೇऽಪಿ ರೂಢಿಂ ವಿನಾ ಯೋಗಮಾತ್ರೇಣೈವ ಪ್ರವೃತ್ತಸ್ಯ ಸಾಕಾಂಕ್ಷವಿಶೇಷಣಪದರೂಪಬಹುವ್ರೀಹೇಃ ಪ್ರಧಾನಭೂತವಿಶೇಷ್ಯಪದಸ್ಯೈವಾಧ್ಯಾಹಾರೋ ಮಹಾದೋಷ ಇತ್ಯೇತತ್ ಸಾಹಿತ್ಯಮುದ್ರಯೋಪಪಾದಯತಿ ॥ **ಅಧ್ಯಾಹಾರ ಇತಿ** ॥ ಯಥಾ ಅಧಿಕಾಹಾರೇ ಕ್ರಿಯಮಾಣೇ ಗೃಹಸ್ಥಿತ ಬಹುವ್ರೀಹೇರೇವ ನಾಶೋ ಭವತಿ । ತಥಾऽಧ್ಯಾಹಾರಾಭಾವೇऽಪಿ ಪೂರ್ವೋತ್ತರವಾಕ್ಯಸಮಾಖ್ಯಯಾ ಸಂಭವತ್ಪ್ರಧಾನಸಮಾಸೇ ಸತಿ ಶಾಕಾದ್ಯಧ್ಯಾಹಾರಂ ವಿನಾ ಪ್ರಧಾನಾನ್ಯಸ್ಯೈವಾಧ್ಯಾಹಾರೇ ಬಹುವ್ರೀಹಿನಾಶವತ್ ಪ್ರಧಾನ- ಪದಾಧ್ಯಾಹಾರಸಾಪೇಕ್ಷೋ ಬಹುವ್ರೀಹಿರೇವಾಯಮನಪೇಕ್ಷಃ ಸ್ಯಾದಿತಿ ಭಾವಃ ॥ ೧೫೦೪ ॥

**ವಿವರಣೆ–** ಕ್ರಿಯಾಪದಗಳನ್ನು ಅಧ್ಯಾಹಾರ ಮಾಡುವುದು ರೂಢಿಯಲ್ಲಿದ್ದರೂ, ಬಹುವ್ರೀಹಿಯಲ್ಲಿ ವಿಶೇಷ್ಯವಾಚಕ ಪದವನ್ನು ಅಧ್ಯಾಹಾರ ಮಾಡುವುದು ಯುಕ್ತವಲ್ಲ. ಏಕೆಂದರೆ ಬಹುವ್ರೀಹಿ ಸಮಾಸವು ಕೇವಲ ಯೋಗದಿಂದಲೇ ಪ್ರವೃತ್ತವಾಗುವುದರಿಂದ ಅದು ಕೇವಲ ಸಾಕಾಂಕ್ಷವಾದ ವಿಶೇಷಣವನ್ನು ಹೇಳುತ್ತದೆ. ಆದ್ದರಿಂದ ಆಕಾಂಕ್ಷಾನಿವರ್ತಕವಾದ ಪ್ರಧಾನವಾದ ವಿಶೇಷ್ಯ ಪದವನ್ನೇ ಅಧ್ಯಾಹಾರ ಮಾಡಬೇಕು. ಈ ವಿಶೇಷ್ಯ ಪದದ ಅಧ್ಯಾಹಾರವು ಲೋಕದಲ್ಲಿ ಎಂದೂ ಕಂಡು ಬರುವುದಿಲ್ಲ ಎಂದು ಸಾಹಿತ್ಯ ಮುದ್ರೆಯಿಂದ ಹೇಳುತ್ತಾರೆ. ಅಧ್ಯಾಹಾರ ಎಂದರೆ ಅಧಿಕ ಆಹಾರ ಸೇವನೆ. ಅಧಿಕ ಆಹಾರ ಸೇವನೆಯನ್ನು ಮಾಡುವವನ ಮನೆಯಲ್ಲಿ ಹೇಗೆ ಬಹುವ್ರೀಹಿಯು ಎಂದರೆ ಬಹಳ ಅಕ್ಕಿಯು (ಭತ್ತವು) ನಾಶವನ್ನು ಹೊಂದುತ್ತದೆಯೋ, ಅದರಂತೆ ಅಧ್ಯಾಹಾರವನ್ನು ಮಾಡುವುದರಿಂದ ಬಹುವ್ರೀಹಿತ್ವವೇ ನಾಶವಾಗಿ ಮಹಾದೋಷವು ಉಂಟಾಗುತ್ತದೆ ಎಂದು ಅಭಿಪ್ರಾಯ. ಆದ್ದರಿಂದ ಈ ಪ್ರಕರಣದಲ್ಲಿ 'ವಿದ್ಯಾತ್ಮನಿ ಭಿದಾ ಬೋಧ' ಎಂಬ ವಾಕ್ಯಕ್ಕೆ ಬಹುವ್ರೀಹಿ ಸಮಾಸವನ್ನು ಆಶ್ರಯಿಸದೇ, ತತ್ಪುರುಷ ಸಮಾಸವನ್ನೇ ಆಶ್ರಯಿಸಿ ಜೀವೇಶ್ವರ ಭೇದಜ್ಞಾನವೇ ವಿದ್ಯೆ ಎಂಬ ಅರ್ಥವನ್ನು ಹೇಳಬೇಕು. ಆಗ ಭೇದವೂ ಅದರ ಸತ್ಯತ್ವವೂ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ತರ್ಹಿ ಸತ್ತದಸಚ್ಚಾಸನ್ನ ಚ ಕಾಲಜವೋऽಪಿ ನ ।
ಯದಾ ಶಾಸ್ತ್ರಂ ಸಮಾಕೃಷ್ಯ ಶಯೀತ ಸಲಿಲೇ ಹರಿಃ ॥ ೧೫೦೫ ॥

ಅರುವನ್ ದೇಹಿದೇಹೇಷು ವಾಯುಸ್ತಸ್ಯ ಪ್ರಸಾದತಃ ॥ ೧೫೦೬ ॥

ತದಾ ಪ್ರಾಗಸತೋ ಜನ್ಮ ಸತೋ ಮೃತಿಮಥಾತ್ಮನಿ ।
ಭಿದಾಂ ಚ ಯೇ ಪಣಮ್ಮತೇ ಸ್ಮರಂತೀಶ ಸ್ಮೃತೇರ್ಗತಾಃ ॥ ೧೫೦೭ ॥

ತೇಷಾಂ ಉಪವಿಶಾಮ್ನಾಯಧ್ವನಿಂ ವೈಕುಂಠವಾಸಿನಾಂ।
ಇತ್ಯಾಹ ಶ್ರುತಿಗೀತಾಯಾಂ ಭಗವಾನ್ ಬಾದರಾಯಣಃ ॥ ೧೫೦೮ ॥

ಮೂರ್ತಾಮೂರ್ತಾಖ್ಯಭೂತಾನಾಂ ಲಯೋ ಬ್ರಹ್ಮಲಯಃ ಕಿಲ ।
ಕಾಲಸ್ಯ ರೂಪಮಾತ್ರಂ ತು ತದಾಽಪ್ಯಸ್ತಿ ಜವೋಽಸ್ಯ ನ ।
ಜರಾಮರಣಯೋಗ್ಯಸ್ಯ ಜವಾರ್ಹಜಗತಃ ಕ್ಷಯಾತ್ ॥ ೧೫೦೯ ॥

ನಿತ್ಯವೇದಾತ್ಮಕಂ ಶಾಸ್ತ್ರಂ ಅಪಕೃಷ್ಯ ಸ್ವಹೃದ್ಗುಹಾಂ ।
ಪ್ರವೇಶ್ಯ ಶೇತೇ ಕಿಲ ಸ ವಟಪತ್ರಪುಟೇ ಪ್ರಭುಃ ॥ ೧೫೧೦ ॥

**ಅರ್ಥ–** ಯದಾ= ಯಾವಾಗ, ಶಾಸ್ತ್ರಂ= ಶಾಸ್ತ್ರವನ್ನು, ಸಮಾಕೃಷ್ಯ= ಚೆನ್ನಾಗಿ ಆಕರ್ಷಿಸಿ ತನ್ನ ಹೃದಯ ಗುಹೆಯಲ್ಲಿ ಇಟ್ಟುಕೊಂಡು, ಹರಿಃ= ಹರಿಯು, ಸಲಿಲೇ= ಪ್ರಳಯೋದಕದಲ್ಲಿ, ಶಯೀತ= ಮಲಗುತ್ತಾನೆಯೋ, ತರ್ಹಿ= ಆಗ, ಸತ್= ಮೂರ್ತವಾದುದು, ಸದಸತ್= ನಿತ್ಯಾನಿತ್ಯವಾದ ಪುರಾಣಾದಿಗಳು, ಅಸತ್ ಚ= ಅಮೂರ್ತವಾದ ವಸ್ತುಗಳು ಸಹ, ನ= ಇರಲಿಲ್ಲ, ಕಾಲಜವೋಽಪಿ= ಕಾಲದ ವೇಗವು, ನ= ಇರಲಿಲ್ಲ, ದೇಹಿ ದೇಹೇಷು= ಜೀವರ ದೇಹದಲ್ಲಿ, ಆರುವನ್= ದೇವರನ್ನು ಚೆನ್ನಾಗಿ ಸ್ತೋತ್ರ ಮಾಡುವವರು, ವಾಯುಃ= ವಾಯುದೇವರು, ತಸ್ಯ= ಆ ವಾಯುದೇವರ, ಪ್ರಸಾದತಃ= ಅನುಗ್ರಹದಿಂದ, ತದಾ= ಪ್ರಳಯ ಕಾಲದಲ್ಲಿ, ಸೃತೇರ್ಗತಾಃ= ಸಂಸಾರದಿಂದ ಹೊರಬಂದ, ಯೇ= ಯಾವ ಜೀವರು, ಪ್ರಾಗಸತಃ= ಮೊದಲು ಇಲ್ಲದಿದ್ದರ, ಜನ್ಮ= ಉತ್ಪತ್ತಿಯನ್ನು ಎಂದರೆ ಉತ್ಪತ್ತಿ ಕಾರಣತ್ವವನ್ನು, ಸತಃ= ಮೊದಲು ಇದ್ದ ಕಾರ್ಯದ, ಮೃತಿಂ= ಸಂಹಾರವನ್ನು ಎಂದರೆ ಸಂಹಾರಕಾರಣತ್ವವನ್ನು, ಅತಃ= ಆ ಹರಿಯಿಂದಲೇ ಎಂಬುದನ್ನು ಮತ್ತು, ಆತ್ಮನಿ= ಪರಮಾತ್ಮನಲ್ಲಿ, ಭಿದಾಂ ಚ= ಭೇದವನ್ನೂ ಸಹ, ಪಣಮೃತೇ= ವ್ಯಾಪಾರ ಮಾಡದೆ ಎಂದರೆ ಫಲಾಪೇಕ್ಷೆ ಇಲ್ಲದೆ, ಸ್ಮರಂತಿ= ಸ್ಮರಿಸುತ್ತಾರೆಯೋ, ಈಶ= ಎಲೈ ಪ್ರಭುವೇ, ವೈಕುಂಠ ವಾಸಿನಾಂ= ವೈಕುಂಠ ಲೋಕದಲ್ಲಿ ವಾಸಿಸುವ, ತೇಷಾಂ= ಅಂತಹ ಜೀವರ, ಆಮ್ನಾಯಧ್ವನಿಂ= ವೇದೋಚ್ಚಾರಣ ಧ್ವನಿಯಲ್ಲಿ, ಉಪವಿಶ= ಸನ್ನಿಹಿತನಾಗು, ಇತಿ= ಎಂದು, ಭಗವಾನ್ ಬಾದರಾಯಣಃ= ವೇದವ್ಯಾಸಾಚಾರ್ಯರು, ಶ್ರುತಿಗೀತಾಯಾಂ= ಶ್ರುತಿ ಗೀತೆಯಲ್ಲಿ, ಆಹ= ಹೇಳಿದ್ದಾರೆ. ಮೂರ್ತಾಮೂರ್ತಾಖ್ಯಭೂತಾನಾಂ= ಮೂರ್ತ ಮತ್ತು ಅಮೂರ್ತವಾದ ಭೂತಗಳ, ಲಯಃ= ವಿನಾಶವು, ಬ್ರಹ್ಮಲಯಃ ಕಿಲ= ಬ್ರಹ್ಮಲಯವಷ್ಟೇ, ಕಾಲಸ್ಯ= ಕಾಲದ, ರೂಪಮಾತ್ರಂ ತು= ಸ್ವರೂಪ ಮಾತ್ರವಾದರೂ, ತದಾಪಿ= ಆಗಲೂ, ಅಸ್ತಿ= ಇದೆ, ಜರಾಮರಣಯೋಗ್ಯಸ್ಯ= ಜರೆ ಮತ್ತು ಮೃತಿಗಳಿಗೆ ಅರ್ಹವಾದ, ಜವಾರ್ಹಜಗತಃ= ವೇಗಕ್ಕೆ ಅರ್ಹವಾದ ಜಗತ್ತು, ಕ್ಷಯಾತ್= ನಾಶ

ಹೊಂದಿರುವುದರಿಂದ, ಅಸ್ಯ= ಈ ಕಾಲಕ್ಕೆ, ತದಾ= ಆಗ, ಜವೋ ನ= ವೇಗವಿಲ್ಲ, ನಿತ್ಯವೇದಾತ್ಮಕಂ= ನಿತ್ಯವಾದ ವೇದರೂಪವಾದ, ಶಾಸ್ತ್ರಂ= ಶಾಸ್ತ್ರವನ್ನು, ಅಪಕೃಷ್ಯ= ಎಂದರೆ, ಸ್ವಹೃದ್ಗುಹಾಂ ಪ್ರವೇಶ್ಯ= ತನ್ನ ಹೃದಯದ ಗುಹೆಯಲ್ಲಿ ಇಟ್ಟುಕೊಂಡು, ಸ ಪ್ರಭುಃ= ಪ್ರಭುವಾದ ಹರಿಯು, ವಟಪತ್ರಪುಟೇ= ವಟಪತ್ರದ ಒಂದು ಭಾಗದಲ್ಲಿ, ಶೇತೇ ಕಿಲ= ಮಲಗಿರುತ್ತಾನಷ್ಟೇ.

**ಅನುವಾದ–** ಹರಿಯು ನಿತ್ಯವಾದ ವೇದಾತ್ಮಕ ಶಾಸ್ತ್ರವನ್ನು ಯಾವಾಗ ತನ್ನ ಹೃದಯ ಗುಹೆಯಲ್ಲಿ ಇಟ್ಟುಕೊಂಡು ಪ್ರಳಯೋದಕದಲ್ಲಿ ಮಲಗುತ್ತಾನೆಯೋ, ಆಗ ಮೂರ್ತ ಪದಾರ್ಥವಿರಲಿಲ್ಲ, ಅಮೂರ್ತ ಪದಾರ್ಥವೂ ಇರಲಿಲ್ಲ, ನಿತ್ಯಾನಿತ್ಯವಾದ ಪುರಾಣಗಳೂ ಇರಲಿಲ್ಲ, ಕಾಲವಿದ್ದರೂ ಕಾಲದ ವೇಗವಿರಲಿಲ್ಲ. ಆಗ ಜೀವರ ದೇಹದಲ್ಲಿ ಇದ್ದು ಭಗವಂತನನ್ನು ಸ್ತೋತ್ರ ಮಾಡುವ ವಾಯುದೇವರ ಅನುಗ್ರಹದಿಂದ ಸಂಸಾರದಿಂದ ಉತ್ತೀರ್ಣರಾದ ಯಾವ ಜೀವರು ಹರಿಯಲ್ಲಿ ಮೊದಲು ಇರದಿದ್ದ ಜಗತ್ತಿನ ಸೃಷ್ಟಿಕರ್ತೃತ್ವವನ್ನು ಮತ್ತು ಹಿಂದೆ ಇದ್ದ ಜಗತ್ತಿನ ಸಂಹಾರ ಕರ್ತೃತ್ವವನ್ನು ಮತ್ತು ಅವನಲ್ಲಿರುವ ಸರ್ವ ಪ್ರಪಂಚ ಭೇದವನ್ನು ಫಲಾಪೇಕ್ಷೆ ಇಲ್ಲದೆ ಸ್ಮರಿಸುತ್ತಾರೆಯೋ, ಎಲೈ ಪ್ರಭುವೇ! ವೈಕುಂಠ ವಾಸಿಗಳಾದ ಅಂತಹವರ ವೇದಧ್ವನಿಯಲ್ಲಿ ನೀನು ಸನ್ನಿಹಿತನಾಗು ಎಂದು ಶ್ರುತಿ ಗೀತೆಯಲ್ಲಿ ಸಾಕ್ಷಾತ್ ವೇದವ್ಯಾಸದೇವರು ಹೇಳಿದ್ದಾರೆ. ಮೂರ್ತ ಮತ್ತು ಅಮೂರ್ತವಾದ ಎಲ್ಲ ಭೂತಗಳ ಲಯವು ಬ್ರಹ್ಮಲಯವೇ ಅಷ್ಟೇ. ಆಗ ಕಾಲದ ಸ್ವರೂಪ ಮಾತ್ರವು ಇದೆ. ಆದರೆ ಜರಾಮರಣಗಳಿಗೆ ಯೋಗ್ಯವಾದ ಜಗತ್ತು ನಾಶವನ್ನು ಹೊಂದಿರುವುದರಿಂದ ಜರಾಮರಣಾಪಾದಕವಾದ ಕಾಲದ ವೇಗವು ಮಾತ್ರ ಇಲ್ಲ. ಶಾಸ್ತ್ರವೆಂದರೆ ನಿತ್ಯವೇದ ರೂಪವಾದುದು ಎಂದು ಅರ್ಥ. ಅಪಕೃಷ್ಯ ಎಂದರೆ ತನ್ನ ಹೃದಯ ಗುಹೆಯಲ್ಲಿ ಇಟ್ಟುಕೊಂಡು ಎಂದು ಅರ್ಥ. ಹೀಗೆ ಮಾಡಿ ಪ್ರಭುವಾದ ಹರಿಯು ವಟಪತ್ರಪಟದಲ್ಲಿ ಶಯನ ಮಾಡುವನಷ್ಟೇ?

**ಭಾವವಿಲಾಸಿನೀ–** ಪ್ರಾಗ್ವೇದೇ ಪ್ರಮಾಣತಯೋಕ್ತಶ್ರುತಿಗೀತಾವಾಕ್ಯಸ್ಯ ವಿಸ್ತರೇಣಾರ್ಥಂ ವದಂಸ್ತತ್ಸಮಾಖ್ಯಾಬಲಾತ್ತೇನೈವ ಕೃತೇಽಸ್ಮಿನ್ನಪಿ ವಾಕ್ಯೇ ತದನುಸಾರೇಣೈವಾರ್ಥೋ ವಕ್ತವ್ಯ ಇತ್ಯಾಹ – **ತರ್ಹೀತಿ** ॥ ಯದಾಶಯೀತ ತರ್ಹೀತಿ ಸಂಬಂಧಃ । ಉಭಯಮಿತ್ಯಸ್ಯಾರ್ಥಃ ಸದಸದಿತಿ । ಮೂರ್ತಾಮೂರ್ತಯೋರೇಕತ್ವಾಯೋಗಾತ್ ಸನ್ನಿತ್ಯಮಸದನಿತ್ಯಮಿತಿ ವ್ಯುತ್ಪತ್ತ್ಯಾ ನಿತ್ಯಾನಿತ್ಯಪುರಾಣಾದಿಕಮನೇನ ಗೃಹ್ಯತೇ । ಶಯೀತೇತ್ಯಸ್ಯ ಯೋಗ್ಯತಯಾ ಶೇಷಪೂರಣಂ ಸಲಿಲ ಇತಿ। ಅಪಕೃಷ್ಯೇತ್ಯಸ್ಯಾರ್ಥಕಥನಂ ಸ್ವಹೃದ್ಗುಹಾಂ ಪ್ರವಿಶ್ಯೇತಿ ॥ ೧೫೦೫-೧೫೦೬ ॥

ತದಾ ಪ್ರಲಯಕಾಲೇ । ತರ್ಹೀತ್ಯಸ್ಯಾರ್ಥೋಽಯಮ್ । ಈಶೇತಿ ಯೋಗ್ಯತಯಾ ಹರೇಃ ಸಂಬೋಧನಮ್ । ಪ್ರಲಯೇ ಸಂಸಾರಿಣಾಂ ಸುಪ್ತತ್ವೇನ ಸ್ಮರಣಾಸಂಭವಾತ್ ಸ್ಮೃತೇರ್ಗತಾ

ಇತ್ಯುಕ್ತಮ್। ಜನಿಮೃತಿಪದಾಭ್ಯಾಂ ಭಗವನ್ನಿಷ್ಠಂ ತತ್ಕರ್ತೃತ್ವಂ ಲಕ್ಷ್ಯತೇ । ಜಗಜ್ಜನ್ಮಾದಿಕಾರಣತ್ವಮ್ । ಅತ ಏವ ಪರಮಾತ್ಮನಿ ಭೇದಂ ಚ ಯೇ ಸ್ಮರಂತೀತ್ಯರ್ಥಃ। ಪ್ರಕಾರಾಂತರೇಣ ಪದಚ್ಛೇದಾಸಂಭವಾತ್ ನಿರವಕಾಶಮಿದಂ ಪದ್ಯಮ್ ॥ ೧೫೦೭-೧೫೧೦ ॥

**ವಿವರಣೆ–** ಶ್ರುತಿ ಗೀತೆಯಲ್ಲಿ ಇರುವ ಸಮಗ್ರವಾದ ಶ್ಲೋಕದ ಪಾಠ ಹೀಗಿದೆ -

'ತರ್ಹಿ ನ ಸನ್ನ ಚಾಸದುಭಯಂ ನ ಚ ಕಾಲಜವಃ ಕಿಮಪಿ ನ ತತ್ರ ಶಾಸ್ತ್ರಮಪಕೃಷ್ಯ ಶಯೀತಯದಾ। ಜನಿಮಸತಃ ಸತೋ ಮೃತಿಮಜಾತ್ಮನಿ ಯೇ ಚ ಭಿದಾಂ ವಿಪಣಮೃತೇ ಸ್ಮರಂತ್ಯುಪವಿಶ ಧ್ವನಿಮಾರುವತಃ ॥'

**ಈ ಶ್ಲೋಕದ ಅರ್ಥವನ್ನು ಮೂಲಕಾರರೇ ವಿಮರ್ಶೆ ಮಾಡುತ್ತಾರೆ -**

**ಏವಂ ಚ ಬ್ರಹ್ಮಕಲ್ಪಾಂತೇ ಸಂತಿ ಸಂತಃ ಸ್ಮರಂತಿ ಚ ।**
**ಜಗತಾಂ ಜನ್ಮಮರಣೇ ಪರಮಾತ್ಮನಿ ಸರ್ವತಃ ॥ ೧೫೧೧ ॥**
**ಭಿದಾಂ ಚ ಇತ್ಯಾಗತಂ ಸ್ಪಷ್ಟಂ ಶಯಾನಸ್ಯ ತು ದೇಹಿತಾ ।**
**ಸ್ಮರ್ತೄಣಾಂ ಬಹುತಾ ಚಾರ್ಥಾತ್ ಪ್ರಾಪ್ತಾ ಶಬ್ದಾರ್ಥವಿನ್ಮತೇ ॥೧೫೧೨॥**

**ಅರ್ಥ–** ಏವಂ ಚ = ಆದ್ದರಿಂದ, ಬ್ರಹ್ಮಕಲ್ಪಾಂತೇ= ಬ್ರಹ್ಮಕಲ್ಪದ ಕೊನೆಯಲ್ಲಿ ಎಂದರೆ ಪ್ರಳಯ ಕಾಲದಲ್ಲಿ, ಸಂತಃ= ಸಜ್ಜನರು, ಸಂತಿ= ಇದ್ದಾರೆ, ಜಗತಾಂ= ಜಗತ್ತುಗಳ, ಜನ್ಮಮರಣೇ= ಸೃಷ್ಟಿಸಂಹಾರಗಳನ್ನು, ಸ್ಮರಂತಿ= ಸ್ಮರಿಸುತ್ತಾರೆ, ಚ= ಮತ್ತು, ಪರಮಾತ್ಮನಿ= ಪರಮಾತ್ಮನಲ್ಲಿ, ಸರ್ವತಃ= ಜೀವ ಜಡಾತ್ಮಕ ಎಲ್ಲಾ ವಸ್ತುಗಳಿಂದಲೂ, ಭಿದಾಂ= ಭೇದವನ್ನೂ, ಸ್ಮರಂತಿ= ಸ್ಮರಿಸುತ್ತಾರೆ, ಇತಿ= ಎಂದು, ಆಗತಂ= ಸಿದ್ಧವಾಯಿತು, ಶಯಾನಸ್ಯ= ಮಲಗಿರುವವನಿಗೆ, ದೇಹಿತಾ= ದೇಹವೂ ಸಹ, ಸ್ಪಷ್ಟಂ= ಸ್ಪಷ್ಟವಾಗಿ ಸಿದ್ಧವಾಯಿತು. ಶಬ್ದಾರ್ಥವಿನ್ಮತೇ= ಶಬ್ದಾರ್ಥವನ್ನು ತಿಳಿದವರ ಮತದಲ್ಲಿ, ಸ್ಮರ್ತೄಣಾಂ= ಸ್ಮರಿಸುವ ಜೀವರಿಗೆ, ಬಹುತಾ= ಬಹುತ್ವವೂ ಸಹ, ಅರ್ಥಾತ್= ಆರ್ಥಿಕವಾಗಿ, ಪ್ರಾಪ್ತಾ= ಪ್ರಾಪ್ತವಾಯಿತು.

**ಅನುವಾದ–** ಆದ್ದರಿಂದ ಬ್ರಹ್ಮಕಲ್ಪದ ಕೊನೆಯಲ್ಲಿ ಎಂದರೆ ಪ್ರಳಯ ಕಾಲದಲ್ಲಿ ಸಜ್ಜನರು ಇದ್ದಾರೆ. ಅವರು ಹರಿಯಲ್ಲಿ ಜಗಜ್ಜನ್ಮಕಾರಣತ್ವವನ್ನು, ಜಗತ್ ಸಂಹಾರ ಕಾರಣತ್ವವನ್ನು ಸ್ಮರಿಸುತ್ತಾರೆ. ಮತ್ತು ಅವನಲ್ಲಿ ಸರ್ವಪ್ರತಿಯೋಗಿಕವಾದ ಭೇದವನ್ನೂ ಸ್ಮರಿಸುತ್ತಾರೆ ಎಂದು ಸ್ಪಷ್ಟವಾಯಿತು. ಮಲಗಿರುವ ಹರಿಗೆ ದೇಹವಿದೆ ಎಂದು ಸಿದ್ಧವಾಯಿತು. ಸ್ಮರಂತಿ ಎಂಬ ಬಹುವಚನದಿಂದ ಸ್ಮರಿಸುವ ಜೀವರು ಅನೇಕರು ಇದ್ದಾರೆಂದು ಜೀವ ಬಹುತ್ವವು ಶಬ್ದ ಶಕ್ತಿಯನ್ನು ತಿಳಿದವರ ಮತದಲ್ಲಿ ಅರ್ಥಾತ್ ಪ್ರಾಪ್ತವಾಯಿತು.

**ಭಾವವಿಲಾಸಿನೀ–** ಏತದ್ವಾಕ್ಯಫಲಿತಮಾಹ – **ಏವಂಚೇತಿ ॥** ಭಿದಾಂ ಚ ಸ್ಮರಂತೀತಿ ಸಂಬಂಧಃ ॥ ೧೫೧೧-೧೫೧೨ ॥

**ಯತೋ ಜಡದ್ವಯಂ ಮುಕ್ತೌ ಮುಕ್ತಾಶ್ಚ ಬಹವೋऽಭವನ್ ।**
**ತೇನಾದ್ವಿತೀಯತಾ ಮುಕ್ತೌ ಶುಕ್ತೌ ರೂಪ್ಯಮಭೂತ್ ತವ॥ ೧೫೧೩ ॥**

**ಅರ್ಥ–** ಯತಃ= ಯಾವ ಕಾರಣದಿಂದ, ಮುಕ್ತೌ= ಮುಕ್ತಿಯಲ್ಲಿ, ಜಡದ್ವಯಂ= ದೇಶ ಮತ್ತು ಕಾಲರೂಪವಾದ ಎರಡು ಜಡಗಳು, ಮತ್ತು, ಬಹವಃ= ಅನೇಕ, ಮುಕ್ತಾಶ್ಚ= ಮುಕ್ತ ಜೀವರು, ಅಭವನ್= ಇದ್ದಾರೆಯೋ, ತೇನ= ಆ ಕಾರಣದಿಂದ, ಮುಕ್ತೌ= ಮೋಕ್ಷದಲ್ಲಿ, ಅದ್ವಿತೀಯತಾ= ಅದ್ವಿತೀಯತ್ವವು, ತವ= ನಿನಗೆ, ಶುಕ್ತೌ= ಶುಕ್ತಿಯಲ್ಲಿ ಕಾಣುವ, ರೂಪ್ಯಂ= ರೂಪ್ಯವಾಗಿ, ಅಭೂತ್= ಆಯಿತು.

**ಅನುವಾದ–** ಮೋಕ್ಷದಲ್ಲಿ ದೇಶ ಕಾಲರೂಪವಾದ ಎರಡು ಜಡಗಳು ಮತ್ತು ಅನೇಕ ಮುಕ್ತರು ಇರುವುದರಿಂದ ಮೋಕ್ಷ ಕಾಲದಲ್ಲಿ ನಿನಗೆ ಅಭಿಮತವಾದ ಅದ್ವಿತೀಯತ್ವವು ಶುಕ್ತಿಯಲ್ಲಿ ತೋರುವ ರಜತವಾಯಿತು.

**ಭಾವವಿಲಾಸಿನೀ–** ಜಡದ್ವಯಂ ವೇದಕಾಲಾತ್ಮಕವಮ್ । ತೇನ ಕಾರಣೇನ । ತವ ಮತೇ ಮುಕ್ತಾವದ್ವಿತೀಯತಾ ॥ ೧೫೧೩ ॥

**ವಿವರಣೆ–** ಸಲಿಲೇ ಎಂಬ ಪದದಿಂದ ನೀರಿನಲ್ಲಿ ಎಂದು ಹೇಳಿ ದೇಶವನ್ನು ಯದಾ ಎಂಬ ಶಬ್ದದಿಂದ ಯಾವ ಪ್ರಳಯ ಕಾಲದಲ್ಲಿ ಕಾಲವನ್ನು ಹೇಳಿರುವುದರಿಂದ, ಪ್ರಳಯ ಕಾಲದಲ್ಲಿ ದೇಶಕಾಲಗಳೂ ಇವೆ ಎಂದು ಸಿದ್ಧವಾಯಿತು. ಯೇ ಸ್ಮರಂತಿ ಎಂದು ಬಹುವಚನವನ್ನು ಪ್ರಯೋಗ ಮಾಡಿರುವುದರಿಂದ, ಜೀವ ಬಹುತ್ವವೂ ಸಿದ್ಧವಾಯಿತು. ಹೀಗೆ ಪ್ರಳಯ ಕಾಲದಲ್ಲಿ ದೇಶ-ಕಾಲ ಮತ್ತು ಅನೇಕ ಜೀವರು ಇರುವಾಗ ಅದ್ವಿತೀಯತ್ವವು ಶುಕ್ತಿ ರಜತದಂತೆ ಅಪ್ರಾಮಾಣಿಕವಾಯಿತು ಎಂದು ಅಭಿಪ್ರಾಯ.

**ಜೀವನ್ಮುಕ್ತಿರ್ಹಿ ದೇಹಾದೌ ಸತಿ ಮುಕ್ತಿರಿಯಂ ಪರಾ ।**
**ಪರಾಂತಕಾಲಾದಪರೋ ಮುಕ್ತೇಃ ಕಾಲೋ ನ ಯೌಕ್ತಿಕಃ॥ ೧೫೧೪ ॥**

**ಅರ್ಥ–** ಜೀವನ್ಮುಕ್ತಿರ್ಹಿ= ಜೀವನ್ಮುಕ್ತಿಯಾದರೂ, ದೇಹಾದೌ ಸತಿ= ದೇಹಾದಿಗಳು ಇದ್ದಾಗ, ಹಿ= ಇರುವುದಷ್ಟೇ, ಇಯಂ= ಈ ಶ್ಲೋಕದಲ್ಲಿ ಹೇಳಿದ ಮುಕ್ತಿಯು, ಪರಾ ಮುಕ್ತಿಃ= ಪರಮ ಮೋಕ್ಷ, ಪರಾಂತ ಕಾಲಾತ್= ಪರಾಂತ ಕಾಲವನ್ನು ಬಿಟ್ಟು, ಅಪರಃ= ಇನ್ನೊಂದು, ಮುಕ್ತೇಃ= ಮುಕ್ತಿ ಕಾಲವು, ನ ಯೌಕ್ತಿಕಃ= ಯುಕ್ತಿಯುಕ್ತವಾದುದಲ್ಲ.

**ಅನುವಾದ–** ಜೀವನ್ಮುಕ್ತಿಯು ದೇಹಾದಿಗಳು ಇದ್ದಾಗ ಉಂಟಾಗುವುದಷ್ಟೇ. ಆದರೆ ಇದು ಪರಮ ಮೋಕ್ಷ. ಪರಾಂತ ಕಾಲವನ್ನು ಬಿಟ್ಟು ಇನ್ನೊಂದು ಮೋಕ್ಷ ಕಾಲವನ್ನು ಒಪ್ಪುವುದು ಯುಕ್ತಿಯುಕ್ತವಾಗುವುದಿಲ್ಲ.

**ಭಾವವಿಲಾಸಿನೀ–** ನನು ಜೀವನ್ಮುಕ್ತಿದಶೇಯಂ ಭವತ್ವಿತ್ಯತ ಆಹ – ಜೀವನ್ಮುಕ್ತಿರ್ಹೀತಿ ॥ ದೇಹಾದೌ ಸತಿ ಸತ್ಯೇವ ಜೀವನ್ಮುಕ್ತಿರಂಗೀಕ್ರಿಯತೇ । ಶುಕನಾರದಾದೌ ತಥಾ ದರ್ಶನಾತ್ ॥ ಇಯಂ ಚರಾಚರಸಕಲಜಗತ್ಕ್ಷಯರೂಪಾಪರಮಮುಕ್ತಿಃ । ಪರಾಂತಕಾಲಾತ್ ಬ್ರಹ್ಮಣಃ ಶತಾಯು-ರಾತ್ಮಕಪರಸ್ಯಾಂತಕಾಲಾತ್ ॥ ೧೫೧೪ ॥

**ವಿವರಣೆ–** ಈ ಶ್ಲೋಕದಲ್ಲಿ ಜೀವನ್ಮುಕ್ತಿಕಾಲವನ್ನು ಮಾತ್ರ ವಿವರಿಸಿದ್ದಾರೆ. ಪರಮ ಮೋಕ್ಷವನ್ನಲ್ಲ. ಆದ್ದರಿಂದ ಅದ್ವೈತ ಸಿದ್ಧಾಂತಕ್ಕೆ ಯಾವ ವಿರೋಧವೂ ಇಲ್ಲ ಎಂದು ಶಂಕಿಸಿದರೆ ಇಲ್ಲಿ ಅದಕ್ಕೆ ಉತ್ತರವನ್ನು ಹೇಳುತ್ತಾರೆ. ಜೀವನ್ಮುಕ್ತಿಯ ಕಾಲದಲ್ಲಿ ದೇಹಾದಿಗಳು ಇರುತ್ತವೆ. ಆದರೆ ಇಲ್ಲಿ ಮೂರ್ತಾಮೂರ್ತವಾದ ಸಮಸ್ತದ್ರವ್ಯಗಳ ನಾಶವನ್ನು ಹೇಳಿರುವುದರಿಂದ ಇದು ಜೀವನ್ಮುಕ್ತಿ ದೆಶೆಯಲ್ಲ. ಶುಕನಾರದಾದಿಗಳಿಗೆ ಶುಕನಾರದಾದಿ ದೇಹವಿದ್ದಾಗ ಜೀವನ್ಮುಕ್ತಿ. ಈ ಶ್ಲೋಕದಲ್ಲಿ ಹೇಳಿರುವುದಂತೂ ದೇಹಾದಿಗಳು ಇಲ್ಲದಿರುವಾಗ ಇರುವ ಪರಮ ಮೋಕ್ಷ. ಬ್ರಹ್ಮದೇವರ ಪರಾಂತ ಕಾಲದ ನಂತರ ಉಂಟಾಗುವ ಕಾಲಕ್ಕಿಂತ ಭಿನ್ನವಾದ ಕಾಲವು ಪರಮ ಮೋಕ್ಷ ಕಾಲವಲ್ಲವೆಂದು ಯಾವ ಯುಕ್ತಿಯಿಂದಲೂ ಸಿದ್ಧವಾಗುವುದಿಲ್ಲ.

ತದಾಪಿ ಭೇದಸ್ತದ್ಬೋಧಶ್ಚಾಸ್ತಿ ಶ್ರೌತಸ್ಮೃತೇರ್ಬಲಾತ್ ॥ ೧೫೧೫ ॥

**ಅರ್ಥ–** ತದಾಪಿ= ಆಗಲೂ ಕೂಡ, ಭೇದಃ= ಭೇದವು, ತದ್ಬೋಧಃ= ಆ ಭೇದಜ್ಞಾನವು, ಶ್ರೌತ ಸ್ಮೃತೇರ್ಬಲಾತ್= ಶ್ರುತಿ ಮೂಲವಾದ ಸ್ಮೃತಿಯ ಬಲದಿಂದ, ಅಸ್ತಿ= ಇದೆಯಷ್ಟೇ.

**ಅನುವಾದ–** ಶ್ರುತಿ ಮೂಲವಾದ ಸ್ಮೃತಿಯ ಬಲದಿಂದ ಆ ಪರಮ ಮೋಕ್ಷ ಕಾಲದಲ್ಲಿಯೂ ಭೇದವು ಮತ್ತು ಭೇದಜ್ಞಾನವು ಇರುವುದಷ್ಟೇ?

**ಭಾವವಿಲಾಸಿನೀ–** ಭಿದಾಮಿತ್ಯುಕ್ತ್ಯಾ ಭೇದಃ, ಸ್ಮರಂತೀತ್ಯುಕ್ತ್ಯಾ ತದ್ಬೋಧ ಇತಿ ವಿವೇಕಃ । ಶ್ರೌತಸ್ಮೃತೇಃ ಶ್ರುತಿಮೂಲವ್ಯಾಸವಾಕ್ಯಾತ್ಮಕಸ್ಮೃತೇಃ ॥ ೧೫೧೫ ॥

**ವಿವರಣೆ–** ಭಾಗವತದ ಈ ಅಧ್ಯಾಯಕ್ಕೆ ಶ್ರುತಿ ಗೀತಾ ಎಂದೇ ಹೆಸರು. ಎಂದರೆ ಇಲ್ಲಿ ಹೇಳಿರುವ ವಾಕ್ಯಗಳೆಲ್ಲವೂ ಶ್ರುತಿಗಳ ಪದಸಮೂಹಗಳ ಸಂಯೋಜನೆಯಿಂದಲೇ ಮಾಡಿರುವ ವಾಕ್ಯಗಳು. ಆದ್ದರಿಂದ ಇವು ಶ್ರುತಿ ಮೂಲ ಸ್ಮೃತಿಗಳು. ಇಲ್ಲಿ ಭಿದಾಂ ಎಂದು ಭೇದವನ್ನು, ಸ್ಮರಂತಿ ಚ ಎಂದು ಅದರ ಸ್ಮರಣೆಯನ್ನು ಹೇಳಿರುವುದರಿಂದ ಪರಮ ಮೋಕ್ಷಕಾಲದಲ್ಲಿಯೂ ಭೇದವೂ, ಭೇದಜ್ಞಾನವೂ ಇದೆ ಎಂದು ಸಿದ್ಧವಾಗುತ್ತದೆ.

ಆತ್ಮನೀತಿ ಹಿ ಸಪ್ತಮ್ಯಾ ಯದ್ ಭೇದಾಧಾರತೋದಿತಾ ।
ಅತಸ್ತತ್ ಪರಮಂ ತತ್ತ್ವಂ ವಿದ್ಯಾ ತದ್ಬೋಧ ಏವ ಹಿ ॥ ೧೫೧೬ ॥

**ಅರ್ಥ–** ಆತ್ಮನಿ ಇತಿ= ಆತ್ಮನಿ ಎಂಬಲ್ಲಿ, ಸಪ್ತಮ್ಯಾ= ಸಪ್ತಮೀ ವಿಭಕ್ತಿಯಿಂದ, ಯತ್= ಯಾವ ಕಾರಣದಿಂದ, ಭೇದಾಧಾರತಾ= ಭೇದಾಶ್ರಯತ್ವವೇ, ಉದಿತಾ= ಹೇಳಲ್ಪಟ್ಟಿದೆಯೋ, ಅತಃ= ಆದ್ದರಿಂದ, ತತ್= ಆ ವಸ್ತುವೇ, ಪರಮಂ ತತ್ತ್ವಂ= ಪರಮ ತತ್ತ್ವ, ವಿದ್ಯಾ= ವಿದ್ಯೆಯಾದರೂ, ತದ್ಬೋಧ ಏವ ಹಿ= ಆ ವಸ್ತುವಿನಲ್ಲಿರುವ ಭೇದದ ಜ್ಞಾನವೇ ಆಗಿದೆ.

**ಅನುವಾದ–** ಇಲ್ಲಿ ಆತ್ಮನಿ ಎಂಬ ಶಬ್ದದಲ್ಲಿ ಸಪ್ತಮೀ ವಿಭಕ್ತಿಯಿಂದ ಹರಿಗೆ ಭೇದಾಶ್ರಯತ್ವವನ್ನು ಹೇಳಿದೆ. ಆದ್ದರಿಂದ ಹರಿಯೇ ಪರಮ ತತ್ತ್ವವೆಂದೂ, ಹರಿಯಲ್ಲಿರುವ ಭೇದ ಜ್ಞಾನವೇ ವಿದ್ಯೆ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಯತ್ ಯಸ್ಮಾತ್ । ಉದಿತಾ ಪರಮಾತ್ಮನಃ । ಅತಃ ಮುಕ್ತಾವಪಿ ಭೇದಸ್ಮರಣಕಥನಾತ್। ತತ್ ಭೇದಾತ್ಮಕಂ ತತ್ತ್ವಮ್ । ತದ್ಬೋಧಃ ಭೇದಬೋಧಃ । ತಸ್ಮಾದ್ಭಿದಾಯಾ ಬೋಧ ಇತ್ಯೇವ ಸಮಾಸೋ ವಕ್ತವ್ಯಃ ನತ್ವಪರ ಇತಿ ಭಾವಃ ॥ ೧೫೧೬ ॥

**ವಿವರಣೆ–** ಶ್ರುತಿ ಗೀತಾವಾಕ್ಯದ ಸಂವಾದದಿಂದಲೂ' ವಿದ್ಯಾತ್ಮನಿ ಭಿದಾ ಬೋಧಃ' ಎಂಬ ಭಾಗವತ ವಾಕ್ಯಕ್ಕೆ ಭೇದಜ್ಞಾನವೇ ವಿದ್ಯೆ ಎಂದು ಅರ್ಥ ಮಾಡಬೇಕೆಂದು ಇಲ್ಲಿ ತಿಳಿಸುತ್ತಾರೆ.

ಭೇದದೃಷ್ಟ್ಯಾಽಭಿಮಾನೇನ ನಿಸ್ಸಂಗೇನಾಪಿ ಕರ್ಮಣಾ ।
ಇತ್ಯಾಹ ಸ ಪ್ರಭುರ್ವ್ಯಾಸೋ ಮೋಕ್ಷಸಾಧನಬೋಧನೇ ॥ ೧೫೧೭ ॥

**ಅರ್ಥ–** ಮೋಕ್ಷಸಾಧನ ಬೋಧನೇ= ಮೋಕ್ಷ ಸಾಧನವನ್ನು ತಿಳಿಸುವ ಸಂದರ್ಭದಲ್ಲಿ, ಸ ಪ್ರಭುಃ= ಆ ಪ್ರಭುಗಳಾದ, ವ್ಯಾಸಃ= ವೇದವ್ಯಾಸರು, ಭೇದದೃಷ್ಟ್ಯಾ= ಭೇದ ಸಾಕ್ಷಾತ್ಕಾರದಿಂದಲೂ, ಅಭಿಮಾನೇನ= ಭಕ್ತಿಯಿಂದಲೂ, ಅಪಿ= ಮತ್ತು, ನಿಸ್ಸಂಗೇನ ಕರ್ಮಣಾ= ನಿವೃತ್ತಿ ಕರ್ಮದಿಂದಲೂ, ಇತಿ= ಎಂದು, ಆಹ= ಹೇಳಿದ್ದಾರೆ.

**ಅನುವಾದ–** ಮೋಕ್ಷ ಸಾಧನವನ್ನು ತಿಳಿಸುತ್ತಾ ಪ್ರಭುಗಳಾದ ಆ ವೇದವ್ಯಾಸರು ಭಾಗವತದಲ್ಲಿ ಭೇದ ದೃಷ್ಟಿಯಿಂದಲೂ ಭಕ್ತಿಯಿಂದಲೂ ಮತ್ತು ನಿವೃತ್ತಕರ್ಮ-ದಿಂದಲೂ ಮೋಕ್ಷವು ಉಂಟಾಗುವುದೆಂದು ತಿಳಿಸಿದ್ದಾರೆ.

**ಭಾವವಿಲಾಸಿನೀ–** ಭೇದದೃಷ್ಟೇರ್ಮೋಕ್ಷಸಾಧನವಿರಕ್ತಿಭಕ್ತಿಭ್ಯಾಂ ಸಹ ಭಾಗವತ ಏವ ಪಾಠಾತ್ ಭಿದಾಬೋಧ ಏವ ವಿದ್ಯಾ । ನತ್ವಬೋಧ ಇತ್ಯಾಹ – **ಭೇದದೃಷ್ಟ್ಯೇತಿ** ॥ ಭೇದದೃಷ್ಟ್ಯಾ ಭಗವತಿ ಭೇದಾಪರೋಕ್ಷಜ್ಞಾನೇನ । ಅಭಿಮಾನೇನ ತಸ್ಮಿನ್ ಭಗವತ್ಯೇವ ಮಮಾಯಂಸ್ವಾಮೀತಿ ಸ್ನೇಹೇನ । ಭಕ್ತ್ಯೇತ್ಯರ್ಥಃ । ಇತರತ್ ಸ್ಪಷ್ಟಮ್ । ಜ್ಞಾನೇನೇತ್ಯೇವೋಕ್ತೇ ಐಕ್ಯಜ್ಞಾನಸ್ಯಾಪಿ ಪ್ರಾಪ್ತೇಸ್ತನ್ನಿರಾಸಾಯ ಭೇದದೃಷ್ಟ್ಯೇತಿ ಜ್ಞಾನಂ ವಿಶಿನಷ್ಟಿ। ಭಕ್ತೇಃಸ್ವರೂಪಾಪರಿಜ್ಞಾನಾತ್

ಅಭಿಮಾನೇನೇತಿ ತಾಂ ಚ ವಿಶಿನಷ್ಟಿ ಕರ್ಮಣೋಽಪ್ರಧಾನಸಾಧನತ್ವಾತ್ತಸ್ಯ ಜ್ಞಾನಭಕ್ತಿಸಾಮ್ಯಂ ಗರ್ಹಯಿತುಮಪಿ ಪದಮ್ । ಅನೇನ ವೈರಾಗ್ಯಮುಪಲಕ್ಷ್ಯತೇ । ಏತದುಪಲಕ್ಷಿತವೈರಾಗ್ಯ-ಸಮುಚ್ಚಯಾಯವಾ ಅಪಿಪದಮ್ ॥ ೧೫೧೭ ॥

**ವಿವರಣೆ–** ಭಾಗವತದಲ್ಲಿ ಮೋಕ್ಷಸಾಧನವಾದ ಭಕ್ತಿ ವಿರಕ್ತಿಗಳ ಜೊತೆಯಲ್ಲಿ ಭೇದ ಸಾಕ್ಷಾತ್ಕಾರವನ್ನು ಹೇಳಿರುವುದರಿಂದ 'ವಿದ್ಯಾತ್ಮನಿ ಭಿದಾ ಬೋಧಃ' ಎಂಬಲ್ಲಿ ಬೋಧಃ ಎಂದು ಛೇದ ಮಾಡಬೇಕೇ ಹೊರತು ಅಬೋಧ ಎಂದು ಛೇದ ಮಾಡಬಾರದು ಎಂದು ಇಲ್ಲಿ ಪ್ರತಿಪಾದಿಸುತ್ತಾರೆ. ಭೇದದೃಷ್ಟಿ ಎಂದರೆ ಭೇದಾಪರೋಕ್ಷಜ್ಞಾನ ಎಂದು ಅರ್ಥ. ಕೇವಲ ಜ್ಞಾನ ಎಂದು ಹೇಳಿದರೆ ಐಕ್ಯಜ್ಞಾನವನ್ನು ತೆಗೆದುಕೊಳ್ಳಲು ಬರುವುದರಿಂದ ಅದನ್ನು ನಿವಾರಿಸಲು ಭೇದ ದೃಷ್ಟ್ಯಾ ಎಂದು ಹೇಳಿದ್ದಾರೆ. ಅಭಿಮಾನ ಎಂದರೆ ಭಗವಂತನು ನನ್ನ ಸ್ವಾಮಿ ಎಂಬ ಸ್ನೇಹ. ಭಕ್ತಿಯ ಸ್ವರೂಪವನ್ನು ತಿಳಿಸಲು ಭಕ್ತಿ ಎಂಬ ಪದವನ್ನೇ ಉಪಯೋಗಿಸದೆ ಅದರ ಸ್ವರೂಪವನ್ನು ಹೇಳುವ ಅಭಿಮಾನ ಎಂಬ ಪದವನ್ನು ಉಪಯೋಗಿಸಿದ್ದಾರೆ. ಕರ್ಮವು ಜ್ಞಾನ ಭಕ್ತಿಗಳಿಗಿಂತ ಅಧಮವಾದುದರಿಂದ ಕರ್ಮವನ್ನು ಹೇಳುವ ಪದದ ಜೊತೆಯಲ್ಲಿ ಗರ್ಹಾರ್ತವಾದ ಅಪಿ ಪದವನ್ನು ಪ್ರಯೋಗಿಸಿದ್ದಾರೆ. ನಿಸ್ಸಂಗ ಕರ್ಮದಿಂದ ಎಂಬ ಪದದಿಂದ ಲಕ್ಷಣಾವೃತ್ತಿಯಿಂದ ವೈರಾಗ್ಯವನ್ನು ತೆಗೆದುಕೊಳ್ಳಬೇಕು. ಅಪಿ ಪದವು ಆ ವೈರಾಗ್ಯವನ್ನು ಸಮುಚ್ಚಯ ಮಾಡುತ್ತದೆ. ಈ ಭಾಗವತ ವಾಕ್ಯದ ಸಮಾಖ್ಯೆಯಿಂದ ಭಿದಾಬೋಧಃ ಎಂಬಲ್ಲಿ ಬೋಧ ಎಂದೇ ಪದಚ್ಛೇದ ಮಾಡಬೇಕು ಎಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಭಗವತ್ಯಭಿಮಾನೋ ಹಿ ಭಕ್ತಿರ್ನಿಸ್ಸಂಗಕರ್ಮ ಚ ।
ನಿವೃತ್ತಿಃ ಸೈವ ವಿದ್ವದ್ಭಿರ್ವಿರಕ್ತಿರಿತಿ ಚೋಚ್ಯತೇ ॥ ೧೫೧೮ ॥

**ಅರ್ಥ–** ಭಗವತಿ= ಪರಮಾತ್ಮನಲ್ಲಿ, ಅಭಿಮಾನಃ= ನನ್ನ ಸ್ವಾಮಿ ಎಂಬ ಸ್ನೇಹವೇ, ಭಕ್ತಿಃ ಹಿ= ಭಕ್ತಿಯಷ್ಟೇ, ಚ= ಮತ್ತು, ನಿಸ್ಸಂಗ ಕರ್ಮ= ಫಲಾಪೇಕ್ಷೆ ಇಲ್ಲದ ಕರ್ಮವು, ನಿವೃತ್ತಿಃ= ನಿವೃತ್ತಿ ಕರ್ಮವಷ್ಟೇ, ಸೈವ= ಆ ನಿವೃತ್ತಿ ಕರ್ಮವೇ, ವಿದ್ವದ್ಭಿಃ= ತಿಳಿದವರಿಂದ, ವಿರಕ್ತಿಃ ಇತಿ ಚ= ವೈರಾಗ್ಯವೆಂದೂ, ಉಚ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಭಗವಂತನಲ್ಲಿ ನನ್ನ ಸ್ವಾಮಿ ಎಂಬ ಅಭಿಮಾನವೇ ಭಕ್ತಿಯಷ್ಟೇ. ಫಲಾಪೇಕ್ಷಾರಹಿತವಾದ ಕರ್ಮವೇ ನಿವೃತ್ತಿಕರ್ಮವಷ್ಟೇ. ಆ ನಿಸ್ಸಂಗಕರ್ಮವನ್ನೇ ತಿಳಿದವರು ವೈರಾಗ್ಯವೆಂದೂ ಹೇಳುತ್ತಾರೆ.

**ಭಾವವಿಲಾಸಿನೀ–** ಸೈವ ನಿವೃತ್ತಿರೇವ ॥ ೧೫೧೮ ॥

**ಭೇದದೃಷ್ಟಿಂ ಚ ತತ್ಪಂಕ್ತೌ ಜ್ಞಾನಾಖ್ಯಾಂ ಯಾಂ ಪುರಾ ಜಗೌ ।**
**ಅಕಾರಾಖ್ಯಕುಠಾರೇಣ ಕಿಂ ತಾಂ ಹಂತಿ ಮುರಾಂತಕಃ ॥ ೧೫೬೯ ॥**

**ತದಬೋಧಸ್ತವೈವಾಸೀತ್ ಭೇದೋಽಯಮಕುತೋಭಯಃ ॥ ೧೫೭೦ ॥**

**ಅರ್ಥ–** ಯಾಂ= ಯಾವ, ಜ್ಞಾನಾಖ್ಯಂ= ಜ್ಞಾನವೆಂಬ, ಭೇದದೃಷ್ಟಿಂ= ಭೇದ ಸಾಕ್ಷಾತ್ಕಾರವನ್ನು, ಪುರಾ= ಭಕ್ತಿಗಿಂತಲೂ ಮೊದಲು, ತತ್ಪಂಕ್ತೌ= ಮೋಕ್ಷ ಸಾಧನ ಶ್ರೇಣಿಯಲ್ಲಿ, ಜಗೌ= ಹೇಳಿದ್ದಾರೆಯೋ, ತಾಂ= ಅಂತಹ ಭೇದ ದರ್ಶನವನ್ನು, ಮುರಾಂತಕಃ= ಮುರಾರಿಯಾದ ಹರಿಯು, ಅಕಾರಾಖ್ಯಕುಠಾರೇಣ= ಅಕಾರ ಎಂಬ ಕೊಡಲಿಯಿಂದ, ಹಂತಿ ಕಿಂ= ಭೇದಿಸುತ್ತಾರೆಯೇ? ತತ್= ಆ ಕಾರಣದಿಂದ, ತವೈವ= ನಿನಗೇ, ಅಬೋಧಃ= ಅಬೋಧವು, ಆಸೀತ್= ಉಂಟಾಯಿತು, ಅಯಂ ಭೇದಃ= ಈ ಜೀವೇಶ್ವರ ಭೇದವು, ಅಕುತೋಭಯಃ= ಯಾವ ಭಯವೂ ಇಲ್ಲದ್ದಾಯಿತು.

**ಅನುವಾದ–** ಮುರಾರಿಗಳಾದ ಯಾವ ವೇದವ್ಯಾಸರು ಮೋಕ್ಷ ಸಾಧನ ಶ್ರೇಣಿಯಲ್ಲಿ ಯಾವ ಜ್ಞಾನವೆಂಬ ಭೇದ ಸಾಕ್ಷಾತ್ಕಾರವನ್ನು ಭಕ್ತಿಗಿಂತಲೂ ಮೊದಲು ಹೇಳಿದರೋ, ಅಂತಹ ಅವರು ಅಬೋಧ ಎಂದು ಭೇದ ಮಾಡಿ ಅಕಾರವೆಂಬ ಕೊಡಲಿಯಿಂದ ಆ ಭೇದ ದೃಷ್ಟಿಯನ್ನು ಕಡಿಯುತ್ತಾರೆಯೇ? ಆದ್ದರಿಂದ ಅಬೋಧವು ನಿನಗೇ ಉಂಟಾಯಿತು. ನಮ್ಮ ಜೀವೇಶ್ವರ ಭೇದಕ್ಕೆ ಯಾವ ಭಯವೂ ಇಲ್ಲ.

**ಭಾವವಿಲಾಸಿನೀ–** ಯಾಂ ಜ್ಞಾನಾಖ್ಯಭೇದದೃಷ್ಟಿಮ್ । ಪುರಾ ಭಕ್ತೇಃ ಪೂರ್ವಮ್ । ಅಕಾರಾಖ್ಯ-ಕುಠಾರೇಣ ಅಬೋಧ ಇತಿ ಪದಚ್ಛೇದೇ ಭೇದದೃಷ್ಟಿನಿಂದಕೋಽಯಮಕಾರಃ । ತೇನ ಕುಠಾರೇಣ । ಜ್ಞಾನಭಕ್ತಿವಿರಕ್ತ್ಯಾಖ್ಯಮೋಕ್ಷಸಾಧನೇಷು ಪ್ರಥಮಾಂ ಭೇದದೃಷ್ಟಿಮ್ ॥ ೧೫೬೯ ॥

ತತ್ ತಸ್ಮಾತ್ । ಅಬೋಧಃ ಪೂರ್ವೋತ್ತರವಾಕ್ಯಾರ್ಥಾಬೋಧಃ ॥ ೧೫೭೦ ॥

**ವಿವರಣೆ–** 'ಭೇದದೃಷ್ಟ್ಯಾಭಿಮಾನೇನ' ಎಂಬ ಶ್ಲೋಕದಲ್ಲಿ ಭಕ್ತಿಗಿಂತಲೂ ಮೊದಲು ಭೇದ ಸಾಕ್ಷಾತ್ಕಾರವನ್ನು ಮೋಕ್ಷ ಸಾಧನವಾಗಿ ಹೇಳಿರುವ ವೇದವ್ಯಾಸರು 'ಭಿದಾ ಬೋಧಃ' ಎಂಬಲ್ಲಿ ಅಬೋಧ ಎಂದು ಪದಚ್ಛೇದ ಮಾಡಿದರೆ ಭೇದದೃಷ್ಟಿಯನ್ನು ಬಾಧಿಸಿದಂತೆ ಆಗುವುದರಿಂದ ವೇದವ್ಯಾಸರು ಅಬೋಧ ಎಂಬ ಪದಚ್ಛೇದವನ್ನು ಸಮ್ಮತಿಸುವುದಿಲ್ಲ. 'ಭಿದಾಯಾಃ ಬೋಧಃ' ಎಂದೇ ವಿಗ್ರಹವನ್ನು ಮಾಡಬೇಕು. ಆದ್ದರಿಂದ ನಿನಗೇ ಅಬೋಧ ಎಂದರೆ ವಿಪರೀತಜ್ಞಾನವು ಉಂಟಾಯಿತು. ಜೀವೇಶ್ವರ ಭೇದಕ್ಕೆ ಯಾವ ಭಯವೂ ಇಲ್ಲ ಎಂದು ಅಭಿಪ್ರಾಯ.

**ದ್ವಿರೂಪಾಪ್ಯೇಕರೂಪಾ ಯಾ ರಥಿಸಾರಥಿತಾಂ ವ್ಯಧಾತ್ ।**
**ಸೇಯಂ ವಾಕ್ಯಾರ್ಥಕಲ್ಪಾ ಮೇ ತ್ವಂ ಚಾಪಾರ್ಥೋಽಭವೋ ಧ್ರುವಮ್ ॥**
**॥ ೧೫೨೧ ॥**

**ಅರ್ಥ–** ದ್ವಿರೂಪಾಪಿ= ಅಬೋಧ ಬೋಧ ಎಂದು ಎರಡು ರೀತಿಯ ಚ್ಛೇದವನ್ನು ಹೊಂದಲು ಅರ್ಹವಾಗಿರುವ ಭಿದಾಬೋಧ ಎಂಬ, ಯಾ= ಯಾವ ವಾಕ್ಯವು, ಏಕರೂಪಾ= ತತ್ಪುರುಷ ಸಮಾಸ ಪ್ರಾಧಾನ್ಯದಿಂದ ಭಿದಾ ಬೋಧ ಎಂಬ ಒಂದೇ ರೂಪವನ್ನು ಪರ್ಯವಸಾನದಲ್ಲಿ ಹೊಂದಿ, ರಥಿಸಾರಥಿತಾಂ= ರಥಿತ್ವ ಮತ್ತು ಸಾರಥಿತ್ವವನ್ನು ವ್ಯಧಾತ್= ಉಂಟು ಮಾಡಿತು. ಸೇಯಂ= ಅಂತಹ ಈ, ವಾಕ್= ವಾಕ್ಯವು, ಮೇ= ನನಗೆ, ಪಾರ್ಥಕಲ್ಪಾ= ಅರ್ಜುನನಂತೆ ಆಯಿತು, ತ್ವಂ ಚ= ನೀನಾದರೂ, ಅಪಾರ್ಥಃ= ಅಪಾರ್ಥನಾಗಿ, ಧ್ರುವಂ= ನಿಶ್ಚಯವಾಗಿ, ಅಭವಃ= ಆಗಿದ್ದೀಯೇ.

**ಅನುವಾದ– ಯಾವ ಭಾಗವತ ವಾಕ್ಯವು ಭಿದಾ-ಬೋಧ, ಭಿದಾ-ಅಬೋಧ ಎಂಬ ಎರಡು ರೂಪವನ್ನು ಹೊಂದಲು ಅರ್ಹವಾಗಿದ್ದರೂ, ಸಮಾಸ ಪ್ರಾಧಾನ್ಯದಿಂದ ಭಿದಾ ಬೋಧ ಎಂಬ ರೂಪವನ್ನೇ ಪರ್ಯವಸಾನದಲ್ಲಿ ಹೊಂದಿ ತಾನೇ ರಥಿಯೂ ಮತ್ತು ಸಾರಥಿಯೂ ಆಗಿ ನನಗೆ ಅರ್ಜುನನಂತೆ ಆಯಿತು. ನೀನು ಅರ್ಜುನನಲ್ಲ ಎಂದು ಸಿದ್ಧವಾಯಿತು (ನೀನು ನಿನ್ನ ಸಾಧನವನ್ನು ಸಮರ್ಥನೆ ಮಾಡಲು ಅಶಕ್ತನಾಗಿದ್ದೀಯೆ ಎಂದು ಸಿದ್ಧವಾಯಿತು).**

**ಭಾವವಿಲಾಸಿನೀ–** ಇಮಮೇವಾರ್ಥಂ ಸಾಹಿತ್ಯಮುದ್ರಯಾಽಲಂಕರೋತಿ – **ದ್ವಿರೂಪೇತಿ ॥** ದ್ವಿರೂಪಾ ಅಬೋಧಬೋಧಾಖ್ಯರೂಪದ್ವಯಾನುಕೂಲೇವಸ್ಥಿತಾಪಿ ಏಕರೂಪಾ ಸಮಾಸ-ಪ್ರಾಧಾನ್ಯಾದಿನಾ ಬೋಧ ಇತ್ಯೇವರೂಪವತೀ । ರಥಿಸಾರಥಿತಾಂ ಅಂತತಃ ಸಿದ್ಧರೂಪೇಣ ಪರಂ ಪ್ರತಿರಥಿತ್ವಂ ಸ್ವಯುಕ್ತಿರೂಪೇಣ ಸಾರಥ್ಯಂ ಚ । ಅಥವಾ ಭೇದದೃಷ್ಟ್ಯಾ ಭಿದಾಂ ಸ್ಮರಂತೀತಿ ನಿರವಕಾಶರೂಪಂ ಭಿದಾಬೋಧ ಇತಿ ಸಾವಕಾಶರೂಪಂ ಚ ಯಸ್ಯಾಃ ಭಾಗವತ ವಾಚಃ ಸಾ ದ್ವಿರೂಪಾ । ಯದ್ವಾ ಆಪಾತತೋ ವ್ಯಾವಹಾರಿಕತ್ವಶಂಕಾರ್ಹಾ । ಸಾಕ್ಷಾನ್ಮೋಕ್ಷ- ಸಾಧನತ್ವ-ಸಾಕ್ಷಾನ್ಮೋಕ್ಷಕಾಲೀನತ್ವಯುಕ್ತ್ಯಾ ತದನರ್ಹಾ ಚೇತಿ ದ್ವಿರೂಪಾ । ಏತಾದೃಶ್ಯಪಿ ಯಾ ಪುನರೇಕ-ರೂಪಾ ನಿರವಕಾಶವಾಕ್ಯದ್ವಯಸಮಾಖ್ಯಯಾ ಅಸ್ಯಾ ಅಪಿ ನಿರವಕಾಶತ್ವಪ್ರಾಪ್ತ್ಯಾ ಸರ್ವಾಪಿ ನಿರವಕಕಾಶತ್ವಾಖ್ಯೈಕರೂಪಾ । ರಥಿಸಾರಥಿತಾಂ ಪರಂ ಪ್ರತಿಯುದ್ಧಾಯ ಪ್ರಯುಕ್ತತ್ವಾತ್ ಭಿದಾಬೋಧ ಇತಿ ಶ್ಲೋಕೋ ರಥೀ । ನಿರವಕಾಶಸಮಾಖ್ಯಾರೂಪತಯಾ ಇಮೌ ಶ್ಲೋಕೌ ಸಾರಥೀ । ಇಮೌವಾ ಶ್ಲೋಕೌ ಭೇದಸಾಧಕತಯಾ ಪರಂ ಪ್ರತ್ಯಪಿ ಪ್ರಯೋಕ್ತುಂ ಶಕ್ಯ-ತ್ವಾದ್ರಥಿನೌ । ಮುಕ್ತಿಕಾಲೀನತ್ವಮೋಕ್ಷಸಾಧನಪಂಕ್ತಿಸ್ಥತ್ವಾಖ್ಯಯುಕ್ತಿಗರ್ಭತ್ವಾತ್ ಸಾರಥಿನೌಚ । ಏವಂಚ ದ್ವೇಧಾ ದ್ವಿರೂಪತ್ವಮೇಕರೂಪತ್ವಂ ಚ । ತ್ರೇಧಾರಥಿಸಾರಥಿತ್ವಮ್ । ಏಕಂ

ವಿಚಾರ್ಯವಾಕ್ಯಂ ಸಮಾಖ್ಯಾವಾಕ್ಯದ್ವಯಂ ಚೇತಿ ತ್ರಯಶ್ಚ ಪಾರ್ಥಾ ಲಬ್ಧಾ ಇತಿ ದ್ರಷ್ಟವ್ಯಮ್ । ಅತ ಏವಾಹ – **ಸೇಯಂ ವಾಮಿತಿ ॥** ಪಾರ್ಥಕಲ್ಪಾ ಪಾರ್ಥತ್ರಯಕಲ್ಪಾ । ಏಕಪಾರ್ಥೇನೈವ ಈದೃಶನಿರವಕಾಶೈಕವಾಕ್ಯೇನೈವ ಪರೋ ಜೇತುಂ ಶಕ್ಯತೇ । ಬಹುತರವಾಕ್ಯೇಷು ಸತ್ಸು ಕಿಂ ವಕ್ತವ್ಯ-ಮಿತಿ ಭಾವೇನ ಪಾರ್ಥತ್ರಯಕಲ್ಪೇತ್ಯುಕ್ತಮ್। ಅಪಾರ್ಥಃ ಪ್ರತ್ಯುತ್ತರಾಸಮರ್ಥತ್ವಾದ್ವ್ಯರ್ಥಃ । ಅಸ್ಮಾಕಮಿವ ನಿರವಕಾಶವಾಕ್ಯರೂಪಪಾರ್ಥರಹಿತತ್ವಾತ್ ಅಪಾರ್ಥಶ್ಚ । ಪಾರ್ಥಸ್ಯಾಪಿ ಷಂಡರೂಪೇಣ ಸಹ ಪ್ರಾಕ್ ದ್ವಿರೂಪಸ್ಯ ಪುನಃ ಪುಂರೂಪಸ್ಯೈವ ದರ್ಶನಾತ್ ದ್ವಿರೂಪತ್ವ-ಮೇಕರೂಪತ್ವಂ ಚ ರಥಿತ್ವಂ ಸಾರಥಿತ್ವಂ ಚ ಉತ್ತರಗೋಗ್ರಹಣೇ ಪ್ರಸಿದ್ಧಮೇವ ॥ ೧೫೨೧ ॥

**ವಿವರಣೆ–** ದ್ವಿರೂಪ ಎಂದರೆ ಎರಡು ರೂಪಗಳು. ಭಿದಾ-ಅಬೋಧ, ಭಿದಾ-ಬೋಧ ಎಂಬುವು ಆ ಎರಡು ರೂಪಗಳು. ಪರ್ಯವಸಾನದಲ್ಲಿ ಭಿದಾ-ಬೋಧ ಎಂದೇ ಸಿದ್ಧವಾಗುವುದರಿಂದ ಅದು ಏಕರೂಪವಾಯಿತು. ಈ ಪರ್ಯವಸಾನದಲ್ಲಿ ಸಿದ್ಧವಾದ ರೂಪದಿಂದ ಅದು ಪರವಾದಿಗೆ ಅಭಿಮುಖವಾಗಿ ಹೋರಾಡುವುದರಿಂದ ಅದು ರಥಿಯಾಯಿತು. ಯುಕ್ತಿರೂಪವಾದುದರಿಂದ ಅದೇ ಸಾರಥಿಯೂ ಆಯಿತು. ಇದು ಒಂದು ರೀತಿ ಯೋಜನೆ. ಅಥವಾ ದ್ವಿರೂಪಗಳೆಂದರೆ ಭೇದದೃಷ್ಟ್ಯಾ ಮತ್ತು ಭಿದಾಂ ಸ್ಮರಂತಿ ಎಂಬ ಎರಡು ರೂಪಗಳು. ಈ ಎರಡು ರೂಪಗಳು ನಿರವಕಾಶವಾದ ರೂಪಗಳು. ಭಿದಾಬೋಧ ಎಂಬ ವಾಕ್ಯವು ಸಾವಕಾಶ ರೂಪ. ದ್ವಿರೂಪವಾದ ವಾಕ್ಯಗಳು ನೇರವಾಗಿ ವಿರೋಧ ಮಾಡುವುದರಿಂದ ರಥಿಗಳು. ಭಿದಾಬೋಧ ಎಂಬ ವಾಕ್ಯವು ಯುಕ್ತಿ ರೂಪವಾದುದರಿಂದ ಸಾರಥಿ ಎಂದು ಭಾಗವತ ವಾಕ್ಯದಲ್ಲಿರುವ ಮೂರು ವಾಕ್ಯಗಳಲ್ಲಿ ಎರಡು ವಾಕ್ಯಗಳು ರಥಿ ಎಂದೂ, ಒಂದು ವಾಕ್ಯವು ಸಾರಥಿ ಎಂದೂ ಹೇಳಿದ್ದಾರೆ. ಇದು ಎರಡನೆಯ ರೀತಿ ಯೋಜನೆ. ಅಥವಾ ಭೇದಕ್ಕೆ ಆಪಾತತಃ ವ್ಯಾವಹಾರಿಕತ್ವ ಶಂಕಾರ್ಹತ್ವವು ಒಂದು ರೂಪ. ಸಾಕ್ಷಾನ್ಮೋಕ್ಷ ಸಾಧನತ್ವ ಮತ್ತು ಮೋಕ್ಷಕಾಲೀನತ್ವ ಯುಕ್ತಿಗಳಿಂದ ಸಿದ್ಧವಾಗುವ ವ್ಯಾವಹಾರಿಕತ್ವ ಅನರ್ಹತ್ವವು ಇನ್ನೊಂದು ರೂಪ. ಹೀಗಿದ್ದರೂ 'ಭಿದಾಬೋಧ' ಎಂಬ ಭೇದವಾಕ್ಯವು ಭೇದದೃಷ್ಟ್ಯಾ ಮತ್ತು ಭಿದಾಂ ಸ್ಮರಂತಿ ಎಂಬ ನಿರವಕಾಶ ವಾಕ್ಯಗಳ ಸಮಾಖ್ಯೆಯಿಂದ ತಾನೂ ನಿರವಕಾಶವಾಗುವುದರಿಂದ ಮೂರು ವಾಕ್ಯಗಳಿಗೂ ನಿರವಕಾಶತ್ವ ರೂಪವಾದ ಒಂದೇ ರೂಪವು ಉಂಟಾಯಿತು. ಪರವಾದಿಯನ್ನು ಕುರಿತು ಯುದ್ಧಕ್ಕೆ ಪ್ರವೃತ್ತವಾದ ಕಾರಣದಿಂದ 'ಭಿದಾ ಬೋಧಃ' ಎಂಬ ಶ್ಲೋಕವು ರಥಿ. ನಿರವಕಾಶ ಸಮಾಖ್ಯಾ ರೂಪವಾದ ಉಳಿದೆರಡು ಶ್ಲೋಕಗಳು ಸಾರಥಿಗಳು. ಅಥವಾ ಇವೆರಡು ಶ್ಲೋಕಗಳನ್ನೂ ಸಹ ಭೇದಸಾಧನೆಗಾಗಿ ಪರವಾದಿಯನ್ನು ಕುರಿತು ಪ್ರಯೋಗ ಮಾಡಬಹುದಾದ್ದರಿಂದ ಈ ಎರಡು ಶ್ಲೋಕಗಳೂ ರಥಿಗಳು. ಮೋಕ್ಷಸಾಧನತ್ವ ಮತ್ತು ಮೋಕ್ಷಕಾಲೀನತ್ವ ರೂಪವಾದ ಯುಕ್ತಿಗಳನ್ನು ಒಳಗೊಂಡಿರುವುದರಿಂದ ಈ ಎರಡು ಶ್ಲೋಕಗಳೇ ಸಾರಥಿಗಳೂ ಕೂಡ. ಇದು ಮೂರನೆಯ ಯೋಜನೆ. ಹೀಗೆ ದ್ವಿರೂಪತ್ವ ಮತ್ತು

ಏಕರೂಪತ್ವವನ್ನು ಎರಡು ರೀತಿಯಲ್ಲಿಯೂ ರಥಿತ್ವ ಮತ್ತು ಸಾರಥಿತ್ವಗಳನ್ನು ಮೂರು ರೀತಿಗಳಲ್ಲಿಯೂ ಕೂಡಿಸಬಹುದು. 'ಭಿದಾ-ಬೋಧ' ಎಂಬ ಒಂದು ವಿಚಾರಣೀಯವಾದ ವಾಕ್ಯ. 'ಭೇದದೃಷ್ಟ್ಯಾ, ಭಿದಾಂ ಸ್ಮರಂತಿ' ಎಂಬ ಎರಡು ಸಮಾಖ್ಯಾವಾಕ್ಯಗಳು. ಮೂರೂ ಸಹ ಅರ್ಜುನನೇ ಆದವು ಎಂದು ಲಭ್ಯವಾದ ಅರ್ಥ. ಆದ್ದರಿಂದ ನನ್ನ ಬಳಿ ಮೂರು ಜನ ಅರ್ಜುನರಿದ್ದಾರೆ. ಒಬ್ಬ ಅರ್ಜುನನೇ ಎಂದರೆ ನಿರವಕಾಶವಾದ ಒಂದು ವಾಕ್ಯವೇ ಪ್ರತಿಪಕ್ಷವನ್ನು ಜಯಿಸಲು ಸಮರ್ಥನಾದಾಗ ಮೂರು ಅರ್ಜುನರು ಎಂದರೆ ಮೂರು ನಿರವಕಾಶ ವಾಕ್ಯಗಳು ಪ್ರತಿವಾದಿಯನ್ನು ಜಯಿಸುವುದರಲ್ಲಿ ಯಾವ ಸಂದೇಹವಿದೆ? ಆದ್ದರಿಂದ ನಾನು ಪಾರ್ಥನಾದೆ. ಪ್ರತಿವಾದಿಯಾದ ನಿನಗೆ ಅಂತಹ ನಿರವಕಾಶ ವಾಕ್ಯವಾಗಲೀ, ಯುಕ್ತಿಯಾಗಲೀ ಇಲ್ಲದಿರುವುದರಿಂದ ನೀನು ಅಪಾರ್ಥ ಎಂದರೆ ಪಾರ್ಥನಲ್ಲ. ಆದ್ದರಿಂದ ಜಯಿಸುವುದಿಲ್ಲ ಎಂದು ಅಪಾರ್ಥ ಶಬ್ದಕ್ಕೆ ಒಂದು ಅರ್ಥ. ಅಪಾರ್ಥ ಎಂದರೆ ಅಪವ್ಯಾಖ್ಯಾನ ಮಾಡುವವನು ಎಂದು ಇನ್ನೊಂದು ಅರ್ಥ. ಉತ್ತರ ಗೋಗ್ರಹಣ ಕಾಲದಲ್ಲಿ ಉತ್ತರನು ಹೆದರಿಕೊಂಡಾಗ ಅರ್ಜುನನು ತಾನೇ ರಥಿಕನಾಗಿ, ತಾನೇ ಸಾರಥಿಯಾಗಿ ಶತ್ರು ಪಕ್ಷವನ್ನು ಜಯಿಸಿದಂತೆ ನಮ್ಮ ಭಾಗವತದ ಈ ಮೂರು ವಾಕ್ಯಗಳು ತಾವೇ ರಥಿಕರಾಗಿ ಮತ್ತು ಸಾರಥಿಗಳಾಗಿ ಅಭೇದವಾದವನ್ನು ನಿರಾಕರಿಸುತ್ತವೆ ಎಂದು ಅಭಿಪ್ರಾಯ.

**ಅತೋ ಮಮ ಗೃಹಾನ್ನೀತಾ ಭವತೋಽಪ್ಯುತ್ತರಾಕೃತೀಃ ।**
**ಗಾ ಗೃಹ್ಣಾಮಿ ನ ಸಂದೇಹಸ್ತ್ವಂ ತು ದುರ್ಯೋಧನೋಽಭವಃ ॥ ೧೫೨ ॥**

**ಅರ್ಥ–** ಅತಃ= ಆದ್ದರಿಂದ, ಮಮ ಗೃಹಾತ್= ನನ್ನ ಮನೆಯಾದ ವೇದಗಳಿಂದ, ನೀತಾ= ಬಲಾತ್ಕಾರವಾಗಿ ತೆಗೆದುಕೊಂಡು ಹೋಗಲ್ಪಟ್ಟ, ಭವತಃ= ನಿನ್ನ, ಉತ್ತರಾಕೃತೀಃ= ಉತ್ತರ ರೂಪವಾದ, ಗಾಃ= ಗೋವುಗಳನ್ನು, ಗೃಹ್ಣಾಮಿ= ನಾನು ತೆಗೆದುಕೊಳ್ಳುತ್ತೇನೆ, ನ ಸಂದೇಹಃ= ಈ ವಿಷಯದಲ್ಲಿ ಸಂದೇಹವಿಲ್ಲ, ತ್ವಂ ತು= ನೀನಾದರೂ, ದುರ್ಯೋಧನೋಽಭವಃ= ದುರ್ಯೋಧನನಾದಿ (ಯುದ್ಧ ಮಾಡಲು ಅಸಮರ್ಥನಾಗಿರುವೆ).

**ಅನುವಾದ–** ಆದ್ದರಿಂದ ಭಾಗವತವೆಂಬ ನನ್ನ ಸದಾಗಮದ ಮನೆಯಿಂದ ನೀನು ಬಲಾತ್ಕಾರವಾಗಿ ತೆಗೆದುಕೊಂಡು ಹೋಗಿ ನನ್ನನ್ನು ಎದುರಿಸಲು ನೀಡುವ ಉತ್ತರ ವಾಕ್ಯಗಳೆಂಬ ಗೋವುಗಳನ್ನು ನಾನು ನಿಸ್ಸಂಶಯವಾಗಿ ತೆಗೆದುಕೊಳ್ಳುತ್ತೇನೆ. ನೀನು ದುರ್ಯೋಧನನಾದೆ ಎಂದರೆ ಉತ್ತರವನ್ನು ಕೊಡಲು ಅಸಮರ್ಥನಾದೆ.

**ಭಾವವಿಲಾಸಿನೀ–** ಅತಃ ನಿರವಕಾಶಭಗವದ್ವಾಕ್ಯವಿರುದ್ಧತ್ವಾತ್ । ಗಾಃ ತವೈಕ್ಯಶ್ರುತೀಃ । ದುರ್ಯೋಧನಃ ಯುದ್ಧಾಸಮರ್ಥಃ ॥ ೧೫೨ ॥

**ವಿವರಣೆ**– ನಿನ್ನ ಉತ್ತರರೂಪವಾದ ವಾಕ್ಯಗಳನ್ನು ನಾನು ಸ್ವೀಕರಿಸುತ್ತೇನೆ ಎಂದರೆ ಆ ವಾಕ್ಯಗಳಿಗೆ ಸರಿಯಾದ ಯೋಜನೆಯನ್ನು ಮಾಡಿ ನನಗೆ ಅನುಕೂಲವಾಗುವಂತೆ ಮಾಡುತ್ತೇನೆ ಎಂದು ಅರ್ಥ. ಉತ್ತರ ಗೋಗ್ರಹಣದಲ್ಲಿ ದುರ್ಯೋಧನನು ಸೋತು ಹೋದಂತೆ ನನ್ನ ಜೊತೆಯಲ್ಲಿ ವಾದ ಮಾಡುವಾಗ ನೀನೂ ಸಹ ಸೋತು ಹೋಗುತ್ತೀಯೆ ಎಂದು ಧ್ವನಿ. ಆದ್ದರಿಂದ ಈ ಭಾಗವತದ ಮೂರು ವಾಕ್ಯಗಳಿಂದ ಜೀವೇಶ್ವರ ಭೇದವೂ, ಆದರ ಪಾರಮಾರ್ಥಿಕತ್ವವೂ ಸಿದ್ಧವಾಗುತ್ತದೆ ಎಂದು ಒಟ್ಟು ಪ್ರಕರಣದ ಅಭಿಪ್ರಾಯ.

**ಯಥೈಷಾ ಪುರುಷೇ ಚ್ಛಾಯಾ ಏತಸ್ಮಿನ್ನೇತದಾತತಮ್ ।**
**ಇತಿ ಶ್ರುತ್ಯಾ ಯತೋ ಬಿಂಬಪ್ರತಿಬಿಂಬತ್ವಮುಚ್ಯತೇ ॥ ೧೫೨ ॥**

**ಅರ್ಥ**– ಏಷಾ = ಈ ಯಾವ, ಛಾಯಾ = ನೆರಳು, ಯಥಾ = ಹೇಗೆ, ಏತಸ್ಮಿನ್ ಪುರುಷೇ = ಈ ದೇಹದಲ್ಲಿ, ಆತತಂ = ಆಶ್ರಯಿಸಿದೆಯೋ, ತಥಾ = ಹಾಗೆಯೇ, ಏತತ್ = ಜೀವ ಸಮುದಾಯವು, ಏತಸ್ಮಿನ್ = ಈ ಪರಮಾತ್ಮನಲ್ಲಿ, ಆತತಂ = ಆಶ್ರಯಿಸಿದೆ, ಇತಿ ಶ್ರುತ್ಯಾ= ಈ ವೇದವಾಕ್ಯದಿಂದ, ಯತಃ = ಯಾವಕಾರಣದಿಂದ, ಬಿಂಬಪ್ರತಿಬಿಂಬತ್ವಂ = ಜೀವಪರಮಾತ್ಮರಿಗೆ ಬಿಂಬಪ್ರತಿಬಿಂಬಭಾವವು, ಉಚ್ಯತೇ = ಹೇಳಲ್ಪಡುತ್ತದೆಯೋ, ಅತಃ = ಆ ಕಾರಣದಿಂದ, ಭೇದಃ = ಜೀವಪರಮಾತ್ಮರ ಭೇದವು, ಅಸ್ತಿ = ಇದೆ.

**ಅನುವಾದ**– ಹೇಗೆ ದೇಹದ ನೆರಳು ದೇಹವನ್ನು ಅನುಸರಿಸಿ ದೇಹದ ಅಧೀನವಾಗಿ ದೆಯೋ ಹಾಗೆಯೇ ಜೀವನು ಪರಮಾತ್ಮನಿಗಿಂತ ಭಿನ್ನನಾಗಿ ಅವನನ್ನು ಅನು ಸರಿಸಿ ಇದ್ದಾನೆ ಎಂದು 'ಯಥೈಷಾ ಪುರುಷೇಚ್ಛಾಯಾ ಏಕಸ್ಮಿನ್ನೆಕದಾ ತತಂ' ಎಂಬ ಶ್ರುತ್ಯರ್ಥವಾಗಿದೆ. ಈ ಶ್ರುತ್ಯರ್ಥವಿಚಾರಮಾಡಿದಾಗ, ಜೀವಪರಮಾತ್ಮರಿಗೆ ಬಿಂಬ ಪ್ರತಿಬಿಂಬಭಾವವಿರುವುದರಿಂದ ಭೇದವಿದೆ ಎಂದು ತಿಳಿಯುತ್ತದೆ.

**ಭಾವವಿಲಾಸಿನೀ**– ಬಿಂಬಪ್ರತಿಬಿಂಬಭಾವೇನ ಚ ಜೀವಪರಮಯೋರ್ಭೇದಸಾಧಿಕಾಂ ಶ್ರುತಿಮೇವೋಪಾದತ್ತೇ– **ಯಥೈಷೇತಿ** ॥ ೧೫೨ ॥

**ವಿವರಣೆ**– ಈ ಶ್ಲೋಕದಲ್ಲಿ ಪುರುಷಶಬ್ದವು ದೇಹವನ್ನು ಹೇಳುತ್ತದೆ. ಛಾಯಾ ಶಬ್ದವು ಆ ದೇಹದ ನೆರಳನ್ನು ತಿಳಿಸುತ್ತದೆ. ಇವೆರಡೂ ಉಪಮಾನಗಳು. ಉಪಮೇಯಗಳು ಪರಮಾತ್ಮ ಮತ್ತು ಜೀವಾತ್ಮರು. ಹೇಗೆ ನೆರಳು ದೇಹದ ಅಧೀನವಾಗಿದ್ದುಕೊಂಡು ದೇ ಹವನ್ನು ಅನುಸರಿಸಿ ಇರುವುದೋ ಹಾಗೆಯೇ ಜೀವನೂ ಪರಮಾತ್ಮನಿಂದ ಭಿನ್ನನಾಗಿ ಅಧೀನನಾಗಿದ್ದುಕೊಂಡು ಪರಮಾತ್ಮನನ್ನು ಅನುಸರಿಸಿಕೊಂಡಿರುತ್ತಾನೆ.ಹೀಗೆ ಪರಮಾತ್ಮ ಜೀವಾತ್ಮರಿಗೆ ಶ್ರುತಿಯಲ್ಲಿ ಬಿಂಬಪ್ರತಿಬಿಂಬಭಾವವು ಹೇಳಿದೆ.

ಇಲ್ಲಿರುವ ಯುಕ್ತಿಯು ಹೀಗಿದೆ -

ಪರಮಾತ್ಮಜೀವೌ ಭಿನ್ನೌ ಬಿಂಬಪ್ರತಿಬಿಂಬಭಾವೇನ ಶ್ರುತ್ಯುಕ್ತತ್ವಾತ್ ಎಂದು.

**ಶ್ರುತ್ಯಾ ಸರ್ವೋಪಸಂಹಾರೀ ದೃಷ್ಟಾಂತೋಽಯಮುದೀರಿತಃ ।**
**ಉಪಮಾಶಾಸ್ತ್ರತತ್ವಜ್ಞಾ ಮುಖ್ಯಾಂ ತಾಮುಪಮಾಂ ವಿದುಃ ॥ ೧೫೨೪ ॥**

**ಅರ್ಥ–** ಅಯಂ = ಈ ಪುರುಷರೂಪವಾದ ಮತ್ತು ಛಾಯಾರೂಪವಾದ, ದೃಷ್ಟಾಂತಃ= ಉಪಮಾನವು, ಸರ್ವೋಪಸಂಹಾರೀ = ಎಲ್ಲಾ ಪ್ರಕಾರಗಳಿಂದ ಉಪಮೇಯದಲ್ಲಿ ಹೊಂದಿಕೆಯಾಗುವುದಾಗಿ, ಉದೀರಿತಃ = ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಉಪಮಾಶಾಸ್ತ್ರತತ್ವ ಜ್ಞಾಃ= ಉಪಮಾಲಂಕಾರ ಶಾಸ್ತ್ರದ ಸರಿಯಾದ ತಿಳುವಳಿಕೆವುಳ್ಳವರು, ತಾಂ ಉಪಮಾಂ= ಆ ಉಪಮೇಯವನ್ನು, ಮುಖ್ಯಾಂ = ಪ್ರಧಾನವನ್ನಾಗಿ, ವಿದುಃ = ತಿಳಿಯುತ್ತಾರೆ.

**ಅನುವಾದ–** ಶ್ರುತಿಯು ಸರ್ವೋಪಸಂಹಾರಿಯಾದ ಈ ದೃಷ್ಟಾಂತವನ್ನು ಹೇಳಿದೆ. ಉಪಮಾಶಾಸ್ತ್ರದಲ್ಲಿ ಪರಿಣಿತರಾದವರು ಇಂತಹ ಸರ್ವೋಪಸಂಹಾರಿಯಾದ ಉಪಮಾನವನ್ನು ಮುಖ್ಯವಾದ ಉಪಮಾನವೆಂದು ಹೇಳುತ್ತಾರೆ.

**ಭಾವವಿಲಾಸಿನೀ–** ಸರ್ವೋಪಸಂಹಾರೀ ಸರ್ವಪ್ರಕಾರೈಃ ಸಾಮ್ಯಂ ದಾರ್ಷ್ಟಾಂತಿಕೇ ಉಪಸಂಹರನ್ । ಅಯಂ ಪುರುಷರೂಪಃ ಛಾಯಾರೂಪಶ್ಚ । ಪುರುಷೋ ದೇಹಃ ॥೧೫೨೪॥

**ವಿವರಣೆ–** ಶ್ರುತಿಯುಜೀವಪರಮಾತ್ಮರೆಂಬ ದಾರ್ಷ್ಟಾಂತಿಕದಲ್ಲಿ ಎಲ್ಲ ರೀತಿಯಿಂದಲೂ ಹೋಲಿಕೆಯಾಗುವ ಛಾಯಾ ಮತ್ತು ದೇಹವೆಂಬ ದೃಷ್ಟಾಂತಗಳನ್ನು ನೀಡಿದೆ. ಇದನ್ನು ಪ್ರಧಾನವಾದ ಉಪಮಾಲಂಕಾರವನ್ನಾಗಿ ಆಲಂಕಾರಿಕರು ತಿಳಿಯುತ್ತಾರೆ.

ಸರ್ವಪ್ರಕಾರೈಃ ದಾರ್ಷ್ಟಾಂತಿಕೇ ಉಪಸಂಹರತಿ ಇತಿ ಸರ್ವೋಪಸಂಹಾರೀ ಎಂದರ್ಥ. ಚಂದ್ರ ಇವ ಮುಖಂ ಮೊದಲಾದ ಸ್ಥಳಗಳಲ್ಲಿ ದೃಷ್ಟಾಂತದ ಹೋಲಿಕೆ ಪೂರ್ಣ ಮಟ್ಟದಲ್ಲಿ ದಾರ್ಷ್ಟಾಂತಿಕದಲ್ಲಿ ಇರುವುದಿಲ್ಲ. ಆದರೆ ಇಲ್ಲಿ ಎಲ್ಲಾ ರೀತಿಯಿಂದಲೂ ಹೋಲಿಕೆ ಇದೆ ಎಂದು ಅಭಿಪ್ರಾಯ.

**ಛಾಯಾ ಹಿ ಪುರುಷಾಕಾರಾ ಪುರುಷಾಧೀನಚೇಷ್ಟಿತಾ ।**
**ಭಿನ್ನಾ ಚ ಜೀವೇ ತಾದೃಕ್ತ್ವಂ ಸಿದ್ಧಂ ದೃಷ್ಟಾಂತಶೋಧನೇ ॥ ೧೫೨೫ ॥**

**ಅರ್ಥ–** ಹಿ = ಯಾವ ಕಾರಣದಿಂದ, ಛಾಯಾ = ನೆರಳು, ಪುರುಷಾಕಾರಾ = ದೇಹದಂತೆ ಆಕಾರವುಳ್ಳದ್ದಾಗಿ, ಪುರುಷಾಧೀನಚೇಷ್ಟಿತಾ = ದೇಹದ ಚೇಷ್ಟೆಗೆ ಅಧೀನವಾದ ಚೇಷ್ಟೆವುಳ್ಳ ದ್ದಾಗಿ, ಭಿನ್ನಾ ಚ = ದೇಹಕ್ಕಿಂತ ಭಿನ್ನವೂ ಆಗಿದೆಯೋ, ಏತಸ್ಮಾತ್ = ಆದ್ದರಿಂದ, ಜೀವೇ ಚ = ದಾರ್ಷ್ಟಾಂತಿಕವಾದ ಜೀವನಲ್ಲಿಯೂ, ತಾದೃಕ್ತ್ವಂ = ಪರಮಾತ್ಮನಿಗೆ ಸದೃಶಾಕಾರವು,

ಪರಮಾತ್ಮಾಧೀನಚೇಷ್ಟೆಯು, ಪರಮಾತ್ಮನಿಂದ ಭೇದವು, ದೃಷ್ಟಾಂತಶೋಧನೇ = ಛಾಯಾಪುರುಷ ದೃಷ್ಟಾಂತವನ್ನು ವಿಮರ್ಶೆಮಾಡಿದಲ್ಲಿ, ಸಿದ್ಧಂ = ಸಿದ್ಧವಾಗಿದೆ.

**ಅನುವಾದ–** ಇಲ್ಲಿ ದೃಷ್ಟಾಂತಗಳು, ದೇಹ ಮತ್ತು ನೆರಳು, ನೆರಳಿನ ಹಸ್ತಚರಣಾದಿ ಆಕಾರವು ದೇಹದ ಹಸ್ತಚರಣಾದಿ ಆಕಾರವಿರುತ್ತದೆ. ದೇಹದಲ್ಲಿ ಚೇಷ್ಟೆ ಆದಾಗ ಮಾತ್ರ ನೆರಳಲ್ಲಿ ಚೇಷ್ಟೆ ಆಗುತ್ತದೆ. ಹಾಗೆಯೇ ದೇಹ ಮತ್ತು ನೆರಳು ಭಿನ್ನವಾಗಿದೆ ಎಂಬ ವಿಷಯಗಳು ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾಗಿದೆ.

ಈ ದೃಷ್ಟಾಂತದ ಹೋಲಿಕೆಯನ್ನೇ ಜೀವಪರಮಾತ್ಮರಿಗೆ ಶ್ರುತಿಯಲ್ಲಿ ಹೇಳಿದ್ದರಿಂದ ದಾರ್ಷ್ಟಾಂತಿಕಕ್ಕೂ ಅನ್ವಯವಾಗುತ್ತದೆ. ಈ ದೃಷ್ಟಾಂತದಲ್ಲಿ ನೆರಳು ಪೂರ್ಣವಾಗಿ ದೇಹದ ಆಕಾರದಲ್ಲಿ ಇಲ್ಲದಿದ್ದರೂ ಕಿಂಚಿತ್ ಆಕಾರವಿದೆ. ಹಾಗೆಯೇ ಜೀವನಿಗೆ ಅಲ್ಪಜ್ಞಾನಾನಂದಶರೀರತ್ವೇನ ಭಗವದಾಕಾರವಿದೆ. ಜೀವನ ಚೇಷ್ಟೆಯೂ ಪೂರ್ಣವಾಗಿ ಭಗವದಧೀನವಾಗಿದೆ. ಜೀವನು ಭಗವಂತನಿಗಿಂತ ಭಿನ್ನನೂ ಆಗಿರುತ್ತಾನೆ ಎಂದು ತಿಳಿಯಬಹುದು.

**ಭಾವವಿಲಾಸಿನೀ–** ಕಾ ಸಾ ದೃಷ್ಟಾಂತಗತಸರ್ವೋಪಮಾ ಯಸ್ಯಾಃ ದಾರ್ಷ್ಟಾಂತಿಕೇ ಉಪಸಂಹಾರ ಇತ್ಯತ ಆಹ – **ಛಾಯೇತಿ** ॥ ತತ್ಸಮಾಕಾರತ್ವಂ ತದಧೀನಸರ್ವಚೇಷ್ಟಾವತ್ತ್ವಂ ತದ್ಭಿನ್ನತ್ವಂ ಚ ಛಾಯಾಯಾಂ ದೃಷ್ಟಮ್ । ಅತಸ್ತಸ್ಯಾ ದಾರ್ಷ್ಟಾಂತಿಕೇ ಜೀವೇಽಪಿ ತಾದೃಕ್ತ್ವಂ ಈಶ್ವರಾ-ಕಾರಸದೃಶಾಕಾರತ್ವಂ ಈಶಾಧೀನಸರ್ವಚೇಷ್ಟಾವತ್ತ್ವಂ ಈಶ್ವರಭಿನ್ನತ್ವಂ ಚ ಸರ್ವೋಪಸಂಹಾರಿ ದೃಷ್ಟಾಂತಸಾಧನೇ ಸಿದ್ಧಮಿತಿ ಭಾವಃ ॥ ೧೫೨೫ ॥

**ವಿವರಣೆ–** ಜೀವಃ ಭಗವದಾಕಾರಸದೃಶಾಕಾರವಾನ್ ಛಾಯಾದೃಷ್ಟಾಂತೇನ ಶ್ರುತ್ಯುಕ್ತತ್ವಾತ್.

ಜೀವಃ ಭಗವಧೀನಚೇಷ್ಟಾವಾನ್ ಪುರುಷಾಧೀನಛಾಯಾದೃಷ್ಟಾಂತೇನ ಶ್ರುತ್ಯಕ್ತತ್ವಾತ್.

ಜೀವಃ ಭಗವತಃ ಭಿನ್ನಃ ಪುರುಷಭಿನ್ನಛಾಯಾದೃಷ್ಟಾಂತೇನ ಶ್ರುತ್ಯುಕ್ತತ್ವಾತ್.

ಹೀಗೆ ಛಾಯಾಪುರುಷದೃಷ್ಟಾಂತೋಕ್ತಿಯಿಂದ ಸಿದ್ಧವಾದ ಜೀವಪರಮಾತ್ಮಭೇದವನ್ನು ಆಧಾರಾಧೇಯ ಭಾವೋಕ್ತಿಯಿಂದಲೂ ಸಮರ್ಥಿಸುತ್ತಾರೆ-

**ಛಾಯಾಖ್ಯತಮಸಃ ಪುಂಸೋ ಭಿನ್ನತಾ ಸರ್ವಸಮ್ಮತಾ ।**
**ಪುನರಾಧೇಯತೋಕ್ತ್ಯಾ ಸಾ ಸತಾತ್ಪರ್ಯಮುದೀರ್ಯತೇ॥ ೧೫೨೬ ॥**

**ಅರ್ಥ–** ಪುಂಸಃ = ದೇಹದ ದೆಸೆಯಿಂದ, ಛಾಯಾಖ್ಯತಮಸಃ = ನೆರಳೆಂಬಕತ್ತಲೆಗೆ, ಭಿನ್ನತಾ = ಭೇದವು, ಸರ್ವಸಮ್ಮತಾ = ಎಲ್ಲರಿಗೂ ಸಮ್ಮತವಾಗಿದೆ. ಸಾ = ಮೊದಲೇ

ಸಿದ್ಧವಾದ ಭೇದವು, ಆಧಾರಾಧೇಯಭಾವೋಕ್ತ್ಯಾ = ಅಧಿಕರಣಾಧೇಯಭಾವದ ಹೇಳಿಕೆಯಿಂದ, ಪುನಃ= ಮತ್ತೊಮ್ಮೆ ಸತಾತ್ಪರ್ಯಂ = ಅಭಿನಿವೇಶಪೂರ್ವಕವಾಗಿ, ಉದೀರ್ಯತೇ = ಹೇಳಲ್ಪಡುತ್ತದೆ.

**ಅನುವಾದ–** ಛಾಯೆ ಎಂಬ ಕತ್ತಲೆಗೆ ದೇಹದಿಂದ ಭೇದವು ಸರ್ವ ಸಮ್ಮತವಾಗಿದೆ. ಆತತಂ ಎಂದು ಪುನಃ ಆದೇಯತ್ವವನ್ನು ಹೇಳಿ ಶ್ರುತಿಯು ಈ ಭೇದವನ್ನು ತಾತ್ಪರ್ಯ ಸಹಿತವಾಗಿ ನಿರೂಪಿಸುತ್ತದೆ.

**ವಿವರಣೆ–** ದೃಷ್ಟಾಂತಗಳಾದ ದೇಹನೆರಳುಗಳಿಗೆ ಭೇದವು ಸರ್ವಸಮ್ಮತವಾಗಿದೆ ಎಂದು ಸಮರ್ಥಿಸಲು ಛಾಯಾಖ್ಯತಮಸಃ ಎಂಬಲ್ಲಿ ತಮಸ್ ಶಬ್ದವನ್ನು ಹೇಳಿದ್ದಾರೆ. ನೆರಳೆಂದರೆ ಅದು ಕತ್ತಲೆಯ ಪ್ರಭೇದ, ಆದ್ದರಿಂದ ಕಪ್ಪುಬಣ್ಣವಿದೆ. ಆದರೆ ದೇಹಕ್ಕೆ ಆ ಬಣ್ಣವಿಲ್ಲ. ಹೀಗೆ ವಿರುದ್ಧಧರ್ಮಗಳಿರುವುದರಿಂದ ಪ್ರತ್ಯಕ್ಷದಿಂದಲೇ ಭೇದವು ಸಿದ್ಧವಾಗಿದೆ ಎಂದು ತಿಳಿಯಬಹುದು. ಹೀಗೆ ಭೇದವು ಸಿದ್ಧವಾದರೂ ಏತಸ್ಮಿನ್ನೇತದಾತತಂ (ದೇಹವನ್ನು ನೆರಳು ಆಶ್ರಯಿಸಿದೆ) ಎಂದು ಶ್ರುತಿಯಲ್ಲಿ ಆಧಾರಾಧೇಯಭಾವವೂ ಹೇಳಿದ್ದರಿಂದ ಜೀವಪರಮಾತ್ಮರ ಭೇದವು ತಾತ್ಪರ್ಯಪೂರ್ವಕವಾಗಿ ಸಮರ್ಥಿಸಿದಂತೆ ಆಗುವುದು.

ಶ್ರುತಿಃ ಭೇದಂ ಸತಾತ್ಪರ್ಯಂ ಸಾಧಯತಿ ಪುನಃ ಆಧೇಯತಯೋಕ್ತತ್ವಾತ್.

ಛಾಯಾಪುರುಷದೃಷ್ಟಾಂತದಿಂದ ಪರಮಾತ್ಮಜೀವರಿಗೆ ಸ್ವಾಮಿಭೃತ್ಯಭಾವವೂ ಸಿದ್ಧವಾಗುವುದೆಂದು ಸಮರ್ಥಿಸುತ್ತಾರೆ–

**ಜೀವಸ್ಯ ಭೃತ್ಯತಾ ಚಾಯಾಚ್ಛಾಯಾಶಬ್ದಪ್ರಯೋಗತಃ ।**
**ಅನುಕೂಲಂ ಪ್ರಿಯಂ ಭೃತ್ಯಂ ಛಾಯೇತ್ಯಾಹುಃ ಪ್ರಿಯಂವದಾಃ ॥ ೧೫೨ ॥**

**ಅರ್ಥ–** ಛಾಯಾಶಬ್ದಪ್ರಯೋಗತಃ = ಶ್ರುತಿಯಲ್ಲಿ ಛಾಯಾಶಬ್ದಪ್ರಯೋಗದಿಂದ, ಜೀವಸ್ಯ= ಜೀವನಿಗೆ, ಭೃತ್ಯತಾ ಚ = ಸೇವಕತ್ವವು ಕೂಡ, ಆಯಾತ್ = ಸಿದ್ಧವಾಗುವುದು. ಪ್ರಿಯಂವದಾಃ= ಪ್ರಿಯವಾದಿಗಳು (ತಿಳಿದವರು) ಅನುಕೂಲಂ = ಒಡೆಯನಿಗೆ ಅನುಕೂಲವಾಗಿರುವ, ಪ್ರಿಯಂ= ಸ್ವಾಮಿಯಪ್ರೀತಿಪಾತ್ರನಾದ, ಭೃತ್ಯಂ = ಸೇವಕನನ್ನು ಛಾಯಾ ಇತಿ = ನೆರಳೆಂದು, ಆಹುಃ= ಹೇಳುತ್ತಾರೆ.

**ಅನುವಾದ–** ಛಾಯಾಶಬ್ದಪ್ರಯೋಗದಿಂದ ಜೀವನಿಗೆ ಭೃತ್ಯತ್ವವೂ ಸಿದ್ಧವಾಗುತ್ತದೆ. ಏಕೆಂದರೆ ವಿವೇಕಿಗಳಾದವರು ಅನುಕೂಲವಾದ ಮತ್ತು ಪ್ರಿಯನಾದ ಭೃತ್ಯನನ್ನು ಯಜಮಾನನ ಛಾಯೆ ಎಂದೇ ಹೇಳುತ್ತಾರೆ.

**ಭಾವವಿಲಾಸಿನೀ–** ದೃಷ್ಟಾಂತೇ ಭೇದಸಿದ್ಧಿಪ್ರಕಾರಂ ವಿವೇಚಯಂಸ್ತದುಪಮಯೈವ ಸಿದ್ಧಸ್ಯ ಜೀವೇಶ್ವರಭೇದಸ್ಯ ಏತಸ್ಮಿನ್ ಬ್ರಹ್ಮಣಿ ಏತತ್ ಜೀವಾದಿಕಂ ಜಗದಾತತಮಾಹಿತಮಿತಿ

**ಆಧಾರಾಧೇಯಭಾವೇನಾಪಿ ಸಾಧನಾತ್ ಶ್ರುತೇರ್ಭೇದೇ ಮಹಾತಾತ್ಪರ್ಯಂ ಚಾಸ್ತೀತ್ಯಾಹ – ಛಾಯಾಶ್ಚೇತಿ ॥ ಪುಂಸಃ ಸಕಾಶಾದಿತ್ಯರ್ಥಃ । ಸಾ ಭಿನ್ನತಾ ॥ ೧೫೨೬-೧೫೨೭ ॥**

**ವಿವರಣೆ–** ಸ್ವಾಮಿನಿಷ್ಠನಾಗಿ ಸ್ವಾಮಿಯನ್ನೇ ಅನುಸರಿಸಿ ತನ್ನೊಡೆಯನಿಗೆ ವಿರೋಧ ಮಾಡದೆ ಒಡೆಯನ ಪ್ರೀತಿಯನ್ನು ಗಳಿಸಿದ ಸೇವಕನನ್ನು ತಿಳಿದವರು ನೆರಳು ಎಂದು ಕರೆಯುತ್ತಾರೆ. ಆದ್ದರಿಂದ ಜೀವನಿಗೆ ಶ್ರುತಿಯಲ್ಲಿ ಛಾಯಾಶಬ್ದವನ್ನು ಪ್ರಯೋಗಿಸಿ ಹೋಲಿಕೆಯನ್ನು ಕೊಟ್ಟದ್ದರಿಂದ, ಜೀವನಿಗೆ ಪರಮಾತ್ಮನ ಸೇವಕತ್ವವೂ ಸಿದ್ಧವಾಗುವುದು.

ಇಯಂ ಶ್ರುತಿಃ ಜೀವಸ್ಯ ಭೃತ್ಯತ್ವವಾದಿನೀ ದೃಷ್ಟಾಂತೇ ಛಾಯಾಶಬ್ದಪ್ರಯೋಗಾತ್, ಪ್ರಿಯಂವದವಾಕ್ಯವತ್.

ದೃಷ್ಟಾಂತದಲ್ಲಿ ಛಾಯಾಶಬ್ದಪ್ರಯೋಗದಿಂದ ಜೀವನಿಗೆ ಪ್ರತಿಬಿಂಬತ್ವವು ಸಿದ್ದವಾಗುವದೆಂದು ಸಮರ್ಥಿಸುತ್ತಾರೆ ಎಂದು ಹೇಳುತ್ತಾರೆ-

**ಪ್ರತಿಬಿಂಬತ್ವಮಪ್ಯಸ್ಯ ತಚ್ಛಬ್ದಾದೇವ ಸಿದ್ಧ್ಯತಿ ।**
**ಪ್ರತಿಬಿಂಬಂ ಪ್ರತಿಚ್ಛಾಯೇತ್ಯಾಹುಃ ಯದನುಶಾಸನೇ ॥ ೧೫೨೮ ॥**

**ಅರ್ಥ–** ಯತ್ = ಯಾವಕಾರಣದಿಂದ, ಅನುಶಾಸನೇ = ಶಬ್ದಾನುಶಾಸನದಲ್ಲಿ ಪ್ರತಿಬಿಂಬಂ = ಪ್ರತಿಬಿಂಬವನ್ನು ಪ್ರತಿಚ್ಛಾಯಾ ಇತಿ = ಪ್ರತಿಚ್ಛಾಯಾ ಎಂದು, ಆಹುಃ = ಹೇಳುತ್ತಾರೋ, ತತ್ = ಆ ಕಾರಣದಿಂದ, ಅಸ್ಯ = ಈ ಜೀವನಿಗೆ, ಪ್ರತಿಬಿಂಬತ್ವಮಪಿ = ಪ್ರತಿಬಿಂಬತ್ವವೂ ಕೂಡ, ತಚ್ಛಬ್ದಾದೇವ = ಉಪಮೆಯನ್ನು ಹೇಳುವ ಛಾಯಾಶಬ್ದದಿಂದಲೇ, ಸಿಧ್ಯತಿ = ಸಿದ್ಧವಾಗುತ್ತದೆ.

**ಅನುವಾದ–** ಶಬ್ದಾನುಶಾಸನದಲ್ಲಿ ಪ್ರತಿಬಿಂಬವು ಪ್ರತಿಚ್ಛಾಯಾ ಶಬ್ದದಿಂದ ಕರೆಯಲ್ಪಟ್ಟಿದೆ. ಆದ್ದರಿಂದ ಉಪಮಾನವನ್ನು ಹೇಳುವ ಛಾಯಾಶಬ್ದವೇ ಜೀವನಿಗೆ ಪರಮಾತ್ಮನ ಪ್ರತಿಬಿಂಬತ್ವವನ್ನು ತಿಳಿಸುತ್ತದೆ.

**ಭಾವವಿಲಾಸಿನೀ–** ಅಸ್ಯ ಜೀವಸ್ಯ । ತತ್‌ಶಬ್ದಾತ್ ಉಪಮಾಬಲಾಗತಚ್ಛಾಯಾಶಬ್ದಾತ್ । ಅವಿರೋಧೇ ಸರ್ವೋಪಸಂಹಾರಿದೃಷ್ಟಾಂತಸ್ಥಲೇ ರಾಜೀವ ರಾಜತೇ ಚಂದ್ರ ಇತ್ಯಾದಾವಿವ ಶಬ್ದಸಾಮ್ಯಮಪ್ಯಾಯಾತೀತಿ ಭಾವಃ । ಯತ್ ಯಸ್ಮಾತ್ । ಅನೇನ ಭಗವತ್‌ಪ್ರತಿಬಿಂಬತ್ವಾಚ್ಚ ಜೀವಸ್ಯ ಛಾಯಾಪದವಾಚ್ಯತ್ವಮಸ್ತೀತಿ ಸೂಚಿತಮ್ । ಅತೋಽಪಿ ಛಾಯಾಶಬ್ದ ಇತಿ ಯುಕ್ತಮ್ ॥ ೧೫೨೮ ॥

**ವಿವರಣೆ–** ಪ್ರತಿಬಿಂಬ ಮತ್ತು ಪ್ರತಿಚ್ಛಾಯಾ ಶಬ್ದಗಳು ಪರ್ಯಾಯಶಬ್ದಗಳೆಂದು ಕೋಶಾದಿಗಳಲ್ಲಿ ಸಿದ್ಧವಾಗಿದೆ. ಆದ್ದರಿಂದ ಶಬ್ದಸಾಮ್ಯವೂ ದಾರ್ಷ್ಟಾಂತಿಕಕ್ಕೆ ಇದೆ. ಛಾಯಾ ಪುರುಷದೃಷ್ಟಾಂತವು ಸರ್ವೋಪಸಂಹಾರೀ ದೃಷ್ಟಾಂತವಾಗಿದೆ ಎಂದು ಹೇಳಿದೆ.

ಸರ್ವೋಪಸಂಹಾರೀ ದೃಷ್ಟಾಂತದಲ್ಲಿ ಯಾವುದೇ ವಿರೋಧವಿಲ್ಲದಿರುವಾಗ ಶಬ್ದಸಾಮ್ಯವು ಬರಬೇಕೆಂದು ಅಲಂಕಾರಶಾಸ್ತ್ರದಲ್ಲಿ ನಿಯಮ. ಇದು ರಾಜೀವರಾಜತೇ ಚಂದ್ರಃ ಎಂಬಲ್ಲಿ ರಾಜನು ಉಪಮಾನ, ಚಂದ್ರನು ಉಪಮೇಯ. ಇಲ್ಲಿ ಚಂದ್ರನಿಗೆ ಸರ್ವಪ್ರಕಾರದಿಂದ ರಾಜನ ಸಾಮ್ಯ ಇದೆ. ಆದ್ದರಿಂದ ರಾಜನು ಸರ್ವೋಪಸಂಹಾರೀದೃಷ್ಟಾಂತನಾಗಿದ್ದಾನೆ. ಹಾಗೆಯೇ ಚಂದ್ರನನ್ನು ಕೋಶದಲ್ಲಿ ರಾಜಶಬ್ದದಿಂದ ವ್ಯವಹರಿಸಿದ್ದಾರೆ. ಆದ್ದರಿಂದ ಶಬ್ದಸಾಮ್ಯವೂ ಇದೆ. ಅದರಂತೆ ಪ್ರಕೃತದಲ್ಲಿಯೂ ಛಾಯಾಶಬ್ದಸಾಮ್ಯವು ಪ್ರತಿಬಿಂಬವಾದ ಜೀವನಲ್ಲಿದೆ. ಇದರಿಂದ ಜೀವನಿಗೆ ಕೇವಲ ಭೃತ್ಯತ್ವ ಇರುವುದರಿಂದ ಛಾಯಾಶಬ್ದ ವಾಚ್ಯತ್ವವಲ್ಲ, ಮತ್ತೆ ಭಗವತ್ಪ್ರತಿಬಿಂಬತ್ವವು ಇರುವುದರಿಂದಲೂ ಜೀವನಿಗೆ ಛಾಯಾಶಬ್ದ ವಾಚ್ಯತ್ವವಿದೆ ಎಂದು ನಿಶ್ಚಯವಾಯಿತು.

ಜೀವಃ ಭಗವತ್ಪ್ರತಿಬಿಂಬಃ ಪ್ರತಿಬಿಂಬಪರ್ಯಾಯಛಾಯಾಶಬ್ದಪ್ರಯೋಗಾತ್.

ಪರಮಾತ್ಮಜೀವರಿಗೆ ಬಿಂಬಪ್ರತಿಬಿಂಬಭಾವವನ್ನು ತಿಳಿಸಲು ಶ್ರುತಿಯಲ್ಲಿ ಸರ್ವೋಪಸಂಹಾರೀ ಛಾಯಾ ಪುರುಷದೃಷ್ಟಾಂತವನ್ನು ಹೇಳಿದೆ. ಆದ್ದರಿಂದ ಜೀವಪರಮಾತ್ಮರಿಗೆ ಸರ್ವಸಾಮ್ಯವನ್ನು ಹೇಳಿದಂತಾಯಿತು. ಆದರೆ ಪರಮಾತ್ಮನಿಂದ ಜೀವನಿಗೆ ಜ್ಞಾನಬಲಾದಿಗುಣಗಳಿಂದ ಸಾಮ್ಯವಿಲ್ಲ ಎಂಬ ಪ್ರಶ್ನೆಗೆ ಮುಂದಿನ ಶ್ಲೋಕವು ಉತ್ತರಿಸುತ್ತದೆ-

ಸಾಮ್ಯಂ ಯತ್ಕಿಂಚಿದೇವೇತಿ ದೃಷ್ಟಂ ದೃಷ್ಟಾಂತ ಏವ ಹಿ ।
ನ ಹಿ ಜ್ಞಾನಬಲಾದೇಶ್ಚ ಛಾಯಾ ಪುರುಷಸಮ್ಮಿತಃ ॥ ೧೫೨ ॥

**ಅರ್ಥ–** ಛಾಯಾ = ದೃಷ್ಟಾಂತವಾದ ನೆರಳಿಗೆ, ಜ್ಞಾನಬಲಾದೇಶ್ಚ = ಜ್ಞಾನಬಲಾದಿಗಳಿಗೆ ಸಹಕಾರಿತ್ವದ ದೃಷ್ಟಿಯಿಂದಲೂ, ಪುರುಷಸಮ್ಮಿತಾ = ದೇಹದಿಂದ ಸಾಮ್ಯವು, ನ ಹಿ = ಇಲ್ಲವಷ್ಟೇ. ಇತಿ = ಈ ಕಾರಣದಿಂದ, ದೃಷ್ಟಾಂತ ಏವ = ಉಪಮಾನದಲ್ಲಿಯೇ, ಯತ್ಕಿಂಚಿದೇವ = ಸ್ವಲ್ಪವೇ, ಸಾಮ್ಯಂ = ಸಾದೃಶ್ಯವು, ದೃಷ್ಟಂ = ಕಾಣಲ್ಪಟ್ಟಿದೆ, ಹಿ = ಪ್ರಸಿದ್ಧ

**ಅನುವಾದ–** ದೇಹವು ಜ್ಞಾನಬಲಾದಿಗಳಿಗೆ ಸಹಕಾರಿಯಾಗಿದೆ. ಆದರೆ ನೆರಳು ಆಗಿಲ್ಲ. ಆದ್ದರಿಂದ ಈ ಅಂಶದಲ್ಲಿ ದೇಹಸಾಮ್ಯವು ನೆರಳಿನಲ್ಲಿ ಇಲ್ಲ. ಹೀಗೆ ಛಾಯಾಪುರುಷ ದೃಷ್ಟಾಂತದಲ್ಲೇ ಪ್ರಮಾಣವಿರುದ್ಧವಾದ ಸಾಮ್ಯವನ್ನು ಬಿಟ್ಟು ಪ್ರಮಾಣ ಅವಿರುದ್ಧವಾದ ಸ್ವಲ್ಪವೇ ಸಾಮ್ಯವಿದೆ.

**ಭಾವವಿಲಾಸಿನೀ–** ನನು ಸರ್ವೋಪಸಂಹಾರಿದೃಷ್ಟಾಂತಾತ್ ಸರ್ವಸಾಮ್ಯೇ ಜ್ಞಾನಬಲಾದಿನಾಪಿ ಜೀವಪರಮಯೋಃ ಸಾಮ್ಯಂಸ್ಯಾದಿತ್ಯತ ಆಹ – **ಸಾಮ್ಯಮಿತಿ ॥ ಯತ್ಕಿಂಚಿದಲ್ಪಂ । ಪ್ರಮಾಣ-ವಿರುದ್ಧಸಾಮ್ಯಂ**-ವಿಹಾಯಾವಿರುದ್ಧಂ ಸರ್ವಸಾಮ್ಯಮಿತಿ ಭಾವಃ । **ಜ್ಞಾನಬಲಾದೇ** ರ್ಜ್ಞಾನ-ಬಲಾದಿಸಹಕಾರಿತ್ವಾತ್ । ಯಥಾ ದೇಹೇ ಜ್ಞಾನಬಲಾದಿಸಹಕಾರಿತ್ವಮಸ್ತಿ ತಥಾ ಛಾಯಾಯಾಮಭಾವಾತ್ ಅವಿರುದ್ಧಸರ್ವಸಾಮ್ಯಮೇವೇತಿ ಭಾವಃ ॥ ೧೫೨ ॥

**ವಿವರಣೆ–** ಈ ದೇಹವು ದೇಹಿಗೆ ಜ್ಞಾನ ಸಾಮರ್ಥ್ಯ ಮೊದಲಾದ ಗುಣಗಳನ್ನು ಸಂಪಾದಿಸಲು ಸಹಕಾರಿಯಾಗಿದೆ. ಆದರೆ ಅದೇ ದೇಹದ ನೆರಳು ಅದಕ್ಕೆ ಸಹಕಾರಿಯಾಗಿಲ್ಲ. ಒಂದು ವೇಳೆ ನೆರಳಿಗೆ ದೇಹದ ಸರ್ವಸಾಮ್ಯವನ್ನು ಹೇಳಿದರೆ ಪ್ರಮಾಣದ ವಿರೋಧಬರುವುದು. ಆದ್ದರಿಂದ ದಾರ್ಷ್ಟಾಂತಿಕರಾದ ಜೀವ ಪರಮಾತ್ಮರಲ್ಲಿಯೂ ಜ್ಞಾನಾನಂದಾದಿಗುಣಗಳಿಂದ ಸಾದೃಶ್ಯವನ್ನು ಹೇಳಿದರೆ ಪ್ರಮಾಣ ವಿರೋಧಬರುವುದು. ಹೀಗೆ ಪ್ರಮಾಣವಿರೋಧವಿಲ್ಲದ ಅಲ್ಪಸಾಮ್ಯವನ್ನು ಜೀವಪರಮಾತ್ಮರಿಗೆ ಇದೆ ಎಂದು ತಿಳಿಯಬೇಕು.

ಶ್ರೀವಾದಿರಾರು ಹಿಂದಿನ ಶ್ಲೋಕಗಳಲ್ಲಿ ಛಾಯಾದೃಷ್ಟಾಂತದಿಂದ ದಾರ್ಷ್ಟಾಂತಿಕವಾದ ಜೀವನಲ್ಲಿ ಸಿದ್ಧವಾದ ಪ್ರಕಾರವನ್ನು ಹೇಳಿದರು. ಮುಂದಿನ ಶ್ಲೋಕಗಳಲ್ಲಿ ದೇಹದೃಷ್ಟಾಂತದಿಂದ ದಾರ್ಷ್ಟಾಂತಿಕನಾದ ಈಶ್ವರನಲ್ಲಿ ಸಿದ್ಧವಾಗುವ ಗುಣಗಳ ಪ್ರಕಾರವನ್ನು ತೋರಿಸುತ್ತಿದ್ದಾರೆ-

**ಆಧಾರತಾ ಸ್ವಾಮಿತಾ ಚ ತಥಾ ಸಾಕಾರತಾ ಹರೇಃ ।**
**ಸಿದ್ಧಾ ಪುರುಷದೃಷ್ಟಾಂತಾತ್ ತಚ್ಛಬ್ದಾತ್ ಪೂರ್ಣತಾಪಿ ಚ ॥ ೧೫೩೦ ॥**

**ಅರ್ಥ–** ಹರೇಃ = ಉಪಮೇಯನಾದ ಪರಮಾತ್ಮನಿಗೆ, ಪುರುಷದೃಷ್ಟಾಂತಾತ್ = ದೇಹ ರೂಪದೃಷ್ಟಾಂತದಿಂದ, ಆಧಾರತಾ = ಜಗತ್ತಿಗೆ ಆಧಾರತ್ವವೂ, ಸ್ವಾಮಿತಾ = ಜಗತ್ತಿನ ಒಡೆತನವೂ, ತಥಾ = ಹಾಗೆಯೇ, ಸಾಕಾರತಾ = ಕರಚರಣಾದ್ಯಾಕಾರವೂ, ಸಿದ್ಧಾ = ಸಿದ್ಧವಾಯಿತು. ಚ= ಮತ್ತು, ತಚ್ಛಬ್ದಾತ್ = ದೃಷ್ಟಾಂತದಲ್ಲಿ ಪುರುಷ ಶಬ್ದ ಪ್ರಯೋಗದಿಂದ, ಪೂರ್ಣತಾ ಅಪಿ= ಪೂರ್ಣತೆಯೂ ಕೂಡ, ಸಿದ್ಧಾ= ಸಿದ್ಧವಾಯಿತು.

**ಅನುವಾದ–** ಉಪಮಾನವಾದ ದೇಹವು ನೆರಳಿಗೆ ಆಶ್ರಯವಾಗಿ, ನೆರಳಿನ ಚಲನೆಯನ್ನು ನಿಯಂತ್ರಿಸುತ್ತದೆ. ಹಾಗೆಯೇ ಈಶ್ವರನಿಗೆ ಜಗತ್‌ಸ್ವಾಮಿತ್ವ, ಜೀವವಿ ಲಕ್ಷಣವಾದ ಕರಚರಣಾದಿ ಆಕಾರವು ಇದೆ. ಎಂದು ಸಿದ್ಧವಾಗುವುದು. ದೇಹದಲ್ಲಿ ಪೂರ್ಣಷಡ್ಗುಣಾಧಾರ ಎಂಬ ಅರ್ಥವನ್ನು ಹೇಳುವ ಪುರುಷಶಬ್ದದ ಪ್ರಯೋಗದಿಂದ ಹರಿಯಲ್ಲಿ ಪೂರ್ಣತ್ವವೂ ಸಿದ್ಧಿಸುವುದು.

**ಭಾವವಿಲಾಸಿನೀ–** ಛಾಯಾದೃಷ್ಟಾಂತೇನ ಜೀವೇ ಸಿದ್ಧಂ ಪ್ರಕಾರಮುಕ್ತ್ವಾ ಪುರುಷದೃಷ್ಟಾಂತೇನ ಜಗದೀಶ್ವರೇ ಸಿದ್ಧಂ ಪ್ರಕಾರಮಪ್ಯಾಹ – **ಆಧಾರತೇತಿ** ॥ ತಚ್ಛಬ್ದಾತ್ ಉಪಮಾಬಲೇನ ಪರಮಾತ್ಮನ್ಯಾಗತಪುರುಷಶಬ್ದಾತ್ ॥ ೧೫೩೦ ॥

**ವಿವರಣೆ–** ಬೇರೆ ಪ್ರಕಾರದಿಂದ ಪುರುಷಪದಕ್ಕೆ ದಾರ್ಷ್ಟಾಂತಿಕದಲ್ಲಿ ಆವೃತ್ತಿಯನ್ನು ಉಪಪಾದಿಸುತ್ತಾರೆ.

ಹರಿಃ ಸರ್ವಾಧಾರಃ ಸರ್ವಸ್ವಾಮೀ, ಆಕಾರವಾಂಶ್ಚ ಶ್ರುತೌ ಪುರುಷದೃಷ್ಟಾಂತೇನ ಉಕ್ತತ್ವಾತ್ ।

**ಹರಿಃ ಪೂರ್ಣತ್ವವಾನ್ ಉಪಮಾಬಲೇನಾಗತಪುರುಷಶಬ್ದವಾಚ್ಯತ್ವಾತ್ ।**

**ಯದ್ವಿಶೇಷ್ಯಪದಂ ದಾರ್ಷ್ಟಾಂತಿಕೇಽಪ್ಯಾವರ್ತ್ಯಮೇವ ತತ್ ॥ ೧೫೩೧ ॥**

**ಅರ್ಥ–** ಯತ್ = ಯಾವಕಾರಣದಿಂದ, ದಾರ್ಷ್ಟಾಂತಿಕೇ ಅಪಿ = ದಾರ್ಷ್ಟಾಂತಿಕವಾದ ಏತಸ್ಮಿನ್ ಎಂಬ ವಾಕ್ಯದಲ್ಲಿಯೂ ತತ್ ಏವ = ಆ ಪುರುಷಪದವೇ, ವಿಶೇಷ್ಯಪದಂ = ವಿಶೇಷ್ಯಪದವಾಗಿದೆಯೋ, ತತ್ = ಆ ಕಾರಣದಿಂದ, ಆವರ್ತ್ಯಮೇವ = ಆವೃತ್ತಿಮಾಡಿ ಅರ್ಥೈಸಬೇಕು.

**ಅನುವಾದ–** ಏತಸ್ಮಿನ್ನೇತದಾತತಂ ಎಂಬ ದಾರ್ಷ್ಟಾಂತಿಕವಾಕ್ಯದಲ್ಲಿಯೂ ವಿಶೇಷ್ಯಪದದ ಅಪೇಕ್ಷೆಯಿದೆ, ಆದ್ದರಿಂದ ಪುರುಷೇ ಛಾಯಾ ಎಂಬ ದೃಷ್ಟಾಂತ ವಾಕ್ಯದಲ್ಲಿರುವ ಪುರುಷೇ ಎಂಬ ಪದವನ್ನು ಆವೃತ್ತಿಮಾಡಿ ಏತಸ್ಮಿನ್ ಎಂಬ ವಿಶೇಷಣಪದಕ್ಕೆ ಅನ್ವಯಿಸಿ ಅರ್ಥೈಸಬೇಕು. ಈಗ ಪುರುಷಪದವು ಸಾಕ್ಷತ್ತಾಗಿ ದಾರ್ಷ್ಟಾಂತಿಕವನ್ನು ಹೇಳವುದರಿಂದ ಹರಿಗೆ ಪೂರ್ಣತ್ವವು ಸಿದ್ಧಿಸುವುದು.

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಪುರುಷಶಬ್ದಸ್ಯ ದಾರ್ಷ್ಟಾಂತಿಕೇ ಆವೃತ್ತಿಮುಪಪಾದಯತಿ ॥ ಯದಿತಿ ॥ ಯತ್ ಯಸ್ಮಾತ್ । ದಾರ್ಷ್ಟಾಂತಿಕೇ ಏತಸ್ಮಿನ್ನಿತಿವಾಕ್ಯೇತಿ । ತತ್ ಪುರುಷಪದಮೇವ ವಿಶೇಷ್ಯಪದಮ್ । ತಸ್ಮಾತ್ ಆವರ್ತ್ಯಮೇವ । ಏತಸ್ಮಿನ್ನಿತಿವಿಶೇಷಣಪದಸ್ಯ ಕಿಂಚಿದ್ವಿಶೇಷ್ಯಪದಮಪೇಕ್ಷಿತಮ್। ತಚ್ಚಾಧ್ಯಾಹಾರಾದಪ್ಯಾವೃತ್ತೇರೇವಾಂತರಂಗತ್ವಾತ್ ಪುರುಷಪದಮೇವೇತಿ ಭಾವಃ ॥ ೧೫೩೧ ॥

**ವಿವರಣೆ–** ಏತಸ್ಮಿನ್ ಎಂಬುದು ವಿಶೇಷಣ. ಅದಕ್ಕೆ ಪುರುಷೇ ಎಂಬ ಪದವನ್ನು ವಿಶೇಷ್ಯಮಾಡಿದಾಗ ಏತಸ್ಮಿನ್ ಪುರುಷೇ ಏತತ್ ಆತತಂ ಪೂರ್ಣಷಡ್ಗುಣನಲ್ಲಿ ಜೀವ ಸಮುದಾಯವು ಆಶ್ರಯಿಸಿದೆ ಎಂದು ಅರ್ಥವಾಗುವುದು . ವಾಕ್ಯಗಳಲ್ಲಿ ಇಲ್ಲದಿರುವ ಶಬ್ದಗಳ ಅಧ್ಯಾಹಾರಕ್ಕಿಂತ ಇರುವ ಶಬ್ದದ ಆವರ್ತನೆಯು ಅಂತರಂಗವಾದ್ದರಿಂದ ಸಾಧುವಾಗಿದೆ.

ಇಲ್ಲಿ ಆವೃತ್ತವಾದ ಪುರುಷಪದವು ಪೂರ್ಣಷಡ್ಗುಣಾರ್ಥಕವಾಗಿದೆ. ಆದ್ದರಿಂದ ಭಗವಂತನಲ್ಲಿ ಪೂರ್ಣತೆಯೂ ಸಿದ್ಧಿಸುವುದು.

ಪುರುಷೇ ಇತಿ ವಿಶೇಷ್ಯಪದಂ, ದಾರ್ಷ್ಟಾಂತಿಕೇ ಆವರ್ತನೀಯಂ, ಅಧ್ಯಾಹಾರಾತ್ ಆವರ್ತನಸ್ಯ ಅಂತರಂಗತ್ವಾತ್ ।

**ಯಥಾತಥ್ಯೇತ್ಯುಕ್ತಸಾಮ್ಯಂ ಶಬ್ದಸಾಮ್ಯೇ ತಿಶೋಭತೇ ।**
**ಛಾಯಾಖ್ಯೋಪಮಯಾ ಜೀವಮೇವ್ಯೆದಿತಿವಾಗ್ ಜಗೌ ॥ ೧೫೩೨ ॥**

**ಅರ್ಥ–** ಯಥಾ ತಥಾ ಇತಿ = ಯಥಾ ಮತ್ತು ತಥಾ ಎಂಬುದಾಗಿ, ಉಕ್ತಸಾಮ್ಯಂ = ಹೇಳಲ್ಪಟ್ಟ ಸಾದೃಶ್ಯವು, ಶಬ್ದಸಾಮ್ಯೇ ಸತಿ = ದಾರ್ಷ್ಟಾಂತಿಕದಲ್ಲಿ ಶಬ್ದಸಾಮ್ಯತೆಯು ಇದ್ದರೆ, ಅತಿಶೋಭತೇ= ಚೆನ್ನಾಗಿ ಶೋಭಿಸುತ್ತದೆ. ಏತದಿತಿ = ಶ್ರುತಿಯಲ್ಲಿ ಏತತ್ ಎಂಬ, ವಾಕ್ = ಶಬ್ದವು, ಛಾಯಾಖ್ಯೋಪಮಯಾ = ಛಾಯಾ ಎಂಬ ಉಪಮಾನದ ಬಲದಿಂದ, ಜೀವಮೇವ= ಜೀವನನ್ನೇ, ಜಗೌ = ಹೇಳಿತು.

**ಅನುವಾದ– ಯಥಾ ಮತ್ತು ತಥಾ ಶಬ್ದಗಳು, ಸಾದೃಶ್ಯವನ್ನು ಹೇಳುವ ಶಬ್ದಗಳು, ಹೀಗಿರುವಾಗ ಉಪಮಾನ ಉಪಮೇಯಗಳಲ್ಲಿ ಶಬ್ದಸಾಮ್ಯವೂ ಇದ್ದರೆ ಬಹಳವಾಗಿ ಈ ಉಪಮೇಯು ಶೋಭಿಸುತ್ತದೆ. ಶ್ರುತಿಯಲ್ಲಿ ಏತತ್ ಶಬ್ದವು ಛಾಯಾ ಎಂಬ ಉಪಮೆಯ ಸಾಮರ್ಥ್ಯದಿಂದ ಜೀವವಾಚಕವಾಗಿದೆ.**

**ಭಾವವಿಲಾಸಿನೀ–** ನನು ರಾಜೀವ ಚಂದ್ರ ಇತ್ಯತ್ರಾಪಿ ಕುತಃ ಶಬ್ದಸಾಮ್ಯಮಿತ್ಯತ ಆಹ – **ಯಥಾ ತಥೇತಿ** ॥ ನನ್ವೇತದಾತತಮಿತ್ಯತ್ರೈತತ್ಪದೇನ ಜೀವಸ್ಯ ಕುತಃ ಕಥನಮಿತ್ಯತ ಆಹ – **ಛಾಯೇತಿ** ॥ ಏತತ್‌ಪದಸ್ಯ ಸಾಮಾನ್ಯಪದತ್ವೇಪಿ ತಸ್ಯ ಛಾಯೋಪಮಾಬಲಾತ್ ಜೀವವಾಚಕತ್ವನಿರ್ಣಯ ಇತ್ಯರ್ಥಃ ॥ ೧೫೩೨ ॥

**ವಿವರಣೆ–** ರಾಜೀವ ರಾಜತೇ ಚಂದ್ರಃ ಎಂಬಲ್ಲಾದರೂ ಶಬ್ದ ಸಾಮ್ಯವು ಹೇಗೆ ಇದೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ :-

ಯಥಾ ತಥಾ, ಇವ, ವತ್ ಇವೇ ಮೊದಲಾದವುಗಳು ಉಪಮಾವಾಚಕಶಬ್ದವಾಗಿವೆ. ಈ ಶಬ್ದಗಳು, ಉಪಮಾನ ಉಪಮೇಯಗಳಿಗೆ ಹೆಚ್ಚು ಹೆಚ್ಚು ಸಾಮ್ಯ ಹೇಳಿದಾಗ ಸ್ವರಸವಾಗಿ ಶೋಭಿಸುತ್ತವೆ. ಆದ್ದರಿಂದ ಅರ್ಥಸಾಮ್ಯವಿದ್ದರೂ, ಶಬ್ದಸಾಮ್ಯವಿದ್ದರೆ ಇನ್ನೂ ಸ್ವರಸವಾಗುತ್ತದೆ. ಆದ್ದರಿಂದಲೇ ರಾಜೀವ ರಾಜತೇ ಚಂದ್ರಃ ಎಂಬಲ್ಲಿ ಇವ ಶಬ್ದದ ಬಲದಿಂದ ಶಬ್ದಸಾಮ್ಯವೂ ಇದೆ.

ಶ್ರುತಿಯಲ್ಲಿರುವ ಏತತ್ ಶಬ್ದವು ಸರ್ವನಾಮಶಬ್ದವಾಗಿದೆ. ಆದ್ದರಿಂದ ಜೀವ ಎಂಬ ಅರ್ಥವು ಹೇಗೆ ಬರುತ್ತದೆ? ಎಂಬ ಪ್ರಶ್ನೆಗೆ ಉತ್ತರಾರ್ಧವು ಉತ್ತರಿಸಿದೆ. ಹೇಗೆಂದರೆ ನೆರಳಿನಂತಿರುವುದು ಜೀವವೇ ಆಗುತ್ತದೆ. ಹೊರತು ಪರಮಾತ್ಮನಲ್ಲ. ಹೀಗೆ ಛಾಯೋಪಮಸಾಮರ್ಥ್ಯದಿಂದ ಜೀವಾರ್ಥತ್ವವು ಸಿದ್ಧಿಸುವುದು.

ಯುಕ್ತಿ 1. ಶ್ರುತ್ಯುಕ್ತ ಉಪಮಾಲಂಕಾರಃ ಶಬ್ದಸಾಮ್ಯೋಪೇತಃ ಯಥಾತಥಾ ಶಬ್ದ ಸ್ವಾರಸ್ಯಾತ್ (ರಾಜೀವ ಚಂದ್ರಃ ಇತಿವತ್)

2. ಶ್ರುತ್ಯುಕ್ತ ಏತಚ್ಛಬ್ದಃ ಜೀವವಾಚಕಃ ಸಮರ್ಥಛಾಯಾಉಪಮಾನವತ್ವಾತ್ ।

ಜೀವನೇ ಛಾಯೆ ಎಂಬ ಉಪಮಾನದಿಂದ ಹೇಗೆ ಸಿದ್ಧನಾಗುವನು? ಬೇರೆ ಯಾವುದೋ ವಸ್ತು ಉಪಮೇಯವಾಗಬಹುದು, ಎಂಬ ಪ್ರಶ್ನೆಗೆ ಮುಂದಿನ ಶ್ಲೋಕದಲ್ಲಿ ಉತ್ತರಿಸುತ್ತಾರೆ-

**ಸಾಕಾರಸ್ಯ ಸದೃಕ್ಷೋ ಯತ್ ಸಾಕಾರಃ ಸ್ಯಾನ್ನ ಚಾಪರಃ ।**
**ನಚೇದ್ ಯಥಾತಥಾಶಬ್ದೌ ವಿತಥಾವಿತಿ ಮೇ ಮತಿಃ ॥ ೧೫೩೩ ॥**

**ಅರ್ಥ–** ಯತ್ = ಯಾವಕಾರಣದಿಂದ, ಸಾಕಾರಸ್ಯ = ಆಕಾರವುಳ್ಳ ಬಿಂಬನಾದ ಪರಮಾತ್ಮನಿಗೆ, ಸಾಕಾರಃ = ಆಕಾರವುಳ್ಳ ವಸ್ತುವೇ ಪ್ರತಿಬಿಂಬವು, ಸ್ಯಾತ್ = ಆಗಬಹುದು. ಅಪರಃ = ಆಕಾರರಹಿತವಾದ ವಸ್ತುವು, ನ ಚ (ಸ್ಯಾತ್) = ಪ್ರತಿಬಿಂಬವಾಗಲಾರದು. ನಚೇತ್= ಜೀವನಿಗಿಂತ ಬೇರೆ ವಸ್ತುವೇ ಪ್ರತಿಬಿಂಬವಾಗುವುದಾದರೆ, ಯಥಾ ತಥಾ ಶಬ್ದೌ= ಯಥಾ ಮತ್ತು ತಥಾ ಎಂಬ ಎರಡು ಶಬ್ದಗಳು, ವಿತಥೌ ಇತಿ = ವ್ಯರ್ಥಗಳೆಂದು, ಮೇ= ನನ್ನ ಮತಿಃ = ಅಭಿಪ್ರಾಯವಾಗಿದೆ.

**ಅನುವಾದ–** ಆಕಾರಸಹಿತವಾದ ಒಂದು ವಸ್ತುವು ಆಕಾರ ಸಹಿತವಾದ ಇನ್ನೊಂದು ವಸ್ತುವಿಗೆ ಸದೃಶವಾಗುತ್ತದೆ. (ಆಕಾರ ರಹಿತವಾದ ವಸ್ತುವು ಸದೃಶವಾಗುವುದಿಲ್ಲ). ಇಲ್ಲದಿದ್ದರೆ ಶ್ರುತಿಯಲ್ಲಿ ಹೇಳಿದ ಯಥಾ ಮತ್ತು ತಥಾ ಶಬ್ದಗಳು ವ್ಯರ್ಥವಾಗುತ್ತವೆ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಛಾಯಾಸ್ಥಾನೀಯತ್ವೇಽಪಿ ಕುತೋ ಜೀವ ಇತ್ಯತ ಆಹ – **ಸಾಕಾರಸ್ಯೇತಿ ॥** ಪುರುಷಪದಸಾಮರ್ಥ್ಯೇನ ಬಿಂಬಸ್ಯ ಸಾಕಾರತ್ವೇ ಸಿದ್ಧೇ ಸಾಕಾರಸ್ಯ ಛಾಯಾ ಸ್ಥಾನೀಯೋಽಪಿ ಸಾಕಾರೋ ಜೀವ ಏವ ಭವೇದಿತಿ ಭಾವಃ ॥ ೧೫೩೩ ॥

**ವಿವರಣೆ–** ಶ್ರುತಿಯಲ್ಲಿ ದೃಷ್ಟಾಂತವಾಚಕವಾದುದು ಪುರುಷೇ ಎಂಬ ಪದವಾಗಿದೆ. ಆ ಪದವನ್ನು ಏತಸ್ಮಿನ್ ಎಂಬಲ್ಲಿ ಅನ್ವಯಿಸಿದಾಗ ಆ ಪದವು ಬಿಂಬನಾದ ಪರಮಾತ್ಮನನ್ನೇ ತಿಳಿಸುತ್ತದೆ. ಈ ಪದದ ಸಾಮರ್ಥ್ಯದಿಂದ ಭಗವಂತನಿಗೆ ಆಕಾರವು ಸಿದ್ಧವಾಗಿದೆ. ಆದ್ದರಿಂದ ಪ್ರತಿಬಿಂಬವೂ ಸಾಕಾರವಾಗಬೇಕು. ಆದ್ದರಿಂದ ಜೀವನಿಗಿಂತ ಬೇರೆ ವಸ್ತುಗಳಲ್ಲಿ ಕರಚರಣಾದಿ ಆಕಾರವಿಲ್ಲ, ಆದ್ದಿರಂದ ಜೀವನೇ ಪ್ರತಿಬಿಂಬನಾಗುವನು. ಹೀಗಿದ್ದರೆ ಯಥಾ ತಥಾ ಶಬ್ದಗಳು ಸ್ವರಸವಾಗುವವು ಎಂಬುದು ವಾದಿರಾಜರ ಅಭಿಪ್ರಾಯವಾಗಿದೆ.

ಯುಕ್ತಿಃ - ಪ್ರತಿಬಿಂಬಃ ಸಾಕಾರಜೀವ ಏವ ಭವಿತುಮರ್ಹತಿ ಸಾಕಾರಬಿಂಬವತ್ತ್ವಾತ್, ಛಾಯಾಪುರುಷವತ್ ।

**ಬಾಧಿತಂ ತು ವಿನಾ ಸರ್ವಂ ಸಾಮ್ಯಂ ತೌ ನೈವ ಮುಂಚತಃ ।**
**ಕಿಂ ನ ಸರ್ಪೋಪಮಾ ರಜ್ಜೌ ಸರ್ಪಾಕಾರೇಣ ಕೇವಲಂ ॥ ೧೫೩೪ ॥**

**ಅರ್ಥ**– ತೌ = ಯಥಾ ತಥಾ ಶಬ್ದಗಳು, ವಿನಾ ಬಾಧಿತಂ = ಬಾಧಿತವಾದುದನ್ನು ಬಿಟ್ಟು ಸರ್ವಸಾಮ್ಯಂ = ಎಲ್ಲಾ ರೀತಿಯ ಸಾದೃಶ್ಯವನ್ನೂ, ನೈವ ಮುಂಚತಃ = ಬಿಡುವುದಿಲ್ಲ, ರಜ್ಜ್ವಾ= ಹಗ್ಗದಲ್ಲಿ ಸರ್ಪೋಪಮಾ = ಹಾವಿನ ಉಪಮೆಯು, ಕೇವಲಂ ಸರ್ಪಾಕಾರೇಣ = ಹಾವಿನ ಆಕಾರಮಾತ್ರದಿಂದಲೇ, ನ ಕಿಂ = ಇಲ್ಲವೇನು?

**ಅನುವಾದ**– ಉಪಮಾವಾಚಕಶಬ್ದಗಳು ಉಪಮಾನಉಪಮೇಯಗಳಿಗೆ ಎಷ್ಟೆಷ್ಟು ಹೋಲಿಕೆ ತಿಳಿಸಬಹುದೋ ಅವೆಲ್ಲವನ್ನೂ ತಿಳಿಸುತ್ತವೆ. ಆದರೆ ಬಾಧಕವಿರಬಾರದು. ಇದು ಮುಖಚಂದ್ರಾದಿಅನೇಕದೃಷ್ಟಾಂತಗಳಲ್ಲಿ ಕಂಡಿದೆ. ಇದಲ್ಲದೆ, ಯಥಾ ರಜ್ಜುಃ ತಥಾ ಸರ್ಪಃ ಎಂಬಲ್ಲಿ ಕೇವಲ ಆಕಾರದಲ್ಲಿಯೇ ಹೋಲಿಕೆಯು ಕಂಡಿದೆ. ಆದ್ದರಿಂದ ಪ್ರಕೃತದಲ್ಲಿ ಆಕಾರದಲ್ಲಿಯೂ ಬಾಧಕವಿಲ್ಲದಿರುವುದರಿಂದ ಸಾಮ್ಯವನ್ನು ಹೇಳಬಹುದು.

**ಭಾವವಿಲಾಸಿನೀ**– ತೌ ಯಥಾತಥಾಶಬ್ದೌ । ಉಪಮಾಯಾಮಾಕಾರಸಾಮ್ಯಸ್ಯಾಪ್ಯಾವಶ್ಯಕತ್ವೇ ದೃಷ್ಟಾಂತಮಾಹ – ಕಿಂ ನೇತಿ ॥ ೧೫೩೪ ॥

**ವಿವರಣೆ**– ಇಲ್ಲಿ ತೌ ಎಂಬ ಶಬ್ದವು ಶ್ರುತಿಯಲ್ಲಿರುವ ಯಥಾ ತಥಾ ಶಬ್ದಗಳ ವಾಚಕವಾಗಿದೆ. ಇಲ್ಲಿ ಉಪಲಕ್ಷಣವಾಗಿ ಎಲ್ಲಾ ಉಪಮಾವಾಚಕಶಬ್ದಗಳ್ಳೂ ಇಟ್ಟುಕೊಳ್ಳಬೇಕು. ಮುಖಚಂದ್ರಾದಿ ಸ್ಥಳಗಳಲ್ಲಿ ವರ್ತುಲತ್ವ, ಆಹ್ಲಾದಕತ್ವಧರ್ಮಗಳಿಂದ ಸಾಮ್ಯವನ್ನು ಹೇಳಬಹುದು. ಚಕ್ಷುರಾದಿಮತ್ವಾದಿಧರ್ಮಗಳಿಂದ ಬಾಧಕವಿರುವುದರಿಂದ ಸಾಮ್ಯವನ್ನು ಹೇಳಲಾಗದು . ಹಗ್ಗ ಮತ್ತು ಹಾವಿನಲ್ಲಿ ಆಕಾರ ಹೊರತಾಗಿ ಬೇರೆ ಯಾವ ಹೋಲಿಕೆಯೂ ಇಲ್ಲ. ಆದರೂ ಅವುಗಳನ್ನೂ ಉಪಮೆಯಾಗಿ ಹೇಳುವುದು ಕಂಡಿದೆ.

ಯುಕ್ತಿ - ಯಥಾತಥಾಶಬ್ದೌ ಆಕಾರೇಣಾಪಿ ಸಾಮ್ಯವಾಚಕೌ, ಅಬಾಧಿತಸರ್ವಸಾಮ್ಯವಾಚಕತ್ವಾತ್.

ರೂಪಂ ರೂಪಂ ಪ್ರತೀಂದ್ರಾಖ್ಯಹರೇರ್ಜೀವಸ್ತನೌ ತನೌ ।
ಪ್ರತಿರೂಪೋ ಬಭೂವೇತಿ ಸ್ಪಷ್ಟಂ ತದ್ರೂಪರೂಪಿತಾ ॥ ೧೫೩೫ ॥

ಉಕ್ತಾ ಶ್ರುತೌ ತತೋಽಪ್ಯೇತೌ ಸಾಕಾರೌ ತತ್ಕೃತೋಪಮೌ ।
ಇತಿ ಸಿದ್ಧಂ ತಥಾ ತತ್ರ ಬಿಂಬಸ್ಯೇಂದ್ರತ್ವಮೀರಿತಮ್ ॥ ೧೫೩೬ ॥

**ಅರ್ಥ**–ಇಂದ್ರಾಖ್ಯಹರೇಃ = ಇಂದ್ರನಾಮಕಹರಿಯ, ರೂಪಂ ರೂಪಂ = ಪ್ರತಿಯೊಂದು ರೂಪಗಳನ್ನು ಕುರಿತು, ಜೀವಃ = ಜೀವನು, ತನೌ ತನೌ = ಪ್ರತಿಶರೀರದಲ್ಲಿಯೂ, ಪ್ರತಿರೂಪಃ= ಪ್ರತಿಬಿಂಬನು. ಬಭೂವ = ಆದನು. ಇತಿ = ಎಂದು, ಸ್ಪಷ್ಟಂ = ಸ್ಪಷ್ಟವಾಗಿ, ಶ್ರುತೌ= ವೇದಮಂತ್ರದಲ್ಲಿ, ತದ್ರೂಪರೂಪಿತಾ = ಈಶಾಕಾರಸದೃಶಾಕಾರವು. ಉಕ್ತಾ = ಹೇಳಲ್ಪಟ್ಟಿದೆ, ತತೋಽಪಿ= ಈ ಕಾರಣದಿಂದಲೂ, ಏತೌ = ಈ ಈಶಜೀವರು, ತತ್ಕೃತೋಪ

ಮೌ = ಆ ಬಿಂಬಪ್ರತಿಬಿಂಬಭಾವದಿಂದ ಮಾಡಲ್ಪಟ್ಟ ಹೋಲಿಕೆವುಳ್ಳವರಾಗಿ, ಸಾಕಾರೌ = ಆಕಾರವುಳ್ಳವರೆಂದು, ಸಿದ್ಧಂ= ನಿಶ್ಚಿತವಾಯಿತು. ತಥಾ = ಹಾಗೆಯೇ, ತತ್ರ = ಆ ಶ್ರುತಿಯಲ್ಲಿ, ಬಿಂಬಸ್ಯ = ಬಿಂಬನಾದ ಶ್ರೀಹರಿಗೆ, ಇಂದ್ರತ್ವಂ = ಪರಮೈಶ್ವರ್ಯವೂ, ಈರಿತಂ = ಹೇಳಲ್ಪಟ್ಟಿದೆ.

**ಅನುವಾದ–** ರೂಪಂ ರೂಪಂ ಎಂಬ ಶ್ರುತಿಯೂ, ಇಂದ್ರನಾಮಕ ಹರಿಯ ರೂಪಗಳು ಬಿಂಬಗಳು. ಆ ರೂಪಗಳಿಗೆ ಅನುಗುಣವಾಗಿ ಜೀವರು ಪ್ರತಿಶರೀರಗಳಲ್ಲಿ ಪ್ರತಿಬಿಂಬರಾಗಿದ್ದಾರೆ ಎಂದು ಸ್ಪಷ್ಟವಾಗಿ ಹೇಳುತ್ತವೆ. ಹೀಗೆ ಶ್ರುತಿಯಲ್ಲಿ ಬಿಂಬ ಪ್ರತಿಬಿಂಬಭಾವದಿಂದ ಉಪಮೆಯನ್ನು ಹೇಳಿದ್ದರಿಂದ ಈಶಜೀವರಿಗೆ ಆಕಾರವೂ ಸಿದ್ಧವಾಯಿತು. ಹಾಗೆಯೇ ಬಿಂಬಕ್ಕೆ ಪರಮೈಶ್ವರ್ಯ ಸಿದ್ಧವಾಯಿತು.

**ವಿವರಣೆ–**

**ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।**
**ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾಹ್ಯಸ್ಯ ಹರಯಃ ಶತಾದಶ ॥**

ಎಂಬ ಋಗ್ವೇದದ ಮಂತ್ರವನ್ನು ಉದಾಹರಿಸಿದ್ದಾರೆ. ಇದು ಇಂದ್ರಸೂಕ್ತದಲ್ಲಿ ಬರುವ ಮಂತ್ರವಾಗಿದೆ. ಇಲ್ಲಿ ಇಂದ್ರಶಬ್ದವಾಚ್ಯನು ಹರಿಯೇ ಆಗಿದ್ದಾನೆ. ಇಲ್ಲಿ ಬಿಂಬಕ್ಕೆ ಅನುಗುಣವಾದ ರೂಪ ಪ್ರತಿಬಿಂಬಕ್ಕೆ ಇದೆ ಎಂದು ಹೇಳಿದೆ. ಇದು ಶ್ರುತಿಯಲ್ಲಿರುವ ರೂಪ ಮತ್ತು ಪ್ರತಿರೂಪಶಬ್ದಗಳಿಂದ ಈಶಜೀವರಿಗೆ ಸದೃಶಾಕಾರವು ಸಿದ್ಧವಾಯಿತು.

ಯುಕ್ತಿ- ಈಶಜೀವೌ ಸಾಕಾರೌ ತದ್ರೂಪಿತಯಾ ಉಕ್ತತ್ವಾತ್.

**ಪರಮೈಶ್ವರ್ಯರೂಪಂ ತಜ್ಜೀವಾ ಸರ್ವೇಽಪ್ಯತಾದೃಶಾಃ ।**
**ಅತೋ ವಿಸದೃಶತ್ವಂ ಚ ತಯ್ಯೈವ ಪ್ರೋಕ್ತಮೇತಯೋಃ ॥ ೧೫೩೭ ॥**

**ಅರ್ಥ–** ತತ್ = ಆ ಇಂದ್ರತ್ವವು, ಪರಮೈಶ್ವರ್ಯರೂಪಂ = ಉತ್ತಮೈಶ್ವರ್ಯರೂಪವು ಆಗಿದೆ. ಸರ್ವೇ ಜೀವಾ ಅಪಿ = ಎಲ್ಲಾ ಜೀವರಾದರೂ, ಅತಾದೃಶಾಃ = ಪರಮೈಶ್ವರ್ಯವುಳ್ಳವರಲ್ಲ, ಅತಃ = ಈ ಕಾರಣದಿಂದ, ಏತಯೋಃ = ಬಿಂಬಪ್ರತಿ ಬಿಂಬರಾದ ಈಶಜೀವರಿಗೆ, ವಿಸದೃಶತ್ವಂ ಚ = ಅಸಮಾನತೆಯೂ ಕೂಡ, ತಯ್ಯೈವ = ರೂಪಂ ರೂಪಂ ಎಂಬ ಶ್ರುತಿಯಿಂದಲೇ, ಪ್ರೋಕ್ತಂ = ಹೇಳಲ್ಪಟ್ಟಿದೆ.

**ಅನುವಾದ–** ಇಂದ್ರಶಬ್ದದಿಂದ ಪರಮೈಶ್ವರ್ಯವು ವಾಚ್ಯವಾಗಿದೆ. ಆದ್ದರಿಂದ ಬಿಂಬದಲ್ಲಿ ಪರಮೈಶ್ವರ್ಯವು ಸಿದ್ಧವಾಯಿತು. ಆದರೆ ಬ್ರಹ್ಮಾದಿ ಎಲ್ಲಾ ಜೀವರೂ ಕೂಡ ಮುಖ್ಯವಾಗಿ ಪರಮೈಶ್ವರ್ಯವುಳ್ಳವರಲ್ಲ. ಹೀಗೆ ಇದೇ ಶ್ರುತಿಯಲ್ಲಿ ಬಿಂಬ ಪ್ರತಿಬಿಂಬರಾದ ಈಶಜೀವರಿಗೆ ವೈಸಾದೃಶ್ಯವೂ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ– ಜೀವಸ್ಯ ಬ್ರಹ್ಮಸದೃಶಾಕಾರತ್ವೇ ಶ್ರುತಿಮಪ್ಯಾಹ – ರೂಪಂ ರೂಪಮಿತಿ ॥ ಅನೇನ ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿ ಚಕ್ಷಣಾಯೇತಿ ಶ್ರುತಿಂ ಗೃಹ್ಣಾತಿ । ಇಂದ್ರಾಖ್ಯಹರೇಃ ರೂಪಂ ರೂಪಂ ಪ್ರತೀತಿ ಸಂಬಂಧಃ । ತತ್‌ಕೃತೋಪಮೌ ತೇನ ಬಿಂಬಪ್ರತಿಬಿಂಬಭಾವೇನ ಕೃತೋಪಮೌ । ತತ್ರ ಶ್ರುತೌ । ಇಂದ್ರತ್ವಂ ಇಂದ್ರೋ ಮಾಯಾಭಿರಿತಿ ಶ್ರವಣಾತ್ । ತತ್ ಇಂದ್ರತ್ವಮ್ । ತಯಾ ಶ್ರುತ್ಯಾ । ಏತಯೋಃ ಬಿಂಬಪ್ರತಿಬಿಂಬಭೂತೇಂದ್ರ-ಜೀವಯೋಃ ॥ ೧೫೩೫-೧೫೩೭ ॥**

**ವಿವರಣೆ–** ಪರಮೈಶ್ವರ್ಯಾರ್ಥಕ ಇದಿ ಧಾತುವಿನಿಂದ ಇಂದ್ರಶಬ್ದವು ನಿಷ್ಪನ್ನವಾಗಿದೆ. ಈ ಪರಮೈಶ್ವರ್ಯವು ಬ್ರಹ್ಮಾದಿಗಳಲ್ಲಿ ಅಲ್ಪವಾಗಿ ಪರಾಧೀನವಾಗಿ ಇದೆ. ಆದರೆ, ಪರಮಾತ್ಮನಲ್ಲಿ ಪೂರ್ಣವಾಗಿ ಸ್ವತಂತ್ರವಾಗಿ ಇದೆ. ಆದ್ದರಿಂದ ಪರಮಮುಖ್ಯವೃತ್ತಿಯಿಂದ ಇಂದ್ರಶಬ್ದವಾಚ್ಯನು ಶ್ರೀಹರಿಯೇ ಆಗಿದ್ದಾನೆ.

ಯುಕ್ತಿ-ಬಿಂಬಃ ಜೀವಸದೃಶಃ ಪರಮೈಶ್ವರ್ಯವಾಚಕ-ಇಂದ್ರಶಬ್ದೇನ ಉಕ್ತತ್ವಾತ್ ।

**ಏವಂ ಚ ಪ್ರತಿರೂಪೋಽಯಂ ರೂಪಾದ್ ವಿಸದೃಶತ್ವತಃ ।**
**ಭಿನ್ನಶ್ಛಾಯಾವದಿತ್ಯಚ್ಛಾ ರತ್ನಚ್ಛಾಯಾಪಿ ಹೃತ್ತಮಃ ।**
**ತಿರಸ್ಕರೋತಿ ತೇನೋಕ್ತಾಪ್ಯುಪಮಾಽಸಕಲೋಪಮಾ ॥ ೧೫೩೮ ॥**

**ಅರ್ಥ–** ಏವಂ ಚ = ಹೀಗೆ, ಅಯಂ ಪ್ರತಿರೂಪಃ = ಈ ಪ್ರತಿಬಿಂಬವು, ರೂಪಾತ್ = ಬಿಂಬದ ದೆಸೆಯಿಂದ, ಭಿನ್ನಃ = ಭೇದವುಳ್ಳದ್ದಾಗಿದೆ. ವಿಸದೃಶತ್ವತಃ = ವೈಸಾದೃಶ್ಯ ವಿರುವುದರಿಂದ, ಛಾಯಾವತ್ = ನೆರಳಿನಂತೆ, ಇತಿ = ಎಂಬ, ಅಚ್ಛಾ = ನಿರ್ದುಷ್ಟವಾದ, ರತ್ನಚ್ಛಾಯಾಪಿ = ಅನುಮಾನವೆಂಬ ಮಣಿದೀಪವೂ ಕೂಡ, ಹೃತ್ತಮಃ = ಹೃದಯದಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ತಿರಸ್ಕರೋತಿ = ನಾಶಮಾಡುತ್ತದೆ. ತೇನ = ಈ ಅನುಮಾನವನ್ನು ಹೇಳಿರುವುದರಿಂದ, ಅಸಕಲೋಪಮಾ = ಸರ್ವಸಾದೃಶ್ಯವಿಲ್ಲದ, ಉಪಮೋಽಪಿ = ಉಪಮಾಲಂಕಾರವೂ, ಉಕ್ತಾ = ಶ್ರುತಿಯಿಂದ ಹೇಳಲ್ಪಟ್ಟಿದೆ.

**ಅನುವಾದ– ಪ್ರತಿಬಿಂಬನಾದ ಜೀವನಿಗೆ ಬಿಂಬನಾದ ಈಶನಿಂದ ವೈಸಾದೃಶ್ಯ ಇರುವುದರಿಂದ ದೇಹಕ್ಕಿಂತ ಭಿನ್ನವಾದ ನೆರಳಿನಂತೆ ಈಶಜೀವರಿಗೆ ಭೇದವಿದೆ ಎಂಬ ಅನುಮಾನವೆಂಬ ರತ್ನದೀಪದ ಬೆಳಕು ಮನಸ್ಸಿನ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುತ್ತದೆ. ಹಾಗೆಯೇ ಈ ಶ್ರುತಿಯು ವೈಸಾದೃಶ್ಯವನ್ನು ಹೇಳಿದ್ದರಿಂದ ಬಿಂಬ ಪ್ರತಿಬಿಂಬಗಳಿಗೆ ಸರ್ವಸಾದೃಶ್ಯವು ಇಲ್ಲವೆಂದೂ ತಿಳಿಸಲಾಗುವುದು. ಆದ್ದರಿಂದ ಇದು ಸರ್ವೋಪಮೆಯಲ್ಲ.**

**ಭಾವವಿಲಾಸಿನೀ–** ಅತ ಏವ ಬಿಂಬಪ್ರತಿಬಿಂಬಯೋರ್ಭೇದಶ್ರುತಿಮೂಲಮನುಮಾನಮಪ್ಯ ಭೂದಿತ್ಯಾಹ – ಏವಂಚೇತಿ ॥ ಛಾಯಾವತ್ಪುರುಷಾದ್ಭಿನ್ನಚ್ಛಾಯಾವತ್ । ರತ್ನಚ್ಛಾಯಾ ಅನುಮಾನಾಖ್ಯಾ ರತ್ನಚ್ಛಾಯಾ । ಅಸಕಲೋಪಮೇತಿ ಪದಚ್ಛೇದಃ ॥ ೧೫೩೮ ॥

**ವಿವರಣೆ–** ಬಿಂಬಃ ಪ್ರತಿಬಿಂಬಾತ್ ಭಿನ್ನಃ ವಿಸದೃಶತ್ವಾತ್, ಪುರುಷಾದ್ಭಿನ್ನಛಾಯಾವತ್ ಎಂಬ ಶ್ರುತಿಮೂಲವಾದ ಅನುಮಾನದಿಂದ ಬಿಂಬಪ್ರತಿಬಿಂಬರಿಗೆ ಭೇದವು ಸಿದ್ಧವಾಯಿತು.

ಇಲ್ಲಿ ವಾದಿರಾಜರು ಈ ಶ್ರುತಿಸಿದ್ಧವಾದ ಅನುಮಾನವನ್ನು ತೈಲಾದಿದೀಪದಂತೆ ಕಜ್ಜಲವಿಲ್ಲದ, ಶುದ್ಧವಾದ ರತ್ನದೀಪಕ್ಕೆ ಹೋಲಿಸಿದ್ದಾರೆ. ರತ್ನದೀಪವು ಹೊರಗಿನ ಕತ್ತಲೆಯನ್ನು ನಾಶಮಾಡಿದರೆ, ಈ ಅನುಮಾನವು ಹೃದಯದಲ್ಲಿ ಭೇದವಿಷಯದಲ್ಲಿರುವ ಸಂಶಯವಿಪರೀತಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುತ್ತದೆ.

ಬಿಂಬ ಪ್ರತಿಬಿಂಬಗಳಿಗೆ ಪೂರ್ಣವಾಗಿ ಹೋಲಿಕೆಯೂ ಇಲ್ಲ ಎಂಬ ಶ್ರುತಿಸಿದ್ಧ ಅಂಶದಿಂದ ಅಭೇದವು ಸುತರಾಂ ಇಲ್ಲ ಎಂದು ಸಿದ್ಧವಾಯಿತು.

ವಿಷ್ಣೋಶ್ಚ ಬಿಂಬತಾ ತಸ್ಮಾದ್ ಭಿನ್ನಸ್ಯೈವಾತ್ರ ವರ್ಣ್ಯತೇ ॥ ೧೫೩೯ ॥

**ಅರ್ಥ–** ತಸ್ಮಾತ್ = ಪರಮೈಶ್ವರ್ಯವು ವಿಷ್ಣುವಿಗಿಂತ ಬೇರೆಯವರಲ್ಲಿ ಇಲ್ಲದಿರುವುದರಿಂದ, ಭಿನ್ನಸ್ಯೈವ = ಪ್ರತಿಬಿಂಬನಿಗಿಂತ ಭಿನ್ನನೇ ಆದ, ವಿಷ್ಣೋಃ = ನಾರಾಯಣನಿಗೆ, ಬಿಂಬತಾ ಚ = ಬಿಂಬತ್ವವೂ, ಅತ್ರ = ಈ ಶ್ರುತಿಯಲ್ಲಿ, ವರ್ಣ್ಯತೇ = ಬಣ್ಣಿಸಲ್ಪಡುತ್ತದೆ.

**ಅನುವಾದ–** ಇಂದ್ರ ಶಬ್ದಾರ್ಥವಾದ ಪರಮೈಶ್ವರ್ಯವು ಬೇರೆ ವ್ಯಕ್ತಿಗಳಲ್ಲಿ ಇಲ್ಲ. ಆದ್ದರಿಂದ ಪ್ರತಿಬಿಂಬಕ್ಕಿಂತ ಅತ್ಯಂತಭಿನ್ನನಾದ ಶ್ರೀಹರಿಗೇ ಬಿಂಬತ್ವವು ಎಂಬುದನ್ನು ರೂಪಂ ರೂಪಂ ಎಂಬ ಶ್ರುತಿಯು ಪ್ರತಿಪಾದಿಸುತ್ತಿದೆ.

**ಭಾವವಿಲಾಸಿನೀ–** ತಸ್ಮಾತ್ಪರಮೈಶ್ವರ್ಯಸ್ಯ ವಿಷ್ಣೋರನ್ಯತ್ರಾಸಂಭವಾತ್ ॥೧೫೩೯-೧೫೪೦॥

**ವಿವರಣೆ–** ಯುಕ್ತಿ - ಇಯಂ ಶ್ರುತಿಃ ಭಿನ್ನಸ್ಯೈವ ಬಿಂಬತಾಪ್ರತಿಪಾದಿಕಾ,ಪ್ರತಿಬಿಂಬೇ ಪರಮೈಶ್ವರ್ಯಾಭಾವಾತ್.

ಕಿಂಚಿತ್ಸಾಮ್ಯಾದಧೀನತ್ವಾಜ್ಜೀವಸ್ಯ ಪ್ರತಿಬಿಂಬತಾ ।
ವಿಷ್ಣೋಶ್ಚ ಬಿಂಬತಾ ಕಿಂ ನ ಭಿನ್ನಯೋರೇವ ವರ್ತತೇ ॥ ೧೫೪೦ ॥

ಬಿಂಬಸ್ಯ ಪ್ರತಿಬಿಂಬೈಕ್ಯಂ ನ ಸ್ಮರೋಕ್ತಂ ನ ವಿಸ್ಮರ ॥ ೧೫೪೧ ॥

**ಅರ್ಥ–** ಜೀವಸ್ಯ = ಜೀವನಿಗೆ, ಕಿಂಚಿತ್ಸಾಮ್ಯಾತ್ = ಅಲ್ಪಸಾದೃಶ್ಯವಿರುವುದರಿಂದ, ಅಧೀನತ್ವಾತ್ = ಪರಾಧೀನತೆ ಇರುವುದರಿಂದ, ಪ್ರತಿಬಿಂಬತಾ = ಪ್ರತಿಬಿಂಬತ್ವ, ವಿಷ್ಣೋಶ್ಚ=

**ಭಾವವಿಲಾಸಿನೀ–** ಜೀವಸ್ಯ ಬ್ರಹ್ಮಸದೃಶಾಕಾರತ್ವೇ ಶ್ರುತಿಮಪ್ಯಾಹ – **ರೂಪಂ ರೂಪಮಿತಿ ॥** ಅನೇನ ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿ ಚಕ್ಷಣಾಯೇತಿ ಶ್ರುತಿಂ ಗೃಹ್ಣಾತಿ । ಇಂದ್ರಾಖ್ಯಹರೇಃ ರೂಪಂ ರೂಪಂ ಪ್ರತೀತಿ ಸಂಬಂಧಃ । ತತ್ಕೃತೋಪಮೌ ತೇನ ಬಿಂಬಪ್ರತಿಬಿಂಬಭಾವೇನ ಕೃತೋಪಮೌ । ತತ್ರ ಶ್ರುತೌ । ಇಂದ್ರತ್ವಂ ಇಂದ್ರೋ ಮಾಯಾಭಿರಿತಿ ಶ್ರವಣಾತ್ । ತತ್ ಇಂದ್ರತ್ವಮ್ । ತಯಾ ಶ್ರುತ್ಯಾ । ಏತಯೋಃ ಬಿಂಬಪ್ರತಿಬಿಂಬಭೂತೇಂದ್ರ-ಜೀವಯೋಃ ॥ ೧೫೩೫-೧೫೩೭ ॥

**ವಿವರಣೆ–** ಪರಮೈಶ್ವರ್ಯಾರ್ಥಕ ಇದಿ ಧಾತುವಿನಿಂದ ಇಂದ್ರಶಬ್ದವು ನಿಷ್ಪನ್ನವಾಗಿದೆ. ಈ ಪರಮೈಶ್ವರ್ಯವು ಬ್ರಹ್ಮಾದಿಗಳಲ್ಲಿ ಅಲ್ಪವಾಗಿ ಪರಾಧೀನವಾಗಿ ಇದೆ. ಆದರೆ, ಪರಮಾತ್ಮನಲ್ಲಿ ಪೂರ್ಣವಾಗಿ ಸ್ವತಂತ್ರವಾಗಿ ಇದೆ. ಆದ್ದರಿಂದ ಪರಮಮುಖ್ಯವೃತ್ತಿಯಿಂದ ಇಂದ್ರಶಬ್ದವಾಚ್ಯನು ಶ್ರೀಹರಿಯೇ ಆಗಿದ್ದಾನೆ.

ಯುಕ್ತಿ-ಬಿಂಬಃ ಜೀವಸದೃಶಃ ಪರಮೈಶ್ವರ್ಯವಾಚಕ-ಇಂದ್ರಶಬ್ದೇನ ಉಕ್ತತ್ವಾತ್ ।

**ಏವಂ ಚ ಪ್ರತಿರೂಪೋಽಯಂ ರೂಪಾದ್ ವಿಸದೃಶತ್ವತಃ ।**
**ಭಿನ್ನಶ್ಛಾಯಾವದಿತ್ಯಚ್ಛಾ ರತ್ನಚ್ಛಾಯಾಪಿ ಹೃತ್ತಮಃ ।**
**ತಿರಸ್ಕರೋತಿ ತೇನೋಕ್ತಾಪ್ಯುಪಮಾಽಸಕಲೋಪಮಾ ॥ ೧೫೩೮ ॥**

**ಅರ್ಥ–** ಏವಂ ಚ = ಹೀಗೆ, ಅಯಂ ಪ್ರತಿರೂಪಃ = ಈ ಪ್ರತಿಬಿಂಬವು, ರೂಪಾತ್ = ಬಿಂಬದ ದೆಸೆಯಿಂದ, ಭಿನ್ನಃ = ಭೇದವುಳ್ಳದ್ದಾಗಿದೆ. ವಿಸದೃಶತ್ವತಃ = ವೈಸಾದೃಶ್ಯ ವಿರುವುದರಿಂದ, ಛಾಯಾವತ್ = ನೆರಳಿನಂತೆ, ಇತಿ = ಎಂಬ, ಅಚ್ಛಾ = ನಿರ್ದುಷ್ಟವಾದ, ರತ್ನಚ್ಛಾಯಾಪಿ = ಅನುಮಾನವೆಂಬ ಮಣಿದೀಪವೂ ಕೂಡ, ಹೃತ್ತಮಃ = ಹೃದಯದಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು, ತಿರಸ್ಕರೋತಿ = ನಾಶಮಾಡುತ್ತದೆ. ತೇನ = ಈ ಅನುಮಾನವನ್ನು ಹೇಳಿರುವುದರಿಂದ, ಅಸಕಲೋಪಮಾ = ಸರ್ವಸಾದೃಶ್ಯವಿಲ್ಲದ, ಉಪಮೋಽಪಿ = ಉಪಮಾಲಂಕಾರವೂ, ಉಕ್ತಾ= ಶ್ರುತಿಯಿಂದ ಹೇಳಲ್ಪಟ್ಟಿದೆ.

**ಅನುವಾದ–** ಪ್ರತಿಬಿಂಬನಾದ ಜೀವನಿಗೆ ಬಿಂಬನಾದ ಈಶನಿಂದ ವೈಸಾದೃಶ್ಯ ಇರುವುದರಿಂದ ದೇಹಕ್ಕಿಂತ ಭಿನ್ನವಾದ ನೆರಳಿನಂತೆ ಈಶಜೀವರಿಗೆ ಭೇದವಿದೆ ಎಂಬ ಅನುಮಾನವೆಂಬ ರತ್ನದೀಪದ ಬೆಳಕು ಮನಸ್ಸಿನ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುತ್ತದೆ. ಹಾಗೆಯೇ ಈ ಶ್ರುತಿಯು ವೈಸಾದೃಶ್ಯವನ್ನು ಹೇಳಿದ್ದರಿಂದ ಬಿಂಬ ಪ್ರತಿಬಿಂಬಗಳಿಗೆ ಸರ್ವಸಾದೃಶ್ಯವು ಇಲ್ಲವೆಂದೂ ತಿಳಿಸಲಾಗುವುದು. ಆದ್ದರಿಂದ ಇದು ಸರ್ವೋಪಮೆಯಲ್ಲ.

**ಭಾವವಿಲಾಸಿನೀ–** ಅತ ಏವ ಬಿಂಬಪ್ರತಿಬಿಂಬಯೋರ್ಭೇದಶ್ರುತಿಮೂಲಮನುಮಾನಮಪ್ಯ ಭೂದಿತ್ಯಾಹ – **ಏವಂಚೇತಿ** ॥ ಛಾಯಾವತ್ಪುರುಷಾದ್ಭಿನ್ನಚ್ಛಾಯಾವತ್ । ರತ್ನಚ್ಛಾಯಾ ಅನುಮಾನಾಖ್ಯಾ ರತ್ನಚ್ಛಾಯಾ । ಅಪಕಲೋಪಮೇತಿ ಪದಚ್ಛೇದಃ ॥ ೧೫೩೮ ॥

**ವಿವರಣೆ–** ಬಿಂಬಃ ಪ್ರತಿಬಿಂಬಾತ್ ಭಿನ್ನಃ ವಿಸದೃಶತ್ವಾತ್, ಪುರುಷಾದ್ಭಿನ್ನಛಾಯಾವತ್ ಎಂಬ ಶ್ರುತಿಮೂಲವಾದ ಅನುಮಾನದಿಂದ ಬಿಂಬಪ್ರತಿಬಿಂಬರಿಗೆ ಭೇದವು ಸಿದ್ಧವಾಯಿತು.

ಇಲ್ಲಿ ವಾದಿರಾಜರು ಈ ಶ್ರುತಿಸಿದ್ಧವಾದ ಅನುಮಾನವನ್ನು ತೈಲಾದಿದೀಪದಂತೆ ಕಜ್ಜಲವಿಲ್ಲದ, ಶುದ್ಧವಾದ ರತ್ನದೀಪಕ್ಕೆ ಹೋಲಿಸಿದ್ದಾರೆ. ರತ್ನದೀಪವು ಹೊರಗಿನ ಕತ್ತಲೆಯನ್ನು ನಾಶಮಾಡಿದರೆ, ಈ ಅನುಮಾನವು ಹೃದಯದಲ್ಲಿ ಭೇದವಿಷಯದಲ್ಲಿರುವ ಸಂಶಯವಿಪರೀತಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುತ್ತದೆ.

ಬಿಂಬ ಪ್ರತಿಬಿಂಬಗಳಿಗೆ ಪೂರ್ಣವಾಗಿ ಹೋಲಿಕೆಯೂ ಇಲ್ಲ ಎಂಬ ಶ್ರುತಿಸಿದ್ಧ ಅಂಶದಿಂದ ಅಭೇದವು ಸುತರಾಂ ಇಲ್ಲ ಎಂದು ಸಿದ್ಧವಾಯಿತು.

ವಿಷ್ಣೋಶ್ಚ ಬಿಂಬತಾ ತಸ್ಮಾದ್ ಭಿನ್ನಸ್ಯೈವಾತ್ರ ವರ್ಣ್ಯತೇ ॥ ೧೫೩೯ ॥

**ಅರ್ಥ–** ತಸ್ಮಾತ್ = ಪರಮೈಶ್ವರ್ಯವು ವಿಷ್ಣುವಿಗಿಂತ ಬೇರೆಯವರಲ್ಲಿ ಇಲ್ಲದಿರುವುದರಿಂದ, ಭಿನ್ನಸ್ಯೈವ = ಪ್ರತಿಬಿಂಬನಿಗಿಂತ ಭಿನ್ನನೇ ಆದ, ವಿಷ್ಣೋಃ = ನಾರಾಯಣನಿಗೆ, ಬಿಂಬತಾ ಚ = ಬಿಂಬತ್ವವೂ, ಅತ್ರ = ಈ ಶ್ರುತಿಯಲ್ಲಿ, ವರ್ಣ್ಯತೇ = ಬಣ್ಣಿಸಲ್ಪಡುತ್ತದೆ.

**ಅನುವಾದ–** ಇಂದ್ರ ಶಬ್ದಾರ್ಥವಾದ ಪರಮೈಶ್ವರ್ಯವು ಬೇರೆ ವ್ಯಕ್ತಿಗಳಲ್ಲಿ ಇಲ್ಲ. ಆದ್ದರಿಂದ ಪ್ರತಿಬಿಂಬಕ್ಕಿಂತ ಅತ್ಯಂತಭಿನ್ನನಾದ ಶ್ರೀಹರಿಗೇ ಬಿಂಬತ್ವವು ಎಂಬುದನ್ನು ರೂಪಂ ರೂಪಂ ಎಂಬ ಶ್ರುತಿಯು ಪ್ರತಿಪಾದಿಸುತ್ತಿದೆ.

**ಭಾವವಿಲಾಸಿನೀ–** ತಸ್ಮಾತ್ಪರಮೈಶ್ವರ್ಯಸ್ಯ ವಿಷ್ಣೋರನ್ಯತ್ರಾಸಂಭವಾತ್ ॥೧೫೩೯-೧೫೪೦॥

**ವಿವರಣೆ–** ಯುಕ್ತಿ - ಇಯಂ ಶ್ರುತಿಃ ಭಿನ್ನಸ್ಯೈವ ಬಿಂಬತಾಪ್ರತಿಪಾದಿಕಾ,ಪ್ರತಿಬಿಂಬೇ ಪರಮೈಶ್ವರ್ಯಾಭಾವಾತ್.

ಕಿಂಚಿತ್ಸಾಮ್ಯಾದಧೀನತ್ವಾಜ್ಜೀವಸ್ಯ ಪ್ರತಿಬಿಂಬತಾ ।
ವಿಷ್ಣೋಶ್ಚ ಬಿಂಬತಾ ಕಿಂ ನ ಭಿನ್ನಯೋರೇವ ವರ್ತತೇ ॥ ೧೫೪೦ ॥

ಬಿಂಬಸ್ಯ ಪ್ರತಿಬಿಂಬೈಕ್ಯಂ ನ ಸ್ಮರೋಕ್ತಂ ನ ವಿಸ್ಮರ ॥ ೧೫೪೧ ॥

**ಅರ್ಥ–** ಜೀವಸ್ಯ = ಜೀವನಿಗೆ, ಕಿಂಚಿತ್ಸಾಮ್ಯಾತ್ = ಅಲ್ಪಸಾದೃಶ್ಯವಿರುವುದರಿಂದ, ಅಧೀನತ್ವಾತ್ = ಪರಾಧೀನತೆ ಇರುವುದರಿಂದ, ಪ್ರತಿಬಿಂಬತಾ = ಪ್ರತಿಬಿಂಬತ್ವ, ವಿಷ್ಣೋಶ್ಚ=

ವಿಷ್ಣುವಿಗೆ, ಬಿಂಬತಾ ಚ = ಬಿಂಬತ್ವವೂ ಕೂಡ, ಭಿನ್ನಯೋರೇವ = ಭೇದವುಳ್ಳವರಿಗೇ, ಕಿಂ ನ ವರ್ಣ್ಯತೇ = ಹೇಳಲ್ಪಡುವುದಿಲ್ಲವೇ? ಅತಃ = ಆದ್ದರಿಂದ, ಬಿಂಬಸ್ಯ = ಬಿಂಬಕ್ಕೆ, ಪ್ರತಿಬಿಂಬೈಕ್ಯಂ = ಪ್ರತಿಬಿಂಬದ ಐಕ್ಯವನ್ನು ನ ಸ್ಮರ = ಸ್ಮರಿಸಬೇಡ. ಉಕ್ತಂ = ಯಥೈಷಾ ಪುರುಷಚ್ಛಾಯಾ ಎಂಬ ಶ್ರುತಿಯಿಂದ ಹೇಳಿದ ವಿಷಯವನ್ನು ನ ವಿಸ್ಮರ = ಮರೆಯಬೇಡ.

**ಅನುವಾದ–** ಜೀವನಿಗೆ ಪರಮಾತ್ಮನಿಂದ ಕಿಂಚಿತ್‌ಸಾದೃಶ್ಯವಿದೆ. ಹಾಗೆಯೇ ಪರಮಾತ್ಮನ ಅಧೀನನೂ ಆಗಿದ್ದಾನೆ ಜೀವನು. ಹೀಗೆ ಶ್ರುತಿಯಲ್ಲಿ ಭಿನ್ನರಾದ ಈಶ ಜೀವರಿಗೆ ಬಿಂಬಪ್ರತಿಬಿಂಬತ್ವವು ವರ್ಣಿತವಾಗಿದೆ. ಈಶಜೀವರಿಗೆ ಐಕ್ಯವಿದ್ದಿದ್ದರೆ ಇಬ್ಬರಲ್ಲಿಯೂ ಬಿಂಬತ್ವವೂ ಅಥವಾ ಪ್ರತಿಬಿಂಬತ್ವೂ ಬರುತ್ತಿತ್ತು. ಆದ್ದರಿಂದ ಬಿಂಬ ಪ್ರತಿಬಿಂಬಗಳಿಗೆ ಐಕ್ಯವನ್ನು ಸ್ಮರಿಸಬೇಡ. ಯಥೈಷಾ ಪುರುಷೇಚ್ಛಾಯಾ ಎಂಬ ಶ್ರುತಿಯಲ್ಲಿ ಹೇಳಿದ ಭೇದವನ್ನು ಮರೆಯಬೇಡ.

**ಭಾವವಿಲಾಸಿನೀ–** ಉಕ್ತಂ ಯಥೈಷಾ ಪುರುಷ ಇತಿ ಪ್ರಾಚೀನಶ್ರುತಾವುಕ್ತಮ್ ॥ ೧೫೪೧ ॥

**ವಿವರಣೆ–** ಜೀವರಿಗೆ ಐಕ್ಯವಿದ್ದಿದ್ದರೆ ಶ್ರುತಿಯಲ್ಲಿ ಇಬ್ಬರಲ್ಲಿಯೂ ಬಿಂಬತ್ವವನ್ನು ಅಥವಾ ಪ್ರತಿಬಿಂಬತ್ವವನ್ನು ಹೇಳಬಹುದಾಗಿದ್ದಿತು. ಆದರೆ ರೂಪಂ ರೂಪಂ ಎಂಬ ಶ್ರುತಿಯಲ್ಲಿ ಜೀವನಿಗೆ ಪ್ರತಿಬಿಂಬತ್ವವನ್ನೂ ಈಶನಿಗೆ ಬಿಂಬತ್ವವನ್ನೂ ಸ್ಪಷ್ಟವಾಗಿ ಹೇಳಿದೆ. ಇದರಿಂದ ಶ್ರುತಿಗೆ ಭೇದವು ಸಮ್ಮತವಾಗಿದೆ.

ಯುಕ್ತಿ - ಈಶಜೀವೌ ಭಿನ್ನೌ ಬಿಂಬತ್ವೇನ ಪ್ರತಿಬಿಂಬತ್ವೇನ ಶ್ರುತೌ ಉಕ್ತತ್ವಾತ್.

**ಛಾಯಾಪುರುಷದೃಷ್ಟಾಂತಾದ್ ಬಿಂಬಸ್ಯ ಪರಮಾತ್ಮನಃ ।**
**ಪ್ರತಿಬಿಂಬಾತ್ಮಕಾಜ್ಜೀವಾದ್ ಭೇದಸ್ಯೋಕ್ತಶ್ರುತೌ ಶ್ರುತೇಃ ॥ ೧೫೪೨ ॥**

**ಅರ್ಥ–** ಉಕ್ತಶ್ರುತೌ = ಯಥೈಷಾ ಪುರುಷೇಚ್ಛಾಯಾ ಎಂಬ ಶ್ರುತಿಯಲ್ಲಿ, ಛಾಯಾ ಪುರುಷದೃಷ್ಟಾಂತಾತ್ = ನೆರಳು ಮತ್ತು ದೇಹಗಳ ಉಪಮೆಯ ದೆಸೆಯಿಂದ, ಬಿಂಬಸ್ಯ = ಬಿಂಬನಾದ, ಪರಮಾತ್ಮನಃ = ಭಗವಂತನಿಗೆ, ಪ್ರತಿಬಿಂಬಾತ್ಮಕಾತ್ = ಪ್ರತಿಬಿಂಬ ಸ್ವರೂಪನಾದ, ಜೀವಾತ್= ಜೀವನ ದೆಸೆಯಿಂದ, ಭೇದಸ್ಯ = ಭೇದದ, ಶ್ರುತೇಃ = ಶ್ರವಣವು ಇರುವುದರಿಂದ (ಈಶಜೀವರಿಗೆ ಅಭೇದವನ್ನು ಚಿಂತಿಸಬೇಡ)

**ಅನುವಾದ–** ಯಥೈಷಾ ಪುರುಷಚ್ಛಾಯಾ ಎಂದು ಹೇಳಿದ ಶ್ರುತಿಯಲ್ಲಿ ಜೀವಮತ್ತು ಪರಮಾತ್ಮರಿಗೆ ಛಾಯಾ ಮತ್ತು ದೇಹಗಳ ಉಪಮೆಯನ್ನು ಹೇಳಿದೆ. ಆ ದೃಷ್ಟಾಂತದ ಬಲದಿಂದ ಬಿಂಬನಾದ ಈಶನಿಗೆ ಪ್ರತಿಬಿಂಬನಾದ ಜೀವನಿಂದ ಭೇದವೇ ಶ್ರುತವಾಗಿರುವುದರಿಂದ ಈಶಜೀವರಿಗೆ ಅಭೇದವನ್ನು ಚಿಂತಿಸಬೇಡ.

**ಭಾವವಿಲಾಸಿನೀ–** ತದೇವ ವಿಶಿನಷ್ಟಿ॥ **ಛಾಯಾಪುರುಷೇತಿ** ॥ ಉಕ್ತಶ್ರುತೌ ಪ್ರಾಗುಕ್ತಶ್ರುತೌ। ಉಪಲಕ್ಷಣಂ ಚೈತತ್ । ಅಸ್ಯಾಮಪಿ ಶ್ರುತಾವಿಂದ್ರಶಬ್ದೇನ ವೈಸಾದೃಶ್ಯಸೂಚನಾದಿತ್ಯಪಿ ದ್ರಷ್ಟವ್ಯಮ್ ॥ ೧೫೪೨ ॥

**ವಿವರಣೆ–** ಶ್ರುತಿಯಲ್ಲಿ ಜೀವನಿಗೆ ನೆರಳಿನ ದೃಷ್ಟಾಂತವನ್ನೂ, ಈಶನಿಗೆ ಪುರುಷನ ಉಪಮಾನವನ್ನೂ ಹೇಳಿದೆ. ಈ ಛಾಯಾಪುರುಷಶಬ್ದಶ್ರವಣದಿಂದಲೇ ಬಿಂಬ ಪ್ರತಿಬಿಂಬಗಳಾದ ಈಶಜೀವರಿಗೆ ಭೇವು ಶ್ರುತವಾಗಿದೆ.

ಇದು ಉಪಲಕ್ಷಣ. ರೂಪಂ ರೂಪಂ ಪ್ರತಿರೂಪೋ ಬಭೂವ ಎಂಬ ಶ್ರುತಿಯಲ್ಲಿಯೂ ಈಶನಿಗೆ ಇಂದ್ರಶಬ್ದಪ್ರಯೋಗವಿದೆ. ಇದರಿಂದ ಈಶಜೀವರಿಗೆ ವೈಸಾದೃಶ್ಯವು ಸೂಚಿತವಾಗಿದೆ. ಇದರಿಂದ ಈಶಜೀವರಿಗೆ ಭೇದವು ಶ್ರುತವಾಗಿದೆ ಎಂದು ತೆಗೆದುಕೊಳ್ಳಬೇಕು.

ಬಿಂಬ ಪ್ರತಿಬಿಂಬದ ಭೇದವಿಷಯದಲ್ಲಿ ಮಾಯಾವಾದಿಗಳ ಪ್ರಕ್ರಿಯೆಯಿಂದಲೇ ಯುಕ್ತಿಯನ್ನು ಹೇಳುತ್ತಾರೆ–

ಪ್ರತ್ಯಕ್ಪರಾಗ್ಭಾವತೋ ಹಿ ವಿಷಯೋ ವಿಷಯೀ ನ ತೇ ।
ಮೂಲಭಾಷ್ಯೇ ಕಥಂ ತರ್ಹಿ ಪರಾಕ್ಪ್ರತ್ಯಗಭಿನ್ನತಾ ॥ ೧೫೪೩ ॥

**ಅರ್ಥ–** ತೇ = ನಿನಗೆ, ಮೂಲಭಾಷ್ಯೇ = ಮೂಲವಾಗಿರುವ ಶಂಕರಭಾಷ್ಯದಲ್ಲಿ, ಹಿ = ಯಾವ ಕಾರಣದಿಂದ, ಪ್ರತ್ಯಕ್ಪರಾಗ್ಭಾವತಃ = ಅಸ್ಮದ್ಪದೋಕ್ತ ಪ್ರತ್ಯಗ್ಭಾವ, ಯುಷ್ಮದ್ಪದೋಕ್ತ ಪರಾಗ್ಭಾವವಿರುವುದರಿಂದ, ವಿಷಯಃ = ವಿಷಯತತ್ತ್ವವು, ವಿಷಯೀಃ = ಆತ್ಮತತ್ತ್ವವು, ನ= ಆಗುವುದಿಲ್ಲವೋ, ತರ್ಹಿ = ಈ ಕಾರಣದಿಂದ, ಪರಾಗ್ಪ್ರತ್ಯಗಭಿನ್ನತಾ = ಪರಾಕ್ಪ್ರತ್ಯಗ್ಭೂತ ಬಿಂಬ ಪ್ರತಿಬಿಂಬಗಳಿಗೆ, ಅಭೇದಃ ಕಥಂ = ಅಭೇದವು ಹೇಗೆ ಇರಲು ಸಾಧ್ಯವಾದೀತು?

**ಅನುವಾದ–** ಶಂಕರಭಾಷ್ಯದಲ್ಲಿ ಯುಷ್ಮತ್ ಶಬ್ದದಿಂದ ಪರಾಗ್ಭಾವವನ್ನೂ ಮತ್ತು ಅಸ್ಮತ್ ಶಬ್ದದಿಂದ ಪ್ರತ್ಯಗ್ಭಾವವನ್ನೂ ಹೇಳುತ್ತಾರೆ. ಆದ್ದರಿಂದ ತ್ವಾಮಹಂ ಜಾನಾಮಿ ಎಂಬ ಜ್ಞಾನದಲ್ಲಿ ಯುಷ್ಮತ್‌ಶಬ್ದಗೋಚರವಾದ ವಿಷಯತತ್ವ ಪರಾಗ್ಭಾವ (ಹೊರಗೆ) ವುಳ್ಳದ್ದಾಗಿದೆ. ಹಾಗೆಯೇ ಅಸ್ಮಚ್ಛಬ್ದಗೋಚರವಾದ ವಿಷಯಿಯಾದ ಆತ್ಮ-ತತ್ತ್ವವು ಪ್ರತ್ಯಗ್ಭಾವ (ಒಳಗೆ) ವುಳ್ಳದ್ದಾಗಿದೆ. ಹೀಗೆ ಪ್ರತ್ಯಗ್ಪರಾಗ್ಭಾವವುಳ್ಳದ್ದರಿಂದ ವಿಷಯಿ ವಿಷಯಗಳು ತಮಃಪ್ರಕಾಶದಂತೆ ಭಿನ್ನಗಳಾಗಿದೆ ಎಂದು ಮೂಲಭಾಷ್ಯ ದಲ್ಲಿ ಹೇಳಿದ್ದಾರೆ. ಆದ್ದರಿಂದ ದರ್ಪಣದ ಒಳಗೆ, ಹೊರಗೆ (ಪ್ರತ್ಯಕ್ ಪರಾಗ್) ಇರುವ ಪ್ರತಿಬಿಂಬ ಬಿಂಬಗಳಿಗೆ ಐಕ್ಯ ಇರಲು ಹೇಗೆ ಸಾಧ್ಯ?

**ಭಾವವಿಲಾಸಿನೀ–** ಬಿಂಬಪ್ರತಿಬಿಂಬಯೋರ್ಭೇದೇ ಪರಪ್ರಕ್ರಿಯಯೈವ ಯುಕ್ತಿಮಾಹ – **ಪ್ರತ್ಯಗಿತಿ** ॥ ತೇ ಮೂಲಭಾಷ್ಯೇ । ಯುಷ್ಮದಸ್ಮತ್‌ಪ್ರತ್ಯಯ ಗೋಚರಯೋರ್ವಿಷಯ

ವಿಷಯಿಣೋಸ್ತಮಃಪ್ರಕಾಶಯೋರಿವ ನೇತರೇತರಾಭಾವ ಇತಿ ಸಂಕರಭಾಷ್ಯೇ । ಪ್ರತ್ಯಕ್ ಪರಾಗ್ಭಾವತಃ ವಿಷಯಿಣಃ ಅಸ್ಮತ್ಪದೋಕ್ತಪ್ರತ್ಯಗ್ಭಾವಾತ್ । ವಿಷಯಸ್ಯ ಯುಷ್ಮತ್ಪದೋಕ್ತ ಪರಾಗ್ಭಾವಾದಿತ್ಯರ್ಥಃ । ಕಥಂ ಪ್ರತ್ಯಗ್ರೂಪತಮಾತ್ಮತತ್ವಂ ಪರಾಗ್ರೂಪಂ ವಿಷಯತತ್ವಂ ಸ್ಯಾದಿತಿ ತಟ್ಟೀಕಾಯಾಂ ವ್ಯಾಖ್ಯಾನಾತ್ ಯುಷ್ಮದಸ್ಮಚ್ಛಬ್ದೌ ಪರಾಕ್‌ಪ್ರತ್ಯಗ್ಭಾವಪರೌ । ಏವಂಚ ಪ್ರತ್ಯಕ್‌ಪರಾಗ್ಭಾವಾಖ್ಯಯುಕ್ತ್ಯಾ ವಿಷಯೋ ವಿಷಯೀನೇತಿ ಭವದ್ಭಾಷ್ಯ ಏವ ಸಾಧಿತತ್ವಾತ್ । ಪರಾಕ್ಪ್ರತ್ಯಗಭಿನ್ನತಾ ಪರಾಕ್ಪ್ರತ್ಯಗ್ರೂಪಬಿಂಬಪ್ರತಿಬಿಂಬಯೋರಭೇದಃ ಕಥಂ ಸ್ಯಾತ್ । ತತ್ರ ಭೇದಸಾಧಕಹೇತೋರತ್ರ ವ್ಯಭಿಚಾರಪ್ರಸಂಗಾನ್ನ ಕಥಂಚಿತ್ । ಅತೋ ಬಿಂಬ-ಪ್ರತಿಬಿಂಬಯೋರೈಕ್ಯಂ ವದನ್ ಪೂರ್ವೋತ್ತರವಿವೇಕಶೂನ್ಯ ಇತಿ ಭಾವಃ ॥ ೧೫೪೩ ॥

**ವಿವರಣೆ–** ಶ್ಲೋಕದಲ್ಲಿರುವ ಮೂಲಭಾಷ್ಯೇ ಎಂಬ ಶಬ್ದಕ್ಕೆ ಯುಷ್ಮದಸ್ಮತ್‌ಪ್ರತ್ಯಯ ಗೋಚರಯೋಃ ವಿಷಯವಿಷಯಿಣೋಸ್ತಮಃಪ್ರಕಾಶಯೋರಿವ ನೇತರೇತರಭಾವಃ ಎಂಬ ಶಂಕರಭಾಷ್ಯ ಎಂಬರ್ಥವನ್ನು ಸುರೋತ್ತಮತೀರ್ಥರು ಹೇಳುತ್ತಾರೆ. ಇದರರ್ಥ ಹೀಗಿದೆ-

ತ್ವಾಮಹಂ ಜಾನಾಮಿ ಎಂಬ ಪ್ರತೀತಿಯಲ್ಲಿ ಯುಷ್ಮತ್ಪ್ರತ್ಯಯವಿಷಯವಾದದ್ದು ಹೊರಗಿರುವ ವಿಷಯವು ಆಗಿದೆ. ಹಾಗೆಯೇ ಅಸ್ಮದ್‌ಶಬ್ದಕ್ಕೆ ವಿಷಯವು ಒಳಗಿರುವ ವಿಷಯಿಯಾದ ಆತ್ಮವು ಆಗಿದೆ. ಹೀಗೆ ವಿರುದ್ಧಧರ್ಮಗಳಿರುವುದರಿಂದ ವಿಷಯವಿಷ ಯಿಗಳಿಗೆ ಕತ್ತಲು ಮತ್ತು ಬೆಳಕಿನಂತೆ ಐಕ್ಯವು ಇರುವುದಿಲ್ಲ ಎಂದಾಗಿದೆ. ಇತರೇತರಭಾವ ಎಂದರೆ ಐಕ್ಯ ಎಂದು ಅರ್ಥ.

ಹೀಗೆ ಈ ಭಾಷ್ಯದಲ್ಲಿ ವಿಷಯವಿಷಯಿಗಳ ಭೇದಕ್ಕೆ ಹೇತುವಾಗಿ ಪ್ರತ್ಯಕ್ಪರಾಗ್ಭಾವವನ್ನು ಹೇಳಿದೆ. ಆದ್ದರಿಂದ ಪ್ರತ್ಯಕ್ಭಾವವಿರುವ ಬಿಂಬಪ್ರತಿಬಿಂಬಗಳಿಗೆ ಐಕ್ಯವನ್ನು ಹೇಳಿದರೆ ಪೂರ್ವೋತ್ತರಜ್ಞಾನವಿಲ್ಲದವನು ಪರನು ಆಗುವನು.

ಒಂದು ವೇಳೆ ಪ್ರತ್ಯಕ್‌ಪರಾಗ್ಭಾವವಿರುವ ಬಿಂಬಪ್ರತಿಬಿಂಬಗಳಿಗೆ ಭೇದವನ್ನು ಒಪ್ಪದಿದ್ದರೆ, ವಿಷಯವಿಷಯಿಣೌ ಭಿನ್ನೌ ಪರಾಗ್ಪ್ರತ್ಯಗ್ರೂಪತ್ವಾತ್ ಎಂಬ ನೀನು ಹೇಳಿದ ಅನುಮಾನಕ್ಕೆ ವ್ಯಭಿಚಾರವು ಬರುವುದು. ಹೀಗೆ ಬಿಂಬಪ್ರತಿಬಿಂಬಗಳ ಭೇದದಲ್ಲಿ ಪರಪ್ರಕ್ರಿಯಾಮೂಲವಾದ ಮತ್ತು ಶ್ರುತಿ ಮೂಲವಾದ ಎರಡು ಅನುಮಾನಗಳಾಯಿತೆಂದು ಹೇಳುತ್ತಾರೆ-

ಅತಃ ಪ್ರತ್ಯಕ್ಪರಾಗ್ಭಾವಾತ್ ಪ್ರತಿಬಿಂಬಸ್ತು ಬಿಂಬತಃ ।
ಭಿನ್ನೋ ವಿಸದೃಶತ್ವಾಚ್ಚ ಜ್ಞಾನಜ್ಞೇಯವದೇವ ಹಿ ॥ ೧೫೪೪ ॥

**ಅರ್ಥ–** ಅತಃ = ಹೀಗೆ, ಪ್ರತಿಬಿಂಬಸ್ತು = ಪ್ರತಿಬಿಂಬವಾದರೂ, ಬಿಂಬತಃ = ಬಿಂಬದ ದೆಸೆಯಿಂದ, ಪ್ರತ್ಯಕ್ಪರಾಗ್ಭಾವಾತ್ = ಪ್ರತ್ಯಗ್ಪರಾಗ್ಭಾವಹೇತ್ವವಿನಿಂದ, ವಿಸದೃಶತ್ವಾಚ್ಚ = ವೈಸಾದೃಶ್ಯ ಹೇತುವಿನಿಂದಲೂ, ಜ್ಞಾನಜ್ಞೇಯವತ್ = ವಿಷಯಿವಿಷಯಗಳಂತೆ, ಭಿನ್ನಃ = ಭೇದವುಳ್ಳದ್ದಾಗಿದೆ.

**ಅನುವಾದ–** ಆದ್ದರಿಂದ ಪ್ರತ್ಯಕ್ತ್ವರಾಗ್ಭಾವವು ಇರುವುದರಿಂದಲೂ ಮತ್ತು ವೈಸಾದೃಶ್ಯ ಇರುವುದರಿಂದಲೂ ಜ್ಞಾನ ಮತ್ತು ಜ್ಞೇಯಗಳಂತೆ ಬಿಂಬಪ್ರತಿಬಿಂಬಗಳು ಭಿನ್ನವಾಗಿಯೇ ಇವೆಯಷ್ಟೇ.

**ಭಾವವಿಲಾಸಿನೀ–** ಏವಂಚ ಬಿಂಬಪ್ರತಿಬಿಂಬಭೇದೇ ಪರಪ್ರಕ್ರಿಯಾಮೂಲಂ ಶ್ರುತಿಮೂಲಂ ಚೇತ್ಯನುಮಾನದ್ವಯಮಾಸೀದಿತ್ಯಾಹ – **ಅತ ಇತಿ** ॥ ಜ್ಞಾನಜ್ಞೇಯವತ್ ವಿಷಯ-ವಿಷಯಿವದಿತ್ಯರ್ಥಃ । ಪ್ರತ್ಯಕ್ಕ್ವರಾಗ್ಭಾವೇನ ವೈಸಾದೃಶ್ಯಸ್ಯಾಪಿ ತತ್ರೈವ ವಿದ್ಯಮಾನತ್ವಾತ್ ಹೇತುದ್ವಯಸ್ಯಾಪ್ಯೇಕ ಏವ ದೃಷ್ಟಾಂತಃ ॥ ೧೫೪೪ ॥

**ವಿವರಣೆ–** ಪ್ರತ್ಯಕ್ತ್ವರಾಗ್ಭಾವ ಮತ್ತು ವೈಸಾದೃಶ್ಯಹೇತುವಿನಿಂದ ಪ್ರತಿಬಿಂಬವು ಬಿಂಬದಿಂದ ಭಿನ್ನವಾಗಿದೆ. ಇದಕ್ಕೆ ವಿಷಯವಿಷಯಿಗಳು ದೃಷ್ಟಾಂತವಾಗಿದೆ. ಹೇಗೆಂದರೆ ವಿಷಯ ವಿಷಯಿಗಳಲ್ಲಿ ವೈಸಾದೃಶ್ಯವು ಸಿದ್ಧವಾಗಿದೆ, ಹಾಗೆಯೇ ಯುಷ್ಮದಸ್ಮತ್ಪದೋಕ್ತ ಪ್ರತ್ಯಕ್ತ್ವರಾಗ್ಭಾವವೂ ಸಿದ್ಧವಾಗಿದೆ. ಮತ್ತು ಜ್ಞಾನಜ್ಞೇಯಗಳೂ ಭಿನ್ನವಾಗಿವೆ.

ಅನುಮಾನಪ್ರಯೋಗ-

ಬಿಂಬಪ್ರತಿಬಿಂಬೌ ಭಿನ್ನೌ ಪರಾಗ್ಪ್ರತ್ಯಗ್ಭಾವಾತ್, ಜ್ಞಾನಜ್ಞೇಯವತ್ ।
ಬಿಂಬಪ್ರತಿಬಿಂಬೌ ಭಿನ್ನೌ ವೈಸಾದೃಶ್ಯಾತ್, ಜ್ಞಾನಜ್ಞೇಯವತ್ ।

ವಿಷಯವಿಷಯಿಗಳಲ್ಲಿ ಪರಾಕ್ಪ್ರತ್ಯಗ್ಭಾವವಿರುವುದರಿಂದಲೇ ವೈಸಾದೃಶ್ಯವೂ ಇದೆ. ಆದ್ದರಿಂದ ಎರಡು ಹೇತುಗಳಿಗೆ ಒಂದೇ ದೃಷ್ಟಾಂತವಾಗುತ್ತದೆ.

ಸತ್ಯಶ್ಚಾಯಮಬಾಧ್ಯತ್ವಾತ್ ಬ್ರಹ್ಮವತ್ ಪ್ರತಿಬಿಂಬಕಃ ।
ನ ಹಿ ಸಾದೃಶ್ಯಮಪ್ಯಸ್ಯ ಕಾರ್ತ್ಸ್ನ್ಯೇನೈಕ್ಯೇ ತು ಕಾ ಕಥಾ ॥ ೧೫೪೫ ॥

**ಅರ್ಥ–** ಅಯಂ = ಈ ಅನುಮಾನದಲ್ಲಿರುವ ಪ್ರತಿಬಿಂಬಃ = ಪ್ರತಿಬಿಂಬವು, ಬ್ರಹ್ಮವತ್= ಬ್ರಹ್ಮನಂತೆ, ಅಬಾಧ್ಯತ್ವಾತ್ = ಬಾಧವಿಲ್ಲದಿರುವುದರಿಂದ, ಸತ್ಯಶ್ಚ= ಸತ್ಯವೂ ಆಗಿದೆ. ಅಸ್ಯ= ಈ ಪ್ರತಿಬಿಂಬಕ್ಕೆ, ಕಾರ್ತ್ಸ್ನ್ಯೇನ = ಸಂಪೂರ್ಣವಾಗಿ, ಸಾದೃಶ್ಯಮಪಿ = ಬಿಂಬದ ಸಾದೃಶ್ಯವೂ ಕೂಡ, ನ ಹಿ = ಇರುವುದಿಲ್ಲ, ಐಕ್ಯೇ ತು = ಬಿಂಬಪ್ರತಿಬಿಂಬಗಳ ಅಭೇದವಿಷಯದಲ್ಲಾದರೂ, ಕಾ ಕಥಾ = ಇಲ್ಲವೆಂದು ಏನು ಹೇಳುವುದು?

**ಅನುವಾದ–** ಹಿಂದೆ ಹೇಳಿದ ಅನುಮಾನದಲ್ಲಿರುವ ಪ್ರತಿಬಿಂಬ ಸತ್ಯವೇ ಆಗಿದೆ. ಬ್ರಹ್ಮನಿಗೆ ಬಾಧ್ಯತ್ವವಿಲ್ಲದಿರುವುದರಿಂದ ಹೇಗೆ ಸತ್ಯನಾಗಿದ್ದಾನೋ ಹಾಗೆಯೇ ಪ್ರತಿ ಬಿಂಬಕ್ಕೂ ಬಾಧ್ಯತ್ವವಿಲ್ಲದಿರುವುದರಿಂದ ಸತ್ಯವೇ ಆಗಿದೆ. ಈ ಪ್ರತಿಬಿಂಬಕ್ಕೆ ಬಿಂಬದಿಂದ ಸಂಪೂರ್ಣವಾಗಿ ಸಾದೃಶ್ಯವೇ ಇಲ್ಲ. ಆದ್ದರಿಂದ ಐಕ್ಯವಿಲ್ಲವೆಂಬುದು ಕೈಮುತ್ಯನ್ಯಾಯ ಸಿದ್ಧವಾಗಿದೆ.

**ಭಾವವಿಲಾಸಿನೀ–** ಪ್ರಾಗುಕ್ತಭೇದಾನುಮಾನೇ ಪ್ರತಿಬಿಂಬಸ್ಯ ಮಿಥ್ಯಾತ್ವಮಪಿ ಯುಕ್ತಿ-ವಿರುದ್ಧಮಿತ್ಯಾಹ – **ಸತ್ಯಶ್ಚೇತಿ** ॥ ಅಯಂ ಪ್ರತಿಬಿಂಬಃ। ಅಬಾಧ್ಯತ್ವಾತ್ ನಾಯಂ ಪ್ರತಿಬಿಂಬ ಇತಿ ಬಾಧಾಭಾವಾತ್ । ನೇದಾನೀಂ ಪ್ರತಿಬಿಂಬ ಇತಿ ಪ್ರತ್ಯಯಸ್ತು ನೇದಾನೀಂ ಘಟ ಇತಿವತ್ಪ್ರಾಗಭಾವಸ್ಯ ನಾಶಸ್ಯ ವಾ ಸಾಧಕಃ ನತು ತ್ರೈಕಾಲಿಕನಿಷೇಧರೂಪಬಾಧಸ್ಯ। ಅನುಕೂಲ-ತರ್ಕಮಾಹ – **ನಹೀತಿ** ॥ ಅಸ್ಯ ಪ್ರತಿಬಿಂಬಸ್ಯ । ಕಾರ್ತ್ಸ್ನ್ಯೇನ ಸಾದೃಶ್ಯಮಪಿ ಹಿ ಯಸ್ಮಾನ್ನ। ತಸ್ಮಾದೈಕ್ಯೇ ಕಾ ಕಥೇತಿ ಯೋಜನಾ। ಅನೇನ ಯದಿ ಬಿಂಬಪ್ರತಿಬಿಂಬಯೋರೈಕ್ಯಂ ಸ್ಯಾತ್ತರ್ಹಿ ವೈಸಾದೃಶ್ಯಮೇವ ನ ಸ್ಯಾದಿತಿ ತರ್ಕಃ ಸೂಚಿತೋ ಭವತಿ ॥ ೧೫೪೫ ॥

**ವಿವರಣೆ–** ಪ್ರತಿಬಿಂಬಕ್ಕೆ ನಾಯಂ ಪ್ರತಿಬಿಂಬಃ ಎಂಬ ಬಾಧಕವಿಲ್ಲದಿದ್ದರೂ ನೇದಾನೀಂ ಪ್ರತಿಬಿಂಬಃ ಎಂಬ ಬಾಧಕವು ಉಪಾಧಿಗಳಾದ ದರ್ಪಣಾದಿಗಳ ಸಾಮೀಪ್ಯವಿಲ್ಲದಿರುವಾಗ ಇದೆ. ಆದ್ದರಿಂದ ಪ್ರತಿಬಿಂಬವು ಹೇಗೆ ಸತ್ಯ? ಎಂಬ ಪ್ರಶ್ನೆಗೆ, ನೇದಾನೀಂ ಘಟಃ ಎಂಬ ಪ್ರತ್ಯಯವು ಹೇಗೆ ಘಟಪ್ರಾಗಭಾವ ಅಥವಾ ನಾಶಕ್ಕೆ ಸಾಧಕವಾಗಿದೆಯೋ ಹಾಗೆಯೇ ಪ್ರತಿ ಬಿಂಬ ಪ್ರಾಗಭಾವಕ್ಕೆ ಅಥವಾ ನಾಶಕ್ಕೆ ಸಾಧಕವಾಗಿದೆಯೇ ಹೊರತು, ತ್ರೈಕಾಲಿಕ ನಿಷೇಧ ರೂಪಬಾಧಕ್ಕೆ ಸಾಧಕವಲ್ಲ ಎಂದು ಉತ್ತರ.

ಹಾಗೆಯೇ ಉತ್ತರಾರ್ಧದಲ್ಲಿ ಬಿಂಬಪ್ರತಿಬಿಂಬಗಳ ಭೇದಸಾಧಕ ಅನುಮಾನಕ್ಕೆ ಅನು ಕೂಲತರ್ಕವನ್ನು ಸೂಚಿಸುತ್ತಾರೆ. ಬಿಂಬಪ್ರತಬಿಂಬೌ ಭಿನ್ನೌ ವೈಸಾದೃಶ್ಯಾತ್ ಎಂಬ ಅನುಮಾನದಲ್ಲಿ ಅಪ್ರಯೋಜಕತ್ವ ಶಂಕೆ ಬರಬಹುದು. ಆಗ ಯದಿ ಬಿಂಬಪ್ರತಿ ಬಿಂಬಯೋಃ ಐಕ್ಯಂ ಸ್ಯಾತ್ ತರ್ಹಿ ವೈಸಾದೃಶ್ಯಮೇವ ನ ಸ್ಯಾತ್. ಏಕೆಂದರೆ ಭೇದವಿದ್ದಲ್ಲಿ ಮಾತ್ರ ವೈಸಾದೃಶ್ಯವಿರುತ್ತದೆ. ಹೀಗೆ ಅನುಕೂಲತರ್ಕ ಸೂಚಿತವಾಗಿತ್ತವೆ.

ಕಿಂ ವಿಮರ್ದೋ ಮೃಗಮದೇ ದರ್ಪಣಪ್ರತಿಬಿಂಬಿತೇ ॥ ೧೫೪೬ ॥

ಪರಿಮಾಣಸ್ಪರ್ಶಗಂಧಗುರುತ್ವೈಕತ್ವತೋಽನ್ಯತಾ ।
ವ್ಯೋಮಾಗ್ನಿ ಪುಷ್ಪಗಿರ್ಯರ್ಕೇಷ್ವಸ್ತ್ಯೇವ ಪ್ರತಿರೂಪತಃ ॥ ೧೫೪೭ ॥

**ಅರ್ಥ–** ದರ್ಪಣಪ್ರತಿಬಿಂಬಿತೇ = ಕನ್ನಡಿಯಲ್ಲಿ ಪ್ರತಿಬಿಂಬಿತವಾದ, ಮೃಗಮದೇ = ಕಸ್ತೂರಿಮೃಗದ ಕಸ್ತೂರಿಯಲ್ಲಿ, ವಿಮರ್ದಃ = ಪರಿಮಳವು, ಕಿಂ ಅಸ್ತಿ= ಇದೆಯೇನು? ಇರುವುದಿಲ್ಲ. ವ್ಯೋಮಾಗ್ನಿಪುಷ್ಪಗಿರ್ಯರ್ಕೇಷು = ಆಕಾಶ, ಬೆಂಕಿ, ಪುಷ್ಪ ಬೆಟ್ಟ ಸೂರ್ಯರಲ್ಲಿ, ಪರಿಮಾಣಸ್ಪರ್ಶಗಂಧಗುರುತ್ವೈಕತ್ವತಃ = ಮಹತ್ಪರಿಮಾಣ, ಉಷ್ಣಸ್ಪರ್ಶ, ಪರಿಮಳ, ಭಾರ ಮತ್ತು ಏಕತ್ವ ಗುಣಗಳ ದೆಸೆಯಿಂದ, ಪ್ರತಿರೂಪತಃ = ಅವುಗಳ ಪ್ರತಿಬಿಂಬಗಳಿಂದ, ಅನ್ಯತಾ = ಭೇದವು, ಅಸ್ತ್ಯೇವ = ಇದ್ದೇ ಇದೆ.

**ಅನುವಾದ–** ಕಸ್ತೂರಿಮೃಗದ ಮದರಸದಲ್ಲಿ ಪರಿಮಳ ಇದೆ. ಆದರೆ ಕನ್ನಡಿಯಲ್ಲಿರುವ ಅವರ ಪ್ರತಿಬಿಂಬದಲ್ಲಿ ಪರಿಮಳವು ಇರುವುದಿಲ್ಲ. ಹಾಗೆಯೇ ಪರಮ ಮಹತ್-

ಪರಿಮಾಣವು ಆಕಾಶದಲ್ಲಿದೆ. ಆದರೆ ಪ್ರತಿಬಿಂಬದಲ್ಲಿ ಇರುವುದಿಲ್ಲ. ಬೆಂಕಿಯಲ್ಲಿ ಉಷ್ಣಸ್ಪರ್ಶವಿದೆ. ಬೆಂಕಿಯ ಪ್ರತಿಬಂಬದಲ್ಲಿ ಇರುವುದಿಲ್ಲ. ಪುಷ್ಪದಲ್ಲಿ ಸುವಾಸನೆಯು ಇದೆ. ಹೂವಿನ ಪ್ರತಿಬಿಂಬದಲ್ಲಿ ಇರುವುದಿಲ್ಲ. ಬೆಟ್ಟಗಳು ಭಾರವಾಗಿರುತ್ತದೆ. ಆದರೆ ಅವುಗಳ ಪ್ರತಿಬಿಂಬಗಳಿಗೆ ಭಾರವಿರುವುದಿಲ್ಲ. ಸೂರ್ಯನು ಒಬ್ಬನೇ ಇರುತ್ತಾನೆ. ಆದರೆ ಸೂರ್ಯನ ಪ್ರತಿಬಿಂಬಗಳು ಬಹುಸರೋವರಾದಿಗಳಲ್ಲಿ ಬಹಳವಾಗಿರುತ್ತವೆ. ಈ ರೀತಿಯಾಗಿ ಸೂರ್ಯಾದಿಬಿಂಬಗಳಲ್ಲಿ ಅವುಗಳ ಪ್ರತಿಬಿಂಬಗಳಿಂದ ವಿರುದ್ಧಧರ್ಮಗಳಿರುವುದರಿಂದಅವು ಭಿನ್ನವಾಗಿವೆ.

**ಭಾವವಿಲಾಸಿನೀ–** ವೈಸಾದೃಶ್ಯಮೇವ ವಿಸ್ತರೇಣ ದರ್ಶಯತಿ ॥ ಕಿಂ ವಿಮರ್ದ ಇತಿ ॥ ವಿಮರ್ದಃ ಪರಿಮಲಃ ॥ ೧೫೪೬ ॥

**ವಿವರಣೆ–** ಬಿಂಬದಿಂದ ಪ್ರತಿಬಿಂಬದಲ್ಲಿ ಭೇದವನ್ನು ಸಾಧಿಸಲು ಅನೇಕ ಅನುಮಾನಗಳು ಇಲ್ಲಿ ಹೇಳಿದಂತಾಗುತ್ತದೆ.

1. ವ್ಯೋಮ ದರ್ಪಣಪ್ರತಿಬಿಂಬಿತವ್ಯೋಮ್ನಃ ಅತ್ಯಂತಭಿನ್ನಃ ತತೋ ವಿಸದೃಶ ಪರಿಮಾಣತ್ವಾತ್.
2. ಅಗ್ನಿಃ ದರ್ಪಣಪ್ರತಿಬಿಂಬಿತಾಗ್ನೇಃ ಅತ್ಯಂತಭಿನ್ನಃ ತತೋ ವಿಸದೃಶೋಷ್ಣ ಸ್ಪರ್ಶವತ್ವಾತ್.
3. ಪುಷ್ಪಂ ದರ್ಪಣಪ್ರತಿಬಿಂಬಪುಷ್ಪಾತ್ ಅತ್ಯಂತಭಿನ್ನಃ ತತೋ ವಿಸದೃಶಗಂಧವತ್ವಾತ್.
4. ಗಿರಿಃ ದರ್ಪಣಪ್ರತಿಬಿಂಬಿತಗಿರೇಃ ಅತ್ಯಂತಭಿನ್ನಃ ತತೋ ವಿಸದೃಶಭಾರವತ್ವ್ಯಾತ್.
5. ಸೂರ್ಯಃ ಬಹುತಟಾಕಪ್ರತಿಬಿಂಬಿತಸೂರ್ಯೇಭ್ಯಃ ಭಿನ್ನಃ ತದ್ವಿಸದೃಶೈಕತ್ವ ಸಂಖ್ಯಾವತ್ವಾತ್.
6. ಬಿಂಬಃ ಜೀವವಿಸದೃಶಃ ಪರಮೈಶ್ವರ್ಯವಾಚಕ ಇಂದ್ರಶಬ್ದೇನೋಕ್ತತ್ವಾತ್.

ಹಾಗಾದರೆ ಬಿಂಬಪ್ರತಿಬಿಂಬಗಳಿಗೆ ಸಾದೃಶ್ಯವು ಯಾವಧರ್ಮದಿಂದ ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ ಮತ್ತು ಪರನಿಗೆ ಬಿಂಬಪ್ರತಿಬಿಂಬಗಳ ವೈಸಾದೃಶ್ಯವನ್ನು ಅನುಭವಾರೂಢಮಾಡಿಸಿ ಅಪಹಾಸ ಮಾಡುತ್ತಾರೆ-

ರೂಪಮಾತ್ರೇಣ ಸಾದೃಶ್ಯಂ ವೈಸಾದೃಶ್ಯಂ ತ್ವನೇಕಧಾ ।<br>
ಕಿಂತೇ ವಾರ್ಯಂತರಸ್ಥಾಭ್ರಸ್ತನಿತೈರ್ವನಿತಾ ಹತಾಃ ॥ ೧೫೪೭ ॥

**ಅರ್ಥ–** ಸಾದೃಶ್ಯಂ = ಬಿಂಬಪ್ರತಿಬಿಂಬಗಳಿಗೆ, ಸಾದೃಶ್ಯಂ = ಹೋಲಿಕೆಯು, ರೂಪ ಮಾತ್ರೇಣ= ಕೇವಲ ಆಕಾರದಿಂದ, ವೈಸಾದೃಶ್ಯರಿ ತು = ವಿಸದೃಶತ್ವವಾದರೋ, ಅನೇಕಧಾ =

ಬಹುಪ್ರಕಾರವಾಗಿ ಇದೆ. ವಾರ್ಯಂತಸ್ಥಾಬ್ದಸ್ತನಿತೈಃ = ನೀರೊಳಗಿನ ಪ್ರತಿಬಿಂಬಗಳಾದ ಮೋಡಗಳ ಗುಡುಗಿನಿಂದ,ತೇ = ನಿನ್ನ ವನಿತಾಹತಾಃ ಕಿಂ = ವನಿತೆಯರು ಹತರಾದರೇನು?

**ಅನುವಾದ–**ಬಿಂಬಪ್ರತಿಬಿಂಬಗಳಿಗೆ ಕೇವಲ ಆಕಾರದಿಂದ ಸಾದೃಶ್ಯವಿದೆ. ವೈಸಾದೃಶ್ಯವು ಅನೇಕರೀತಿಯಿಂದ ಇದೆ. ಮೋಡಗಳ ಪ್ರತಿಬಿಂಬಗಳು ನೀರಿನಲ್ಲಿ ಬೀಳುತ್ತವೆ. ಬಿಂಬಗಳಾದ ಮೋಡಗಳ ಘರ್ಷಣೆಯಿಂದ ಸಿಡಿಲು ಬರುತ್ತದೆ. ಆ ಸಿಡಿಲಿನ ಶಬ್ದದಿಂದ ಅಬಲೆಯರು ಬೆಚ್ಚಿ ಬೀಳುತ್ತಾರೆ. ಆದರೆ ನೀರಿನಲ್ಲಿರುವ ಪ್ರತಿಬಿಂಬಗಳಾದ ಮೋಡಗಳ ಘರ್ಷಣೆಯಿಂದ ಗುಡುಗಿನ ಶಬ್ದವು ಬರುವುದಿಲ್ಲ. ಈ ರೀತಿಯಾಗಿ ಬಿಂಬಪ್ರತಿಬಿಂಬಗಳಿಗೆ ವೈಸಾದೃಶ್ಯವಿದೆ. ಈ ವೈಸಾದೃಶ್ಯವನ್ನು ನೀರೊಳಗಿನ ಮೋಡಗಳ ಗುಡುಗಿನಿಂದ ನಿನ್ನ ವನಿತೆಯರು ಹತರಾದರೇನು? ಎಂದು ಪರಿಹಾಸಪೂರ್ವಕವಾಗಿ ಅನುಭವಾರೂಢವನ್ನಾಗಿ ಮಾಡುತ್ತಾರೆ.

**ಭಾವವಿಲಾಸಿನೀ–** ಪರಿಮಾಣಸ್ಪರ್ಶಗಂಧಗುರುತ್ವೈಕತ್ವತ ಇತಿ ಪಂಚಮೀ, ಬಹುವಚನಾಂ ತಾತ್ತಸಿಲ್ । ಪರಿಮಾಣಾತ್ ಪರಮಮಹತ್ಪರಿಮಾಣಾತ್ ವ್ಯೋಮ್ನಿ ತದ್ರಹಿತಸ್ವಪ್ರತಿ-ಬಿಂಬಾದನ್ಯತಾ । ಏವಂ ಸ್ಪರ್ಶಾದುಷ್ಣಸ್ಪರ್ಶಾತ್ ಅಗ್ನೌ ಗಂಧಾತ್‌ಪುಷ್ಪೇ । ಗುರುತ್ವಾದ್ ಭಾರಾದ್ ಗಿರೌ । ಏಕತ್ವಾದರ್ಕೇ । ಬಹುತಟಾಕಜಲಾದಿಷು ಶತಶಃ ಪ್ರತಿಬಿಂಬನೇಽಪಿ ಬಿಂಬಸ್ಯಾರ್ಕಸ್ಯೈಕತ್ವಾತ್ । ಏತೈಃ ಪಂಚಭಿಃ ಪ್ರತಿಬಿಂಬವಿರುದ್ಧಗುಣೈಃ ಬಿಂಬಭೂತ-ವ್ಯೋಮಾದಿಷು ಸ್ವಸ್ವ ಪ್ರತಿಬಿಂಬೇಭ್ಯಃ ಅನ್ಯತೇತ್ಯರ್ಥಃ । ವ್ಯೋಮದರ್ಪಣಾಪ್ರತಿಬಿಂಬಿತ-ವ್ಯೋಮ್ನೋಽತ್ಯಂತಭಿನ್ನಮ್ । ತತೋ ವಿಸದೃಶತ್ವಾತ್ ಘಟವತ್ ಇತ್ಯಾದ್ಯನುಮಾನ-ಪಂಚಕಮನೇನೋಕ್ತಂ ಭವತಿ ॥ ೧೫೪೭ ॥

**ಭಾವವಿಲಾಸಿನೀ–** ತರ್ಹಿ ಸಾದೃಶ್ಯಂ ಕೇನೇತ್ಯತ ಆಹ – **ರೂಪಮಾತ್ರೇಣೇತಿ** ॥ ಆಕಾರಮಾತ್ರೇಣೇತ್ಯರ್ಥಃ । ಪರಂ ಪರಿಹಸನ್ನೇವ ಪುನರಪಿ ಬಿಂಬಪ್ರತಿಬಿಂಬಯೋರ್ವೈ-ಸಾದೃಶ್ಯಮನುಭಾವಯತಿ ॥ **ಕಿಂತ ಇತಿ**॥ ಅಬ್ದೋ ಮೇಘಃ ತಸ್ಯ ಸ್ತನಿತೈರ್ನಿರ್ಘೋಷೈಃ । ಬಿಂಬಭೂತಮೇಘವತ್ ಪ್ರತಿಬಿಂಬಿತಮೇಘಸ್ಯ ನಿರ್ಘೋಷಾಭಾವಾದ್ವೈಸಾದೃಶ್ಯಮಿತಿ ಭಾವಃ ॥ ೧೫೪೮ ॥

**ವಿವರಣೆ–** ಶ್ಲೋಕದಲ್ಲಿ ರೂಪಶಬ್ದಕ್ಕೆ ಆಕಾರವೆಂದರ್ಥ. ಬಿಂಬಪ್ರತಿಬಿಂಬಗಳ ಆಕಾರಗಳಲ್ಲಿ ಸಮಾನತೆ ಇರುತ್ತದೆ. ಬಿಂಬಪ್ರತಿಬಿಂಬಗಳಲ್ಲಿ ಪ್ರತ್ಯಕ್ಷದ್ರಾಕ್ಷ್ಯಾದಿವೈಸಾದೃಶ್ಯವು ಅನೇಕ ರೀತಿಯಲ್ಲಿ ಇರುತ್ತದೆ.

**ಕಿಂಚಿದ್ವೈಸಾದೃಶ್ಯತೋ ಹಿ ನ ಗೌರ್ಗವಯತಾಮಿಯಾತ್ ।**
**ವೈಸಾದೃಶ್ಯೇ ತ್ವನೇಕಸ್ಮಿನ್ ದೃಶ್ಯೇ ಪಶ್ಯೈಕತಾ ಕುತಃ ॥ ೧೫೪೯ ॥**

**ಅರ್ಥ–** ಹಿ = ಯಾವ ಕಾರಣದಿಂದ, ಗೌಃ = ಗೋವು, ಕಿಂಚಿತ್ = ಅಲ್ಪವಾದ, ವೈಸಾದೃಶ್ಯತಃ = ವಿಸದೃಶತೆಯಿಂದ, ಗವಯತಾಂ = ಗವಯಸ್ವರೂಪವನ್ನು ನ ಇಯಾತ್ =

ಹೊಂದುವುದಿಲ್ಲ, ಅನೇಕಸ್ಮಿನ್ = ಬಹಳವಾದ, ವೈಸಾದೃಶ್ಯೇ = ವಿಸದೃಶತೆಯು, ದೃಶ್ಯೇ ಸತಿ = ಕಾಣುತ್ತಿರಲು, ಸಶ್ಯೈಕತಾ = ಜೀವಾಭೇದವು ಕುತಃ = ಯಾವಕಾರಣದಿಂದ ಬರುತ್ತದೆಂದು, ಪಶ್ಯ = ನೋಡು.

**ಅನುವಾದ–** ಗೋವು ಮತ್ತು ಗವಯಕ್ಕೆ ಅಲ್ಪವೇ ವೈಸಾದೃಶ್ಯವಿದೆ. ಬಹುವಾಗಿ ಹೋಲಿಕೆ ಇದೆ. ಹೀಗಿದ್ದರೂ ಗೋವು ಗವಯವಾಗುವುದಿಲ್ಲ ಎಂದಾದ ಮೇಲೆ ಬಹಳವಾಗಿ ವೈಸಾದೃಶ್ಯವುಳ್ಳ ಬಿಂಬಪ್ರತಿಬಿಂಬಗಳಿಗೆ ಅಭೇದವು ಹೇಗೆ ತಾನೆ ಇರುತ್ತದೆ?

**ಭಾವವಿಲಾಸಿನೀ–** ಅಸ್ತು ವೈಸಾದೃಶ್ಯಂ ತಥಾಪಿ ಭೇದೋ ಮಾಸ್ತ್ವಿತಿ ವದತಃ ಪ್ರತಿಕೂಲ-ತರ್ಕಮಾಹ – **ಕಿಂಚಿದಿತಿ** ॥ ಅನೇಕಸ್ಮಿನ್ವೈಸಾದೃಶ್ಯೇ ಸತೀತಿ ಸಂಬಂಧಃ । ಯದಿ ವೈಸಾದೃಶ್ಯೇಽ-ಪ್ಯೇಕತಾ ಸ್ಯಾತ್ ತರ್ಹಿ ಗೋಗವಯಯೋರಪ್ಯೇಕತಾ ಸ್ಯಾದಿತಿ ತರ್ಕಮನೇನೋತ್ಥಾಪಯತಿ ॥ ೧೫೪೯ ॥

**ವಿವರಣೆ–** ಹಸುವಿಗೂ ಗವಯಕ್ಕೂ ಬಹುವಾಗಿ ಸಾದೃಶ್ಯವಿದೆ. ಅಲ್ಪ ವೈಸಾದೃಸ್ಯವಿದೆ. ಬಿಂಬಪ್ರತಿಬಿಂಬಗಳಿಗೆ ಬಹಳ ವೈಸಾದೃಶ್ಯವಿದೆ. ಅಲ್ಪವಾದ ಸಾದೃಶ್ಯವಿದೆ. ಆದರೂ ಭೇದವಿದೆ. ಅದರಂತೆ ಜೀವಬ್ರಹ್ಮರಿಗೂ ಭೇದವೇ ಇದೆ. ಪ್ರತಿಕೂಲತರ್ಕಸ್ವರೂಪ ಹೀಗಿದೆ- ಯದಿ ವೈಸಾದೃಶ್ಯೇ ಅಪಿ ಐಕ್ಯಂ ಸ್ಯಾತ್, ತರ್ಹಿ ಗೋಗವಯೋರಪಿ ಐಕ್ಯಂ ಸ್ಯಾತ್.

ಮುಖದ ಪ್ರತಿಬಿಂಬದಲ್ಲಿ ಇದಂ ಮುಖಂ ಎಂಬ ವ್ಯವಹಾರವು ಇರುವುದರಿಂದ ಮುಖ ಪ್ರತಿಮುಖಗಳಿಗೆ ಐಕ್ಯವೆಂಬ ಶಂಕೆಗೆ ಉತ್ತರಿಸುತ್ತಾರೆ-

ವೃತ್ತಿವೈಚಿತ್ರ್ಯತಃ ಶಬ್ದಮಾತ್ರೇಣೈಕ್ಯಂ ವಿರುದ್ಧಯೋಃ ।
ಕಿಂ ಗಂಗಾಪದಸಂಗೇಽಪಿ ತೀರಸ್ಯ ಸ್ಯಾತ್ ಪ್ರವಾಹಿತಾ ॥ ೧೫೫೦ ॥

**ಅರ್ಥ–** ವಿರುದ್ಧಯೋಃ = ವಿರುದ್ಧಗಳಾದ ಮುಖಪ್ರತಿಮುಖಗಳಿಗೆ, ವೃತ್ತಿವೈಚಿತ್ರ್ಯತಃ = ಮುಖ್ಯ, ಗೌಣೀ, ಲಕ್ಷಣಾ ಶಬ್ದವೃತ್ತಿಗಳ ವೈಚಿತ್ರ್ಯದಿಂದ, ಶಬ್ದಮಾತ್ರೇಣ = ಕೇವಲ ಶಬ್ದದಿಂದ, ಐಕ್ಯಂ = ಅಭೇದವು ಇರುತ್ತದೆ, ತೀರಸ್ಯ = ಗಂಗಾತೀರಕ್ಕೆ, ಗಂಗಾಪದಸಂಗೇ ಅಪಿ = ಗಂಗಾಪದದ ಪ್ರಯೋಗವಿದ್ದರೂ, ಪ್ರವಾಹಿತಾ = ನದೀತ್ವವು, ಸ್ಯಾತ್ ಕಿಂ = ಆಗುವುದೇನು? (ಆಗುವುದೇ ಇಲ್ಲ)

**ಅನುವಾದ–** ವಿರುದ್ಧಗಳಾದ ಎರಡು ವಸ್ತುಗಳಿಗೆ ಶಕ್ತಿಲಕ್ಷಣಾದಿಬೇರೆ ಬೇರೆ ವೃತ್ತಿಗಳಿಂದ ಒಂದೇ ಶಬ್ದದ ಪ್ರಯೋಗವಿದ್ದರೂ, ಅವುಗಳಿಗೆ ಅಭೇದವು ಕೂಡುವುದಿಲ್ಲ. ಅದು ಹೇಗೆಂದರೆ, ಗಂಗಾಯಾಂ ಘೋಷಃ ಎಂಬಲ್ಲಿ ತೀರದಲ್ಲಿ ಲಕ್ಷಣಾವೃತ್ತಿಯಿಂದ ಗಂಗಾಪದಪ್ರಯೋಗವಿದೆ. ಆದರೆ ಗಂಗಾಯಾಂ ಮತ್ಸ್ಯಃ ಎಂಬಲ್ಲಿ ಗಂಗಾ

ಪ್ರವಾಹದಲ್ಲಿ ಶಕ್ತಿವೃತ್ತಿಯಿಂದ ಗಂಗಾಪದದ ಪ್ರಯೋಗವಿದೆ. ಹೀಗಿದ್ದರೂ ತೀರ ಮತ್ತು ಪ್ರವಾಹಗಳಿಗೆ ಐಕ್ಯವಿರುವುದಿಲ್ಲ.

**ಭಾವವಿಲಾಸಿನೀ–** ನನ್ವಿದಂ ಮುಖಮಿತಿ ಪ್ರತಿಬಿಂಬೇಽಪಿ ಮುಖಶಬ್ದಪ್ರಯೋಗಾನ್ಮುಖ ಪ್ರತಿಮುಖಯೋರೈಕ್ಯಮಿತಿ ಶಂಕಾಂ ಪರಿಹರತಿ – **ವೃತ್ತೀತಿ ॥ ವೈಚಿತ್ರ್ಯತಃ** ಮುಖ್ಯಗೌಣೀ-ಲಕ್ಷಣಾದಿವೈಚಿತ್ರ್ಯಾತ್ । ಯಥಾತೀರೇ ಗಂಗಾಪದಪ್ರಯೋಗೇಪಿ ನ ಗಂಗೈಕ್ಯಮ್ । ತಥಾತ್ರಾಪಿ ಮುಖಸಾದೃಶ್ಯಾನ್ಮುಖಪದಪ್ರಯೋಗೇಪಿ ನ ಮುಖೈಕ್ಯಮ್ । ತೀರೇ ಗಂಗಾಪದ-ಪ್ರಯೋಗವತ್ ಐಕ್ಯಾಭಾವೇಪಿ ಪದಪ್ರಯೋಗಮಾತ್ರಸ್ಯ ವೃತ್ತ್ಯಂತರೇಣಾಪಿ ಸಂಭವಾತ್। ಅತ ಏವ ಪ್ರತಿಮಾನಂ ಪ್ರತಿರೂಪಂ ಪ್ರತಿಬಿಂಬಂ ಚ ಪ್ರತಿಮುಖಂ ಪ್ರತಿಚ್ಛಾಯೇತ್ಯಾದೌ ಪ್ರತಿಮುಖಂ ಪ್ರತಿರೂಪಂ ಪ್ರತಿಬಿಂಬಮಿತ್ಯೇವ ತೇಷಾಮನುಶಾಸನಮ್ । ಮುಖಪದಸ್ಯಾಪಿ ಮುಖ್ಯತಸ್ತದ್ವಾಚಕತ್ವೇ ತಸ್ಯಾಪಿ ತತ್ರಾನುಶಾಸನಂ ಸ್ಯಾದಿತಿ ಭಾವಃ ॥ ೧೫೪೮ ॥

**ವಿವರಣೆ–** ಘಟ, ಕಲಶ ಶಬ್ದಗಳು ವಾಚ್ಯವೃತ್ತಿಯಿಂದಲೇ ಮಡಕೆಯನ್ನು ಹೇಳುತ್ತವೆ. ಆದ್ದರಿಂದ ಆ ಎರಡೂ ಶಬ್ದಗಳಿಂದ ಪ್ರತಿಪಾದ್ಯವಸ್ತುಗಳು ಅಭಿನ್ನಗಳಾಗಿವೆ. ಆದರೆ ಒಂದೇ ಶಬ್ದವು ಶಕ್ತಿ ಲಕ್ಷಣಾ, ಗೌಣೀ, ಉಪಚಾರ ವೃತ್ತಿಗಳಿಂದ ಬೇರೆ ಬೇರೆ ವಸ್ತುಗಳನ್ನೇ ಹೇಳುತ್ತದೆ. ಇದಕ್ಕೆ ಗಂಗಾಪದದಿಂದ ವೃತ್ತಿಭೇದದಿಂದ ಪ್ರತಿಪಾದ್ಯಗಳಾದ ಭಿನ್ನಗಳಾದತೀರ ಪ್ರವಾಹಗಳೇ ದೃಷ್ಟಾಂತ.

ಆದ್ದರಿಂದಲೇ ಮುಖಶಬ್ದಪರ್ಯಾಯವನ್ನಾಗಿ ಪ್ರತಿಮುಖ, ಪ್ರತಿರೂಪ, ಪ್ರತಿಬಿಂಬ, ಪ್ರತಿಚ್ಛಾಯಾ ಶಬ್ದಗಳನ್ನು ಅನುಶಾಸನಮಾಡಿದ್ದಾರೆ. ಮುಖಶಬ್ದಕ್ಕೆ ಮುಖ್ಯವಾಗಿ ಪ್ರತಿ ಮುಖಶಬ್ದವಾಚ್ಯತ್ವ ಇದ್ದಿದ್ದರೆ ಮುಖಶಬ್ದವನ್ನೂ ಅನುಶಾಸನಮಾಡುತ್ತಿದ್ದರು.

ಯುಕ್ತಿ - ಮುಖಪ್ರತಿಮುಖೇ ಅಭಿನ್ನೇ ನ ಭವತಃ ವೃತ್ತಿವೈಚಿತ್ರ್ಯೇಣ ಏಕಶಬ್ದಪ್ರತಿ ಪಾದ್ಯತ್ವಾತ್. ಗಂಗಾಪದಪ್ರತಿಪಾದ್ಯತೀರಪ್ರವಾಹವತ್.

**ದ್ವಾವಿಮಾವತಿ ವಿಸ್ಪಷ್ಟದೃಷ್ಟೇರಪಿ ತಯೋರ್ಭಿದಾ ।**
**ದ್ವಾವಿಮಾವಿತಿ ಪಾರ್ಶ್ವಸ್ಥೋ ಯತಃ ಪಶ್ಯತಿ ತೌ ಸದಾ ॥ ೧೫೫೧ ॥**

**ಅರ್ಥ–** ಯತಃ = ಯಾವ ಕಾರಣದಿಂದ, ಪಾರ್ಶ್ವಸ್ಥಃ = ಸಮೀಪದಲ್ಲಿರುವ ವ್ಯಕ್ತಿಯು, ತೌ = ಆ ಬಿಂಬಪ್ರತಿಬಿಂಬಗಳಲ್ಲಿ, ಇಮೌ ದ್ವೌ = ಇವು ಎರಡು, ಇತಿ = ಎಂದು, ಸದಾ= ಯಾವಾಗಲೂ, ಪಶ್ಯತಿ = ನೋಡುತ್ತಾನೋ, ಅತಃ = ಆ ಕಾರಣದಿಂದ, ತಯೋಃ = ಆ ಬಿಂಬಪ್ರತಿಬಿಂಬಗಳಿಗೆ, ವಿಸ್ಪಷ್ಟದೃಷ್ಟೇರಪಿ = ಸ್ಪಷ್ಟವಾಗಿ ಕಾಣುವುದರಿಂದಲೂ, ಭಿದಾ = ಭೇದವು, ಅಸ್ತಿ = ಇದೆ.

**ಅನುವಾದ–** ಬಿಂಬ ಪ್ರತಿಬಿಂಬಗಳ ಭೇದದಲ್ಲಿ ಪ್ರತ್ಯಕ್ಷಪ್ರಮಾಣವೂ ಇದೆ. ಏಕೆಂದರೆ ಹತ್ತಿರದ ವ್ಯಕ್ತಿಯು ಬಿಂಬಪ್ರತಿಬಿಂಬಗಳನ್ನು ಕಾಣುತ್ತಾನೆ. ಆಗ ಅವನಿಗೆ ದ್ವಾವಿಮೌ ಎಂಬುದಾಗಿ ಭೇದಪ್ರತ್ಯಕ್ಷವೇ ಬರುತ್ತದೆ. ಹೊರತಾಗಿ ಏಕ ಏವ ಎಂದು

ಅಭೇದವು ಕಾಣುವುದಿಲ್ಲ. ಈ ಪಾರ್ಶ್ವಸ್ಥನ ಪ್ರತ್ಯಕ್ಷದಿಂದಲೂ ಭೇದವೇ ಸಿದ್ಧಿಸುವುದು.

**ವಿವರಣೆ–** ಈ ಶ್ಲೋಕದಲ್ಲಿ ಬಿಂಬಪ್ರತಿಬಿಂಬಭೇದದಲ್ಲಿ ಪ್ರತ್ಯಕ್ಷವೂ ಪ್ರಮಾಣವಾಗಿದೆ ಎಂದು ಸಮರ್ಥಿಸುತ್ತಾರೆ.

ತನಗೆ ತನ್ನ ಮುಖವು ಕಾಣಿಸುವುದಿಲ್ಲ, ಆದ್ದರಿಂದ ರಾಜರು ಪಾರ್ಶ್ವಸ್ಥಃ ಎಂಬ ಶಬ್ದದಿಂದ ಸಮೀಪದ ವ್ಯಕ್ತಿಯ ಪ್ರತ್ಯಕ್ಷವನ್ನು ಪ್ರಮಾಣೀಕರಿಸುತ್ತಾರೆ.

ಯುಕ್ತಿ - ಬಿಂಬಪ್ರತಿಬಿಂಬೌ ಭಿನ್ನೌ ದ್ವಾವಿಮಾವಿತಿ ಪಾರ್ಶ್ವಸ್ಥಪ್ರತ್ಯಕ್ಷವಿಷಯತ್ವಾತ್.

**ಅತಃ ಪ್ರತ್ಯಕ್ಷತೋಽಪ್ಯತ್ರ ಭೇದಃ ಸಿದ್ಧೋ ವಿವೇಕಿನಾಂ ।**
**ನ ದ್ವಾವಿಮಾವೇಕ ಏವೇತ್ಯತ್ರ ಧೀರಸ್ತಿ ಕಿಂ ಕ್ವಚಿತ್ ।**
**ತಸ್ಮಾದಬಾಧಿತಂ ಭೇದಪ್ರತ್ಯಕ್ಷಮಭವದ್ಧಿ ತತ್ ॥ ೧೫೫೨ ॥**

**ಅರ್ಥ–** ಅತಃ = ಆದ್ದರಿಂದ, ಅತ್ರ = ಬಿಂಬಪ್ರತಿಬಿಂಬಗಳ ವಿಷಯದಲ್ಲಿ, ವಿವೇಕಿನಾಂ= ವಿಚಾರಮಾಡುವಜ್ಞಾನಿಗಳಿಗೆ, ಪ್ರತ್ಯಕ್ಷತೋಽಪಿ = ಪ್ರತ್ಯಕ್ಷದಿಂದಲೂ, ಭೇದಃ = ಭೇದವು, ಸಿದ್ಧಃ = ಸಿದ್ಧವಾಯಿತು. ಕ್ವಚಿತ್ = ಎಲ್ಲಿಯೂ, ಇಮೌ = ಇವರು, ನ ದ್ವೌ = ಇಬ್ಬರಲ್ಲ, ಏಕ ಏವ = ಒಬ್ಬನೇ, ಇತಿ = ಎಂಬ, ಐಕ್ಯಧೀಃ = ಅಭೇದಜ್ಞಾನವು, ಅಸ್ತಿ ಕಿಂ? = ಇದೆಯೇನು? (ಇಲ್ಲವೇ ಇಲ್ಲ.) ತಸ್ಮಾತ್ = ಆ ಕಾರಣದಿಂದ, ತತ್= ಆ, ಭೇದಪ್ರತ್ಯಕ್ಷಃ = ಭೇದಪ್ರತ್ಯಕ್ಷವು, ಅಬಾಧಿತಂ = ಬಾಧವಿಲ್ಲದ್ದಾಗಿ, ಅಭವತ್ = ಆಯಿತಷ್ಟೇ.

**ಅನುವಾದ–** ಯುಕ್ತಾಯುಕ್ತತೆಯನ್ನು ಚಿಂತನೆ ಮಾಡುವ ವಿವೇಕಿಗಳಿಗೆ ಬಿಂಬಪ್ರತಿಬಿಂಬಗಳ ಭೇದವು ಪ್ರತ್ಯಕ್ಷಸಿದ್ಧವಾಯಿತು. ಯಾವ ಸಂದರ್ಭದಲ್ಲಿಯೂ ಇವು ಎರಡಲ್ಲ, ಒಂದೇ ಎಂಬ ಅಭೇದವಿಷಯಕಬಾಧಜ್ಞಾನವು ಬರುವುದಿಲ್ಲ. ಆದ್ದರಿಂದ ಇದು ಅಬಾಧಿಕ ಪ್ರತ್ಯಕ್ಷವಾಗಿದೆ.

**ಭಾವವಿಲಾಸಿನೀ–** ಬಿಂಬಪ್ರತಿಬಿಂಬಭೇದೇ ಪ್ರತ್ಯಕ್ಷಮಪಿ ಪ್ರಮಾಣಯತಿ – **ದ್ವಾವಿಮಾವಿತಿ ॥** ತಯೋಃ ಬಿಂಬಪ್ರತಿಬಿಂಬಯೋಃ। ತೌ ಬಿಂಬಪ್ರತಿಬಿಂಬೌ। ಸ್ವಸ್ಯ ಸ್ವಷ್ಟಂ ಮುಖಪ್ರತ್ಯಕ್ಷಾಭಾವೇನ ದ್ವಾವಿಮಾವಿತಿ ಪ್ರತೀತ್ಯಭಾವೇಪಿ ಪಾರ್ಶ್ವಸ್ಥಸ್ಯ ಸದಾಪಿ ತಥೈವ ಪ್ರತೀತಿರಸ್ತಿ । ಏಕಮಿದಮಿತಿ ತು ನ ಕದಾಪಿ ಪ್ರತೀತಿಃ। ಏವಂಚ ಬಿಂಬಪ್ರತಿಬಿಂಬಭೇದಃ ಪ್ರತ್ಯಕ್ಷೇಣಾಪಿ ಸಿದ್ಧ ಇತಿ ಭಾವಃ ॥ ೧೫೫೧-೧೫೫೨ ॥

ದರ್ಪಣೇ ಮುಖಂ (ಕನ್ನಡಿಯಲ್ಲಿ ಮುಖವಿದೆ) ಎಂಬುದಾಗಿ ಪ್ರತಿಮುಖದಲ್ಲಿ ಮುಖಶಬ್ದ-ಪ್ರಯೋಗವನ್ನು ಎರಡು ದೃಷ್ಟಾಂತಗಳನ್ನು ತೋರಿಸಿ ಕೂಡಿಸುತ್ತಾರೆ-

**ತದೇವೇದಂ ಮುಖಮಿತಿ ವ್ಯವಹಾರಸ್ತು ಸಾಮ್ಯತಃ ।**
**ಸ ಏವಾಯಂ ರಾಮ ಇತಿ ಯಥಾ ಚಿತ್ರಸ್ಥಿತಾಕೃತೌ ॥ ೧೫೫೩ ॥**

**ಚಿತ್ರಸಿಂಹೋ ಯಥಾ ಸಿಂಹೋ ಮುಖಂ ಪ್ರತಿಮುಖಂ ತಥಾ॥ ೧೫೫೪ ॥**

**ಅರ್ಥ–** ತದೇವೇದಂ ಮುಖಂ = ಇದು (ಪ್ರತಿಮುಖವು) ಅದೇ ಮುಖವಾಗಿದೆ, ಇತಿ = ಎಂಬ, ವ್ಯವಹಾರಸ್ತು = ವ್ಯವಹಾರವಾದರೂ, ಸಾಮ್ಯತಃ = ಸಾದೃಶ್ಯದಿಂದ (ಭವತಿ= ಆಗುತ್ತದೆ)ಯಥಾ = ಹೇಗೆ, ಚಿತ್ರಸ್ಥಿತಾಕೃತೌ = ಚಿತ್ರಪಟದಲ್ಲಿರುವ ರಾಮನ ಆಕಾರದಲ್ಲಿಸ ಏವ ಅಯಂ ರಾಮಃ = ಇವನು ಆ ರಾಮನೇ ಆಗಿದ್ದಾನೆ. ಇತಿ = ಎಂಬ, ವ್ಯವಹಾರಃ= ವ್ಯವಹಾರವಿದೆಯೋ, ಯಥಾ = ಹೇಗೆ, ಚಿತ್ರಸಿಂಹಃ = ಚಿತ್ರದಲ್ಲಿರುವ ಸಿಂಹವು, ಸಿಂಹಃ = ಸಿಂಹವಾಗಿದೆಯೋ, ತಥಾ = ಹಾಗೆಯೇ, ಪ್ರತಿಮುಖಂ =ಪ್ರತಿಮುಖವು, ಮುಖಂ (ಭವತಿ)= ಮುಖವಾಗುತ್ತದೆ.

**ಅನುವಾದ–** ಲೋಕದಲ್ಲಿ ರಾಮನ ಚಿತ್ರವನ್ನು ನೋಡಿ ರಾಮಾಯಣದ ರಾಮ ಎಂದು ವ್ಯವಹರಿಸುತ್ತಾರೆ. ಹಾಗೆಯೇ ಚಿತ್ರಪಟದಲ್ಲಿ ಬರೆದ ಸಿಂಹದ ಚಿತ್ರವನ್ನು ಸಿಂಹ ಎಂದು ವ್ಯವಹರಿಸುತ್ತಾರೆ. ಈ ವ್ಯವಹಾರಗಳನ್ನು ಸಾದೃಶ್ಯದಿಂದಲೇ ಕೂಡಿಸಬೇಕು ಹೊರತು ಅಭೇದದಿಂದ ಅಲ್ಲ. ಹಾಗಯೇ ಪ್ರತಿಮುಖದಲ್ಲಿ ತದೇ ವೇದಂ ಮುಖಂ ಎಂಬ ವ್ಯವಹಾರವೂ ಕೂಡ ಸಾದೃಶ್ಯದಿಂದಲೇ ಕೂಡಿಸಬೇಕು ಹೊರತು ವ್ಯವಹಾರಬಲದಿಂದ ಮುಖಪ್ರತಿಮುಖಗಳಿಗೆ ಅಭೇದವನ್ನು ಹೇಳಬಾರದು.

**ಭಾವವಿಲಾಸಿನೀ–** ದರ್ಪಣೇ ಮುಖಮಿತಿ ಪ್ರತಿಮುಖೇ ಮುಖಪದಪ್ರಯೋಗಸ್ಯ ಪುನರಪಿ ನಿದರ್ಶನದ್ವಯಂ ದರ್ಶಯನ್ ಗತಿಮಾಹ – **ತದೇವೇದಮಿತಿ** ॥ ಸಾಮ್ಯತಃ ಸಾದೃಶ್ಯಾತ್ । ಚಿತ್ರಸ್ಥಿತಾಕೃತೌ ಚಿತ್ರಲಿಖಿತರಾಮಪ್ರತಿಮಾಯಾಮ್ । ಪುರಾಣಾದೌ ಜೀವೇಷ್ವಪಿ ಹರಿರೇವಾಯಂ ಕೃಷ್ಣ ಏವಾಯಂ ರಾಮ ಏವಾಯಮಿತ್ಯಾದಿನಾ ತತ್ರೋಚ್ಯಮಾನೈಕ್ಯ-ವ್ಯಪದೇಶಾನಾಮಪಿ ಇಯಮೇವ ಗತಿರಿತಿ ಸೂಚನಾಯ ಸ ಏವಾಯಂ ರಾಮ ಇತಿ ಪ್ರಾಚೀನನಿದರ್ಶನಂ ಜ್ಞಾತವ್ಯಮ್ ॥ ೧೫೫೩-೧೫೫೪ ॥

**ವಿವರಣೆ–** ಇಲ್ಲಿ ಸ ಏವಾಯಂ ರಾಮಃ ಎಂಬ ಪ್ರಾಚೀನನಿದರ್ಶನವನ್ನು ಕೊಟ್ಟಿದ್ದಾರೆ. ಇದರ ಅಭಿಪ್ರಾಯ, ಪುರಾಣಾದಿಗಳಲ್ಲಿ ಉದ್ಧವಾದಿಜೀವರಲ್ಲಿಯೂ ಕೃಷ್ಣ ಏವಾಯಂ, ಹರಿರೇವಾಯಂ, ರಾಮ ಏವ ಅಯಂ ಎಂಬುದಾಗಿ ಅಲ್ಲಲ್ಲಿ ಹೇಳುವ ಐಕ್ಯವ್ಯವಹಾರಗಳನ್ನು ಇದೇ ರೀತಿಯಿಂದ ಕೂಡಿಸಬೇಕೆಂದು ಅರ್ಥ.

ಬಿಂಬವೇ ಪ್ರತಿಬಿಂಬವಾದರೆ ಸರ್ವಾನುಭವಸಿದ್ಧವಾದ ಬೇರೆ ಬಾಧಕವನ್ನು ಹೇಳುತ್ತಾರೆ. ತದೇವೇದಂ ಮುಖಂ ಇತಿ ವ್ಯವಹಾರಃ ಸಾದೃಶ್ಯಮೂಲಕಃ, ಪ್ರತಿಕೃತಿವ್ಯವಹಾರವತ್, ಚಿತ್ರಸ್ಥಿತಾಕೃತೌ ಸ ಏವಾಯಂ ರಾಮಃ ಇತಿ ವ್ಯವಹಾರವತ್-

ಕಥಂ ನ ದಹ್ಯತೇ ವಕ್ತ್ರಂ ತಪ್ತವಾರ್ಯಂತರಾವಿಶತ್ ।
ಕಥಂ ಚ ನ ವ್ರಣಂ ವಕ್ತ್ರೇ ಕಾಂಸ್ಯಾದರ್ಶಪ್ರವೇಶಿನಿ ॥ ೧೫೫೫ ॥

**ಅರ್ಥ–** ತಪ್ತವಾರ್ಯಂತರಾವಿಶತ್ = ಕಾದನೀರಿನೊಳಗಿರುವ, ವಕ್ತ್ರಂ = ಮುಖವು, ಕಥಂ = ಹೇಗೆ ತಾನೆ, ನ ದಹ್ಯತೇ = ಸುಡುವುದಿಲ್ಲ? ಕಾಂಸ್ಯಾದರ್ಶಪ್ರವೇಶಿನಿ = ಕಂಚಿನ ಕನ್ನಡಿಯೊಳಗಿರುವ, ವಕ್ತ್ರೇ= ಮುಖದಲ್ಲಿ, ಕಥಂ = ಹೇಗೆ, ವ್ರಣಂ = ಗಾಯವು, ನ ಭವತಿ= ಆಗುವುದಿಲ್ಲ?

**ಅನುವಾದ–** ಮುಖವು ಬಿಸಿನೀರಿನೊಳಗೆ ಪ್ರವೇಶಿಸಿದರೆ ಹೇಗೆ ದಹಿಸಲ್ಪಡುವುದಿಲ್ಲ?
ಕಂಚಿನ ಕನ್ನಡಿಯಲ್ಲಿ ಪ್ರವೇಶಿಸುವ ಮುಖಕ್ಕೆ ಏಕೆ ವ್ರಣವಾಗುವುದಿಲ್ಲ?

**ಭಾವವಿಲಾಸಿನೀ–** ಬಿಂಬಸ್ಯೈವ ಪ್ರತಿಬಿಂಬತ್ವೇ ಸರ್ವಾನುಭವಸಿದ್ಧಂ ಬಾಧಕಾಂತರಂ ಚಾಹ – **ಕಥಮಿತಿ** ॥ ತಪ್ತವಾರ್ಯಂತಃ ತಪ್ತೋದಕಸ್ಯಾಂತಃ । ಪ್ರತಿಮುಖಸ್ಯೈವ ಮುಖತ್ವೇ ಪಿಠರಸ್ಥೋಷ್ಣೋದಕೇ ಸ್ವಮುಖಂ ಪಶ್ಯತೋ ಮುಖಸ್ಯೈವ ತಜ್ಜಲಾಂತಃಪ್ರವೇಶಾದ್ದಾಹೋಽಪಿ ಸ್ಯಾತ್ । ನಚೈತದಸ್ತಿ । ಅತಸ್ತಪ್ತಜಲಾಂತಃಸ್ಥ ಪ್ರತಿಮುಖಾತ್ ಅನ್ಯದೇವ ಮುಖಮಿತಿ ಭಾವಃ ॥೧೫೫೫॥

**ವಿವರಣೆ–** ಬಿಂಬ-ಪ್ರತಿಬಿಂಬಗಳಿಗೆ ಐಕ್ಯವನ್ನು ಹೇಳಿದರೆ ಸರ್ವಾನುಭವಸಿದ್ಧವಾದ ಬಾಧಕಾಂತರಗಳನ್ನು ಇಲ್ಲಿ ಹೇಳುತ್ತಾರೆ. ಬಿಸಿ ನೀರಿನಲ್ಲಿ ಪ್ರತಿಬಿಂಬವಿದ್ದು ಪ್ರತಿಬಿಂಬವು ಬಿಂಬವು ಬಿಂಬದಿಂದ ಅಭಿನ್ನವಾದರೆ ಬಿಂಬವಾದ ಮುಖವೇ ಬಿಸಿ ನೀರಿನಲ್ಲಿದೆ ಎಂದಾಯಿತು. ಆಗ ಮುಖವು ಬಿಸಿಯಾಗಬೇಕಷ್ಟೇ. ಅದರಂತೆ ಕಂಚಿನ ಕನ್ನಡಿಯಲ್ಲಿ ಮುಖದ ಪ್ರತಿಬಿಂಬವು ಕಾಣಬೇಕಾದರೆ ಮುಖವೇ ಕಂಚಿನ ಕನ್ನಡಿಯೊಳಗೆ ಪ್ರವೇಶಿಸಬೇಕಷ್ಟೇ. ಹಾಗೆ ಪ್ರವೇಶಿಸಿದರೆ ಮುಖದಲ್ಲಿ ಏಕೆ ಗಾಯಗಳಾಗುವುದಿಲ್ಲ ಎಂಬ ಪ್ರಶ್ನೆಯು ಬರುತ್ತದೆ. ಆದ್ದರಿಂದ ಬಿಂಬ ಪ್ರತಿಬಿಂಬಗಳು ಅಭಿನ್ನವೆಂದು ಹೇಳಬಾರದು ಎಂದು ಅಭಿಪ್ರಾಯ.

**ಕರಸ್ಥೇ ದರ್ಪಣೇ ಹಸ್ತೀ ಯದ್ಯಷ್ಟೈಶ್ವರ್ಯಯುತೋ ವಿಶೇತ್ ।**
**ಕಥಂ ಶಿಶುಸ್ತಂ ಬಿಭೃಯಾತ್ ಗಜಶಾಲೋದ್ಯಮೋ ವೃಥಾ ॥ ೧೫೫೬ ॥**

**ಅರ್ಥ–** ಯದಿ = ಒಂದು ವೇಳೆ, ಹಸ್ತೀ = ಆನೆಯು, ಅಷ್ಟೈಶ್ವರ್ಯಯುತಃ = ಅಣಿಮಾದಿಅಷ್ಟೈಶ್ವರ್ಯದ ಪ್ರಭಾವದಿಂದ, ಕರಸ್ಥೇ = ಕೈಯಲ್ಲಿರುವ, ದರ್ಪಣೇ = ಕನ್ನಡಿಯಲ್ಲಿ, ವಿಶೇತ್= ಪ್ರವೇಶಮಾಡುವುದಾದರೆ, ಶಿಶುಃ = ಚಿಕ್ಕಮಗುವು, ತಂ = ಆನೆಯಿದ್ದ ಕನ್ನಡಿಯನ್ನು, ಕಥಂ = ಹೇಗೆ, ಬಿಭೃಯಾತ್ = ಧರಿಸೀತು? (ತದಾ = ಆವಾಗ) ಗಜಶಾಲೋದ್ಯಮಃ = ಆನೆಯನ್ನು ಕಟ್ಟಲು ಗಜಶಾಲೆಯನ್ನು ಕಟ್ಟುವ ಪ್ರಯತ್ನವೂ, ವೃಥಾ = ವ್ಯರ್ಥವಾದೀತು.

**ಅನುವಾದ–** ನಿಜವಾದ ಆನೆಯೇ ಕೈಯಲ್ಲಿರುವ ಕನ್ನಡಿಯೊಳಗೆ ಅಣಿಮಾದಿ
ಐಶ್ವರ್ಯದ ಬಲದಿಂದ ಪ್ರವೇಶಮಾಡುವುದಾದರೆ ಚಿಕ್ಕಮಗುವಿಗೆ ಆ

**ಕನ್ನಡಿಯನ್ನು ಎತ್ತುವುದು ಹೇಗೆ ಸಾಧ್ಯವಾದೀತು? ಹಾಗೆಯೇ ರಾತ್ರಿಯಲ್ಲಿ ಆನೆಗಳನ್ನು ಕಟ್ಟಿಹಾಕಲು ಗಜಶಾಲೆಗಳ ನಿರ್ಮಾಣವು ವ್ಯರ್ಥ.**

**ವಿವರಣೆ–** ಬೃಹತ್ ಪರಿಮಾಣವು ಆನೆಯಲ್ಲಿದೆ. ಕನ್ನಡಿಯಲ್ಲಿ ಅಲ್ಪಪರಿಮಾಣವಿದೆ. ಆದ್ದರಿಂದ ಕನ್ನಡಿಯಲ್ಲಿ ಆನೆಯ ಪ್ರವೇಶ ಅಷ್ಟೈಶ್ವರ್ಯಗಳಿಂದಲೇ ಸಾಧ್ಯ. ಆದ್ದರಿಂದ ಬಿಂಬವಾದ ಆನೆಯು ಬೇರೆ, ಕನ್ನಡಿಯೊಳಗಿನ ಪ್ರತಿಬಿಂಬವೇ ಬೇರೆ.

**ಅಷ್ಟಾಶೀತಿಸಹಸ್ರಾಣಿ ವಿಸ್ತೀರ್ಣೋ ಯೋಜನಸ್ಯ ಯಃ ।**
**ದರ್ಪಣೇಽಲ್ಪಪ್ರಮಾಣೇಽಸೌ ಕಥಂ ವಿಶತಿ ಚಂದ್ರಮಾಃ ॥ ೧೫೫೭ ॥**

**ಅರ್ಥ–** ಯಃ = ಯಾವ ಚಂದ್ರನು, ಯೋಜನಸ್ಯ = ಯೋಜನಪ್ರಮಾಣದ, ಅಷ್ಟಾಶೀತಿಸಹಸ್ರಾಣಿ = ಎಂಬತ್ತೆಂಟುಸಾವಿರ, ವಿಸ್ತೀರ್ಣಃ = ವಿಸ್ತಾರವುಳ್ಳವನೋ, ಅಸೌ ಚಂದ್ರಮಾಃ= ಆ ಚಂದ್ರನು, ಅಲ್ಪಪ್ರಮಾಣೇ = ಚಿಕ್ಕಗಾತ್ರದ, ದರ್ಪಣೇ = ಕನ್ನಡಿಯಲ್ಲಿ, ಕಥಂ= ಹೇಗೆ, ವಿಶತಿ = ಪ್ರವೇಶಿಸುತ್ತಾನೆ?

**ಅನುವಾದ–** ಎಂಬತ್ತೆಂಟು ಸಾವಿರಯೋಜನ ವಿಸ್ತಾರವುಳ್ಳದ್ದು ಚಂದ್ರಮಂಡಲ ಪರಿಮಾಣವಾಗಿದೆ. ಆ ಚಂದ್ರಮಂಡಲವು ಗೇಣು ಉದ್ದದ ಕನ್ನಡಿಯಲ್ಲಿ ಹೇಗೆ ತಾನೇ ಪ್ರವೇಶಿಸೀತು? ಆದ್ದರಿಂದ ಬಿಂಬಪ್ರತಿಬಿಂಬಗಳು ಒಂದಲ್ಲ.

**ಭಾವವಿಲಾಸಿನೀ–** ಅಲ್ಪಪರಿಮಾಣೇ ದರ್ಪಣೇ ತತೋಽಪ್ಯತಿಸ್ಥೂಲಸ್ಯ ಗಜಸ್ಯ ಪ್ರವೇಶೋಽಷ್ಟೈಶ್ವರ್ಯಶಕ್ತೌ ಸತ್ಯಾಮೇವ ಸ್ಯಾತ್ । ನಚ ಸಾಽಸ್ತಿ । ಅತೋ ಽಽಇದಮಯುಕ್ತಮಿತಿ ಪರಪರಿಹಾಸಾಯಾಷ್ಟೈಶ್ವರ್ಯೇತ ಇತ್ಯುಕ್ತಮ್ । ರಾತ್ರೌ ದರ್ಪಣ ಏವ ಪ್ರವಿಶ್ಯಸ್ಥಾತುಂ ಶಕ್ಯತ್ವಾತ್ ಗಜಶಾಲೋದ್ಯಮೋಽಪಿವ್ಯರ್ಥೇತ್ಯರ್ಥಃ ॥ ೧೫೫೬-೧೫೫೭ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಬಿಸಿ ನೀರಿನಲ್ಲಿರುವ ಮುಖದ ಪ್ರತಿಬಿಂಬದಿಂದ ಮುಖವೂ ಕೂಡ ಬಿಸಿಯಾಗಬೇಕಾದೀತು ಎಂದು ಬಿಂಬ ಪ್ರತಿಬಿಂಬಗಳಿಗೆ ಐಕ್ಯವನ್ನು ಹೇಳಿದರೆ ದೋಷವನ್ನು ಹೇಳಿದರು. ಇಲ್ಲಿ ಹಿಂದಿನ ದೃಷ್ಟಾಂತವನ್ನೇ ವಿವರಿಸುತ್ತಾರೆ.

**ಯದಿ ತಪ್ತೋದಕೇಽತ್ಯುಷ್ಣೇ ವಕ್ತ್ರಮೇವ ವಿಶೇನ್ನೃಣಾಂ ।**
**ತದಾ ದಾಹೋ ಭವೇತ್ ತಸ್ಯ ಕವೋಷ್ಣಾದಾಪಿ ಯಸ್ಯ ಭೀಃ ॥ ೧೫೫೮ ॥**

**ಅರ್ಥ–** ಯದಿ = ಒಂದು ವೇಳೆ, ತಪ್ತೋದಕೇ = ಬಿಸಿನೀರಿನಲ್ಲಿ, ನೃಣಾಂ = ಸಾಮಾನ್ಯಜನರ, ವಕ್ತ್ರಮೇವ = ಮುಖವೇ, ವಿಶೇತ್ = ಪ್ರತಿಬಿಂಬಬಿದ್ದಾಗ ಪ್ರವೇವಿಶಿಸಿದರೆ, ತದಾ= ಆಗ, ಯಸ್ಯ = ಯಾವ ಮುಖಕ್ಕೆ, ಕವೋಷ್ಣಾದಪಿ = ಸ್ವಲ್ಪಬಿಸಿನೀರಿನಿಂದಲೂ, ಭೀಃ = ಹೆದರಿಕೆ ಇದೆಯೋ, ತಸ್ಯ = ಆ ಮುಖಕ್ಕೆ, ದಾಹಃ = ದಾಹವು, ಭವೇತ್= ಆಗಬೇಕಾದೀತು.

**ಅನುವಾದ–** ಮುಖ ಮತ್ತು ಮುಖದ ಪ್ರತಿಬಿಂಬಗಳಿಗೆ ಅಭೇದವನ್ನು ಹೇಳಬಾರದು. ಒಂದು ವೇಳೆ ಅಭೇದವನ್ನು ಹೇಳಿದರೆ ಬಹಳ ಬಿಸಿಯಾದ ನೀರಿನಲ್ಲಿ ಸಾಮಾನ್ಯ ಜನರ ಮುಖದ ಪ್ರತಿಬಿಂಬಬಿದ್ದಾಗ ಮುಖವೇ ನೀರಿನಲ್ಲಿ ಪ್ರವೇಶ ಮಾಡಿದಂತಾಯಿತು. ಆದರೆ ಮುಖವನ್ನು ಉಗುರುಬೆಚ್ಚಗಿನ ನೀರಿನಿಂದಲೂ ತೊಳೆಯಲಾಗುವುದಿಲ್ಲ. ಅಂತಹ ಮುಖವು ಆಗ ಬಹುಬಿಸಿನೀರಿನಲ್ಲಿ ಇರುವುದರಿಂದ ಸುಡಬೇಕಾದೀತು. ಆದರೆ ಪ್ರತಿಬಿಂಬವು ಬಿಸಿನೀರಿನಲ್ಲಿದ್ದರೂ ಮುಖವು ಸುಡುವುದಿಲ್ಲವಾದ ಕಾರಣ ಮುಖ ಮತ್ತು ಪ್ರತಿಬಿಂಬಗಳಿಗೆ ಅಭೇದವಿಲ್ಲ.

**ಭಾವವಿಲಾಸಿನೀ–** ಪ್ರಾಗುಕ್ತಮಪಿ ತಪ್ತೋದಕದೃಷ್ಟಾಂತಮಲ್ಪದಾಹೇ ತಾಪಕಾರಣಾ-ಭಾವಾದ್ವಿಶದಯಿತುಂ ಪುನರಾಹ – **ಯದೀತಿ ॥** ಅಗ್ನಿಸ್ತಂಭನಶಕ್ತ್ಯಭಾವಸೂಚನಾಯ ನೃಣಾಮಿತ್ಯುಕ್ತಮ್। ತಸ್ಯ ಮುಖಸ್ಯ ॥ ೧೫೫೮ ॥

**ವಿವರಣೆ–** ಈ ಶ್ಲೋಕದಲ್ಲಿ ವಾದಿರಾಜರು ನೃಣಾಂ ಎಂಬ ಜನಸಾಮಾನ್ಯರನ್ನು ಸೂಚಿಸುವ ಪದವನ್ನು ಪ್ರಯೋಗಿಸಿದ್ದಾರೆ. ಇದರಿಂದ ಅಗ್ನಿಸ್ಥಂಭನಸಾಮರ್ಥ್ಯವುಳ್ಳ ವ್ಯಕ್ತಿಗಳಲ್ಲವೆಂದು ಸೂಚಿಸಿದಂತಾಯಿತು. ಅಗ್ನಿಸ್ಥಂಭನಸಾಮರ್ಥ್ಯವುಳ್ಳವರು ಬಿಸಿನೀರಿನಲ್ಲಿ ಪ್ರವೇಶಿಸಿದರೂ ಸುಡದಂತೆ ಮಾಡುತ್ತಾರೆ. ಇನ್ನು ಕವೋಷ್ಣ ಎಂಬ ಶಬ್ದಕ್ಕೆ ಉಗುರುಬೆಚ್ಚಗಿನ ನೀರು ಎಂದರ್ಥ.

ತಣ್ಣೀರಿನಲ್ಲಿ ತನ್ನ ಮುಖದ ಪ್ರತಿಬಿಂಬವನ್ನು ಬಹಳಕಾಲ ಒಬ್ಬನು ನೋಡುತ್ತಾನೆ. ಒಂದು ವೇಳೆ ಮುಖ ಮತ್ತು ಪ್ರತಿಮುಖಗಳು ಅಭಿನ್ನಗಳಾದರೆ ಮುಖವೂ ಕೂಡ ಆ ತಣ್ಣೀರಿನಲ್ಲಿ ಪ್ರವೇಶಿಸಿದಂತಾಯಿತು. ಆಗ ಪ್ರತಿವಾದಿಗೆ ದೋಷವು ಬರುತ್ತದೆ ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾರೆ-

**ಯದ್ಯಂಬುನಿ ಚಿರಂ ನೃಣಾಂ ಮುಖಮೇವ ವಿಶೇತ್ ತದಾ ।**
**ಶಿಕ್ಷಾ ಸ್ಯಾತ್ ತಸ್ಕರಸ್ಯೇವ ಯದ್ ಬಿಭೇತ್ಯಘಮರ್ಷಣಾತ್ ॥ ೧೫೫೯ ॥**

**ಅರ್ಥ–** ಯದಿ = ಒಂದು ವೇಳೆ, ಅಂಬುನಿ = ತಣ್ಣೀರಿನಲ್ಲಿ, ಚಿರಂ = ಬಹುಕಾಲ, ನೃಣಾಂ = ಜನರ, ಮುಖಮೇವ = ಮುಖವೇ, ವಿಶೇತ್ = ಪ್ರವೇಶಿಸುವುದಾದರೆ, ತದಾ= ಆಗ, ಯತ್ = ಯಾವ ಮುಖವು, ಅಘಮರ್ಷಣಾತ್= ಅಘಮರ್ಷಣಸ್ನಾನದಿಂದಲೂ, ಬಿಭೇತಿ = ಹೆದರುತ್ತದೆಯೋ, ತಸ್ಯ = ಆ ಮುಖಕ್ಕೆ, ತಸ್ಕರಸ್ಯ ಇವ = ಕಳ್ಳನಿಗೆ ಮಾಡುವ ಶಿಕ್ಷೆಯಂತೆ, ಶಿಕ್ಷಾ = ಶಿಕ್ಷೆಯು, ಸ್ಯಾತ್ = ಆದೀತು.

**ಅನುವಾದ–** ಒಬ್ಬನು ನೀರಿನಲ್ಲಿ ತನ್ನ ಮುಖದ ಪ್ರತಿಬಿಂಬವನ್ನು ಬಹುಕಾಲದ ತನಕ ನೋಡುತ್ತಿರುತ್ತಾನೆ. ಬಿಂಬಪ್ರತಿಬಿಂಬಗಳಿಗೆ ಅಭೇದವಿದ್ದರೆ ತನ್ನ ಮುಖವೇ ನೀರಿನೊಳಗೆ ಪ್ರವೇಶಿಸಿದಂತಾಯಿತು. ಆದರೆ ಆ ಮುಖವು ಕೇವಲ

**ಅಘಮರ್ಷಣ ಕಾಲದಲ್ಲಿ ಮುಳುಗಲು ಹಿಂಜರಿಯುತ್ತದೆ. ಅಂತಹ ಮುಖವು ಈಗ ನೀರನ್ನು ಬಹಳ ಹೊತ್ತು ಪ್ರವೇಶಿಸಿದರೆ ಕಳ್ಳನಿಗೆ ಆಗುವಂತಹ ಶಿಕ್ಷೆಯನ್ನು ಅನುಭವಿಸಬೇಕಾದೀತು.**

**ಭಾವವಿಲಾಸಿನೀ–** ಶೀತೋದಕೇऽಪಿ ಬಹುಕಾಲಂ ಸ್ವಮುಖದರ್ಶನೇ ತಾವತ್ಕಾಲಂ ಮುಖಸ್ಯಾಪಿ ಜಲೇ ಪ್ರವೇಶಾತ್ಪರಸ್ಯ ದೂಷಣಂ ಸ್ಯಾದಿತ್ಯಾಹ – ಯದ್ಯಂಬುನೀತಿ ॥ ತಸ್ಕರಸ್ಯೇವ ಯಥಾ ತಸ್ಕರಂ ಶಿಕ್ಷಿತುಂ ಬಹುಕಾಲಂ ಜಲೇ ಮಜ್ಜಯಂತಿ ತದ್ವದಿತ್ಯರ್ಥಃ। ಯತ್ ಮುಖಮ್ ॥೧೫೫೯॥

**ವಿವರಣೆ–** ಸ್ನಾನವಿಧಿಯಲ್ಲಿ 'ಋತಂ ಚ ಸತ್ಯಂ ಚಾಭೀದ್ಧಾತ್ ತಪಸೋऽಧ್ಯಜಾಯತ' ಇತ್ಯಾದಿ ಅಘಮರ್ಷಣಮಂತ್ರವನ್ನು ಹೇಳುತ್ತಾ ಮುಳಗಬೇಕು. ಮುಳುಗಿಕೊಂಡೇ ಆ ಮಂತ್ರವನ್ನು ಹೇಳಿ ಸರ್ವಸೃಷ್ಟಿಕರ್ತನಾದ ಭಗವಂತನನ್ನು ಸ್ಮರಿಸಿ ಪ್ರಣವವನ್ನು ಹೇಳುತ್ತಾ ಮೇಲೇಳಬೇಕು. ಆ ಪ್ರಕ್ರಿಯೆಗೆ ಕೆಲವು ಕ್ಷಣಗಳು ಕಳೆಯುತ್ತವೆ. ಕಂಠದ ಕೆಳಭಾಗವನ್ನು ಬಹಳ ಹೊತ್ತು ನೀರಿನಲ್ಲಿರಿಸಿದರೂ ಮುಖವನ್ನು ಮಾತ್ರ ಉಸಿರುಕಟ್ಟುವ ಭಯದಿಂದ ಈ ಕ್ರಿಯೆಯನ್ನು ಮಾಡಲು ಜನರು ಹಿಂಜರಿಯುತ್ತಾರೆ. ಆದರೆ ನೀರಿನಲ್ಲಿ ತನ್ನ ಮುಖದ ಪ್ರತಿ ಬಿಂಬವನ್ನು ಎಷ್ಟುಹೊತ್ತೂ ನೋಡಬಹುದು. ಮುಖಪ್ರತಿ ಮುಖಗಳು ಒಂದೇ ಆದರೆ ಈ ಸಂದರ್ಭದಲ್ಲಿ ಶಿಕ್ಷೆಯ ಅನುಭವವು ಆಗಬೇಕಾದೀತು.

ಕಳ್ಳನನ್ನು ಶಿಕ್ಷಿಸುವಾಗ ಅವನನ್ನು ಬಹಳಕಾಲ ನೀರಲ್ಲಿ ಮುಳುಗಿಸುತ್ತಾರೆ. ಆಗ ಅವನಿಗೆ ದುಃಖದ ಅನುಭವವು ಆಗುತ್ತದೆ. ಆದರೆ ಇಲ್ಲಿ ದುಃಖದ ಅನುಭವವು ಆಗುವುದಿಲ್ಲ, ಆದ್ದರಿಂದ ಮುಖಪ್ರತಿಮುಖಗಳು ಒಂದಲ್ಲ, ಬೇರೆ ಬೇರೆಯವೇ ಆಗಿವೆ.

ಸಿದ್ಧಾಂತಿಗಳು ಪ್ರತಿಬಿಂಬವು ಬಿಂಬಕ್ಕಿಂತ ಭಿನ್ನವಾಗಿದೆ. ಹಾಗೆಯೇ ಪ್ರತಿಬಿಂಬದ ಕಾರ್ಯವಾಗಿದೆ ಎಂದು ಹಿಂದೆ ಪ್ರತಿಪಾದಿಸಿದ್ದಾರೆ. ಬಿಂಬದಿಂದ ಪ್ರತಿಬಿಂಬವು ಹುಟ್ಟುವುದಾದರೆ ಬಿಂಬವು ನಾಶವಾದಾಗ ಪ್ರತಿಬಿಂಬವು ಇರಬೇಕು. ಆದರೆ ಬಿಂಬನಾಶವಾದಾಗ ಪ್ರತಿಬಿಂಬವೂ ಏಕೆ ಇರುವುದಿಲ್ಲ ಎಂಬ ಪ್ರತಿವಾದಿಯ ಪ್ರಶ್ನೆಯನ್ನು ಅನೇಕದೃಷ್ಟಾಂತಗಳಿಂದ ನಿರಾಕರಿಸುತ್ತಾರೆ-

ನೈಮಿತ್ತಕಂ ಹಿ ತತ್ಕಾರ್ಯಂ ನಿಮಿತ್ತೇ ಸತಿ ಜಾಯತೇ ।
ತದಪಾಯೇ ನಾಶವಚ್ಚ ಸೂರ್ಯಾತ್ ಪದ್ಮವಿಕಾಸವತ್ ॥ ೧೫೬೦ ॥

ತ್ರಪುಸೀಸಸ್ವರ್ಣಸರ್ಪಿಶ್ಚಂದ್ರಕಾಂತದ್ರವತ್ವವತ್ ।
ಜಲೌಷ್ಣ್ಯವದ್ ಗ್ರಹಗ್ರಸ್ತಮರ್ತ್ಯಸತ್ತ್ವವಿಶೇಷವತ್ ॥ ೧೫೬೧ ॥

ಔಪಾಧಿಕಂ ಪ್ರತಿಮುಖಂ ಮುಖೇ ಸತ್ಯೇವ ದೃಶ್ಯತೇ ।
ಮುಖಸ್ಯಾಪಗಮೇ ಚಾಸ್ಯ ನಷ್ಟತ್ವಾದ್ ದೃಷ್ಟತಾ ಚ ನ ॥ ೧೫೬೨ ॥

**ಅರ್ಥ–** ಹಿ = ಯಾವ ಕಾರಣದಿಂದ, ನೈಮಿತ್ತಕಂ = ನಿಮಿತ್ತದಿಂದ ಹುಟ್ಟಿದ, ಕಾರ್ಯಂ= ಕಾರ್ಯವು, ಸೂರ್ಯಾತ್ = ಸೂರ್ಯನ ದೆಸೆಯಿಂದ, ಪದ್ಮವಿಕಾಸವತ್ = ಕಮಲದ

ಅರಳುವಿಕೆಯಂತೆ, ತ್ರಪು ಸೀಸ ಸ್ವರ್ಣಸರ್ಪಿಶ್ಚಂದ್ರಕಾಂತದ್ರವತ್ವಂ = ತ್ರಪು, ಸೀಸ, ಬಂಗಾರ, ತುಪ್ಪ ಚಂದ್ರಕಾಂತಶಿಲೆಯಲ್ಲಿರುವ ದ್ರವತ್ವದಂತೆ, ಜಲೌಷ್ಣ್ಯವತ್ = ನೀರಲ್ಲಿರುವ ಬಿಸಿಯಂತೆ, ಗ್ರಹಗ್ರಸ್ತಮರ್ತ್ಯಸತ್ವವಿಶೇಷವತ್ = ಪಿಶಾಚಾವಿಷ್ಟನಾದ ಮನುಷ್ಯನ ಬಹು ಸಾಮರ್ಥ್ಯದಂತೆ, ನಿಮಿತ್ತೇ ಸತಿ = ಕಾರಣವಿದ್ದಾಗ, ಜಾಯತೇ = ಹುಟ್ಟುತ್ತದೆ. ತದಪಾಯೇ = ಕಾರಣವು ಹೋದಾಗ, ನಾಶವತ್ = ನಾಶವುಳ್ಳದ್ದು ಆಗುತ್ತದೆಯೋ, ತತ್ = ಆ ಕಾರಣದಿಂದ, ಔಪಾಧಿಕಂ= ಉಪಾಧಿಯಿಂದ ಉಂಟಾದ ಪ್ರತಿಮುಖಂ = ಮುಖದ ಪ್ರತಿ-ಬಿಂಬವು, ಮುಖೇ = ಮುಖವು, ಸತ್ಯೇವ = ಇರುವಾಗ ಮಾತ್ರ, ದೃಶ್ಯತೇ = ಕಾಣಲ್ಪಡುತ್ತದೆ. ಮುಖಸ್ಯ = ಮುಖದ, ಅಪಗಮೇ = ಚಲನೆ ಆದಾಗ, ಅಸ್ಯ = ಮುಖದ ಪ್ರತಿಮುಖದ, ನಷ್ಟತ್ವಾತ್= ನಾಶವಾಗುವುದರಿಂದ, ದೃಷ್ಟತಾ ಚ = ದರ್ಶನವೂ ಕೂಡ, ನ = ಇರುವುದಿಲ್ಲ.

**ಅನುವಾದ–** ನಿಮಿತ್ತದಿಂದ ಹುಟ್ಟುವ ಕೆಲವು ಕಾರ್ಯವು ನಿಮಿತ್ತ ಇದ್ದಾಗ ಇರುತ್ತದೆ. ಕಾರಣಹೋದಾಗ ಹೋಗುತ್ತದೆ ಎಂಬುದು ಅನೇಕ ದೃಷ್ಟಾಂತಗಳಿಂದ ಸಿದ್ಧವಾಗಿದೆ. ಆ ದೃಷ್ಟಾಂತಗಳು ಕ್ರಮವಾಗಿ ಹೀಗಿವೆ.

೧. ಪದ್ಮದ ಅರಳುವಿಕೆಗೆ ಸೂರ್ಯೋದಯವು ನಿಮಿತ್ತವಾಗಿದೆ. ಸೂರ್ಯನು ಅಸ್ತಂಗತನಾದಾಗ ಪದ್ಮವು ಮುದುಡಿಕೊಳ್ಳುತ್ತದೆ.

೨. ತಾಮ್ರ, ಸೀಸ, ಬಂಗಾರ, ತುಪ್ಪಗಳ ದ್ರವತ್ವಕ್ಕೆ ದಾಹವು ಕಾರಣವಾಗಿದೆ. ಆ ನಿಮಿತ್ತ ಕಾರಣವು ಹೋದಾಗ ತಾಮ್ರಾದಿಗಳು ದ್ರವತ್ವ ಕಳೆದುಕೊಂಡು ಘನೀಭೂತ ಗಳಾಗುತ್ತವೆ.

೩. ಚಂದ್ರಕಾಂತಶಿಲೆಯು ಚಂದ್ರೋದಯವಾದಾಗ ನೀರನ್ನು ಸುರಿಸುತ್ತದೆ. ಚಂದ್ರನು ಇಲ್ಲದೆ ಇದ್ದಾಗ ನೀರು ಇರುವುದಿಲ್ಲ.

೪. ಬೆಂಕಿ ಹಾಕಿದಾಗ ಜಲದಲ್ಲಿ ಉಷ್ಣತೆಯು ಬರುತ್ತದೆ. ಬೇರೆ ಇದ್ದಾಗ ನೀರು ತಣ್ಣ ಗಾಗುತ್ತದೆ.

೫. ದುರ್ಬಲ ಮನುಷ್ಯನಾದರೂ ಪಿಶಾಚಾವೇಶದಿಂದಾಗಿ ಬಹಳ ಭಾರವಸ್ತುಗಳನ್ನು ಹೊರುತ್ತಾನೆ. ಆದರೆ ಪಿಶಾಚಾವೇಶವಿಲ್ಲದಿದ್ದಾಗ ಹಿಂದಿನಂತೆ ದುರ್ಬಲನಾಗುತ್ತಾನೆ.

ಈ ಎಲ್ಲಾ ದೃಷ್ಟಾಂತಗಳಲ್ಲಿ ನಿಮಿತ್ತವು ನಾಶವಾದಾಗ ನೈಮಿತ್ತಿಕನಾಶವು ಸಿದ್ಧವಾಗಿದೆ. ಅದರಂತೆ ಕನ್ನಡಿಮೊದಲಾದ ಉಪಾಧಿಗಳ ಸನ್ನಿಧಾನವು ಮುಖಕ್ಕೆ ಇದ್ದಾಗ ಮುಖದ ಪ್ರತಿಬಿಂಬವು ಕಾಣುತ್ತದೆ. ಸನ್ನಿಧಾನವಿಲ್ಲದಿದ್ದಾಗ ಪ್ರತಿಮುಖವು ಕಾಣುವುದಿಲ್ಲ. ಈ ರೀತಿಯಾಗಿ ಪ್ರತಿಮುಖ-ಮುಖಗಳಿಗೆ ಕಾರ್ಯಕಾರಣ- ಭಾವವನ್ನು ಹೇಳಿದರೆ ಯಾವ ತೊಂದರೆಯೂ ಇಲ್ಲ.

**ಭಾವವಿಲಾಸಿನೀ–** ಪ್ರತಿಬಿಂಬಸ್ಯೋತ್ಪನ್ನಕಾರ್ಯತ್ವೇ ಬಿಂಬಾಪಗಮೇಽಪಿ ಕುತೋ ನ ಸ್ಥಿತಿರಿತಿ ಶಂಕಾಂ ಬಹುಭಿರ್ದೃಷ್ಟಾಂತೈರ್ಧಿಕ್ಕರೋತಿ – ನೈಮಿತ್ತಿಕಮಿತಿ ॥ ಪಿಶಾಚಾವೇಶೇ ಸತಿ ಬಹುತರ-ಭಾರವಹನಾದಿಶಕ್ತೇರಪಿ ದರ್ಶನಾತ್ ಸತ್ವವಿಶೇಷವದಿತ್ಯುಕ್ತಮ್ । ಏತಾನಿಸರ್ವಾಣ್ಯಪಿ ಸ್ವನಿಮಿತ್ತೇಸತಿ ಸಂತಿ ನಿಮಿತ್ತಾಪಾಯೇ ನ ಸಂತಿ । ತದ್ವದಿದಮಪಿ ಬಿಂಬೇಸತ್ಯಸ್ತಿ ಬಿಂಬಾ-ಪಗಮೇನಾಶಾನ್ನಾಸ್ತೀತಿ ಕಾತ್ರಾನುಪಪತ್ತಿರಿತಿ ಭಾವಃ ॥ ೧೫೬೦-೧೫೬೨ ॥

**ವಿವರಣೆ–** ಗ್ರಹಗ್ರಸ್ತಮರ್ತ್ಯಸತ್ವವಿಶೇಷವತ್ ಎಂಬ ದೃಷ್ಟಾಂತವಾಕ್ಯದಲ್ಲಿ ಸತ್ವವಿಶೇಷ ಎಂಬ ಪದವನ್ನು ಕೊಟ್ಟಿದ್ದಾರೆ. ಇದರಿಂದ ಪಿಶಾಚಾವೇಶವಾದಾಗ ದುರ್ಬಲನಲ್ಲಿಯೂ ಬಹಳ ಭಾರವನ್ನು ಹೊರುವ ಸಾಮರ್ಥ್ಯವು ಕಂಡಿದೆ ಎಂದು ಹೇಳಿದಂತಾಗುತ್ತದೆ.

ಘಟಾದಿಕಾರ್ಯಗಳು, ನಿಮಿತ್ತಗಳಾದ ದಂಡಚಕ್ರಾದಿಗಳು ಹೋದರೂ ನಾಶವಾಗುವುದಿಲ್ಲ. ಆದರೆ ಈ ಶ್ಲೋಕದಲ್ಲಿ ಹೇಳಿದ ದೃಷ್ಟಾಂತಗಳಿಂದ ಅನೇಕ ಸ್ಥಳಗಳಲ್ಲಿ ನಿಮಿತ್ತನಾಶವಾದಾಗ ನೈಮಿತ್ತಿಕನಾಶವು ಸಿದ್ಧವಾಗುವುದು. ಹೀಗೆ ಬಿಂಬಪ್ರತಿಬಿಂಬಗಳಿಗೆ ಅಭೇದವನ್ನು ಹೇಳದೆ ಭೇದವನ್ನು ಹೇಳಿ ಕಾರ್ಯಕಾರಣಭಾವವನ್ನು ಹೇಳಬಹುದು.

**ಕಾರಣಸಾಮಾಗ್ರಿಗಳನ್ನು ಪೂರ್ಣವಾಗಿ ಕೂಡಿಸಲು ಆಗದೆ ಇರುವುದರಿಂದ ಪ್ರತಿಬಿಂಬವಲ್ಲ ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ-**

**ನಿಮಿತ್ತಂ ಬಿಂಬಸಾನ್ನಿಧ್ಯಂ ಕರ್ತಾ ನಾರಾಯಣಃ ಪ್ರಭುಃ ।**
**ಉಪಾದಾನಮುಪಾಧಿಶ್ಚೇತ್ ಕಾರ್ಯಂ ವಾರ್ಯಮಿದಂ ಕಥಮ್ ॥೧೫೬೩॥**

**ಅರ್ಥ–** ಬಿಂಬಸಾನ್ನಿಧ್ಯಂ = ಬಿಂಬದ ಸಾಮೀಪ್ಯವು, ನಿಮಿತ್ತಂ ಚೇತ್ = ನಿಮಿತ್ತಕಾರಣವಾದರೆ, ಪ್ರಭುಃ = ಸಮರ್ಥನಾದ, ನಾರಾಯಣಃ = ಶ್ರೀಹರಿಯು, ಕರ್ತಾ ಚೇತ್ = ಕರ್ತೃವಾದರೆ, ಉಪಾಧಿ = ಕನ್ನಡಿ ಮೊದಲಾದ ಉಪಾಧಿಗಳು, ಉಪಾದಾನಂ ಚೇತ್ = ಉಪಾದಾನಕಾರಣವಾದಾಗ, ಇದಂ = ಈ ಪ್ರತಿಬಿಂಬವು, ಕಾರ್ಯಂ = ಕಾರ್ಯ ಎಂದು, ಕಥಂ ವಾರ್ಯಂ = ಹೇಗೆ ತಾನೆ ತಡೆಯಲು ಸಾಧ್ಯ. (ಕಾರ್ಯವೇ ಆಗಿದೆ.)

**ಅನುವಾದ–** ಪ್ರತಿಬಿಂಬ ಎಂಬ ಕಾರ್ಯಕ್ಕೆ ಬಿಂಬದ ಸಾಮೀಪ್ಯವು ನಿಮಿತ್ತಕಾರಣ ವಾಗುತ್ತದೆ. ಕನ್ನಡಿ ಮೊದಲಾದ ಉಪಾಧಿಗಳೇ ಉಪಾದಾನಕಾರಣಗಳು. ಇದಕ್ಕೆ ಕರ್ತೃ ಶ್ರೀಮನ್ನಾರಾಯಣನು. ಹೀಗೆ ಕಾರ್ಯ ಹುಟ್ಟಲು ಬೇಕಾದ ಎಲ್ಲಾ ಕಾರಣಸಾಮಗ್ರಿಗಳು ಇರುವಾಗ ಪ್ರತಿಬಿಂಬವು ಕಾರ್ಯವಲ್ಲ ಎಂದು ನಿರಾಕರಿಸಲು ಸಾಧ್ಯವಿಲ್ಲ.

**ಭಾವವಿಲಾಸಿನೀ–** ಕಾರಣಾಸಂಭವಾತ್ ಪ್ರತಿಬಿಂಬಸ್ಯ ಕಾರ್ಯತ್ವಂ ನೇತಿ ಶಂಕಾಂ ನಿವಾರಯತಿ – ನಿಮಿತ್ತಮಿತಿ ॥ ೧೫೬೩ ॥

**ವಿವರಣೆ–** ತಾರ್ಕಿಕರು ಕಾರ್ಯ ಹುಟ್ಟಲು ಸಮವಾಯಿ, ಅಸಮವಾಯಿ, ನಿಮಿತ್ತಕಾರಣಗಳನ್ನು ಹೇಳುತ್ತಾರೆ. ಆದರೆ ತತ್ವವಾದಿಗಳು ಅಸಮವಾಯಿಕಾರಣವನ್ನು ಒಪ್ಪುವುದಿಲ್ಲ. ಸಮವಾಯಿ ಕಾರಣವನ್ನು ಉಪಾದಾನ ಎನ್ನುತ್ತಾರೆ. ಆದ್ದರಿಂದ ಕಾರ್ಯ ಹುಟ್ಟಲು ಕರ್ತೃ, ಉಪಾದಾನಕಾರಣ, ಕರ್ತೃಭಿನ್ನ ನಿಮಿತ್ತಕಾರಣ ಈ ಮೂರು ಬೇಕಾಗುವುದು. ಪ್ರಕೃತದಲ್ಲಿ ಮೂರು ಕಾರಣಗಳು ಇರುವುದರಿಂದ ಪ್ರತಿಬಿಂಬವು ಕಾರ್ಯವೇ ಆಗಿದೆ.

**ಕನ್ನಡಿ ಮೊದಲಾದ ಉಪಾಧಿಗಳು ಪ್ರತಿಬಿಂಬಕ್ಕೆ ಉಪಾದಾನವಾಗುವುದಿಲ್ಲ. ಏಕೆಂದರೆ ಘಟಕ್ಕೆ ಉಪಾದಾನವಾದ ಮಣ್ಣಿನ ಮುದ್ದೆಯು ವಿಕಾರವಾದಂತೆ ಇಲ್ಲಿ ಉಪಾಧಿವಿಕಾರವು ಕಾಣುವುದಿಲ್ಲ. ಆದ್ದರಿಂದ ಉಪಾಧಿಯು ಪ್ರತಿಬಿಂಬಕ್ಕೆ ಹೇಗೆ ಉಪಾದಾನ ಕಾರಣ ಎಂಬ ಪ್ರಶ್ನೆಗೆ ಉತ್ತರಿಸುತ್ತಾರೆ-**

**ಕಾರ್ಯಾತ್ಮನಾ ವಿಕರಣಾತ್ ವಿಕಾರೋ ದರ್ಪಣಸ್ಯ ಚ ।**
**ತಂತೋರಿವಾನುಮಂತವ್ಯೋ ಹಂತವ್ಯೋಽರ್ಥಃ ಕಥಂ ವದ ॥ ೧೫೭೪ ॥**

**ಅರ್ಥ–** ಕಾರ್ಯಾತ್ಮನಾ = ಪ್ರತಿಬಿಂಬವಾದ ಕಾರ್ಯಸ್ವರೂಪದಿಂದ, ವಿಕರಣಾತ್ = ವಿಕಾರವನ್ನು ಹೊಂದುವುದರಿಂದ, ದರ್ಪಣಸ್ಯ = ಕನ್ನಡಿಗೆ, ತಂತೋರಿವ = ಬಟ್ಟೆಗೆ ಉಪಾದಾನವಾದ ನೂಲಿನಂತೆ, ವಿಕಾರಶ್ಚ = ಸೂಕ್ಷ್ಮವಾದ ವಿಕಾರವು, ಅನುಮಂತವ್ಯಃ = ಅನುಮಾನದಿಂದ ತಿಳಿಯಲು ಯೋಗ್ಯವು. ಅರ್ಥಃ = ಪ್ರಮಾಣದೃಷ್ಟವಾದ ಈ ವಿಕಾರವು, ಕಥಂ ಹಂತವ್ಯಃ = ಹೇಗೆ ತಾನೆ ಇಲ್ಲವೆನ್ನಲು ಸಾಧ್ಯ? ವದ = ಹೇಳು.

**ಅನುವಾದ–** ಮಣ್ಣಿನಿಂದ ಘಟವಾಗುವಾಗ ವಿಕಾರವು ಸ್ಪಷ್ಟವಾಗಿ ಕಾಣುತ್ತದೆ. ಆದರೆ ನೂಲುಗಳು ಪಟಕ್ಕೆ ಉಪಾದಾನಕಾರಣವಾದರೂ ವಿಕಾರವು ಸ್ಪಷ್ಟವಾಗಿ ಕಾಣುವುದಿಲ್ಲ. ಆದರೂ ಸೂಕ್ಷ್ಮವಾದ ವಿಕಾರವನ್ನು ಇಟ್ಟುಕೊಂಡು ತಂತುವು ಪಟಕ್ಕೆ ಉಪಾದಾನ ಕಾರಣವಾಗಿದೆ. ಅದರಂತೆ ದರ್ಪಣದಲ್ಲಿಯೂ ಸೂಕ್ಷ್ಮವಾದ ವಿಕಾರವಾಗಿ ಪ್ರತಿಬಿಂಬೋಪಾದಾನತ್ವವು ಬರುತ್ತದೆ. ಆ ದರ್ಪಣವು ಮೊದಲು ಇಲ್ಲದಿರುವ ಪ್ರತಿಬಿಂಬದ ಆಕಾರವನ್ನು ತಿಳಿಸಿಕೊಡುತ್ತದೆ. ಇವೇ ಸೂಕ್ಷ್ಮವಾದ ವಿಕಾರ ವಾಗಿದೆ. ಇದನ್ನು ತಂತು ಪಟದೃಷ್ಟಾಂತದ ಅನುಮಾನದಿಂದ ತಿಳಿಯಬೇಕು ಹೊರತು ವಿಕಾರವೇ ಆಗಲಿಲ್ಲ ಎಂದು ಅಲ್ಲಗಳೆಯಬಾರದು.

**ಭಾವವಿಲಾಸಿನೀ–** ನನು ದರ್ಪಣೇ ಮೃತ್ಪಿಂಡಾದೇರಿವ ವಿಕಾರಾದರ್ಶನಾತ್ಕಥಮುಪಾದಾನತ್ವ ಮಿತ್ಯತ ಆಹ – **ಕಾರ್ಯಾತ್ಮನಾ ವಿಕರಣಾದಿತಿ ॥** ಪ್ರಾಗವಿದ್ಯಮಾನ- ಪ್ರತಿಬಿಂಬಾಕಾರಸ್ಯ ವಿಕರಣಾದಿತ್ಯರ್ಥಃ । ತಂತೋರಿವ ಯಥಾ ತಂತೋಃ ಸ್ಪಷ್ಟವಿಕಾರಾಭಾವೇಽಪಿ ಸೂಕ್ಷ್ಮತರ-ವಿಕಾರಮಾದಾಯ ಯಥಾ ಪಟೋಪಾದಾನತ್ವಂ ತಥಾ ದರ್ಪಣಸ್ಯಾಪಿ ಸೂಕ್ಷ್ಮವಿಕಾರೋಽ-ನುಮಂತವ್ಯಃ । ಅರ್ಥಃ ಪ್ರಮಾಣದೃಷ್ಟೋಽರ್ಥಃ ॥ ೧೫೭೪ ॥

**ವಿವರಣೆ–** ತಂತುಗಳನ್ನು ಆತಾನವಿತಾನಾತ್ಮಕವಾಗಿ ಹೆಣೆದು ಪಟವನ್ನು ಮಾಡುತ್ತಾರೆ. ಆ ಪಟದಲ್ಲಿರುವ ತಂತುಗಳಲ್ಲಿ ವಿಕಾರವು ಸ್ಥೂಲ ದೃಷ್ಟಿಗೆ ಕಾಣುವುದಿಲ್ಲ. ಆದರೆ ಸೂಕ್ಷ್ಮವಾಗಿ ವಿಮರ್ಶೆ ಮಾಡಿದಾಗ ವಿಕಾರವು ತಿಳಿಯುವುದು. ಹಾಗೆಯೇ ಪ್ರಕೃತದಲ್ಲಿ ಕನ್ನಡಿಯಲ್ಲಿ ಮೊದಲು ಏನೂ ಇರುವುದಿಲ್ಲ. ಬಿಂಬ ಸನ್ನಿಧಾನವು ಬಂದಾಗ ಕನ್ನಡಿಯು ಪ್ರತಿಬಿಂಬದ ಆಕಾರವಾಗಿ ಪರಿಣಾಮಗೊಳ್ಳುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಸಿದಾಗ ಗೊತ್ತಾಗುವುದು.

1. ದರ್ಪಣಂ ಪ್ರತಿಬಿಂಬೋಪಾದಾನಂ ಪ್ರಾಗವಿದ್ಯಮಾನಾಕಾರೇಣ ವಿಕಾರಾತ್ ।
2. ದರ್ಪಣಂ ಸೂಕ್ಷ್ಮವಿಕಾರವಾನ್ ಪ್ರಾಗವಿದ್ಯಮಾನಾಕಾರವಿವರಣಾತ್ ತಂತುವತ್।
3. ದರ್ಪಣಂ ಉಪಾದಾನಂ ಸೂಕ್ಷ್ಮವಿಕಾರವತ್ತ್ವಾತ್ ತಂತುವತ್ ।

**ಹೊರಗೆ ಕಾಣುವಾಗ ದರ್ಪಣಕ್ಕೆ ವಿಕಾರವು ಕಾಣದಿದ್ದರೂ ಪ್ರತಿಬಿಂಬದ ಸಮಾನ ಆಕಾರ ವಿವರಣೆಯನ್ನು ಪ್ರತಿಬಿಂಬಕ್ಕೆ ಮಾಡುವುದರಿಂದ ದರ್ಪಣಕ್ಕೂ ಸೂಕ್ಷ್ಮವಾದ ಒಳಗಿನ ವಿಕಾರವಿದೆ ಎಂಬ ವಿಷಯದಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ-**

**ಬಹಿರ್ವಿಕಾರಶೂನ್ಯಸ್ಯ ಜಠರಸ್ಯ ಯಥಾಂತರೇ ।**
**ಗುಲ್ಮಗ್ರಂಥಿವಿಕಾರಃ ಸ್ಯಾತ್ ತಥಾಽಯಂ ಚ ಭವಿಷ್ಯತಿ ॥ ೧೫೬೫ ॥**

**ಅರ್ಥ–** ಬಹಿರ್ವಿಕಾರಶೂನ್ಯಸ್ಯ = ಹೊರಗೆ ವಿಕಾರವು ಕಾಣದಿರುವ, ಜಠರಸ್ಯ = ಹೊಟ್ಟೆಗೆ, ಅಂತರೇ = ಒಳಗಡೆ, ಗುಲ್ಮಗ್ರಂಥಿವಿಕಾರಃ = ಗುಲ್ಮಗೆಡ್ಡೆಯರೂಪದಲ್ಲಿ ವಿಕಾರವೂ, ಯಥಾ= ಹೇಗೆ, ಸ್ಯಾತ್ = ಆಗುವುದೋ, ತಥಾ = ಹಾಗೆಯೇ, ಅಯಂ ಚ = ಈ ದರ್ಪಣದ ವಿಕಾರವೂ, ಭವಿಷ್ಯತಿ = ಆಗುವುದು.

**ಅನುವಾದ–** ಮೇಲ್ನೋಟಕ್ಕೆ ಹೊಟ್ಟೆಯಲ್ಲಿ ವಿಕಾರವು ಕಾಣುವುದಿಲ್ಲ ಆದರೂ ಹೊಟ್ಟೆಯಲ್ಲಿ ಗೆಡ್ಡೆಯು ಬೆಳೆದಿರುತ್ತದೆ. ಇದು ಸೂಕ್ಷ್ಮವಾಗಿ ನೋಡಿದಾಗ ಗೊತ್ತಾಗುವುದು. ಇಲ್ಲಿ ಜಠರವೇ ಗೆಡ್ಡೆಯ ರೂಪದಲ್ಲಿ ಪರಿಣಾಮಹೊಂದಿದ್ದು ಇದರಂತೆ ಮೇಲ್ನೋಟಕ್ಕೆ ದರ್ಪಣದಲ್ಲಿ ವಿಕಾರಕಾಣದಿದ್ದರೂ ಒಳಗಡೆ ಸಮಾನಾಕಾರ ವಿಕರಣೆಯಿಂದ ವಿಕಾರವು ಸೂಕ್ಷ್ಮದೃಷ್ಟಿಯಿಂದ ಕಾಣುವುದು.

**ಭಾವವಿಲಾಸಿನೀ–** ಬಹಿರ್ವಿಕಾರಾದರ್ಶನೇಽಪ್ಯಂತರ್ಮುಖಮಾನಾಕಾರವಿಕರಣಾದ್ದರ್ಪಣಸ್ಯಾಪಿ ವಿಕಾರಿತ್ವಂ ಭವತೀತ್ಯತ್ರ ದೃಷ್ಟಾಂತಮಾಹ – **ಬಹಿರಿತಿ** ॥ ೧೫೬೫ ॥

**ವಿವರಣೆ–** ಹೊಟ್ಟೆಯ ಒಳಗಿರುವ ಗೆಡ್ಡೆಯ ರೂಪದ ವಿಕಾರವು ಕ್ಷಕಿರಣಗಳಿಂದ ತಿಳಿಯುವಂತೆ ಈ ದರ್ಪಣದಲ್ಲಿ ಆದ ವಿಕಾರವನ್ನು ಸೂಕ್ಷ್ಮದೃಷ್ಟಿಯಿಂದ ಗಮನಿಸಬಹುದು.

**ಉಪಾಧಿಗಳಾದ ದರ್ಪಣಾದಿಗಳಿಗೆ ಪ್ರತಿಬಿಂಬರೂಪದಿಂದ ವಿಕಾರವಿದೆ ಎಂಬ ವಿಷಯವನ್ನು ಮಾಯಾವಾದಿಗಳಿಗೆ ಪ್ರತಿಬಂದಿಯನ್ನು ಕೊಟ್ಟು ಸಮರ್ಥನೆ ಮಾಡುತ್ತಾರೆ-**

**ಘಟಾತ್ಮನಾ ವಿಕರಣಂ ಮನಸೋ ಯೋऽನುಮನ್ಯತೇ ।**
**ಪ್ರತಿಬಿಂಬಾತ್ಮನೋಪಾಧೇರ್ವಿಕಾರೋऽಯಂ ಕುತೋऽಸ್ಯ ನ ॥ ೧೫೬೬ ॥**

**ಅರ್ಥ–** ಯಃ = ಯಾವ ಮಾಯಾವಾದಿಯು, ಮನಸಃ = ಅಂತಕರಣಕ್ಕೆ, ಘಟಾತ್ಮನಾ = ಮಡಕೆಯಆಕಾರದಿಂದ, ವಿಕರಣಂ= ವಿಕಾರವನ್ನು, ಅನುಮನ್ಯತೇ = ಪ್ರತ್ಯಕ್ಷಜ್ಞಾನ ಸಂದರ್ಭದಲ್ಲಿ ಅಂಗೀಕರಿಸುತ್ತಾನೆ, ಅಸ್ಯ = ಇಂತಹ ಮಾಯಾವಾದಿಗೆ, ಉಪಾಧೇಃ = ದರ್ಪಣಾದಿ ಉಪಾಧಿಗೆ, ಪ್ರತಿಬಿಂಬಾತ್ಮನಾ = ಪ್ರತಿಬಿಂಬದರೂಪದಿಂದ, ಅಯಂ ವಿಕಾರಃ = ಈ ವಿಕಾರವು, ಕುತಃ ನ = ಯಾಕಿಲ್ಲ?

**ಅನುವಾದ–** ಮಾಯಾವಾದಿಯು ಪ್ರತ್ಯಕ್ಷದಲ್ಲಿ ಮನಸ್ಸಿಗೆ ಘಟಾದಿವಸ್ತುಗಳ ರೂಪದಿಂದ ವಿಕಾರವನ್ನು ಒಪ್ಪಿದ್ದಾನೆ. ಈ ವಿಷಯವು ಯಾವಪ್ರಮಾಣದಿಂದಲೂ ಸಿದ್ಧವಾಗ ಲಿಲ್ಲ. ಆದರೆ ಇಲ್ಲಿ ಉಪಾಧಿ ದರ್ಪಣಾದಿಗೆ ಪ್ರತಿಬಿಂಬಾತ್ಮನಾ ವಿಕಾರವು ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಏಕೆ ಒಪ್ಪುವುದಿಲ್ಲ?

**ಭಾವವಿಲಾಸಿನೀ–** ಕಿಂಚ ಕೇದಾರಘಟಾದ್ಯಾಕಾರೇಣಾನಾನುಭವಿಕೋಮನಃ ಪರಿಣಾಮೋ ಯೇನಾಂಗೀಕ್ರಿಯತೇ ತಸ್ಯ ದೃಶ್ಯಮಾನೇಸ್ಮಿನ್ವಿಕಾರೇ ಕುತೋ ದ್ವೇಷ ಇತ್ಯಾಹ – **ಘಟಾತ್ಮನೇತಿ** ॥ ಅಸ್ಯ ಮಾಯಾವಾದಿನಃ ॥ ೧೫೬೬ ॥

**ವಿವರಣೆ–** ತತ್ವವಾದಿಗಳು ಇಂದ್ರಿಯಾರ್ಥಸನ್ನಿಕರ್ಷದಿಂದ ಪ್ರತ್ಯಕ್ಷವನ್ನು ಒಪ್ಪಿದ್ದಾರೆ. ಆದರೆ ಮಾಯಾವಾದಿಯ ವೃತ್ತಿಜ್ಞಾನ ಉಂಟಾಗುವ ಪ್ರಕ್ರಿಯೆ ಹೀಗಿದೆ. ಅಯಂ ಘಟಃ ಎಂಬ ಜ್ಞಾನವು ಬರುವ ಸಂದರ್ಭದಲ್ಲಿ ಅಂತಃ ಕರಣವು ಚಕ್ಷುರಿಂದ್ರಯದಿಂದ ಹೊರಗೆ ಬಂದು ಘಟಾತ್ಮನಾ ಪರಿಣಾಮ ಹೊಂದುತ್ತದೆ. ಅಲ್ಲಿ ಚೈತನ್ಯವು ಪ್ರತಿಫಲಿಸಿದಾ ಗ, ಈ ಜ್ಞಾನವು ಬರುವುದು ಎಂದು. ಈ ಪ್ರಕ್ರಿಯೆಯು ಯಾವ ಪ್ರಮಾಣದಿಂದ ಸಿದ್ಧವಾಗದದಿದ್ದರೂ ಒಪ್ಪಿರುವಾಗ, ಉಪಾಧಿಗೆ ಪ್ರತಿಬಿಂಬರೂಪದಿಂದ ಪರಿಣಾಮವನ್ನು ಒಪ್ಪಲೇಬೇಕು.

ಬಿಂಬವು ಉಪಾಧಿಯೊಳಗೆ ಪ್ರವೇಶಿಸುವುದಿಲ್ಲ, ಆದ್ದರಿಂದ ಬಿಂಬ ಪ್ರತಿಬಿಂಬಗಳು ಬೇರೆ ಎಂಬ ವಿಷಯವನ್ನು ದೂಷಣಾಂತರಗಳನ್ನು ಹೇಳಿ ಉಪಪಾದನೆ ಮಾಡುತ್ತಾರೆ-

**ದ್ವಾರಂ ವಿನಾ ಯತ್ ಪ್ರವೇಷ್ಟುಂ ನಾಲಂ ಮೃಣ್ಮಯಭಿತ್ತಿಷು ।**
**ಕಥಂ ಕಾಂಸ್ಯಂ ದೃಢದ್ರವ್ಯಂ ತದ್ ವಿಶೇತ್ ಮೃದುಲಂ ಮುಖಂ ॥೧೫೬೭॥**

**ಅರ್ಥ–** ಯತ್ = ಯಾವಕಾರಣದಿಂದ, ಮೃಣ್ಮಯಭಿತ್ತಿಷು = ಮಣ್ಣಿನ ಗೋಡೆಗಳಲ್ಲಿ, ದ್ವಾರಂ ವಿನಾ = ಬಾಗಿಲಿಲ್ಲದೆ, ಪ್ರವೇಷ್ಟುಂ = ಪ್ರವೇಶಿಸಲು, ನಾಲಂ =

ಸಮರ್ಥವಾಗುವುದಿಲ್ಲವೋ, ತತ್ = ಆ ಕಾರಣದಿಂದ, ದೃಢದ್ರವ್ಯಂ = ಗೋಡೆಗಿಂತಲೂ ಗಟ್ಟಿ ವಸ್ತುವಾದ, ಕಾಂಸ್ಯಂ = ಕಂಚಿನಕನ್ನಡಿಯನ್ನು ಮೃದುಲಂ = ಕೋಮಲವಾದ, ಮುಖಂ = ಮುಖವು, ಕಥಂ ವಿಶೇತ್ = ಹೇಗೆ ತಾನೇ ಪ್ರವೇಶಿಸೀತು?

**ಅನುವಾದ–** ಮುಖವನ್ನೇ ಪ್ರತಿಮುಖ ಎಂದು ಅಭೇದವನ್ನು ಹೇಳಲು ಸಾಧ್ಯವಿಲ್ಲ. ಹಾಗಿದ್ದರೆ ಮುಖವೇ ಕಂಚುಕನ್ನಡಿಯ ಒಳಗೆ ಪ್ರವೇಶ ಮಾಡಬೇಕಾದೀತು. ಇದು ಸಾಧ್ಯವಿಲ್ಲ. ಏಕೆಂದರೆ ಮಣ್ಣಿನ ಗೋಡೆಯು ಇದ್ದಾಗ ಒಳಗೆ ಪ್ರವೇಶಿಸಲು ಸಾಧ್ಯವಿಲ್ಲ. ಅದಕ್ಕೆ ಬಾಗಿಲನ್ನು ಇಟ್ಟು ಅದರಿಂದ ಒಳಪ್ರವೇಶಮಾಡುವುದು ಕಂಡಿದೆ. ಆದರೆ ಇಲ್ಲಿ ಉಪಾಧಿಯಾದ ಕಂಚುಕನ್ನಡಿಯು ಗೋಡೆಗಿಂತಲೂ ಗಟ್ಟಿಯಾದ ವಸ್ತು, ಅದರೊಳಗೆ ಕೋಮಲವಾದ ಮುಖವು ಪ್ರವೇಶಿಸಲು ಸಾಧ್ಯವಿಲ್ಲ. ಹೀಗೆ ಆ ಕಂಚಿನ ಕನ್ನಡಿಯಲ್ಲಿ ಕಾಣುವ ಪ್ರತಿಮುಖವು ಬೇರೆಯಾಗಿದೆ ಎಂದು ತಿಳಿಯಬೇಕು.

**ಭಾವವಿಲಾಸಿನೀ–ಪ್ರಾಗುಕ್ತಂ ದೂಷಣಾಂತರಂ ಚೋಪಪಾದಯತಿ– ದ್ವಾರಂ ವಿನೇತಿ ॥೧೫೬೭॥**

**ವಿವರಣೆ–** ಇಲ್ಲಿ ಕಾಂಸ್ಯ ಶಬ್ದಕ್ಕೆ ಕಂಚುಕನ್ನಡಿ ಎಂದರ್ಥ. ಹಿಂದಿನ ಕಾಲದಲ್ಲಿ ಅಂತಃಪುರದಲ್ಲಿ ಮುಖವನ್ನು ನೋಡಲು ದೃಢವಾದ ಕಂಚುಕನ್ನಡಿಯನ್ನು ಉಪಯೋಗಿಸುತ್ತಿದ್ದರು. ದೃಢದ್ರವ್ಯಂ ಶಬ್ದವು ಕಾಂಸ್ಯ ಶಬ್ದಕ್ಕೆ ವಿಶೇಷಣವಾಗಿದೆ. ಇದು ಹೇತುಗರ್ಭ ವಿಶೇಷಣವಾಗಿದೆ. ಇದರ ಅಭಿಪ್ರಾಯ, ಕಂಚಿಗಿಂತ ಸ್ವಲ್ಪ ಮೃದುವಾದ ಮಣ್ಣಿನ ಗೋಡೆಯೊಳಗೆ ಪ್ರವೇಶಿಸಲು ಆಗುವುದಿಲ್ಲ. ಹೀಗಿದ್ದಾಗ ಅದಕ್ಕಿಂತಲೂ ಗಟ್ಟಿಯಾದ ಕಂಚುಕನ್ನಡಿಯಲ್ಲಿ ಹೇಗೆ ಪ್ರವೇಶಿಸಲು ಸಾಧ್ಯ ಎಂಬುದಾಗಿ. ಮೃದುಲಂ ಮುಖಂ ಎಂದು ಹೇಳಿದ್ದರಿಂದ ಸ್ತ್ರೀಯರ ಕೋಮಲವಾದ ಮುಖ ಎಂಬ ಅರ್ಥವು ಸಿದ್ಧಿಸುವುದು.

**ಮುಖವೇ ಉಪಾಧಿಯಾದ ನೀರಿನೊಳಗೆ ಪ್ರವೇಶಿಸಿದೆ ಎಂದು ಅಂಗೀಕರಿಸಿದರೆ ಇನ್ನೂ ಎರಡು ದೋಷಗಳನ್ನು ಹೇಳುತ್ತಾರೆ-**

ಯದಿ ವಕ್ತ್ರಂ ಜಲಸ್ಯಾಂತಃ ಪ್ರವಿಷ್ಟಂ ಸತ್ ಪ್ರದೃಶ್ಯತೇ ।
ಪರಾಗ್ಭಾವಸ್ತರ್ಹಿ ಕುತೋ ನಹಿ ಮಜ್ಜನ್ಮುಖೇऽಸ್ಯಸೌ ॥ ೧೫೬೮ ॥

**ಅರ್ಥ–** ಯದಿ = ಒಂದು ವೇಳೆ, ವಕ್ತ್ರಂ = ಮುಖವು, ಜಲಸ್ಯ = ನೀರಿನ, ಅಂತಃ = ಒಳಗೆ, ಪ್ರವಿಷ್ಟಂ ಸತ್ = ಪ್ರವೇಶಿದ್ದಾಗಿ, ಪ್ರದೃಶ್ಯತೇ = ಕಾಣಲ್ಪಡುವುದಾದರೆ, ತರ್ಹಿ = ಆಗ ಪರಾಗ್ಭಾವಃ = ಎದುರಿಗೆ ಕಾಣುವಿಕೆಯು, ಕುತಃ = ಏಕೆ, ಮಜ್ಜನ್ಮುಖೇ = ಮುಳುಗುವ ಮುಖದಲ್ಲಿ ಅಸೌ = ಈ ಪರಾಗ್ಭಾವವು, ನ ಹಿ = ಇಲ್ಲವಷ್ಟೇ.

**ಅನುವಾದ–** ನೀರಿನಲ್ಲಿ ಮುಖವನ್ನು ನೋಡುವಾಗ ನಿಮ್ಮ ಮುಖವೇ ನೀರಿನ ಒಳಗೆ ಹೋಗಿ ಕಾಣುವುದಾದರೆ ನೀರಿನಲ್ಲಿ ಕಾಣುವ ಪ್ರತಿಮುಖವು

ಮೇಲ್ಮುಖವಾಗಿ ಏಕೆ ಇರುವುದು? ಯಾರೂ ಕೂಡ ಮುಳುಗವಾಗ ಮುಖವನ್ನು ಮೇಲ್ಮುಖವಾಗಿ ಮುಳುಗಿಸುವುದಿಲ್ಲ. ಆದ್ದರಿಂದ ಮುಳುಗಿದ ಮುಖದಲ್ಲಿ ಮೇಲ್ಮುಖತೆ ಇರದೆ ಅಧೋಮುಖತೆಯೇ ಇರುತ್ತದೆ. ನೀರೊಳಗೆ ಕಾಣುವ ಮುಖವು ಮೇಲ್ಮುಖವಾಗಿರುತ್ತದೆ. ನಮ್ಮ ಮುಖವು ಕೆಳಮುಖವಾಗಿ ರುತ್ತದೆ. ಈ ರೀತಿಯಾದ ವಿರುದ್ಧಧರ್ಮಗಳು ಇರುವುದರಿಂದ ಮುಖಪ್ರತಿ- ಮುಖಗಳು ಬೇರೆ ಬೇರೆಯದೇ ಆಗಿದೆ.

**ಭಾವವಿಲಾಸಿನೀ–** ಮುಖಸ್ಯೈವ ಜಲಾಂತಃ ಪ್ರವೇಶಾಂಗೀಕಾರೇ ಪುನರಪಿ ದೋಷದ್ವಯಮಾಹ **–ಯದಿವಕ್ತ್ರಮಿತಿ** ॥ ಮಜ್ಜನ್ಮುಖೇ ಸ್ನಾನಾರ್ಥಂ ಜಲಾಂತಃ ಪ್ರವೇಶಂ ಕುರ್ವತಿ। ಅಸೌ ಪರಾಗ್ಭಾವಃ ॥ ೧೫೬೮ ॥

**ವಿವರಣೆ–** ಯದಿ ಮುಖಮೇವ ಜಲೇ ಪ್ರವಿಷ್ಟಂಸತ್ ದೃಶ್ಯತೇ ತರ್ಹಿ ಪರಾಗ್ಭಾವಃ ನ ಸ್ಯಾತ್. ಮಜ್ಜನ್ಮುಖಂ ಪ್ರತಿಮುಖಂ ನ ಭವತಿ ಪರಾಗ್‌ಭಾವಾಭಾವಾತ್.

ಜಲಸ್ಥಂ ಚೇತ್ ಬಹಿರ್ನಸ್ಯಾತ್ ಬಹಿಸ್ಥಂ ಚ ಜಲೇ ಕುತಃ ।
ಮಜ್ಜನ್ ಮುಖಮಿವೈಕತ್ವಾತ್ ಏಕತ್ರೈವ ಭವೇದ್ಧಿ ತತ್ ॥ ೧೫೬೯ ॥

**ಅರ್ಥ–** ಯದಿ = ಒಂದು ವೇಳೆ, ಮಜ್ಜನ್‌ಮುಖಂ = ಮುಳುಗುವ ಮುಖವು, ಜಲಸ್ಥಂ ಚೇತ್ = ನೀರೊಳಗೆ ಇದ್ದದ್ದಾದರೆ, ಬಹಿಃ = ಹೊರಭಾಗದಲ್ಲಿ, ನಸ್ಯಾತ್= ಇರಬಾರದು, ಬಹಿಸ್ಥಂ ಮುಖಂ = ಹೊರಗೇ ಇರುವ ಮುಖವು, ಜಲೇ = ನೀರಲ್ಲಿ, ಕುತಃ ಸ್ಯಾತ್ = ಹೇಗೆ ತಾನೆ ಇದ್ದೀತು? ತತ್ = ಹೊರಗಿರುವ ಮುಖವು, ಮಜ್ಜನ್‌ಮುಖಮಿವ = ಮುಳುಗುವ ಮುಖದಂತೆ, ಏಕತ್ವಾತ್ = ಒಂದೇ ಆದ್ದರಿಂದ, ಏಕತ್ರೈವ = ಒಂದೇ ಕಡೆ, ಭವೇತ್ ಹಿ = ಇರಬೇಕಷ್ಟೇ?

**ಅನುವಾದ–** ಮುಖಪ್ರತಿಮುಖಗಳಿಗೆ ಅಭೇದವನ್ನು ಹೇಳುವ ವಾದಿಗಳು ಸ್ನಾನಕಾಲ ದಲ್ಲಿ ಮುಖವನ್ನು ಮುಳುಗಿಸಿದಾಗ ಹೊರಗೆ ಇರುವುದಿಲ್ಲ ಎಂದು ಒಪ್ಪುತ್ತಾರೆ. ಹೀಗಾದರೆ ಮುಳುಗುವ ಮೊದಲು ಹೊರಗಿರುವ ಮುಖವು ನೀರಿನ ಒಳಗೆ ಹೇಗೆ ತಾನೆ ಇರಲು ಸಾಧ್ಯವಾದೀತು? ಆದ್ದರಿಂದ ಮುಳುಗಿದಾಗ ಒಂದೇ ಮುಖವಿದ್ದಂತೆ ಮೊದಲೂ ಕೂಡ ಒಂದೇ ಮುಖವಿರುತ್ತದೆ. ಕಾಣುವ ಪ್ರತಿಮುಖವು ಬೇರೆಯಾಗಿದೆ ಎಂದು ಒಪ್ಪಿಕೊಳ್ಳಬೇಕು.

**ಭಾವವಿಲಾಸಿನೀ–** ತತ್ ಮುಖಮ್ ॥ ೧೫೬೯ ॥

**ವಿವರಣೆ–** ಪ್ರತಿಬಿಂಬವು ನೀರಿನಲ್ಲಿ ಮುಳುಗುವ ಮೊದಲು ಮಾತ್ರ ಕಾಣುತ್ತದೆ. ಮುಳುಗಿದಾಗ ಆ ಪ್ರತಿಮುಖವು ಕಾಣುವುದಿಲ್ಲ. ಹೊರಗೆ ಬೇರೆ ಮುಖವೂ ಇರುವುದಿಲ್ಲ. ಅದರಂತೆ ಮುಖವು ಹೊರಗಿರುವಾಗ ಒಳಗಿರುವ ಪ್ರತಿಮುಖವನ್ನು ಬೇರೆಯೆಂದೇ

ಹೇಳಬೇಕು. ಮುಖವೇ ನೀರಿನ ಒಳಗೆ ಹೋಗಿದೆ ಎಂದು ಹೇಳುವುದು ಸರಿಯಲ್ಲ ಎಂದು ವಾದಿರಾಜರು ಸ್ವಾರಸ್ಯಕರವಾಗಿ ಪ್ರತಿಪಾದಿಸಿದ್ದಾರೆ.

ಯುಕ್ತಿ -

1. ಬಹಿಸ್ಥಂ ಮುಖಂ ಏಕತ್ರೈವ ಭವತಿ ಏಕತ್ವಾತ್, ಮಜ್ಜನ್ಮುಖವತ್.

2. ಬಹಿಸ್ಥಂ ಮುಖಂ ಜಲೇ ನ ಭವತಿ ಜಲಸ್ಥಸ್ಯ ಮುಖಸ್ಯ ಬಹಿರಭಾವಾತ್.

**ಹಿಂದೆ ಹೇಳಿದ ದೋಷವನ್ನು ವಿಕಲ್ಪಮಾಡಿಕೊಂಡು ದೃಢೀಕರಿಸುತ್ತಾರೆ-**

**ಯದ್ಯಾದರ್ಶೇ ಮುಖಂ ಸತ್ ತೇ ದೋಷೋಽಯಂ ದುಸ್ತರಸ್ತದಾ ।**
**ನ ಚೇತ್ ತದಾಧಾರತಾಧೀಃ ಭ್ರಮತ್ವಾನ್ನೈವ ಸಾಧಿಕಾ ॥ ೧೫೭೦ ॥**

**ಅರ್ಥ–** ಯದಿ = ಒಂದು ವೇಳೆ, ಆದರ್ಶೇ = ಕನ್ನಡಿಯಲ್ಲಿ, ಮುಖಂ = ಮುಖವು, ತೇ= ನಿನಗೆ, ಸತ್ = ಸತ್ಯವಾಗಿರುವುದಾದರೆ, ತದಾ = ಆಗ, ಅಯಂ ದೋಷಃ = ಹಿಂದೆ ಹೇಳಿದ ದೋಷವು, ದುಸ್ತರಃ = ಪರಿಹರಿಸಲಾಗುವುದಿಲ್ಲ, ನ ಚೇತ್ = ಕನ್ನಡಿಯಲ್ಲಿರುವ ಮುಖವು ಸತ್ಯವಾಗಿಲ್ಲದಿದ್ದರೆ, ತದಾ = ಆಗ, ಆಧಾರತಾಧೀಃ = ಕನ್ನಡಿಯಲ್ಲಿ ಮುಖವಿದೆ ಎಂಬ ಕನ್ನಡಿಗೆ ಆಧಾರತ್ವವನ್ನು ವಿಷಯೀಕರಿಸುವ ಜ್ಞಾನವು, ಭ್ರಮತ್ವಾತ್ = ಭ್ರಾಂತಿಯಾದದ್ದರಿಂದ, ನೈವ ಸಾಧಿಕಾ = ಪ್ರತಿಮುಖಕ್ಕೆ ಮುಖದ ಅಭೇದವನ್ನು ಸಾಧಿಸುವುದಿಲ್ಲ.

**ಅನುವಾದ–** ದರ್ಪಣದಲ್ಲಿ ಕಾಣುವ ಪ್ರತಿಮುಖವು ನಿಜವಾದ ಮುಖವೇ ಆಗಿದ್ದರೆ, ಹಿಂದೆ ಹೇಳಿದ ದೋಷಗಳನ್ನು ಪರಿಹರಿಸಲಾಗುವುದಿಲ್ಲ. ಆ ಕಾಣುವ ಪ್ರತಿಬಿಂಬವು ಸುಳ್ಳಾದರೆ ಮುಖ ಮತ್ತು ಪ್ರತಿಮುಖಗಳಿಗೆ ಅಭೇದವನ್ನು ಸಾಧಿಸುವ ಪ್ರಮಾಣವಿಲ್ಲದಂತಾಗುತ್ತದೆ. ಏಕೆಂದರೆ ಪ್ರತಿವಾದಿಯು ದರ್ಪಣೇ ಮುಖಂ ಎಂಬ ಪ್ರತ್ಯಕ್ಷದಿಂದ ಮುಖ ಮತ್ತು ಪ್ರತಿಮುಖಗಳಿಗೆ ಐಕ್ಯವನ್ನು ಸಾಧಿಸುತ್ತಾನೆ. ಆದರೆ ಕನ್ನಡಿಯಲ್ಲಿರುವ ಮುಖವು ಸುಳ್ಳಾದರೆ ಈ ಜ್ಞಾನವುಭ್ರಮೆ ಯಾಗುತ್ತದೆ. ಈ ಭ್ರಾಂತ್ಯಾತ್ಮಕಜ್ಞಾನವು ಅಭೇದವನ್ನು ಸಾಧಿಸಿಕೊಡುವುದಿಲ್ಲ.

**ಭಾವವಿಲಾಸಿನೀ–** ಉಕ್ತಮೇವ ದೂಷಣಂ ವಿಕಲ್ಪಮುಖೇನ ದೃಢಯತಿ ॥ **ಯದ್ಯಾದರ್ಶ ಇತಿ ॥** ಸತ್ ಯಥಾರ್ಥತಯಾ ವಿದ್ಯಮಾನಮ್ । ತೇ ಮತೇ । ನಚೇತ್ ಯಥಾರ್ಥತಯಾ ವಿದ್ಯಮಾನಂ ನಚೇತ್। ಭ್ರಮತ್ವಾತ್ ದರ್ಪಣೇ ಮುಖಮಿತಿ ಪ್ರತೀತೇರ್ಭ್ರಮತ್ವಾತ್ । ಸಾಧಿಕಾ ಪ್ರತಿಮುಖಸ್ಯ ಮುಖತ್ವಸಾಧಿಕಾ ॥ ೧೫೭೦ ॥

**ವಿವರಣೆ–** ಇಲ್ಲಿ ಶ್ಲೋಕದಲ್ಲಿ ಆಧಾರತಾಧೀಃ ಎಂಬ ಶಬ್ದಕ್ಕೆ ದರ್ಪಣಕ್ಕೆ ಆಧಾರತ್ವವನ್ನು ಮುಖಕ್ಕೆ ಆಧೇಯತ್ವವನ್ನು ವಿಷಯೀಕರಿಸುವ ದರ್ಪಣೇ ಮುಖಂ ಎಂಬ ಜ್ಞಾನವನ್ನು ಇಟ್ಟುಕೊಳ್ಳಬೇಕು. ಈ ಜ್ಞಾನವು ಭ್ರಾಂತಿಯಾದರೆ ಇದರಿಂದ ಅಭೇದವು ಸಿದ್ಧಿಸುವುದಿಲ್ಲ.

ಯುಕ್ತಿ - 1. ಮುಖಂ ದರ್ಪಣಸ್ಥಂ ನ ಭವತಿ ಪರಾಗ್‌ಭಾವಾಭಾವಾತ್ ।

2. ಅಸದ್ವಿಷಯಕಂ ದರ್ಪಣೇ ಮುಖಂ ಇತಿ ಜ್ಞಾನಂಸಾಧಕಂ ನ ಭವತಿ ಭ್ರಮತ್ವಾತ್ ।

3. ದರ್ಪಣೇ ಮುಖಂ ಇತಿ ಜ್ಞಾನಂ ಪ್ರತಿಮುಖಸ್ಯ ಮುಖತ್ವಸಾಧಿಕಾ ನ ಭವತಿ ಭ್ರಮತ್ವಾತ್ ।

**ಮಾಯಾವಾದಿಗಳು ಮುಖದ ಪ್ರತಿಬಿಂಬಕ್ಕೆ ಮುಖದ ಅಭೇದವನ್ನು ಈ ರೀತಿಯಾಗಿ ಸಾಧಿಸುತ್ತಾರೆ, ಹೇಗೆಂದರೆ ಗಟ್ಟಿಯಾದ ಮರಕ್ಕೆ ಬಾಣವನ್ನು ಬಿಟ್ಟಾಗ ಅದು ಮರವನ್ನು ಬಡಿದು ಪುನಃ ಹಿಂತಿರುಗಿ ಬರುವುದು, ಅದರಂತೆ ಮುಖಕ್ಕೆ ಕನ್ನಡಿಯ ಸಂಬಂಧ ಆದಾಗ ಚಕ್ಷುರಿಂದ್ರಿಯವು ಹೊರಗೆ ಹೋಗಿ ಆ ಕನ್ನಡಿಗೆ ಬಡಿದು ಪುನಃ ಹಿಂತಿರುಗಿ ಬರುವುದು. ಆ ಹಿಂತಿರುಗಿದ ಕಣ್ಣು ಮುಖವನ್ನೇ ಕಂಡು ಇದಂ ಮುಖಂ ಎಂಬ ಜ್ಞಾನವು ಬರುವುದು, ಹೊರತು ಮುಖಕ್ಕಿಂತ ಬೇರೆಯಾದ ಪ್ರತಿಬಿಂಬವಿಲ್ಲ ಎಂಬುದನ್ನು ಅನುವಾದ ಮಾಡಿ ಮುಂದಿನ ಶ್ಲೋಕಗಳಲ್ಲಿಖಂಡಿಸುತ್ತಾರೆ-**

**ಯಾ ಚ ದರ್ಪಣಸಂಬಂಧಾತ್ ಚಕ್ಷುಷಃ ಪೃಷ್ಠತೋಗತಿಃ ।**
**ಮುಖಸ್ಯೈವೇಕ್ಷಣಂ ಚೋಕ್ತಂ ತಚ್ಚಿತ್ರಮಿತಿ ಮೇ ಮತಿಃ ॥ ೧೫೭೧ ॥**

**ನಯಚ್ಛೈಲಾನ್ನ ನಿವವೃತೇ ನ ಕ್ರೂರಾದನಲಾದಪಿ।**
**ತಚ್ಚಕ್ಷುಃ ಪಶ್ಯತಃ ಸ್ವಾಸ್ಯಂ ಜಲಾತ್ ಕಿಲ ನಿವರ್ತತೇ ॥ ೧೫೭೨ ॥**

**ಅರ್ಥ–** ದರ್ಪಣಸಂಬಂಧಾತ್ = ಕನ್ನಡಿಯ ಸಂಬಂಧದಿಂದ, ಯಾ = ಯಾವ, ಚಕ್ಷುಷಃ= ಕಣ್ಣಿನ, ಪೃಷ್ಠತೋಗತಿಃ = ಹಿಂತಿರುಗಿ ಬರುವಿಕೆಯು, ಚ = ಮತ್ತು, ಮುಖಸ್ಯೈವ = ತನ್ನ ಮುಖವನ್ನೇ, ಈಕ್ಷಣಂ ಚ = ನೋಡುವಿಕೆಯೂ ಕೂಡ, ಉಕ್ತಂ = ಹೇಳಲ್ಪಟ್ಟಿದೆಯೋ, ತತ್= ಅದು, ಚಿತ್ರಮಿತಿ = ಆಶ್ಚರ್ಯ ಎಂದು, ಮೇ = ನನ್ನ, ಮತಿಃ = ಅಭಿಪ್ರಾಯವು. ಯತ್= ಯಾವ ಕಣ್ಣು, ಶೈಲಾತ್ = ಶಿಲಾಮಯವಾದ ಅತಿಕಠಿಣವಾದ ಪರ್ವತದಿಂದ, ನ ನಿವವೃತೇ = ಹಿಂತಿರುಗಲಿಲ್ಲವೋ, ಅಪಿ = ಮತ್ತು, ಕ್ರೂರಾತ್ = ಭಯಂಕರವಾದ, ಅನಲಾತ್ = ಬೆಂಕಿಯ ದೆಸೆಯಿಂದಲೂ, ನ ನಿವವೃತೇ = ಹಿಂತಿರುಗಲಿಲ್ಲವೋ, ಪಶ್ಯತಃ = ನೋಡುವ ವ್ಯಕ್ತಿಯ, ತಚ್ಚಕ್ಷುಃ = ಆ ಕಣ್ಣು, ಸ್ವಾಸ್ಯಂ = ತನ್ನ ಮುಖವನ್ನು, ಜಲಾತ್ = ಮೃದುಪದಾರ್ಥವಾದ ನೀರಿನಿಂದ, ನಿವವೃತೇ = ಹಿಂತಿರುಗುತ್ತದೆ. ಇತಿ = ಎಂಬುದು, ಕಿಲ = ಅಪಹಾಸ್ಯವು.

**ಅನುವಾದ–** **ಮುಖಕ್ಕೆ ಕನ್ನಡಿಮೊದಲಾದ ಉಪಾಧಿಸಂಬಂಧವಾದಾಗ ಚಕ್ಷುರಿಂದ್ರಿಯವು ಗೋಳಕದಮೂಲಕ ಹೊರಗೆ ಬಂದು ಆ ಕನ್ನಡಿಗೆ ಬಡಿದು ಹಿಂತಿರುಗುತ್ತದೆ. ಎಂದು ಮಾಯಾವಾದಿಗಳು ಹೇಳುತ್ತಾರೆ. ಆದರೆ ಇದು ಅತ್ಯಾಶ್ಚರ್ಯಕರಸಂಗತಿ ಎಂದು ನನ್ನ ಅಭಿಪ್ರಾಯ. ಏಕೆಂದರೆ, ಅತಿಕಠಿಣವಾದ**

ಪರ್ವತವನ್ನು ಹಾಗೂ ಅತಿಭಯಂಕರವಾದ ಬೆಂಕಿಯನ್ನು ಕಣ್ಣಿನಿಂದ ನೋಡುತ್ತೇವೆ. ಆಗ ಗೋಳಕದ ಮೂಲಕ ಚಕ್ಷುಸ್ಸು ಹೊರಗೆ ಹೋಗಿ ಆ ಪರ್ವತಾದಿಗಳಿಗೆ ಬಡಿಯುತ್ತದೆ. ಆದರೆ ಪುನಃ ಹಿಂತಿರುಗಿ ಬರುವುದಿಲ್ಲ. ಆದರೆ ಮುಖವನ್ನು ಮೃದುವಾದ ಜಲದಲ್ಲಿ ನೋಡುವಾಗ ಮಾತ್ರ ಚಕ್ಷುರಿಂದ್ರಿಯವು ಹಿಂತಿರುಗಿ ಬರುತ್ತದೆ ಎಂಬುದು ಹಾಸ್ಯ ಸಂಗತಿಯಾಗಿದೆ.

**ಭಾವವಿಲಾಸಿನೀ–** ದರ್ಪಣಸಂಯೋಗೇ ಸತಿ ದಾರುಪ್ರೋತಶರವತ್ತದಾಘಾತವಶಾತ್ ಪರಾವೃತ್ತ್ಯೈವಾಗತಂ ನಯನಂ ಮುಖಂ ಪಶ್ಯತೀತಿ ಚ ಮಾಯಿನೋವದಂತಿ ತದನೂದ್ಯ ದೂಷಯತಿ **– ಯಾಚೇತ್ಯಾದಿನಾ** ॥ ಯಚ್ಚಕ್ಷುಃ ಶೈಲಾ ಚ್ಛಿಲಾಮಯಾದತಿಕಠಿನಾತ್ ಪರ್ವತಾತ್ । ಕಿಲೇತ್ಯ-ಪಹಾಸಃ। ಕಠಿನದ್ರವ್ಯತ್ವಾದ್ದರ್ಪಣಾನ್ನಿವರ್ತತೇ ಚೇತ್ ಮೃದುಲಾಜ್ಜಲಾನ್ನಿವೃತ್ತಿರ್ನಸ್ಯಾತ್ । ಶೈಲಾಗ್ನ್ಯಾದೇಶ್ಚ ಸುತರಾಂ ನಿವೃತ್ತ್ಯಾತತ್ರಾಪೀದಂ ಮುಖಮಿತ್ಯೇವ ಪ್ರತೀತಿಃ ಸ್ಯಾತ್ । ಅಯಂ ಗಿರಿರಿತ್ಯಾದಿ ಪ್ರತೀತಿಃ ಕದಾಪಿ ನ ಸ್ಯಾತ್ । ಕಠಿನಾದ್ವಾಮೃದುಲಾದ್ವಾನಿವೃತ್ತಿಸ್ವಭಾವಾದೇವ ನಿವರ್ತತೇ ಚೇತ್ತರ್ಹಿ ದೂರಸ್ಥ ತಟಾಕಜಲಾದಪಿ ನಿವರ್ತೇತ । ಕಿಂಚೈವ ಸತಿ ಚಕ್ಷುಷಾ ಸಕಲ-ಪದಾರ್ಥದರ್ಶನೇಪಿ ಮುಖಮಿತ್ಯೇವ ಪ್ರತೀತಿಃ ಸ್ಯಾತ್ । ತತ್ತದರ್ಥಪ್ರತೀತಿಃ ಕದಾಪಿ ನ ಸ್ಯಾತ್ । ಏವಂಚ ತ್ವಮಂಧೋ ವಾ ಸ್ಯಾಃ ಮಹೋನ್ಮತ್ತೋ ವಾ ಸ್ಯಾ ಇತ್ಯಪಹಾಸಸ್ಯಾ-ವರ್ಜನೀಯತ್ವಾತ್ ॥ ೧೫೭೧-೧೫೭೨ ॥

**ವಿವರಣೆ–** ವಾದಿರಾಜರು ಇಲ್ಲಿ ಕಿಲ ಎಂಬ ಶಬ್ದವನ್ನು ಅಪಹಾಸ ಎಂಬ ಅರ್ಥದಲ್ಲಿ ಬಳಸಿದ್ದಾರೆ. ಅದರ ವಿವರಣೆಯನ್ನು ಸುರೋತ್ತಮ ತೀರ್ಥರು ಹೀಗೆ ಮಾಡಿದ್ದಾರೆ. ಚಕ್ಷುರಿಂದ್ರಿಯವು ಕನ್ನಡಿಯಲ್ಲಿ ಮುಖವನ್ನು ನೋಡುವಾಗ ಹಿಂತಿರುಗುತ್ತದೆ. ಅದಕ್ಕೆ ಕಾರಣ ಕನ್ನಡಿಯು ಕಠಿಣದ್ರವ್ಯವಾಗಿದೆ. ಹೇಗೆಂದರೆ ಗಟ್ಟಿಯಾದ ಗೋಡೆಗೆ ಚೆಂಡನ್ನು ಬಡಿದಾಗ ಹಿಂತಿರುಗಿ ಬರುವಂತೆ. ಆದರೆ ಜಲದಲ್ಲಿ ಮುಖವನ್ನು ನೋಡಿದಾಗ ಚಕ್ಷುರಿಂದ್ರಿಯವು ಹಿಂತಿರುಗಿ ಬರಬಾರದು ಏಕೆಂದರೆ ಜಲವು ಮೃದುದ್ರವ್ಯವಾಗಿದೆ. ಹಿಂತಿರುಗಿ ಬರುವುದಕ್ಕೆ ಕಠಿಣದ್ರವ್ಯತ್ವವೇ ಕಾರಣವಾದರೆ ಪರ್ವತ, ಅಗ್ನಿಗಳನ್ನು ನೋಡುವಾಗಲೂ ಕೂಡ ಚಕ್ಷುರಿಂದ್ರಿಯವು ಹಿಂತಿರುಗಿ ಬಂದು ಇದಂ ಮುಖಂ ಎಂಬ ಪ್ರತ್ಯಕ್ಷವೇ ಬರಬೇಕು. ಹೊರತು ಅಯಂ ಗಿರಿಃ ಅಯಂ ಅಗ್ನಿಃ ಎಂಬ ಜ್ಞಾನವು ಬರಬಾರದು. ಆದ್ದರಿಂದ ಕಠಿಣದ್ರವ್ಯತ್ವವನ್ನು ಚಕ್ಷುರಿಂದ್ರಿಯದ ಹಿಂತಿರುಗುವಿಕೆಗೆ ಕಾರಣ ಎಂದು ಹೇಳಬಾರದು.

ವಸ್ತುವು ಕಠಿಣವಾಗಲೀ, ಮೃದುವಾಗಲೀ, ಇದು ಚಕ್ಷುರಿಂದ್ರಿಯದ ಹಿಂತಿರುಗುವಿಕೆಗೆ ಪ್ರಯೋಜಕವಲ್ಲ. ದ್ರವ್ಯಸ್ವಭಾವವೇ ಚಕ್ಷುರಿಂದ್ರಿಯದ ಹಿಂತಿರುಗುವಿಕೆಗೆ ಪ್ರಯೋಜಕ. ಈ ಸ್ವಭಾವವು ದರ್ಪಣಮೊದಲಾದ ಉಪಾಧಿಗಳಲ್ಲಿದೆ. ಆದ್ದರಿಂದ ಚಕ್ಷುಸ್ಸು ಹಿಂತಿರುಗಿ ಇದಂ ಮುಖಂ ಎಂಬ ಜ್ಞಾನವು ಬರುವುದು ಎಂಬ ವಾದವೂ ಸರಿಯಲ್ಲ. ಹೀಗಾದರೆ

ದೂರದಲ್ಲಿರುವ ಸರೋವರದ ನೀರನ್ನು ನೋಡಿದಾಗಲೂ ಇದಂ ಮುಖಂ ಎಂಬ ಜ್ಞಾನವು ಬರಬೇಕು. ಆದರೆ ಇದಂ ಸರಃ ಎಂಬ ಜ್ಞಾನವೇ ಬರುತ್ತದೆ.

ಪ್ರತ್ಯಕ್ಷದಲ್ಲಿ ಚಕ್ಷಸ್ಸು ಹಿಂತಿರುಗಿ ಬರುವುದಾದರೆ ಕಣ್ಣಿನಿಂದ ಎಲ್ಲಾ ಪದಾರ್ಥಗಳನ್ನು ನೋಡುವಾಗಲೂ ಕೂಡ ಇದಂ ಮುಖಂ ಎಂಬ ಜ್ಞಾನವೇ ಬರಬೇಕು. ಆ ವಸ್ತುಗಳ ಜ್ಞಾನವು ಯಾವಾಗಲೂ ಬರಬಾರದು. ಹೀಗೆ ಎಲ್ಲ ವಸ್ತುಗಳನ್ನು ನೋಡುವಾಗಲೂ ಮುಖದ ಪ್ರತೀತಿಯೇ ಬರಬೇಕಾಗುವುದರಿಂದ ಈ ಸಿದ್ಧಾಂತವನ್ನು ಒಪ್ಪುವ ಮಾಯಾ ವಾದಿಯು ಕುರುಡನೇ ಆಗಿರಬೇಕು. ಅಥವಾ ದೊಡ್ಡ ಹುಚ್ಚನಾಗಿರಬೇಕು ಎಂಬ ಅಪ ಹಾಸ್ಯವು ತಿಳಿದುಬರುತ್ತದೆ.

**ಉಪಾಧಿಸಂಬಂಧವಾದಾಗ ಚಕ್ಷುಸ್ಸು ದರ್ಪಣದಿಂದ ಹಿಂತಿರುಗಿ ಮುಖವನ್ನು ನೋಡುತ್ತದೆ ಎಂಬ ವಾದವನ್ನು ದೂಷಣಾಂತರಗಳಿಂದ ಖಂಡಿಸುತ್ತಾರೆ-**

**ಯತಃ ಶಿಲಾಯಾ ಯೋಗೇಽಪಿ ದಾರುಪ್ರೋತಮುಖಃ ಶರಃ ।**
**ಯಥಾಗತಂ ತಥಾಽಽಯಾತಿ ಪೃಷ್ಠಂ ಪೃಷ್ಠಂ ಮುಖಂ ಮುಖಮ್ ॥ ೧೫೭೩॥**

**ತತಶ್ಚಕ್ಷುಃಪರಾವೃತ್ತಿರಪಿ ಸ್ಯಾತ್ ಈದೃಶೀ ಪರಂ ।**
**ಪುಂವತ್ ಕಿಂ ವಕ್ತುಮುಚಿತಾ ನಿವೃತ್ತಿಃ ಸ್ವೇಚ್ಛಯಾ ಜಡೇ ॥ ೧೫೭೪ ॥**

**ಅರ್ಥ–** ಯತಃ = ಯಾವ ಕಾರಣದಿಂದ, ದಾರುಪ್ರೋತ್ತಮುಖಃ = ಮರದಿಂದ ಮಾಡಿದ ತುದಿಯುಳ್ಳ, ಶರಃ = ಬಾಣವು, ಶಿಲಾಯಾಃ = ಕಲ್ಲಿನ, ಯೋಗೇಽಪಿ = ಸಂಯೋಗವಾದರೂ, ಪೃಷ್ಠಂ = ಹಿಂಭಾಗವು, ಮುಖಂ = ತುದಿಭಾಗವು, ಯಥಾಗತಂ = ಹೇಗೆ ಹೋಯಿತೋ, ತಥಾ = ಹಾಗೆಯೇ, ಎಂದರೆ, ಪೃಷ್ಠಂ= ಹಿಂಭಾಗವು, ಪೃಷ್ಠಂ= ಹಿಂಬಾಗವೇ ಆಗಿ, ಮುಖಂ= ತುದಿಯು, ಮುಖಂ= ತುದಿಯೇ ಆಗಿ, ಆಯಾತಿ = ಹಿಂತಿರುಗುತ್ತದೆಯೋ, ತತಃ = ಆದ್ದರಿಂದ, ಚಕ್ಷುಃಪರಾವೃತ್ತಿರಪಿ = ಕಣ್ಣಿನ ಹಿಂತಿರುಗುವಿಕೆಯು ಕೂಡ, ಈದೃಶೀ = ದಾರುಪ್ರೋತಶರದಂತೆ ಹೇಗೆ ಹೋಯಿತೋ ಹಾಗೆಯೇ ಹಿಂತಿರುಗುವಿಕೆಯು, ಸ್ಯಾತ್ = ಆಗಬೇಕಾದೀತು. ಜಡೇ = ಜಡವಾದ ಕಣ್ಣಿನಲ್ಲಿ, ಪುಂವತ್ = ಚೇತನದಂತೆ, ಸ್ವೇಚ್ಛಯಾ = ತನ್ನ ಇಚ್ಛಾನುಸಾರವಾಗಿ, ನಿವೃತ್ತಿಃ = ಹಿಂತಿರುಗುವಿಕೆಯು, ಪರಂ ಪ್ರತಿ = ಇನ್ನೊಬ್ಬನನ್ನು ಕುರಿತು, ವಕ್ತುಂ = ಹೇಳಲು, ಉಚಿತಾ ಕಿಂ = ಯೋಗ್ಯವಾಗುತ್ತದೆಯೇನು? (ಹೇಳಲು ಆಗುವುದಿಲ್ಲ)

**ಅನುವಾದ– ಮರದಿಂದ ಮಾಡಿದ ತುದಿಭಾಗವುಳ್ಳ ಶರವನ್ನು ಕಲ್ಲಿಗೆ ಬಿಸಾಡಿದಾಗ ಅದು ಕಲ್ಲಿಗೆ ತಾಗಿ ಹಾಗೆಯೇ ಹಿಂತಿರುಗಿ ಬರುತ್ತದೆ. ಆದರೆ ಬರುವಾಗ, ಹೋಗುವಾಗ ಯಾವಕಡೆ ತುದಿಭಾಗ, ಹಿಂಭಾಗ ಇರುತ್ತದೋ ಅದು ಅದೇ**

ರೀತಿಯಾಗಿರುತ್ತದೆ, ಹೊರತು ತುದಿಭಾಗ ಹಿಂಭಾಗಗಳು ತಿರುಗಿರುವುದಿಲ್ಲ. ಅದರಂತೆ ದರ್ಪಣಕ್ಕೆ ಮುಖಸಂಬಂಧವಾದಾಗ ಚಕ್ಷುರಿಂದ್ರಯವು ದರ್ಪಣಕ್ಕೆ ತಾಕಿ ಹಿಂತಿರುಗಿ ಬರುವಾಗಲೂ ಅದರ ಹಿಂಬದಿ ಮತ್ತು ಮುಂಬದಿಯು ಹೋಗುವಾಗ ಇರುವಂತೆಯೇ ಇರಬೇಕು, ಹೊರತು ವ್ಯತ್ಯಾಸವಾಗುವುದು ಲೋಕದಲ್ಲಿ ದೃಷ್ಟವಾಗಿಲ್ಲ. ಹಾಗೆಯೇ ಚಕ್ಷುರಿಂದ್ರಿಯವು ಜಡವಾದದ್ದರಿಂದ ಚೇತನದಂತೆ ಸ್ವೇಚ್ಛಾನುಸಾರವಾಗಿ ವ್ಯತ್ಯಾಸಮಾಡಿಕೊಂಡು ಮುಖಕ್ಕೆ ಅಭಿಮುಖವಾಗಿ ಹಿಂತಿರುಗಲು ಸಾಧ್ಯವಿಲ್ಲ. ಮುಖಕ್ಕೆ ಅಭಿಮುಖವಾಗಿ ಹಿಂತಿರುಗಿ ಬರದಿದ್ದರೆ ಕಣ್ಣಿಗೆ ಮುಖವು ಕಾಣದೇ ಇರುವುದರಿಂದ ಇದಂ ಮುಖಂ ಎಂಬ ಪ್ರತ್ಯಕ್ಷವೇ ಬರಲಾರದು.

**ಭಾವವಿಲಾಸಿನೀ– ದೂಷಣಾಂತರಂ ಚಾಹ – ಯತ ಇತಿ** ॥ ೧೫೭೩ ॥

ಈದೃಶೀ ದಾರುಪ್ರೋತಶರವತ್ ಯಥಾಗತಮೇವ ನಿವೃತ್ತಿಃ ಸ್ಯಾತ್ । ನತು ಮುಖಾಭಿಮುಖ್ಯೇನ । ಏವಂಚ ಮುಖಪ್ರತೀತಿರಪಿ ನಸ್ಯಾದಿತಿ ಭಾವಃ । ಅಸಂಭಾವಿತಂ ಚ ಜಡಸ್ಯ ಚಕ್ಷುಷೋ ವಿಷಯಾಭಿಮುಖ್ಯೇನ ಪ್ರಾಗ್ಗತಸ್ಯ ಮುಖಾಭಿಮುಖ್ಯೇನ ಪುನರಾಗಮನಮಿತ್ಯಾಹ **– ಪುಂವದಿತಿ** ॥ ೧೫೭೪ ॥

**ವಿವರಣೆ–** ದಾರುಪ್ರೋತಶರಶಬ್ದವು ಮರದಿಂದ ಮಾಡಿದ ತುದಿಬಾಗವುಳ್ಳ ಬಾಣದಂತಿರುವ ಒಂದು ಆಟಿಕೆ. ಅದನ್ನು ಕಲ್ಲಿಗೆ ಬಿಸಾಡಿದಾಗ ಅದು ನಮಗೆ ಅಭಿಮುಖವಾಗಿ ಬರದೆ ಹೋದರೀತಿಯಲ್ಲಿಯೇ ಹಿಂತಿರುತ್ತದೆ. ಹಾಗೆಯೇ ಈ ಕಣ್ಣು ಅದರಂತೆ ಜಡವಾಗಿದೆ. ಒಂದು ವೇಳೆ ಚೇತನವಾಗಿದ್ದರೆ ಸ್ವೇಚ್ಛೆಯಿಂದ ವ್ಯತ್ಯಾಸ ಮಾಡಿಕೊಂಡು ಮುಖಕ್ಕೆ ಅಭಿಮುಖವಾಗಿ ಹಿಂತಿರುಗಬಹುದು. ಹೀಗೆ ವಿಷಯಾಭಿಮುಖವಾಗಿ ಹೋಗಿರುವ ಜಡವಾದ ಕಣ್ಣಿಗೆ ಮುಖಕ್ಕೆ ಅಭಿಮುಖವಾಗಿ ಹಿಂತಿರುಗಿ ಬರುವಿಕೆಯು ಅಸಂಭಾವಿತವಾಗಿದೆ. ಆದ್ದರಿಂದ ದರ್ಪಣವನ್ನು ನೋಡುವಾಗ ಮುಖದ ಜ್ಞಾನವೇ ಬರಬಾರದು ಎಂದು ಮಾಯಾವಾದಿಗೆ ಲೋಕದ ವಿರೋಧವನ್ನು ಆಪಾದನೆ ಮಾಡುತ್ತಾರೆ.

ಚಕ್ಷುರಿಂದ್ರಿಯವು ದರ್ಪಣದಿಂದ ಹಿಂತಿರುಗಿ ಮುಖವನ್ನು ನೋಡುತ್ತದೆ ಎಂಬಂತಹ ಪ್ರಕ್ರಿಯೆಯು ಅಸಂಭಾವಿತವಾದುದು. ಆದರೂ ಇದನ್ನು ಅಂಗೀಕರಿಸಿದರೆ ಘಟಕುಡ್ಯಾದಿಗಳನ್ನು ನೋಡುವಾಗಲೂ ಚಕ್ಷುರಿಂದ್ರಿಯವು ಹಿಂತಿರುಗಿ ಮುಖವನ್ನು ನೋಡುತ್ತದೇನು ಎಂದು ಪ್ರಶ್ನೆಯನ್ನು ಮಾಡುತ್ತಾರೆ-

ಏವಂ ಚೇತ್ ಕುಡ್ಯಕುಂಭಾದಿದೃಷ್ಟ್ವಾ ದೃಷ್ಟ್ವಾ ನಿವೃತಿಮತ್ ।
ಕಿಂ ಚಕ್ಷುರೀಕ್ಷತೇ ಸ್ವಾಸ್ಯಂ ತಸ್ಯೇಹ ನ ತಪೋಽಧಿಕಮ್ ॥ ೧೫೭೫ ॥

**ಅರ್ಥ–** ಏವಂ ಚೇತ್ = ದರ್ಪಣಕ್ಕೆ ತಾಕಿ ಚಕ್ಷುಸ್ಸು ಹಿಂದಿರುಗುವುದಾದರೆ, ಚಕ್ಷುಃ = ಕಣ್ಣು ಕುಡ್ಯಕುಂಭಾದಿ = ಗೋಡೆ ಮತ್ತು ಕುಂಭಾದಿಗಳನ್ನು ದೃಷ್ಟ್ವಾ ದೃಷ್ಟ್ವಾ= ನೋಡಿ, ನೋಡಿ, ನಿವೃತ್ತಿಮತ್ = ಹಿಂತಿರುಗಿ ಬಂದದ್ದಾಗಿ, ಸ್ವಾಸ್ಯಂ = ತನ್ನ ಮುಖವನ್ನು ಈಕ್ಷತೇ ಕಿಂ = ನೋಡುತ್ತದೇನು? (ನೋಡುವುದಿಲ್ಲ) ತಸ್ಯ = ಅಂತಹ ಕಣ್ಣಿಗೆ, ಇಹ = ಈ ದರ್ಪಣದ ಸ್ಥಳದಲ್ಲಿ ತಪೋಧಿಕಂ = ಬಹಳವಾದ ತಪಸ್ಸು ನ = ಇಲ್ಲ.

**ಅನುವಾದ–** **ಉಪಾಧಿಯ ಸಂಬಂಧವಾದಾಗ ಚಕ್ಷುಸ್ಸು ಹಿಂತಿರುಗಿ ತನ್ನ ಮುಖವನ್ನೇ ನೋಡುತ್ತದೆ ಎಂಬ ಪ್ರಕ್ರಿಯೆಯನ್ನು ಒಪ್ಪುವುದಾದರೆ, ಗೋಡೆ, ಮಡಕೆ ಮೊದಲಾದ ವಸ್ತುಗಳನ್ನು ನೋಡುವಾಗಲೂ ಚಕ್ಷುಸ್ಸು ಹಿಂತಿರುಗಿ ತನ್ನ ಮುಖವನ್ನೇ ನೋಡಬೇಕಾದೀತು. ಕೇವಲ ದರ್ಪಣಾದಿಗಳನ್ನು ನೋಡುವಾಗಲೇ ಚಕ್ಷುಸ್ಸು ಹಿಂತಿರುಗುತ್ತದೆ ಎಂದು ಹೇಳಲು ಚಕ್ಷುಸ್ಸಿಗೆ ವಿಶೇಷವಾದ ತಪಸ್ಸಿಲ್ಲವಷ್ಟೇ?**

**ಭಾವವಿಲಾಸಿನೀ– ಅಸಂಭಾವಿತಮಪೀದಂ ನಿವರ್ತನಮಂಗೀಕ್ರಿಯತೇ ಚೇತ್ತರ್ಹಿ ಘಟ ಕುಡ್ಯಾದಿತೋಽಪಿ ನಿವರ್ತಮಾನಂ ಚಕ್ಷುಸ್ಸ್ವಮುಖಂ ಪಶ್ಯೇತ್ಕಿಮಿತಿ ಪೃಚ್ಛತಿ – ಏವಂಚೇದಿತಿ ॥ ಅನ್ಯತ್ರ ಸರ್ವತ್ರ ಸ್ವಚಕ್ಷುಷಃಸ್ವಮುಖಮಯೋಗ್ಯಂ ಚೇದತ್ರೈವ ಕಥಂ ಯೋಗ್ಯಮಿತ್ಯಾಹ – ತಸ್ಯೇತಿ ॥ ತಸ್ಯ ಚಕ್ಷುಷಃ । ಇಹ ದರ್ಪಣಸ್ಥಲೇ ॥ ೧೫೭೫ ॥**

**ವಿವರಣೆ–** ಇಲ್ಲಿ ಇಹ ತಸ್ಯ ತಪೋಧಿಕಂ ಎಂಬ ಶಬ್ದಕ್ಕೆ ದರ್ಪಣಸ್ಥಳದಲ್ಲಿ ಕಣ್ಣಿಗೆ ಬಹಳ ತಪಸ್ಸಿಲ್ಲ ಎಂದು ಅರ್ಥ. ಇದರ ಅಭಿಪ್ರಾಯ ಹೀಗಿದೆ. ಕನ್ನಡಿ ಮೊದಲಾದ ಉಪಾಧಿಯನ್ನು ನೋಡುವಾಗ ಕಣ್ಣು ಹಿಂತಿರುಗಿ ತನ್ನ ಮುಖವನ್ನೇ ನೋಡುತ್ತದೆ, ಆದರೆ ಘಟಕುಡ್ಯಾದಿಗಳನ್ನು ನೋಡುವಾಗ ಹಿಂತಿರುಗದೆ ಅಯಂ ಘಟಃ ಇದಂ ಕುಡ್ಯಂ ಇತ್ಯಾದಿ ಜ್ಞಾನವನ್ನೇ ಉಂಟುಮಾಡುತ್ತದೆ ಹೀಗೆ ಹೇಳಲು ಪ್ರಬಲವಾದ ಕಾರಣಗಳು ಇಲ್ಲ ಎಂದು ಅರ್ಥವಾಗಿದೆ.

**ಕಿಂಚೈವ ಸತಿ ತದ್ಬುದ್ಧೇರಾಕಾರಃ ಸ್ಯಾದಿದಂ ಮುಖಂ ।**
**ಇತ್ಯೇವ ದರ್ಪಣಾದೀನಾಂ ಸತ್ಯೇವಂ ದರ್ಶನಂ ಚ ನ ।**
**ದರ್ಪಣೇ ಮುಖಮಿತ್ಯೇವಮಾಕಾರಸ್ತ್ವಪ್ಪವೋ ರಸಃ ॥ ೧೫೭೬ ॥**

**ಅರ್ಥ–** ಕಿಂಚ = ಮತ್ತೂ ಕೂಡ, ಏವಂ ಸತಿ = ದರ್ಪಣಸ್ಥಳದಲ್ಲಿ ಕಣ್ಣು ಹಿಂತಿರುಗಿ ಮುಖವನ್ನು ನೋಡುವುದಾದರೆ, ತದ್ಬುದ್ಧೇಃ = ದರ್ಪಣದ ದೆಸೆಯಿಂದ ಹಿಂತಿರುಗಿದ ಚಕ್ಷುಸ್ಸಿನಿಂದ ಬಂದಿರುವ ಜ್ಞಾನದ, ಆಕಾರಃ = ಆಕಾರವು, ಇದಂ ಮುಖಂ = ಇದು ಮುಖವು, ಇತ್ಯೇವ = ಎಂಬುದಾಗಿಯೇ, ಸ್ಯಾತ್ = ಆದೀತು. ದರ್ಪಣಾದೀನಾಂ = ಕನ್ನಡಿ ಮೊದಲಾದ ಉಪಾಧಿಗಳ, ದರ್ಶನಂ ಚ = ದರ್ಶನವೂ ಸಹ, ನ ಸ್ಯಾತ್ = ಆಗಬಾರದು.

ಏವಂ ಸತಿ = ಆ ಉಪಾಧಿಗಳು ಕಾಣದಿದ್ದರೆ, ದರ್ಪಣೇ ಮುಖಂ = ಕನ್ನಡಿಯಲ್ಲಿ ಮುಖವಿದೆ, ಇತಿ = ಎಂಬುದಾಗಿ, ಅಕಾರ ಏವ = ಜ್ಞಾನದ ಆಕಾರವೇ, ಅಷ್ಟಮೋ ರಸಃ = ಎಂಟನೆಯ ರಸದಂತೆ ಅತ್ಯಂತ ಅಸತ್ ಆದೀತು.

**ಅನುವಾದ–** ದರ್ಪಣಾದಿ ಉಪಾಧಿಗಳ ಸಂಬಂಧವಾದಾಗ ನಯನವು ಹಿಂತಿರುಗಿ ತನ್ನ ಮುಖದ ಜ್ಞಾನವನ್ನುಂಟುಮಾಡುತ್ತದೆ ಎಂದು ಒಪ್ಪಿದರೆ, ಇದಂ ಮುಖಂ ಎಂಬ ಜ್ಞಾನದ ಆಕಾರವೇ ಇರಬೇಕಾದೀತು. ಹೊರತು ದರ್ಪಣಾದಿಗಳ ದರ್ಶನವೇ ಆಗಬಾರದು. ದರ್ಪಣಾದಿಗಳು ಕಾಣದಿದ್ದರೆ ದರ್ಪಣೇ ಮುಖಂ ಎಂಬ ಜ್ಞಾನವು ಅಷ್ಟಮರಸದಂತೆ ಅತ್ಯಂತ ಅಸತ್ ಆಗಬೇಕಾದೀತು.

**ಭಾವವಿಲಾಸಿನೀ–** ದೂಷಣಾಂತರಂ ಚಾಹ – ಕಿಂಚೇತಿ ॥ ತದ್ಬುದ್ಧೇಃ ದರ್ಪಣಾನ್ನಿವೃತ್ತಚಕ್ಷುರ್ಜನ್ಯಬುದ್ಧೇಃ । ಸತ್ಯೇವಂ ಏವಂ ಸತೀತ್ಯರ್ಥಃ । ದರ್ಪಣಾದಿತೋ ನಿವೃತ್ತಚಕ್ಷುಷಾ ಪುನರ್ದರ್ಪಣಾದಿದರ್ಶನಾಯೋಗಾದಿತಿ ಭಾವಃ । ಆಕಾರಃ ಬುದ್ಧೇರಾಕಾರಃ । ದರ್ಪಣಸ್ಯೈವ ದರ್ಶನಾಭಾವೇ ದರ್ಪಣೇ ಮುಖಮಿತಿ ದರ್ಶನಂ ಸುತರಾಂ ನ ಸ್ಯಾದಿತಿ ಭಾವಃ ॥೧೫೭೬॥

**ವಿವರಣೆ–** ಲೋಕದಲ್ಲಿ ಉಪಾಧಿಸಂಬಂಧವಾದಾಗ ಇದಂ ಮುಖಂ ಎಂಬ ಜ್ಞಾನದಂತೆ ದರ್ಪಣೇ ಮುಖಂ ಎಂಬ ಜ್ಞಾನವು ಅನುಭವಸಿದ್ಧವಾಗಿದೆ. ಆದರೆ ಚಕ್ಷುರಿಂದ್ರಿಯವೇ ದರ್ಪಣಸ್ಥಳದಲ್ಲಿ ಹಿಂದಿರುಗುವುದು ಎಂದಾದರೆ ದರ್ಪಣದಿಂದ ಹಿಂದಿರುಗಿದ ಚಕ್ಷುಸ್ಸು ಪುನಃ ದರ್ಪಣವನ್ನು ನೋಡಲು ಸಾಧ್ಯವಿಲ್ಲ. ಆದ್ದರಿಂದ ಇದಂ ಮುಖಂ ಎಂಬ ಜ್ಞಾನವು ಮಾತ್ರ ಬರಬೇಕಾದೀತು. ಲೋಕದಲ್ಲಿ ಆರು ರಸಗಳು ಪ್ರಸಿದ್ಧವಾದುವು. ಏಳನೇ ರಸವು ಕಾಣುವುದಿಲ್ಲ. ಎಂಟನೆಯ ರಸವು ಅತ್ಯಂತ ಅಸತ್ ಆಗಿದೆ. ಹಾಗೆಯೇ ಮುಖದ ದರ್ಶನವಾಗುತ್ತದೆ. ಆದರೆ ದರ್ಪಣಾದಿಗಳ ದರ್ಶನವಾಗುವುದಿಲ್ಲ. ದರ್ಪಣೇ ಮುಖಂ ಎಂಬ ಜ್ಞಾನವು ಸುತರಾಂ ಬರುವುದಿಲ್ಲ ಎಂದು ಅರ್ಥ.

**ಪಕ್ಷಾಂತರವನ್ನು ಉತ್ಥಾಪನೆ ಮಾಡಿ ಖಂಡಿಸುತ್ತಾರೆ-**

**ಅಥಾರ್ಧಾರ್ಧಾಭಿಸಂಬಂಧಾತ್ ದ್ವಿಧಾಭೂತಸ್ಯ ಚಕ್ಷುಷಃ ।**
**ಧೀದ್ವಯಂ ಯದಿ ಜಾಯೇತ ಹೀಯತೇ ತವ ಧೀಸ್ತದಾ ॥ ೧೫೭೭ ॥**

**ಅರ್ಥ–** ಅಥ = ಅಥವಾ, ದ್ವಿಧಾಭೂತಸ್ಯ ಚಕ್ಷುಷಃ = ಎರಡು ವಿಭಾಗವಾದ ಕಣ್ಣಿನ, ಅರ್ಧಾರ್ಧಾಭಿಸಂಬಂಧಾತ್ = ಅರ್ಧ ಅರ್ಧ ಭಾಗದ ಅಭಿಮುಖವಾದ ಸಂಬಂಧದ ದೆಸೆಯಿಂದ, ಧೀದ್ವಯಂ = ಇದಂ ದರ್ಪಣಂ, ಇದಂ ಮುಖಂ ಎಂಬ ಎರಡು ಜ್ಞಾನವು, ಯದಿ = ಒಂದು ವೇಳೆ, ಜಾಯೇತ = ಹುಟ್ಟುವುದಾದರೆ, ತದಾ = ಆಗ, ತವ = ನಿನ್ನ ಧೀಃ = ಜ್ಞಾನವು, ಹೀಯೇತ = ನಾಶವಾದೀತು.

**ಅನುವಾದ– ಮಾಯಾವಾದಿಯು ದರ್ಪಣಾದಿ ಉಪಾಧಿಗಳ ಸಂಬಂಧವು ಕಣ್ಣಿಗೆ ಆಗುವಾಗ ಕಣ್ಣು ಎರಡು ವಿಭಾಗವಾಗಿ ಮೊದಲಿನ ಅರ್ಧವು ದರ್ಪಣಕ್ಕೆ ಅಭಿಮುಖವಾಗಿ ದರ್ಪಣವನ್ನು ನೋಡುತ್ತದೆ. ಮತ್ತೊಂದು ವಿಭಾಗವು ಹಿಂದಿರುಗಿ ಮುಖಕ್ಕೆ ಅಭಿಮುಖವಾಗಿ ಮುಖವನ್ನು ನೋಡುತ್ತದೆ. ಹೀಗೆ ಎರಡೂ ವಸ್ತುಗಳ ಸಂಬಂಧವು ಚಕ್ಷುಸ್ಸಿಗೆ ಆಗಿ ಇದಂ ದರ್ಪಣಂ ಮತ್ತು ಇದಂ ಮುಖಂ ಎಂಬ ಎರಡು ಜ್ಞಾನವು ಹುಟ್ಟುವುದು ಎಂದು ಶಂಕಿಸಿದರೆ ಆಗ ಅದಕ್ಕೆ ಉತ್ತರವಾಗಿ ಹೀಗೆ ಹೇಳುವ ನಿನ್ನ ಬುದ್ಧಿಯೇ ಹಾಳಾಗಿ ಬುದ್ಧಿವಂತನಲ್ಲವೆಂದು ಆಗಬೇಕಾದೀತು ಎಂದು ಆಪಾದಿಸುತ್ತಾರೆ. ಏಕೆಂದರೆ ಕಣ್ಣು ಎರಡು ವಿಭಾಗವಾಗಿ ಎರಡು ವಸ್ತುವಿನ ಅಭಿಮುಖವಾಗಿ ನೋಡುವುದು ಇದು ಅಪ್ರಾಮಾಣಿಕವಾಗಿದೆ.**

**ಭಾವವಿಲಾಸಿನೀ–** ಪಕ್ಷಾಂತರಮುತ್ಥಾಪ್ಯ ದೂಷಯತಿ ॥ **ಅಥೇತಿ** ॥ ಧೀದ್ವಯಂ ಇದಂ ದರ್ಪಣಮಿದಂ ಮುಖಮಿತಿ ದರ್ಪಣಧೀರ್ಮುಖಧೀಶ್ಚ। ತವಧೀರ್ಹೀಯೇತ ಏವಂ ವದಂಸ್ತ್ವಂ ಬುದ್ಧಿಮಾನ್ನ ಭವಸೀತ್ಯರ್ಥಃ ॥ ೧೫೭೭ ॥

**ವಿವರಣೆ–** ಕಣ್ಣು ಹಿಂತಿರುಗಿ ಬರುವಂತಹ ಪ್ರಕ್ರಿಯೆಯೇ ಅಪ್ರಾಮಾಣಿಕ. ಆದರಲ್ಲೂ ಎರಡು ವಿಭಾಗವಾಗಿ ಒಂದು ಭಾಗವು ಹಿಂತಿರುಗಿ ಬಂದು ಮುಖವನ್ನೂ, ಇನ್ನೊಂದು ಭಾಗವು ಅಲ್ಲೇ ಇದ್ದು ದರ್ಪಣವನ್ನೂ ವಿಷಯೀಕರಿಸುವುದು, ಹಾಗೆಯೇ ಇದಂ ಮುಖಂ, ಇದಂ ದರ್ಪಣಂ ಎಂಬ ಜ್ಞಾನವನ್ನು ಹುಟ್ಟಿಸುವುದು ಎಂಬ ಪ್ರಕ್ರಿಯೆಯು ಅತ್ಯಂತ ಅಪ್ರಾಮಾಣಿಕ. ಆದರಂತೆ ದರ್ಪಣೇ ಮುಖಂ ಎಂಬ ಜ್ಞಾನವನ್ನು ಕೂಡಿಸಿದಂತಾಗಲಿಲ್ಲ. ಈ ರೀತಿಯಾಗಿ ನಿನಗೆ ತಲೆ ಕೆಟ್ಟಿದೆ ಎಂದುಅಪಹಾಸ ಮಾಡುತ್ತಾರೆ.

ಉಪಾಧಿಯಿಂದ ನಯನವು ತಿರುಗಿ ಬರುವ ಪ್ರಕ್ರಿಯೆಯನ್ನು ದೂಷಣಾಂತರಗಳಿಂದ ನಿರಾಕರಿಸುತ್ತಾರೆ-

ವಿರುದ್ಧದಿಗ್ದ್ವಯಸ್ಥಾರ್ಥಸಂಬಂಧಸ್ತ್ವೈಕಚಕ್ಷುಷಃ।
ಯತೋ ನ ದೃಶ್ಯತೇ ನೄಣಾಂ ತತೋಽಪ್ಯೇತದಸಂಗತಂ ॥ ೧೫೭೮ ॥

**ಅರ್ಥ–** ಯತಃ = ಯಾವ ಕಾರಣದಿಂದ, ಏಕಚಕ್ಷುಷಃ = ಒಂದೇ (ಕಡೆ ಮುಖ ಮಾಡಿರುವ) ಕಣ್ಣಿಗೆ, ವಿರುದ್ಧದಿಗ್ದ್ವಯಸ್ಥಾರ್ಥಸಂಬಂಧಃ = ಪರಸ್ಪರ ವಿರುದ್ಧವಾದ ದಿಕ್ಕುಗಳಲ್ಲಿರುವ ದರ್ಪಣ ಮತ್ತು ಮುಖಗಳ ಸಂಬಂಧವು, ನೄಣಾಂ =ಜನರಿಗೆ, ನ ದೃಶ್ಯತೇ = ಕಾಣುವುದಿಲ್ಲವೋ, ತತೋಽಪಿ = ಆ ಕಾರಣದಿಂದಲೂ, ಏತತ್ = ಈ ಪ್ರಕ್ರಿಯೆಯು, ಅಸಂಗತಂ = ಸಂಗತವಾದುದಲ್ಲ.

**ಅನುವಾದ–** ಒಂದೇ ಕಾಲದಲ್ಲಿ ವಿರುದ್ಧವಾದ ದಿಕ್ಕುಗಳಲ್ಲಿರುವ ವಸ್ತುಗಳನ್ನು ನೋಡುವುದು ಕಣ್ಣುಗಳಿಗೆ ಸಾಧ್ಯವಿಲ್ಲ. ಈ ಕಾರಣದಿಂದ ವಿರುದ್ಧದಿಕ್ಕುಗಳಿಗೆ ಮುಖ ಮಾಡಿರುವ ಕನ್ನಡಿ ಮತ್ತು ಮುಖಗಳ ಸಂಬಂಧವು ಏಕಕಾಲದಲ್ಲಿ ಆಗುವುದಿಲ್ಲ. ಆದ್ದರಿಂದಲೂ ಇದಂ ಮುಖಂ, ಇದಂ ದರ್ಪಣಂ ಎಂಬ ಎರಡು ಜ್ಞಾನಗಳು ಬರುತ್ತದೆ ಎಂಬುದು ಅಸಂಗತ.

**ಭಾವವಿಲಾಸಿನೀ–** ವಿರುದ್ಧದಿಗ್ದ್ವಯಂ ದರ್ಪಣದಿಕ್ ಮುಖದಿಕ್ । ಏಕದಿಗ್ಗತಯೋರ್ಯೋಗ್ಯಯೋರರ್ಥಯೋರೇಕದೈವ ಚಕ್ಷುಃಸಂಬಂಧೋ ದೃಷ್ಟಃ । ನತು ವಿರುದ್ಧದಿಕ್‌ಸ್ಥಯೋಃ । ಅತೋಽಪೀದಮಸಂಭಾವಿತಮಿತ್ಯರ್ಥಃ ॥ ೧೫೭೮ ॥

**ವಿವರಣೆ–** ನಾವು ಕನ್ನಡಿಯಲ್ಲಿ ನೋಡುವಾಗ ಕನ್ನಡಿಯು ಪಶ್ಚಿಮದಿಕ್ಕಿಗೆ ಅಭಿಮುಖವಾಗಿದ್ದರೆ, ಮುಖವು ಪೂರ್ವದಿಕ್ಕಿಗೆ ಅಭಿಮುಖವಾಗಿರುತ್ತದೆ. ನಯನವು ಹಿಂತಿರುಗವುದು ಎಂಬ ಪಕ್ಷದಲ್ಲಿ ಮುಖವು ಮಾತ್ರ ಕಾಣಬೇಕು, ಹೊರತು ದರ್ಪಣವಲ್ಲ, ಏಕೆಂದರೆ ಕಣ್ಣು ಒಂದೇ ಕಾಲದಲ್ಲಿ ಒಂದೇ ಕಡೆ ಮುಖಮಾಡಿರುವ ವಸ್ತುಗಳನ್ನು ಮಾತ್ರ ನೋಡುವ ಸಾಮರ್ಥ್ಯವುಳ್ಳದ್ದಾಗಿದೆ, ಹೊರತು ವಿರುದ್ಧದಿಕ್ಕುಗಳಲ್ಲಿರುವ ವಸ್ತುಗಳನ್ನು ನೋಡುವ ಸಾಮರ್ಥ್ಯವಿಲ್ಲ.

ಚಕ್ಷುಸ್ಸಿನ ಮೂಲಕ ಮನಸ್ಸು ಹೊರಗೆ ಬರುತ್ತದೆ ಎಂಬ ಮಾಯಾವಾದಿಪ್ರಕ್ರಿಯೆಯನ್ನು ಇಟ್ಟುಕೊಂಡು ದೋಷಾಂತರವನ್ನು ಹೇಳುತ್ತಾರೆ, ಹಾಗಯೇ, ಉತ್ತರಾರ್ಧದಲ್ಲಿ ಪಕ್ಷಾಂತರವನ್ನೂ ಉತ್ಥಾಪನೆಮಾಡಿ ಪರಿಹರಿಸುತ್ತಾರೆ–

**ಕಿಂಚೈವ ಸತಿ ಧೀದ್ವಂದ್ವಂ ಕಥಂ ಸ್ಯಾತ್ ಮನಸಾಽಣುನಾ ।**
**ಸಮೂಹಾಲಂಬನಾ ಧೀಶ್ಚೇತ್ ಸ ಮೋಹಾಲಂಬನೋ ವದನ್ ॥೧೫೭೯॥**

**ಅರ್ಥ–** ಕಿಂಚ = ಮತ್ತೂ ಕೂಡ, ಏವಮಪಿ = ಚಕ್ಷುರಿಂದ್ರಿಯವು ಎರಡು ವಿಭಾಗವಾಗುತ್ತದೆ ಎಂದು ಒಪ್ಪಿದರೂ, ಅಣುನಾ = ಸೂಕ್ಷ್ಮವಾದ, ಮನಸಾ = ಮನಸ್ಸಿನಿಂದ, ಧೀದ್ವಂದ್ವಂ= ಇದಂ ದರ್ಪಣಂ, ಇದಂ ಮುಖಂ ಎಂಬ ಎರಡು ಜ್ಞಾನವು, ಕಥಂ ಸ್ಯಾತ್ = ಹೇಗೆ ತಾನೇ ಬಂದೀತು? ಸಮೂಹಾಲಂಬನಾಧೀಃ ಚೇತ್ = ಎರಡು ವಿಷಯವನ್ನು ವಿಷಯೀಕರಿಸುವ ಸಮೂಹಾಲಂಬನಜ್ಞಾನ ಎಂದು ಒಪ್ಪಿದರೆ, ವದನ್ = ಆ ರೀತಿಯಾಗಿ ಹೇಳುವ, ಸಃ = ಮಾಯಾವಾದಿಯು, ಸ ಮೋಹಾಲಂಬನಃ = ಭ್ರಾಂತನು, ಅಥವಾ ಅಜ್ಞಾನಿಯು (ಭವತಿ= ಆಗುವನು.)

**ಅನುವಾದ–** ಮಾಯಾವಾದಿಗಳು ವಸ್ತುವು ಪ್ರತ್ಯಕ್ಷವಾಗುವಾಗ ಚಕ್ಷುರಿಂದ್ರಿಯದ ಮೂಲಕ ಮನಸ್ಸೂ ಕೂಡ ಹೊರಗೆ ಬಂದು ವಸ್ತುರೂಪವಾಗಿ ಪರಿಣಾಮವನ್ನು ಹೊಂದುವುದೆಂದು ಅಂಗೀಕರಿಸುತ್ತಾರೆ. ಹಾಗಾದರೆ ಚಕ್ಷುಸ್ಸಿಗೆ ದರ್ಪಣ

ಸಂಬಂಧವಾದಾಗ ನಯನವೂ ಎರಡು ವಿಭಾಗವಾದರೂ ಅಣುವಾದ ಮನಸ್ಸು ಎರಡು ವಿಭಾಗವಾಗಲು ಸಾಧ್ಯವಿಲ್ಲ. ಆದ್ದರಿಂದ ಎರಡು ವಿಭಾಗವಾದಂತಹ ಚಕ್ಷುಸ್ಸಿಗೆ ಅಣುವಾದ ಮನಸ್ಸಿನ ಸಂಯೋಗವು ಏಕಕಾಲದಲ್ಲಿ ಆಗುವುದಿಲ್ಲ. ಮನಸ್ಸಿನ ಸಂಯೋಗವಾಗದಿದ್ದರೆ ಇದಂ ದರ್ಪಣಂ, ಇದಂ ಮುಖಂ ಎಂಬ ಎರುಡು ಜ್ಞಾನವು ಬರುವುದು ಅಸಂಭಾವಿತ.

ದರ್ಪಣ ಮತ್ತು ಮುಖದ ಎರಡು ಜ್ಞಾನಗಳು ಸಮೂಹಾಲಂಬನಜ್ಞಾನವಾಗಿದೆ, ಎಂದು ಹೇಳಿದರೆ ಅಣುವಾದ ಮನಸ್ಸಿಗೆ ವಿರುದ್ಧದಿಕ್ಕಿಗೆ ಮುಖಮಾಡಿದ ಕಣ್ಣಿನ ಎರಡು ಭಾಗಗಳ ಸಂಯೋಗವು ಹೇಗಾದೀತು? ಎಂಬ ಪ್ರಶ್ನೆಗೆ ಉತ್ತರ ಇಲ್ಲವಾದ್ದರಿಂದ ಮಾಯಾವಾದಿಯು ಭ್ರಾಂತನು ಅಥವಾ ಅಜ್ಞಾನಿಯು ಆದಾನು.

**ಭಾವವಿಲಾಸಿನೀ–** ಚಕ್ಷುರ್ದ್ವಾರಾ ಮನಸೋಽಪಿ ಬರ್ಹಿರ್ನಿಃಸರಣಂ ವದತಸ್ತವ ಮತೇ ಅಣೋ-ರ್ಮನಸೋ ದ್ವಿಧಾಭೂತಚಕ್ಷುರ್ಭಾಗಸಂಯೋಗಾಯೋಗಾಚ್ಚೇದಮಸಂಗತಮಿತ್ಯಾಹ – **ಕಿಂಚೈವಮಿತಿ** ॥ ಪಕ್ಷಾಂತರಮುತ್ಥಾಪ್ಯದೂಷಯತಿ – **ಸಮೂಹೇತಿ** ॥ ಸ ವದನ್ತಿ ಸಂಬಂಧಃ । ದರ್ಪಣೇ ಮುಖಮಿತಿ ಧಿಯಃ ಸಮೂಹಾಲಂಬನತಾಂ ವದನ್ತೀತ್ಯರ್ಥಃ । ಮೋಹಾಲಂಬನಂ ಮೋಹಸ್ಯ ಮಿಥ್ಯಾಜ್ಞಾನಸ್ಯಾಲಂಬನಃ ಮಿಥ್ಯಾಜ್ಞಾನೀತ್ಯರ್ಥಃ । ಅಣುಮನಸೋ ವಿರುದ್ಧಭಾಗ-ದ್ವಯ ಸಂಯೋಗಾನುಪಪತ್ತೇರಪರಿಹಾರಾತ್। ಮೋಹೋಽಜ್ಞಾನಂ ವಾ ॥ ೧೫೭೮ ॥

**ವಿವರಣೆ–** ಸಿದ್ಧಾಂತಿಗಳ ರೀತಿಯಲ್ಲಿ ಚಕ್ಷುರಾದಿ ಇಂದ್ರಿಯಗಳು ಸೂಕ್ಷ್ಮವಾಗಿವೆ. ಆದರೆ ಇತರರು ಅದನ್ನು ಒಪ್ಪುವುದಿಲ್ಲ. ಈ ಪಕ್ಷವನ್ನು ಇಟ್ಟುಕೊಂಡು ಚಕ್ಷುರಿಂದ್ರಿಯಕ್ಕೆ ಎರಡು ವಿಭಾಗವನ್ನು ಅಂಗೀಕರಿಸಿದ್ದಾರೆ. ಆದರೆ ಮನಸ್ಸಿಗೆ ಅಣುತ್ವವನ್ನು ಎಲ್ಲರೂ ಒಪ್ಪಿದ್ದಾರೆ. ಹಾಗೆಯೇ ಇಂದ್ರಿಯಂ ಮನಸಾ ಸಂಯುಜ್ಯತೇ ಎಂಬುದಾಗಿ ಜ್ಞಾನ ಹುಟ್ಟಲು ಇಂದ್ರಿಯಮತ್ತು ಮನಸ್ಸುಗಳ ಸಂಯೋಗವನ್ನು ಕಾರಣವೆಂದು ಎಲ್ಲರೂ ಒಪ್ಪುತ್ತಾರೆ. ಆದರೆ ಸೂಕ್ಷ್ಮವಾದ ಮನಸ್ಸಿನವಿಭಾಗವು ಆಗದಿರುವುದಿರಂದ ವಿಭಕ್ತವಾದ ಚಕ್ಷುರಿಂದ್ರಿಯದ ಎರಡುವಿಭಾಗಗಳ ಸಂಬಂಧವು ಮನಸ್ಸಿಗೆ ಏಕಕಾಲದಲ್ಲಿ ಆಗಲು ಸಾಧ್ಯವಿಲ್ಲ.

ಒಂದೇ ಜ್ಞಾನದಲ್ಲಿ ಅನೇಕ ವಿಶೇಷ್ಯಗಳನ್ನು ವಿಷಯೀಕರಿಸಿದರೆ ಅದನ್ನು ಸಮೂಹಾಲಂಬನಜ್ಞಾನ ಎನ್ನುತ್ತಾರೆ. ಉದಾಹರಣೆಗೆ ಇಮೇ ಘಟಪಟಕುಡ್ಯಕುಸೂಲಾಃ ಎಂಬ ಜ್ಞಾನ. ಇದರಂತೆ ದರ್ಪಣೇ ಮುಖಂ ಎಂಬ ಜ್ಞಾನವನ್ನು ಸಮೂಹಾಲಂಬನ ಜ್ಞಾನ ಎಂದರೆ ಅವನು ಅಜ್ಞಾನಿ ಎಂದು ಹೇಳಬೇಕು. ಏಕೆಂದರೆ ಒಂದೇ ಕಡೆ ಇರುವ ವಸ್ತುಗಳ ಸಮೂಹಾಲಂಬನಜ್ಞಾನವು ಬರಬಹುದು, ಆದರೆ ವಿರುದ್ಧಮುಖವಾಗಿರುವ ವಸ್ತುಗಳ ಜ್ಞಾನಬರಲು ಚಕ್ಷುರಿಂದ್ರಿಯದ ವಿಭಾಗವನ್ನು ಒಪ್ಪಿದ್ದಾನೆ. ಅಂತಹ ವಿರುದ್ಧ ವಿಭಾಗಗಳ ಸಂಯೋಗವು ಮನಸ್ಸಿಗಾಗಲು ಸಾಧ್ಯವಿಲ್ಲ. ಆದ್ದರಿಂದ ದರ್ಪಣೇ ಮುಖಂ ಎಂಬ ಜ್ಞಾನವು ಭೂತಲೇ ಘಟಃ ಎಂಬ ಜ್ಞಾನವು ಸಮೂಹಾಲಂಬನ ಜ್ಞಾನವಲ್ಲವೆಂದು

ಪ್ರಜ್ಞಾವಂತರು ಅಂಗೀಕರಿಸುತ್ತಾರೆ. ಇದನ್ನು ಸಮೂಹಾಲಂಬನಜ್ಞಾನವೆಂದು ಹೇಳಿದರೆ ಮಾಯಾವಾದಿಯು ಅಜ್ಞಾನಿಯು, ಅಥವಾ ಮಿಥ್ಯಾಜ್ಞಾನಿಯು ಆಗುತ್ತಾನೆ.

**ದರ್ಪಣಸಂಬಂಧದಿಂದ ತಿರುಗಿಬಂದ ತನ್ನ ನಯನವೇ ಸ್ವಮುಖವನ್ನು ಕಾಣುತ್ತದೆ ಎಂಬ ಪ್ರಕ್ರಿಯೆಗೆ ದೋಷಾಂತರವನ್ನು ಹೇಳುತ್ತಾರೆ–**

**ಕಿಂಚಾವಾಙ್ಮುಖಪುಂಸೋಽಕ್ಷಿ ಪರಾವೃತ್ಯೇಕ್ಷತಾಂ ಮುಖಂ ।**
**ತದ್ರುದ್ಧಬಹುದೂರಸ್ಥಮಿತ್ರಮೈತ್ರೀ ಕುತೋ ವದ ॥ ೧೫೮೦ ॥**

**ಅರ್ಥ–** ಕಿಂಚ = ಮತ್ತೂ ಕೂಡ, ಅವಾಙ್ಮುಖಪುಂಸಃ = ಕೆಳಮುಖವಾಗಿ ನೀರನ್ನು ನೋಡುವ ವ್ಯಕ್ತಿಯ, ಅಕ್ಷಿ = ನಯನವು, ಪರಾವೃತ್ಯಾ = ಹಿಂತಿರುಗಿ, ಮುಖಂ = ತನ್ನ ಮುಖವನ್ನೇ, ಈಕ್ಷತಾಂ = ನೋಡಲಿ. ತದ್ರುದ್ಧಬಹುದೂರಸ್ಥಮಿತ್ರಮೈತ್ರೀ = ಆ ಮುಖದ ತಡೆ ಉಳ್ಳ ಬಹಳ ದೂರದಲ್ಲಿ ಆಕಾಶದಲ್ಲಿರುವ ಸೂರ್ಯನ ದರ್ಶನವು, ಕುತಃ = ಹೇಗಾಯಿತು? ವದ = ಹೇಳು.

**ಅನುವಾದ–** ಮಧ್ಯಾಹ್ನಕಾಲದಲ್ಲಿ ಸರೋವರಾದಿಗಳ ನೀರಿನಲ್ಲಿ ಮುಖವನ್ನು ಬಗ್ಗಿಸಿದಾಗ ತನ್ನ ಮುಖವು ಕಂಡಹಾಗೆಯೇ ಬಹಳದೂರದಲ್ಲಿರುವ ಸೂರ್ಯನ ಪ್ರತಿಬಿಂಬವೂ ಕಾಣಿಸುತ್ತದೆ. ಆದರೆ ನಯನವೇ ಹಿಂತಿರುಗಿ ಬರುವ ಪ್ರಕ್ರಿಯೆಯಲ್ಲಿ ಕಣ್ಣು ಮುಖವನ್ನು ಮಾತ್ರ ನೋಡಲು ಸಾಧ್ಯ. ಆ ಮುಖದ ತಡೆ ಇರುವುದರಿಂದ ಸೂರ್ಯಬಿಂಬದ ದರ್ಶನವಾಗಲು ಸಾಧ್ಯವಿಲ್ಲ. ಆದರೆ ಸೂರ್ಯಮಂಡಲವೂ ಕಾಣುತ್ತದೆ. ಮುಖದ ತಡೆ ಇರುವುದರಿಂದ ಅತೀ ಸಮೀಪದ ಹಿಂಭಾಗದ ಶಿಖೆಯೂ ಕಾಣುವುದಿಲ್ಲ, ಆದ್ದರಿಂದ ದೂರದಲ್ಲಿರುವ ಸೂರ್ಯದರ್ಶನವು ಹೇಗೆ ಸಾಧ್ಯ? ಈ ಪ್ರಶ್ನೆಗೆ ಉತ್ತರಿಸಲಾಗುವುದಿಲ್ಲ. ಆದ್ದರಿಂದ ಈ ಪ್ರಕ್ರಿಯೆ ಸರಿಯಲ್ಲ.

**ಭಾವವಿಲಾಸಿನೀ–** ಅಪಿ ಚ ಮಧ್ಯಾಹ್ನಕಾಲೇ ತಟಾಕಜಲಾದಾವವಾಙ್ಮುಖತಯಾ ಸ್ವಮುಖಂ ಪಶ್ಯತಸ್ತತ್ರೈವ ಮುಖದರ್ಶನಂ ಸೂರ್ಯಮಂಡಲದರ್ಶನಂ ಚ ಜಾಯತೇ । ತತ್ರ ತ್ವದುಕ್ತರೀತ್ಯಾ ಪರಾವೃತ್ತಮಪಿ ಚಕ್ಷುರ್ಮುಖಂ ಪಶ್ಯತು । ಮುಖೇನ ಪ್ರತಿರುದ್ಧಾಂ ಸ್ವಶಿಖಾಮಪ್ಯಪಶ್ಯತ್ ತತ್‌ಪ್ರತಿರುದ್ಧಂ ಮುಖೋಪರಿಭಾಗೇ ಬಹುದೂರಸ್ಥಿತಂ ಸೂರ್ಯಮಂಡಲಂ ಕಥಂ ಪಶ್ಯತೀತ್ಯಾಹ – **ಕಿಂಚೇತಿ** ॥ ತದ್ರುದ್ಧಸ್ಯ ತೇನ ಮುಖೇನ ಪ್ರತಿರುದ್ಧಸ್ಯ । ಬಹುದೂರಸ್ಥಸ್ಯ ಮಿತ್ರಸ್ಯ ಸೂರ್ಯಸ್ಯ । ಮಿತ್ರದರ್ಶನಮಿತಿ ಯಾವತ್ ॥ ೧೫೮೦ ॥

**ವಿವರಣೆ–** ಇಲ್ಲಿ ಮಿತ್ರಮೈತ್ರೀಶಬ್ದಕ್ಕೆ ಸೂರ್ಯನ ಸಂಬಂಧ ಎಂದರೆ ಸೂರ್ಯದರ್ಶನ ಎಂದರ್ಥ. ಕಣ್ಣು ಹಿಂತಿರುಗಿ ಮುಖದ ಹತ್ತಿರಕ್ಕೆ ಬಂದಾಗ ಮುಖವು ಮಾತ್ರ ಕಾಣಲು

ಸಾಧ್ಯ. ಮುಖವು ಅಡ್ಡವಾಗಿರುವುದರಿಂದ ಹಿಂಭಾಗದ ಶಿಖೆಯು ಕಾಣುವುದಿಲ್ಲ. ಆದರೂ ದೂರದಲ್ಲಿರುವ ಸೂರ್ಯಮಂಡಲದರ್ಶನವು ಆಗುವುದರಿಂದ ಈ ಪ್ರಕ್ರಿಯೆ ಸರಿಯಲ್ಲ.

**ಪುನಃ ಹಿಂದಿನ ಪ್ರಕ್ರಿಯೆಗೆ ದೋಷಾಂತರವನ್ನು ಹೇಳುತ್ತಾರೆ-**

**ಕಿಂಚೈವ ಸತಿ ಭೂಷಾಸ್ಥರತ್ನಲಕ್ಷೇಷುಬಿಂಬಿತಮ್ ।**
**ಮುಖಂ ಸ್ವಮೀಕ್ಷಮಾಣಸ್ಯ ಧೀಃ ಸ್ಯಾದೇಕಂ ಮುಖಂ ತ್ವಿತಿ ॥ ೧೫೮೧ ॥**

**ಅರ್ಥ–** ಕಿಂಚ = ಮತ್ತೂ ಕೂಡ, ಏವಂ ಸತಿ = ಉಪಾಧಿಸಂಬಂಧವಾಗಿ ಕಣ್ಣು ಮುಖವನ್ನು ನೋಡುವ ಪ್ರಕ್ರಿಯೆಯನ್ನು ಅಂಗೀಕರಿಸಿದರೆ, ಭೂಷಾಸ್ಥರತ್ನಲಕ್ಷೇಷು = ಆಭರಣಗಳಲ್ಲಿರುವ ಲಕ್ಷಸಂಖ್ಯಾಕವಾದ ರತ್ನಗಳಲ್ಲಿ, ಬಿಂಬಿತಂ = ಪ್ರತಿಬಿಂಬಿತವಾದ, ಮುಖಂ = ತನ್ನ ಮುಖವನ್ನು, ಈಕ್ಷಮಾಣಸ್ಯ = ನೋಡುವ ವ್ಯಕ್ತಿಗೆ, ಏಕಂ ಮುಖಂ = ಒಂದೇ ಮುಖವು, ಇತಿ = ಎಂಬ, ಧೀಃ = ಜ್ಞಾನವು, ಸ್ಯಾತ್ ತು = ವಿಶೇಷವಾಗಿ ಬರಬೇಕಷ್ಟೇ?

**ಅನುವಾದ–** ಆಭರಣಗಳಿಂದ ಅಲಂಕೃತವಾದ ವ್ಯಕ್ತಿಯಬಳಿಗೆ ಹೋದಾಗ ಆ ಆಭರಣಗಳಲ್ಲಿರುವ ಲಕ್ಷಸಂಖ್ಯಾಕವಾದರತ್ನಗಳಲ್ಲಿ ನಮ್ಮ ಮುಖದ ಬಹಳ ಪ್ರತಿಬಿಂಬಗಳು ಕಾಣುತ್ತವೆ. ಆದರೆ ಉಪಾಧಿಗೆ ನಯನಸಂಬಂಧವಾದಾಗ ಆ ನಯನವು ಹಿಂತಿರುಗಿ ತನ್ನ ಮುಖವನ್ನೇ ನೋಡುತ್ತದೆ ಎಂಬ ಪಕ್ಷದಲ್ಲಿ ಏಕಂ ಮುಖಂ ಎಂಬ ಜ್ಞಾನವು ಬರಬೇಕು ಹೊರತು ಅನೇಕ ಪ್ರತಿಬಿಂಬಗಳ ಜ್ಞಾನವು ಬರಬಾರದು.

**ಭಾವವಿಲಾಸಿನೀ– ದೂಷಣಾಂತರಂ ಚಾಹ – ಕಿಂಚೇತಿ ॥ ಭೂಷಾತಃ ಪರಾವೃತ್ಯಾಗತೇನ ಚಕ್ಷುಷಾ ಏಕಸ್ಯೈವ ಸ್ವಮುಖಸ್ಯ ದರ್ಶನಾದಿತಿ ಭಾವಃ ॥ ೧೫೮೧ ॥**

**ವಿವರಣೆ–** ಆಭರಣಗಳಲ್ಲಿ ಅನೇಕ ವಿಧವಾದ ಮುತ್ತುರತ್ನಗಳಿರುತ್ತವೆ. ಆ ಎಲ್ಲಾ ರತ್ನಗಳಲ್ಲಿಯೂ ವ್ಯಕ್ತಿಯು ತನ್ನ ಅನೇಕ ಪ್ರತಿಬಿಂಬಗಳನ್ನು ನೋಡುವುದು ಅನುಭವ ಸಿದ್ಧವಾಗಿದೆ. ಆದರೆ ಈ ಅನುಭವವು ಮಾಯಾವಾದಿಯ ಪ್ರಕ್ರಿಯೆಗೆ ವಿರುದ್ಧವಾದುದರಿಂದ ಮಾಯಾವಾದಿಯ ಪ್ರಕ್ರಿಯೆಯು ಸರಿಯಲ್ಲ.

**ಈ ಹಿಂದಿನ ಆಪತ್ತಿಗೆ ಮಾಯಾವಾದಿಯು ದೋಷದಿಂದಾಗಿ ಆ ರತ್ನಗಳಲ್ಲಿ ತನ್ನ ಮುಖವನ್ನು ಅನೇಕವಾಗಿ ಕಾಣುತ್ತಾನೆ ಎಂದು ಹೇಳಿದರೆ ಅದನ್ನು ದೂಷಿಸುತ್ತಾರೆ-**

**ಕಪೋಲಃ ಕಲ್ಪಕಸ್ತತ್ರೇ ದೋಷ್ಣೋ ಯೋಗ್ಯೋ ನ ಚಕ್ಷುಷಃ ॥ ೧೫೮೨ ॥**

**ಅರ್ಥ–** ತತ್ = ಕಣ್ಣಿನಲ್ಲಿ ಯಾವ ದೋಷವೂ ಇಲ್ಲವಾದ್ದರಿಂದ, ಚಕ್ಷುಷಃ = ಕಣ್ಣಿಗೆ, ಯೋಗ್ಯಃ = ಉಪಾಧಿ ಸಂಬಂಧರೂಪವಾದ ದೋಷವು, ಕಲ್ಪಕಃ = ಅನೇಕ ಮುಖಗಳ ದರ್ಶನಕ್ಕೆ ಕಲ್ಪಕವಲ್ಲ. ಕಿಂತು = ಆದರೆ, ತೇ= ನಿನ್ನ, ಕಪೋಲಃ= ತಲೆಯೇ, ಕಲ್ಪಕಃ= ಕಲ್ಪಕವಾಗಿದೆ, ತೇ = ನಿನ್ನ ಕಪೋಲ ಏವ = ಕಪೋಲವೇ, ದೋಷ್ಣಃ = ಕೈಯದೆಸೆಯಿಂದ, ಯೋಗ್ಯಃ = ತಾಡನೆಮಾಡಲು ಯೋಗ್ಯವು. ಚಕ್ಷುಷಃ= ಕಣ್ಣಿಗೆ, ನ= ಯೋಗ್ಯವಲ್ಲವಷ್ಟೇ?

**ಅನುವಾದ– ಉಪಾಧಿಸಂಬಂಧವನ್ನು ಹೊಂದಿ ನಯನವು ಹಿಂತಿರುಗಿದಾಗ ಉಪಾಧಿಗಳ ಸಂಬಂಧ ಎಂಬ ದೋಷವಿಲ್ಲ. ಆದ್ದರಿಂದ ದೋಷರಹಿತವಾದ ಕಣ್ಣು ಒಂದೇ ಮುಖವನ್ನು ಕಾಣಬೇಕು. ಆದರೆ ಅನೇಕ ಮುಖಗಳ ದರ್ಶನವನ್ನು ಕೂಡಿಸಲು ಕಣ್ಣಿಗೆ ದೋಷ ಇದೆ ಎಂಬ ಕಲ್ಪನೆಯು ಸ್ವಕಪೋಲಕಲ್ಪಿತವಾಗಿದೆ. ಈ ರೀತಿಯಾಗಿ ತಪ್ಪುಕಲ್ಪನೆಮಾಡುವ ನಿನ್ನ ಕೆನ್ನೆಯೇ ಕೈಯಿಂದ ತಾಡನೆ ಮಾಡಲು ಯೋಗ್ಯವಾಗಿದೆ ಹೊರತು, ಆಮುಖಕ್ಕೆ ಕಣ್ಣಿನ ಸಂಬಂಧವಾಗಲು ಯೋಗ್ಯವಲ್ಲ ಎಂದಾಯಿತು.**

**ಭಾವವಿಲಾಸಿನೀ–** ನನು ದೋಷಾದನೇಕತ್ವದರ್ಶನಮಿತ್ಯತ ಆಹ – **ಕಪೋಲ ಇತಿ ॥ ತಸ್ಮಾತ್** ಪರಾವೃತ್ತ್ಯಾಗತೇ ಚಕ್ಷುಷಿ ಉಪಾಧಿಸಂಯೋಗಾಖ್ಯದೋಷಸ್ಯಾಪ್ಯಭಾವಾತ್ । ಚಕ್ಷುಷೋ ದೋಷಯೋಗಃ ಕಲ್ಪಕೋ ನ । ಕಿಂತು ತೇ ಕಪೋಲ ಏವ ಕಲ್ಪಕಃ । ಸ ಚ ದೋಷ್ಣಃ ಹಸ್ತಸ್ಯ ಯೋಗ್ಯಃ ತ್ವದ್ಧಸ್ತೇನೈವ ತಾಡನಯೋಗ್ಯಃ । ಚಕ್ಷುಷಃ ತ್ವಚ್ಚಕ್ಷುಷಃ ಯೋಗ್ಯೋ ನ । ಸ್ವಕಪೋಲಸ್ಯ ಸ್ವೇನಾದರ್ಶನಾದಿತ್ಯರ್ಥಃ ॥ ೧೫೮೨ ॥

**ವಿವರಣೆ–** ಮಯಾವಾದಿಯು ಭೂಷಾರತ್ನಗಳಲ್ಲಿ ಅನೇಕಮುಖಗಳ ದರ್ಶನವು ಕಣ್ಣಿನ ದೋಷದಿಂದ ಆಗಿದೆ ಎಂದು ಹೇಳುತ್ತಾನೆ. ಆದರೆ ಉಪಾಧಿಸಂಬಂಧವಾಗಿ ಹಿಂತಿರುಗುವಾಗ ನಯನವು ಮುಖವನ್ನು ಕಾಣುತ್ತದೆ. ಆಗ ನಯನದಲ್ಲಿ ಉಪಾಧಿ-ಸಂಬಂಧ ಎಂಬ ಯಾವ ದೋಷವೂ ಇಲ್ಲ. ಆದರೂ ದೋಷವುಂಟೆಂಬ ಕಲ್ಪನೆಯು ಸ್ವಕಪೋಲದ್ದಾಗಿದೆ. ಅಂತಹ ಅವನ ಕಪೋಲವು ಕಣ್ಣಿಗೆ ಕಾಣುವುದಿಲ್ಲವಾದ್ದರಿಂದ ಕಪೋಲಕ್ಕೆ ಕಣ್ಣಿನಸಂಬಂಧಕ್ಕಿಂತ ಕೈಯತಾಡನೆಯೇ ಹೆಚ್ಚು ಸೂಕ್ತ ಎಂದು ಅಪಹಾಸ ಮಾಡುತ್ತಾರೆ.

ಬಿಂಬದಿಂದಾಗಿ ಪ್ರತಿಬಿಂಬವು ಹುಟ್ಟುತ್ತದೆ ಎಂಬ ವಿಷಯವನ್ನು ಉಪಸಂಹಾರಮಾಡುತ್ತಾರೆ-

**ಅತಸ್ತತ್ ತಾದೃಶಂ ವಸ್ತು ಲಘುಭೂತಂ ಹಿ ಜನ್ಯತೇ ।**
**ಬಿಂಬೋಪಾಧ್ಯೋಃ ಸನ್ನಿಧಾನಾತ್ ಕಥಂ ಸ್ಯಾದ್ಧಿ ತದೇವ ತತ್ ॥೧೫೮೩॥**

**ಅರ್ಥ–** ಅತಃ = ಮುಖ ಮತ್ತು ಪ್ರತಿಮುಖಗಳಿಗೆ ಅಭೇದವು ಕೂಡುವುದಿಲ್ಲವಾದ್ದರಿಂದ, ಬಿಂಬೋಪಾಧ್ಯೋಃ = ಬಿಂಬ ಮತ್ತು ಪ್ರತಿಬಿಂಬಗಳ, ಸನ್ನಿಧಾನಾತ್ = ಸಾಮೀಪ್ಯದ

ದೆಸೆಯಿಂದ, ತಾದೃಶಂ = ಬಿಂಬದಂತಿರುವ, ಲಘುಭೂತಂ = ಅಲ್ಪವಾದ, ತದ್ವಸ್ತು = ಪ್ರತಿಬಿಂಬ ಎಂಬ ವಸ್ತುವು, ಜನ್ಯತೇ = ಹುಟ್ಟುತ್ತದೆ. ಹಿ = ಇದು ಪ್ರಸಿದ್ಧವಾಗಿದೆ. ತತ್ = ಆ ಕಾರಣದಿಂದ, ತತ್ = ಆ ಪ್ರತಿಮುಖವು, ತದೇವ = ಮುಖವೇ, ಕಥಂ ಸ್ಯಾತ್ = ಹೇಗೆ ತಾನೇ ಆದೀತು?

**ಅನುವಾದ–** ಹಿಂದೆ ಹೇಳಿದ ಯುಕ್ತಿಗಳಿಂದ ಮುಖಪ್ರತಿಮುಖಗಳಿಗೆ ಅಭೇದವು ಕೂಡದೆ ಇರುವುದರಿಂದ ಬಿಂಬ ಮತ್ತು ದರ್ಪಣಾದಿ ಉಪಾಧಿಗಳಿಗೆ ಸಾಮೀಪ್ಯ ಇದ್ದಾಗ ಮುಖಕ್ಕೆ ಸದೃಶವಾದ ಅಲ್ಪವಾದ ಪ್ರತಿಬಿಂಬ ಎಂಬ ವಸ್ತುವು ಹುಟ್ಟುತ್ತದೆ. ಈ ರೀತಿಯಾಗಿ ಕಾರ್ಯಕಾರಣಭಾವ ಇರುವುದರಿಂದ ಪ್ರತಿಮುಖವೇ ಮುಖವು ಹೇಗಾದೀತು?

**ಭಾವವಿಲಾಸಿನೀ–** ಅತಃ ಮುಖಸ್ಯೈವ ಸ್ವಪ್ರತಿಮುಖತ್ವಾಯೋಗಾತ್ । ತತ್ ಪ್ರತಿಮುಖಮ್ । ಬಿಂಬೋಪಾಧ್ಯೋರ್ಮುಖದರ್ಪಣಯೋಃ । ತದೇವ ಮುಖಮೇವ । ತತ್ ಪ್ರತಿಮುಖಮ್ ॥ ೧೫೮೩ ॥

**ವಿವರಣೆ–** ಸ್ಯಾದ್ಧಿ ಎಂಬಲ್ಲಿ ಹಿ ಶಬ್ದದಿಂದ ಮುಖಪ್ರತಿಮುಖಗಳಿಗೂ ಕಾರ್ಯಕಾರಣ ಭಾವವನ್ನೇ ಒಪ್ಪಬೇಕಾಗಿರುವಾಗ ಅಭೇದವು ಇರುವುದಿಲ್ಲ ಎಂದು ಸೂಚಿತವಾಗಿದೆ.

ಪ್ರತಿಬಿಂಬವನ್ನು ಸತ್ಯ ಅಥವಾ ಮಿಥ್ಯೆ ಎಂಬ ಎರಡೂ ಪಕ್ಷದಲ್ಲಿಯೂ ಹಿಂದೆ ಹೇಳಿದ ದೋಷವನ್ನು ಸಂಗ್ರಹಮಾಡಿ ಉಭಯತಃ ಪಾಶಾರಜ್ಜುವಿನಿಂದ ಮುಖಪ್ರತಿಮುಖಗಳಿಗೆ ಭೇದವನ್ನು ಸಮರ್ಥನೆ ಮಾಡುತ್ತಾರೆ-

ಪ್ರತಿಬಿಂಬಸ್ಯ ಮಿಥ್ಯಾತ್ವೇ ಸತ್ಯಬಿಂಬಾದ್ ಭವೇತ್ ಭಿದಾ ।
ಪ್ರತಿಬಿಂಬಸ್ಯ ಸತ್ಯತ್ವೇ ದ್ವಿಸ್ವಭಾವತ್ವತೋ ಭಿದಾ ॥ ೧೫೮೪ ॥

**ಅರ್ಥ–** ಪ್ರತಿಬಿಂಬಸ್ಯ = ಪ್ರತಿಬಿಂಬಕ್ಕೆ, ಮಿಥ್ಯಾತ್ವೇ ಸತಿ = ಮಿಥ್ಯಾತ್ವವು ಇದ್ದರೆ, ಸತ್ಯಬಿಂಬಾತ್= ಸತ್ಯವಾದ ಬಿಂಬದ ದೆಸೆಯಿಂದ, ಭಿದಾ= ಭೇದವು, ಭವೇತ್ = ಇರಬೇಕು. ಪ್ರತಿಬಿಂಬಸ್ಯ = ಪ್ರತಿಬಿಂಬಕ್ಕೆ, ಸತ್ಯತ್ವೇ= ಸತ್ಯತ್ವವು ಇದ್ದರೆ, ದ್ವಿಸ್ವಭಾವತ್ವತಃ = ಎರಡು ವಿರುದ್ಧಧರ್ಮಗಳು ಇರುವುದರಿಂದ, ಭಿದಾ= ಭೇದವು, ಭವೇತ್ = ಇರಬೇಕು.

**ಅನುವಾದ–** ಪ್ರತಿಬಿಂಬವು ಮಿಥ್ಯಾ ಎಂಬ ಪಕ್ಷದಲ್ಲಿ ಸತ್ಯವಾದ ಬಿಂಬದ ದೆಸೆಯಿಂದ ಭೇದವನ್ನು ಒಪ್ಪಬೇಕು. ಏಕೆಂದರೆ ಸತ್ಯ ಮಿಥ್ಯೆಗಳಿಗೆ ಐಕ್ಯವು ಕೂಡುವುದಿಲ್ಲ. ಪ್ರತಿಬಿಂಬವನ್ನು ಸತ್ಯ ಎಂದು ಒಪ್ಪಿದರೆ ಆಗಲೂ ಅಭೇದವನ್ನು ಹೇಳಲಾಗುವುದಿಲ್ಲ. ಏಕೆಂದರೆ ಬಿಂಬಕ್ಕಿಂತ ವಿರುದ್ಧಮುಖವುಳ್ಳದ್ದಾಗಿದೆ ಮತ್ತು ಪರಿಮಳ, ಪರಿಮಳಾಭಾವ, ಮೊದಲಾದ ಹಿಂದೆ ಹೇಳಿದ ಅನೇಕ ವಿರುದ್ಧಧರ್ಮಗಳಿಂದ ಬಿಂಬಪ್ರತಿಬಿಂಬಗಳಿಗೆ ಭೇದವೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಕುತ ಇತ್ಯತಃ ಪಕ್ಷದ್ವಯೇಽಪಿ ಪ್ರಾಗುಕ್ತರೀತ್ಯಾ ಸಂಗೃಹ್ಯ ತಸ್ಯೋಭಯತಃ ಪಾಶಾರಜ್ಜುಂ ಕರೋತಿ ॥ **ಪ್ರತಿಬಿಂಬಸ್ಯೇತಿ** ॥ ದ್ವಿಸ್ವಭಾವತ್ವತಃ ಪರಿಮಲಾಪರಿಮಲಾದಿನಾ ದ್ವಿಸ್ವಭಾವತ್ವಾತ್ ॥ ೧೫೮೪ ॥

**ವಿವರಣೆ–** ಪ್ರತಿಬಿಂಬಕ್ಕೆ ಸತ್ಯತ್ವ, ಮಿಥ್ಯಾತ್ವ ಇವೆರಡನ್ನು ಒಪ್ಪಿದ ಪಕ್ಷದಲ್ಲಿಯೂ ಭೇದವನ್ನೇ ಸಮರ್ಥನೆ ಮಾಡುತ್ತಾರೆ. ಇವನ್ನು ಉಭಯತಃ ಪಾಶಾರಜ್ಜುನ್ಯಾಯ ಎನ್ನುತ್ತಾರೆ. ಹೇಗೆಂದರೆ ಒಬ್ಬನ ಕುತ್ತಿಗೆಗೆ ಎರಡೂ ಕಡೆಗಳಿಂದಲೂ ಹಗ್ಗಹಾಕಿ ಎರಡೂ ಕಡೆಗಳಿಂದ ಎಳೆದರೆ ಆಕುತ್ತಿಗೆಯು ಅಲುಗಾಡದೆ ಮಧ್ಯದಲ್ಲಿ ನಿಂತ ಹಾಗೆ ಅದರಂತೇನೆ ಸತ್ಯತ್ವ ಮಿಥ್ಯಾತ್ವ ಎರಡೂ ಪಕ್ಷಗಳಲ್ಲಿಯೂ ದೋಷವನ್ನು ಹೇಳಿದರೆ ವಾದಿಯು ಏನೂ ಉತ್ತರವನ್ನು ಹೇಳಲಾರ ಎಂದು ಅಭಿಪ್ರಾಯ.

ಉಪಾದಾನಕಾರಣವಿಲ್ಲವಾದ್ದರಿಂದ ಪ್ರತಿಬಿಂಬವು ಮಿಥ್ಯವಾಗಿದೆ, ಎಂಬ ವಾದಿಗಳ ಶಂಕೆಯನ್ನು ಉಪಾಧಿಗಳು ಉಪಾದಾನಕಾರಣ ಎಂಬ ವಾಸ್ತವಿಕ ಉತ್ತರವನ್ನು ಕೊಟ್ಟು ಪರಿಹರಿಸಿದ್ದಾರೆ. ಈಗ ಪರ ವಾದಿಯ ಬಾಯಿಯಿಂದಲೇ ಕಾರಣವನ್ನು ಹೇಳಿಸಿ ಪ್ರತಿಬಂದಿಯನ್ನು ಕೊಟ್ಟು ಪ್ರಶ್ನೆಯನ್ನು ಪರಿಹರಿಸುತ್ತಾರೆ-

ಕಥಂ ಚ ಪ್ರತಿಬಿಂಬಸ್ಯ ಮಿಥ್ಯಾತ್ವಂ ಯೌಕ್ತಿಕಂ ವಿದಾಮ್ ।
ನಹ್ಯಸ್ತಿ ಬಾಧಿಕಾ ನಾಯಂ ಪ್ರತಿಬಿಂಬ ಇತಿ ಪ್ರಮಾ ॥ ೧೫೮೫ ॥

**ಅರ್ಥ–** ವಿದಾಂ= ವಿದ್ವಾಂಸರ ದೃಷ್ಟಿಯಲ್ಲಿ, ಪ್ರತಿಬಿಂಬಸ್ಯ ಮಿಥ್ಯಾತ್ವಂ ಚ= ಪ್ರತಿಬಿಂಬದ ಮಿಥ್ಯಾತ್ವವಾದರೂ, ಕಥಂ= ಹೇಗೆ, ಯೌಕ್ತಿಕಂ= ಯುಕ್ತಿಯುಕ್ತವಾಗುತ್ತದೆ? ಬಾಧಿಕಾ= ಬಾಧಕವಾದ, ನಾಯಂ ಪ್ರತಿಬಿಂಬ ಇತಿ ಪ್ರಮಾ= ಇದು ಪ್ರತಿಬಿಂಬವಲ್ಲ ಎಂಬ ಪ್ರಮೆಯು, ನಾಸ್ತಿ ಹಿ= ಇಲ್ಲವಷ್ಟೆ?

**ಅನುವಾದ–** ವಿದ್ವಾಂಸರ ದೃಷ್ಟಿಯಲ್ಲಿ ಪ್ರತಿಬಿಂಬಕ್ಕೆ ಮಿಥ್ಯಾತ್ವವಾದರೂ ಹೇಗೆ ಯುಕ್ತಿಯುಕ್ತವಾಗುತ್ತದೆ? ಬಾಧಕವಾದ ಇದು ಪ್ರತಿಬಿಂಬವಲ್ಲ ಎಂಬ ಪ್ರಮೆಯು ಇಲ್ಲವಷ್ಟೆ?

**ಭಾವವಿಲಾಸಿನೀ–** ಮಿಥ್ಯಾತ್ವೇ ಬಾಧಕಾಂತರಂ ಚಾಹ – **ಕಥಮಿತಿ** ॥ ನಾಯಂ ಪ್ರತಿಬಿಂಬ ಇತಿ ಬಾಧಿಕಾ ಪ್ರಮಾ ನ ಹ್ಯಸ್ತೀತಿ ಸಂಬಂಧಃ । ಉಪಲಕ್ಷಣಂ ಚೈತತ್ । ನೇದಾನೀಂ ಪ್ರತಿಬಿಂಬ ಇತಿ ತು ಪ್ರಮಾ ನ ಬಾಧಿಕಾ ಚೇತ್ಯಪಿ ದ್ರಷ್ಟವ್ಯಮ್ ॥ ೧೫೮೫ ॥

**ವಿವರಣೆ–** ಈಗ ಪ್ರತಿಬಿಂಬವಿಲ್ಲ ಎಂಬ ಪ್ರಮೆಯು ಪ್ರತಿಬಿಂಬದ ಪ್ರಾಗಭಾವ ಅಥವಾ ಧ್ವಂಸವನ್ನು ವಿಷಯೀಕರಿಸುವುದರಿಂದ ಅದು ಬಾಧವಲ್ಲ ಎಂದು ಅಭಿಪ್ರಾಯ.

ದೃಷ್ಟಾಬಾಧಿತಕಾರ್ಯಸ್ಯಾಪ್ಯನ್ಯಥಾನುಪಪತ್ತಿತಃ ।
ಕಲ್ಪ್ಯಂಸ್ಯಾತ್ ಕಾರಣಂ ಸರ್ವಂ ಯಥೇಶಃ ಕಲಮಾಂಕುರಾತ್॥ ೧೫೮೬ ॥

**ಅರ್ಥ–** ದೃಷ್ಟಾಬಾಧಿತಕಾರ್ಯಸ್ಯ = ದೃಷ್ಟವಾದ ಬಾಧಿತವಾಗದೆ ಇರುವ ಕಾರ್ಯವಾದ ಪ್ರತಿಬಿಂಬಕ್ಕೆ, ಅನ್ಯಥಾನುಪಪತ್ತಿತಃ = ಬೇರೆ ರೀತಿ ಕೂಡಿಸಲು ಆಗದೆ ಇರುವುದರಿಂದ, ಯಥಾ = ಹೇಗೆ, ಕಲಮಾಂಕುರಾತ್ = ಮೊಳಕೆ ಎಂಬ ಕಾರ್ಯದ ದೆಸೆಯಿಂದ, ಈಶಃ = ಈಶ್ವರನೆಂಬ ಕರ್ತೃವು, ಕಲ್ಪ್ಯಃ = ಕಲ್ಪನೆಮಾಡಲು ಯೋಗ್ಯನೋ, ತತಃ = ಹಾಗೆಯೇ, ಸರ್ವಮಪಿ ಕಾರಣಂ = ಉಪಾದಾನ, ಕರ್ತೃ, ನಿಮಿತ್ತ ಎಂಬ ಎಲ್ಲಾ ಕಾರಣಗಳೂ ಕೂಡ, ಕಲ್ಪ್ಯಂ ಸ್ಯಾತ್ = ಕಲ್ಪನೆಮಾಡಲು ಯೋಗ್ಯನೇ ಆಗಿದೆ.

**ಅನುವಾದ– ಹೇಗೆ ಕಲಮಬೀಜವು ಮೊಳಕೆಯೊಡೆದಾಗ ಆ ಮೊಳಕೆಯೊಡಯಲು ಜೀವನು ಕಾರಣವಲ್ಲ, ಆದರೂ ಒಂದು ಕಾರ್ಯಕ್ಕೆ ಕರ್ತೃಬೇಕು ಎಂಬ ನಿಯಮದಿಂದ ಈಶ್ವರನನ್ನು ವಾದಿಗಳು ಕಲ್ಪಿಸುತ್ತಾರೆ. ಅದರಂತೆ, ಪ್ರತಿಬಿಂಬವು ಅಬಾಧಿತ ಕಾರ್ಯ ಎಂದು ಅನುಭವಸಿದ್ಧವಾಗಿದೆ. ಪ್ರತಿಬಿಂಬಕ್ಕೆ ಕಾರ್ಯತ್ವವನ್ನು ಉಪಾದಾನಾದಿಗಳು ಇಲ್ಲದೆ ಕೂಡಿಸಲು ಬರುವುದಿಲ್ಲ, ಆದ್ದರಿಂದ ಈ ಪ್ರತಿಬಿಂಬ ಎಂಬ ಕಾರ್ಯಕ್ಕೆ ಉಪಾದಾನ, ನಿಮಿತ್ತ, ಕರ್ತೃಗಳನ್ನು ಕಲ್ಪಿಸಬೇಕು.**

**ಭಾವವಿಲಾಸಿನೀ–** ನನೂಪಾದಾನಕಾರಣಾದರ್ಶನಾನ್ಮಿಥ್ಯಾತ್ವಮಿತಿ ಶಂಕಾಂ ಯಥಾವಸ್ತು ಕಥನೇನ ಪರಿಹೃತಾಮಪಿ ಪರಮುಖೇನೈವಕಾರಣಂ ವಾಚಯಿತುಂ ಪ್ರತಿಬಂದೀಮುಖೇನ ಪುನಃ ಪರಿಹರತಿ –**ದೃಷ್ಟೇತಿ ॥** ಅನ್ಯಥಾಕರ್ತುರದರ್ಶನಾತ್ ಕ್ಷಿತ್ಯಾದೇರಪಿ ಮಿಥ್ಯಾತ್ವಂ ಸ್ಯಾದಿತಿ ಭಾವಃ ॥೧೫೮೬॥

**ವಿವರಣೆ–** ಪ್ರತಿಬಿಂಬಕ್ಕೆ ಉಪಾಧಿಯು ಉಪಾದಾನವಾಗಿ ಕಾಣದಿರುವುದರಿಂದ ಕಾರ್ಯವಲ್ಲ ಎಂದು ಮಿಥ್ಯಾತ್ವವನ್ನು ಹೇಳಿದರೆ ಕ್ಷಿತ್ಯಾದಿಗಳಿಗೂ ಕೂಡ ಕರ್ತೃವು ಕಾಣದಿರುವುದರಿಂದ ಮಿಥ್ಯಾತ್ವವನ್ನು ತಿಳಿಯಬೇಕಾಗುವುದು. ಆದ್ದರಿಂದ ಪ್ರಮಿತವಾದ ಕಾರ್ಯಕ್ಕೆ ಕಾರಣವನ್ನು ಕಲ್ಪಿಸಬೇಕು ಎಂದು ಅಭಿಪ್ರಾಯ.

ಉಪಾಧಿಗೆ ವಿಕಾರವು ಕಾಣದಿರುವುದರಿಂದ ಹೇಗೆ ಪ್ರತಿಬಿಂಬಕ್ಕೆ ಉಪಾದಾನವಾಗುತ್ತದೆ ಎಂಬ ಸಂಶಯವನ್ನು ಪ್ರತಿಬಂದಿಯನ್ನು ಸೂಚಿಸಿ ಪರಿಹರಿಸುತ್ತಾರೆ-

ಅಸ್ತೂಪಾಧಿವಿಕಾರೋಽಸೌ ತದ್ಗರೂಪರಸಾದಿವತ್ ।
ನಿಮಿತ್ತಮಾತ್ರಜನ್ಯೋ ವಾ ಭಾವೋಽಪ್ಯೇಕೋಽಸ್ತ್ವಭಾವವತ್ ॥೧೫೮೭॥

**ಅರ್ಥ–** ಅಸೌ = ಈ ಪ್ರತಿಬಿಂಬವೂ, ತದ್ಗರೂಪರಸಾದಿವತ್ = ಉಪಾಧಿಗಳಾದ ದರ್ಪಣಾದಿಗಳ ರೂಪರಸಗಳಂತೆ, ಉಪಾಧಿವಿಕಾರಃ = ದರ್ಪಣಾದಿವಿಕಾರವು, ಅಸ್ತು = ಆಗಲಿ. ವಾ = ಅಥವಾ, ಏಕಃ ಭಾವೋಽಪಿ = ಭಾವಪದಾರ್ಥವಾದ ಒಂದು ಪ್ರತಿಬಿಂಬವು, ಅಭಾವವತ್ = ಪ್ರಧ್ವಂಸಾಭಾವದಂತೆ, ನಿಮಿತ್ತಮಾತ್ರಜನ್ಯಃ = ಕೇವಲ ನಿಮಿತ್ತಕಾರಣದಿಂದ ಹುಟ್ಟಿದ್ದು ಅಸ್ತು = ಆಗಲಿ.

**ಅನುವಾದ–** ದರ್ಪಣಾದಿಗಳಲ್ಲಿರುವ ರೂಪರಸಾದಿಧರ್ಮಗಳು ಕಾರ್ಯಗಳಾಗಿವೆ. ಆ ಕಾರ್ಯಗಳಿಗೆ ದರ್ಪಣವೇ ಉಪಾದಾನ ಕಾರಣ. ಅದರಂತೆ ಈ ಉಪಾಧಿಗೂ ದರ್ಪಣವೇ ಉಪಾದಾನ ಕಾರಣವಾಗಲಿ. ಅಥವಾ ಪ್ರಧ್ವಂಸವು ಕಾರ್ಯವಾಗಿದೆ ಆದರೆ ಅದಕ್ಕೆ ನಿಮಿತ್ತಕಾರಣವಿದ್ದರೂ ಉಪಾದಾನಕಾರಣವನ್ನು ಒಪ್ಪುವುದಿಲ್ಲ. ಹೀಗೆ ಪ್ರಧ್ವಂಸಾಭಾವ ಒಂದರಲ್ಲೇ ನಿಮಿತ್ತಕಾರಣ ಮಾತ್ರ ಜನ್ಯತ್ವವಿದೆ. ಅದರಂತೆ ಈ ಪ್ರತಿಬಿಂಬ ಎಂಬ ಕಾರ್ಯವಾದ ಭಾವಪದಾರ್ಥದಲ್ಲಿ ಉಪಾದಾನವನ್ನು ಒಪ್ಪದೆ ನಿಮಿತ್ತಮಾತ್ರಜನ್ಯತ್ವವು ಇರಲಿ.

**ಭಾವವಿಲಾಸಿನೀ–** ವಿಕಾರಾದರ್ಶನಾತ್ ಕಥಮುಪಾಧಿರುಪಾದಾನಮಿತಿ ಶಂಕಾಮಪಿ ಪ್ರತಿಬಂದೀಸೂಚನೇನ ಪರಿಹರತಿ – **ಅಸ್ತ್ವಿತಿ** ॥ ತದ್ಗರೂಪರಸಾದಿವತ್ ದರ್ಪಣಸ್ಥ-ರೂಪರಸಾದಿವತ್। ಯಥಾಬೀಜಾದಂಕುರವತ್ ದರ್ಪಣರೂಪರಸಾದೀನಾಂ ದರ್ಪಣಾ-ತ್ಕಾರ್ಥಕ್ಯೇನಾವಿಕಾರೇಽಪಿ ದರ್ಪಣವಿಕಾರತ್ವಂ ತಥಾ ಸ್ಯಾದಿತಿ ಭಾವಃ । ಕಿಂಚ ಯಥಾ ಏಕಸ್ಯ ಪ್ರಧ್ವಂಸಸ್ಯೈವೋಪಾದಾನಾ ದರ್ಶನಾನ್ನಿರುಪಾದಾನಕಕಾರ್ಯತ್ವಮಂಗೀಕ್ರಿಯತೇ ತಥಾಽಸ್ಯಾಪ್ಯಂಗೀಕ್ರಿಯತಾಮ್ । ಕಲ್ಪಕನ್ಯಾಯಸ್ಯೋಭಯತ್ರ ಸಾಮ್ಯಾದಿತ್ಯಾಹ – **ನಿಮಿತ್ತ-ಮಾತ್ರೇತಿ** ॥ ಭಾವಃ ಪ್ರತಿಬಿಂಬಃ ॥ ೧೫೮೭ ॥

**ವಿವರಣೆ–** ಬೀಜಾಂಕುರ, ಮೃದ್‌ಘಟಾದಿ ಸ್ಥಳಗಳಲ್ಲಿ ಉಪಾದಾನಗಳ ವಿಕಾರವು ಸ್ಪಷ್ಟವಾಗಿ ಕಾಣುತ್ತದೆ. ಆದರೆ ದರ್ಪಣಾದಿಗಳ ವಿಕಾರವಾದ, ರೂಪರಸಾದಿಗಳು ಪ್ರತ್ಯೇಕವಾಗಿ ಕಾಣುವುದಿಲ್ಲ. ಆದರೂ ಆ ರೂಪರಸಾದಿಗಳಿಗೆ ದರ್ಪಣವು ಉಪಾದಾನ ಕಾರಣವಾಗಿದೆ. ಅದರಂತೆ ಪ್ರತಿಬಿಂಬದಲ್ಲಿ ದರ್ಪಣವಿಕಾರವು ಸ್ಪಷ್ಟವಾಗಿ ಕಾಣದಿದ್ದರೂ ದರ್ಪಣಕ್ಕೆ ಉಪಾದಾನತ್ವವನ್ನು ಒಪ್ಪಬಹುದು.

ಹಾಗೆಯೇ ಯಾವ ಕಾರ್ಯಗಳಲ್ಲಿಯೂ ಇಲ್ಲದಿರುವ ನಿಮಿತ್ತಮಾತ್ರಜನ್ಯತ್ವವನ್ನು ಪ್ರಧ್ವಂಸದಲ್ಲಿ ಒಪ್ಪಿದಂತೆ ಪ್ರತಿಬಿಂಬದಲ್ಲಿ ನಿಮಿತ್ತಮಾತ್ರಜನ್ಯತ್ವವನ್ನು ಒಪ್ಪಬೇಕು ಎಂದು ಎರಡು ಪ್ರತಿಬಂದಿಯನ್ನು ಈ ಶ್ಲೋಕದಲ್ಲಿ ಸೂಚಿಸಿದ್ದಾರೆ.

ಪ್ರತಿಬಿಂಬಕ್ಕೆ ನಿಮಿತ್ತಮಾತ್ರಜನ್ಯತ್ವವಿಷಯದಲ್ಲಿ ಪ್ರತಿಬಂದಿಯನ್ನು ಹೇಳುತ್ತಾರೆ-

ಉಪಾದಾನಸ್ಯ ಚಾದೃಷ್ಟ್ಯಾ ಕಾರ್ಯದೃಷ್ಟ್ಯಾ ಚ ತಾದೃಶೀ ।
ಅವಸ್ಥಾ ಕಲ್ಪ್ಯತೇಽಭಾವೇ ಭಾವೇ ಕಿಂ ನ ತಥಾವಿಧೇ ॥ ೧೫೮೮ ॥

**ಅರ್ಥ–** ಉಪಾದಾನಸ್ಯ = ಉಪಾದಾನಕಾರಣದ, ಅದೃಷ್ಟ್ಯಾ ಚ = ಕಾಣದಿರುವಿಕೆಯಿಂದಲೂ, ಕಾರ್ಯದೃಷ್ಟ್ಯಾ ಚ = ಕಾರ್ಯವು ದೃಷ್ಟವಾಗಿರುವುದರಿಂದಲೂ, ತಾದೃಶೀ ಅವಸ್ಥಾ= ಉಪಾದಾನ ಜನ್ಯತ್ವಾಭಾವ ಎಂಬ ಸ್ಥಿತಿಯು ಅಥವಾ ನಿಮಿತ್ತ ಕಾರಣ ಮಾತ್ರ ಜನ್ಯತ್ವವೆಂಬ ಸ್ಥಿತಿಯು, ಅಭಾವೇ= ಧ್ವಂಸರೂಪವಾದ ಅಭಾವದಲ್ಲಿ, ಕಲ್ಪ್ಯತೇ =

ಕಲ್ಪಿಸಲ್ಪಡುತ್ತದೆ. ತಥಾವಿಧೇ = ಅದೇ ರೀತಿಯಾದ, ಭಾವೇ = ಭಾವ ಪದಾರ್ಥವಾದ ಪ್ರತಿಬಿಂಬದಲ್ಲಿ ಕಿಂ ನ ಕಲ್ಪ್ಯತೇ = ಏಕೆ ನಿಮಿತ್ತಕಾರಣಮಾತ್ರಜನ್ಯತ್ವವು ಕಲ್ಪಿಸಲ್ಪಡುವುದಿಲ್ಲ.

**ಅನುವಾದ–** ಪ್ರಧ್ವಂಸಾಭಾವವು ಕಾರ್ಯವಾಗಿದೆ. ಆ ಕಾರ್ಯತ್ವವು ಪ್ರಮಾಣಸಿದ್ಧವಾಗಿದೆ. ಆದರೆ ಆ ಪ್ರಧ್ವಂಸಕ್ಕೆ ಉಪಾದಾನಕಾರಣವು ಯಾವ ಪ್ರಮಾಣದಿಂದ ಸಿದ್ಧವಾಗಲಿಲ್ಲ. ಆದ್ದರಿಂದ ಪ್ರಧ್ವಂಸವು ಕಾರ್ಯವಾದರೂ ನಿಮಿತ್ತಕಾರಣಮಾತ್ರದಿಂದ ಹುಟ್ಟಿದೆ ಎಂಬ ಹೊಸಸ್ಥಿತಿಯನ್ನು ಒಪ್ಪಿಕೊಂಡಂತೆ ಪ್ರತಿಬಿಂಬದಲ್ಲಿಯೂ ಕೂಡ ಉಪಾದಾನವು ಕಾಣದೆ ಕಾರ್ಯತ್ವವು ಕಂಡಿದೆ. ಆದ್ದರಿಂದ ನಿಮಿತ್ತಕಾರಣಮಾತ್ರಜನ್ಯತ್ವವನ್ನು ಏಕೆ ಕಲ್ಪನೆ ಮಾಡಬಾರದು?

**ಭಾವವಿಲಾಸಿನೀ–** ತಾದೃಶೀ ನಿಮಿತ್ತಮಾತ್ರಜನ್ಯತ್ವರೂಪಾ । ಆದೌ ಅಭಾವ ಇತಿ ಪದಚ್ಛೇದಃ । ಪಶ್ಚಾದ್ಭಾವ ಇತಿ ॥ ೧೫೮೮ ॥

ಪ್ರತಿಬಿಂಬದಲ್ಲಿ ಕಾರ್ಯತ್ವವು ದೃಷ್ಟವಾಗಿರುವಾಗ ಕಾರಣಗಳನ್ನು ಒಪ್ಪದಿದ್ದರೆ ಪ್ರತಿಬಂದಿಯನ್ನು ಹೇಳುತ್ತಾರೆ–

ಸರ್ವಥಾ ದೃಷ್ಟಕಾರ್ಯಸ್ಯ ಹ್ಯಪಲಾಪೋ ನ ಯುಜ್ಯತೇ ।
ನ ಚೇದೀಶಪ್ಲುತಂ ತ್ಯಾಜ್ಯಂ ನಾರಿಕೇಳಫಲೇ ಜಲಮ್ ॥ ೧೫೮೯ ॥

**ಅರ್ಥ–** ದೃಷ್ಟಕಾರ್ಯಸ್ಯ = ಪ್ರಮಾಣಸಿದ್ಧವಾದ ಕಾರ್ಯವಾದ ಪ್ರತಿಬಿಂಬಕ್ಕೆ, ಅಪಲಾಪಃ= ಕಾರಣವಿಲ್ಲ ಎಂಬ ಕಾರಣದಿಂದ ಅಪಲಾಪವು, ಸರ್ವಥಾ = ಯಾವ ಪ್ರಕಾರದಿಂದಲೂ, ನ ಯುಜ್ಯತೇ = ಕೂಡುವುದಿಲ್ಲ, ನ ಚೇತ್ = ಕಾರ್ಯತ್ವವನ್ನು ಕೂಡಿಸಲು ಅದೃಷ್ಟವಾದ ಕಾರಣವನ್ನು ಒಪ್ಪುವುದಿಲ್ಲವಾದರೆ, ನಾರಿಕೇಲಫಲೇ = ತೆಂಗಿನಕಾಯಿಯಲ್ಲಿ, ಈಶಪ್ಲುತಂ= ದೇವರಿಂದ ಸೃಷ್ಟವಾದದು ಎಂಬುವುದನ್ನು, ಜಲಂ = ನೀರು, ತ್ಯಾಜ್ಯಂ = ಬಿಡಲ್ಪಡಬೇಕು.

**ಅನುವಾದ–** ಲೋಕದಲ್ಲಿ ಕಾರ್ಯವು ಕಂಡಾಗ ಕಾರಣವು ಕಾಣದಿದ್ದರೂ ಅದನ್ನು ಕಲ್ಪಿಸುವುದು ಕಂಡಿದೆ. ಉದಾಹರಣೆಗೆ ತೆಂಗಿನಕಾಯಿಯ ಒಳಗೆ ನೀರು ಉತ್ಪನ್ನವಾಗಿದೆ. ಈ ದೃಷ್ಟವಾದ ಕಾರ್ಯಕ್ಕೆ ಈಶ್ವರನನ್ನು ಕಾರಣ ಎಂದು ಒಪ್ಪಬೇಕು. ಆದರೆ ಇದೇ ರೀತಿ ಪ್ರತಿಬಿಂಬವೂ ಕಾರ್ಯವಾಗಿದೆ. ಅದರಿಂದ ಉಪಾದಾನಾದಿ ಕಾರಣಗಳನ್ನು ಒಪ್ಪಬೇಕು. ಅದನ್ನು ಒಪ್ಪದಿದ್ದರೆ ತೆಂಗಿನಕಾಯಿಯ ಒಳಗೆ ನೀರು ದೇವರಿಂದ ಸೃಷ್ಟವಾದ ನೀರನ್ನೂ ಬಿಡಬೇಕು.

**ಭಾವವಿಲಾಸಿನೀ–** ನಚೇತ್ ಕಾರ್ಯಾನ್ಯಥಾನುಪಪತ್ತ್ಯಾಽದೃಷ್ಟ ಕಾರಣಕಲ್ಪನಂ ನಚೇತ್ ॥ ೧೫೮೯ ॥

**ವಿವರಣೆ–** ಕಾರ್ಯವು ದೃಷ್ಟವಾದಾಗ ಅಲ್ಲಿ ಕಾರಣವು ಕಾಣದಿದ್ದರೂ ಅನ್ಯಥಾನುಪಪತ್ತಿ ಪ್ರಮಾಣದಿಂದ ಅದೃಷ್ಟವಾದ ಕಾರಣವನ್ನು ಒಪ್ಪದಿದ್ದರೆ ಎಂದು ಅರ್ಥ.

**ಅತಃ ಸ್ವಾಪ್ನಪದಾರ್ಥಸ್ಯ ಪ್ರಾಹುಃ ಸಂಸ್ಕಾರಜನ್ಯತಾಂ ।**
**ನ ಸ್ವಪ್ನ ಇತಿ ಬಾಧಸ್ಯಾಭಾವಾದರ್ಥಕ್ರಿಯಾಕೃತೇಃ ॥ ೧೫೮೦ ॥**

**ಅರ್ಥ–** ಅತಃ = ದೃಷ್ಟವಾದ ಕಾರ್ಯವನ್ನು ಅಪಲಾಪಮಾಡದೇ ಇರುವುದರಿಂದ, ಸ್ವಾಪ್ನಪದಾರ್ಥಸ್ಯ = ಸ್ವಪ್ನದಲ್ಲಿ ಕಾಣುವ ವಸ್ತುವಿಗೆ, ನ ಸ್ವಪ್ನಃ ಇತಿ = ಸ್ವಪ್ನವಲ್ಲ ಎಂಬ, ಬಾಧಸ್ಯ= ಬಾಧಕಜ್ಞಾನದ, ಅಭಾವಾತ್ = ರಾಹಿತ್ಯದ ದೆಸೆಯಿಂದ, ಅರ್ಥಕ್ರಿಯಾಕೃತೇಶ್ಚ= ಮತ್ತು ಅರ್ಥಕ್ರಿಯಾಕಾರಿತ್ವವು ಇರುವುದರಿಂದಲೂ, ಸಂಸ್ಕಾರಜನ್ಯತಾಂ = ಸಂಸ್ಕಾರ ಎಂಬ ಉಪಾದಾನದಿಂದ ಹುಟ್ಟುವಿಕೆಯನ್ನು, ಪ್ರಾಹುಃ = ಹೇಳುತ್ತಾರೆ.

**ಅನುವಾದ–** ಸ್ವಪ್ನದಲ್ಲಿ ಕಾಣುವ ವಸ್ತುಗಳು ಸತ್ಯವಾಗಿ ಕಾರ್ಯವಾಗಿದೆ. ನ ಸ್ವಪ್ನಃ ಎಂಬ ಬಾಧವು ಇಲ್ಲ. ದುಃಖಾದಿ ಅರ್ಥಕ್ರಿಯಾಕಾರಿತ್ವವು ಇದೆ. ಹೀಗೆ ಆ ಸ್ವಾಪ್ನ ಪದಾರ್ಥವು ಸತ್ಯವಾಗಿದೆ. ಈ ಸ್ವಪ್ನಪದಾರ್ಥಗಳಿಗೆ ಉಪಾದಾನಕಾರಣ ಸಂಸ್ಕಾರ ಎಂದು ಒಪ್ಪಿದ್ದಾರೆ. ಆದರೆ ಸಂಸ್ಕಾರವು ಕಾಣುವುದಿಲ್ಲ. ಹೀಗೆ ದೃಷ್ಟಕಾರ್ಯವಾದ ಸ್ವಾಪ್ನಪದಾರ್ಥಕ್ಕೆ ಅದೃಷ್ಟಕಾರಣವಾದ ಸಂಸ್ಕಾರವನ್ನು ಒಪ್ಪಿಕೊಂಡಂತೆ ಈ ಪ್ರತಿ ಬಿಂಬಕ್ಕೆ ಉಪಾಧಿಯನ್ನು ಉಪಾದಾನವನ್ನಾಗಿ ಒಪ್ಪಿಕೊಳ್ಳಬೇಕು.

**ಭಾವವಿಲಾಸಿನೀ–** ಅತಃ ದೃಷ್ಟಕಾರ್ಯಸ್ಯಾಪಲಾಪಾಯೋಗಾದೇವ ॥ ೧೫೮೦ ॥

**ವಿವರಣೆ–** ಮಧ್ವಸಿದ್ಧಾಂತದ ಪ್ರಕಾರ ಸ್ವಾಪ್ನಪದಾರ್ಥವು ಸುಳ್ಳಲ್ಲ. ಏಕೆಂದರೆ ಸ್ವಾಪ್ನ ಪದಾರ್ಥಜ್ಞಾನಕ್ಕೆ ಬಾಧವು ಇಲ್ಲ. ಹಾಗೆಯೇ ಸ್ವಾಪ್ನಪದಾರ್ಥ ಮತ್ತು ಜ್ಞಾನದಿಂದ ಸುಖ ದುಃಖಾದಿ ಫಲಗಳು ಆಗುತ್ತವೆ. ಆ ಸ್ವಾಪ್ನ ಪದಾರ್ಥಗಳಿಗೆ ಬಾಹ್ಯಪದಾರ್ಥದ ಅಭೇದ ಜ್ಞಾನವು ಮಾತ್ರ ಭ್ರಮೆಯಾಗಿದೆ.

**ಪ್ರತಿಮುಖವನ್ನು ಕಂಡು ಇದಂ ಮುಖಂ ಎಂಬುದಾಗಿ ಮುಖಶಬ್ದವನ್ನು ಔಪಚಾರಿಕವಾಗಿ ಪ್ರಯೋಗ ಮಾಡುವುದು ಎಂಬ ವಿಷಯದಲ್ಲಿ ಅನೇಕ ದೃಷ್ಟಾಂತಗಳನ್ನು ಹಿಂದೆ ಹೇಳಿದ್ದರೂ ಈಗ ಆ ವಿಷಯದಲ್ಲಿ ನಿಮಿತ್ತವನ್ನು ಹೇಳುತ್ತಾರೆ-**

**ಮುಖಶಬ್ದಃ ಪ್ರತಿಮುಖೇ ಸೋಪಚಾರಃ ಕಥಂ ನ ತೇ ।**
**ಮುಖಂ ಪ್ರತಿ ಸ್ಥಿತಂ ಯತ್ ಸ್ಯಾತ್ ತದ್ಧಿ ಪ್ರತಿಮುಖಾಭಿಧಂ ॥ ೧೫೮೧ ॥**

**ಅರ್ಥ–** ಹಿ = ಯಾವ ಕಾರಣದಿಂದ, ಯತ್ = ಯಾವುದು, ಮುಖಂ ಪ್ರತಿ = ಮುಖಕ್ಕೆ ಎದುರಾಗಿ, ಸ್ಥಿತಂ = ಇದೆಯೋ, ತತ್ = ಅದು, ಪ್ರತಿಮುಖಾಭಿಧಂ = ಪ್ರತಿ ಮುಖ ಎಂಬ ಹೆಸರುಳ್ಳದ್ದಾಗಿದೆಯೋ, ತಸ್ಮಾತ್ = ಆಕಾರಣದಿಂದ, ತೇ (ಮತೇ) = ನಿನ್ನ

ಸಿದ್ಧಾಂತದಲ್ಲಿ, ಮುಖಶಬ್ದಃ = ಮುಖ ಎಂಬ ಶಬ್ದವು, ಪ್ರತಿಮುಖೇ = ಪ್ರತಿಮುಖದಲ್ಲಿ ಕಥಂ = ಏಕೆ, ಸೋಪಚಾರಃ = ಔಪಚಾರಿಕವು, ನ = ಅಲ್ಲ?

**ಅನುವಾದ–** ಯಾವುದು ಮುಖಕ್ಕೆ ಎದುರಾಗಿದೆಯೋ ಅದನ್ನು ಪ್ರತಿಮುಖ ಎಂದು ಕರೆಯುವುದರಿಂದ ಮುಖ ಶಬ್ದವು ಪ್ರತಿಬಿಂಬದಲ್ಲಿ ಏಕೆ ಉಪಚರಿತ-ವಾಗುವುದಿಲ್ಲ?

**ಭಾವವಿಲಾಸಿನೀ–** ಪ್ರತಿಮುಖೇ ಮುಖಶಬ್ದಸ್ಯೌಪಚಾರಿಕತ್ವೇನಿದರ್ಶನಾನ್ಯುಕ್ತಾನಿ । ನಿಮಿತ್ತಂ ಚಾಹ – ಮುಖಶಬ್ದ ಇತಿ ॥ ತೇಮತೇ । ತತ್ ಮುಖಂ ಪ್ರತಿಸ್ಥಿತತ್ವೇನ ಪ್ರತಿಮುಖಶಬ್ದವಾಚ್ಯಮ್ ॥ ೧೫೧ ॥

**ವಿವರಣೆ–** ಪ್ರತಿಮುಖಶಬ್ದದ ನಿರ್ವಚನವನ್ನು ಎಲ್ಲರೂ ಮುಖಂ ಪ್ರತಿ ಸ್ಥಿತಂ ಪ್ರತಿಮುಖಂ ಎಂಬುದಾಗಿ ಮಾಡುತ್ತಾರೆ. ಈ ಪ್ರತಿಮುಖಶಬ್ದವನ್ನು ಪ್ರತಿಬಿಂಬದಲ್ಲಿ ಮಾತ್ರ ಪ್ರಯೋಗಿಸುತ್ತಾರೆ. ಹೊರತು ಬಿಂಬದಲ್ಲಿ ಅಲ್ಲ. ಮುಖಕ್ಕೆ ಎದುರಾಗಿರುವ ಇನ್ನೊಂದು ವಸ್ತುವಿನಲ್ಲಿ ಮುಖ ಶಬ್ದ ಪ್ರಯೋಗವು ಉಪಚರಿತವೇ ಆಗಬೇಕಷ್ಟೆ ಎಂದು ಅಭಿಪ್ರಾಯ.

ಈ ವಿಷಯವನ್ನೇ ಮುಂದುವರಿಸಿ ಬಿಂಬಪ್ರತಿಬಿಂಬವಾದವನ್ನು ಉಪಸಂಹರಿಸುತ್ತಾರೆ-

**ಕಥಂ ತದೇವ ಚ ಮುಖಂ ತಸ್ಮಾತ್ ಪ್ರತ್ಯಕ್‌ಪರಾಕ್‌ಸ್ಥಿತೇಃ ।**
**ಸಂಜ್ಞಾಭೇದಾತ್ ಕರ್ಮಭೇದಾದ್ ಬಿಂಬೋಽನ್ಯಃ ಪ್ರತಿಬಿಂಬತಃ ॥೧೫೨॥**

**ಅರ್ಥ–** ಕಥಂ ಚ = ಹೇಗೆ ತಾನೆ, ತಸ್ಮಾತ್= ಮುಖಕ್ಕೆ ಎದುರಾಗಿರುವುದರಿಂದ, ತದೇವ= ಪ್ರತಿಮುಖ ಶಬ್ದವಾಚ್ಯವಾದ ವಸ್ತುವೇ, ಮುಖಂ = ಮುಖಶಬ್ದವಾಚ್ಯವೂ ಮತ್ತು ಮುಖಾಭಿನ್ನವು, ಕಥಂ ಸ್ಯಾತ್ = ಹೇಗೆ ತಾನೆ ಆದೀತು? ತಸ್ಮಾತ್ = ಆದ್ದರಿಂದ, ಪ್ರತ್ಯಕ್ ಪರಾಕ್‌ಸ್ಥಿತೇಃ = ಪ್ರತ್ಯಕ್ಪರಾಕ್‌ಭಾವ ಇರುವ ಕಾರಣದಿಂದ, ಸಂಜ್ಞಾಭೇದಾತ್ = ಭಿನ್ನ ಭಿನ್ನವಾದ ಹೆಸರುಗಳಿರುವುದರಿಂದ, ಕರ್ಮಭೇದಾತ್ = ಶಬ್ದವ್ಯವಹಾರ, ದಾಹಾದಿಕರ್ಮ ಭೇದಗಳಲ್ಲಿ ಭೇದ ಇರುವುದರಿಂದ, ಬಿಂಬಃ = ಬಿಂಬವು, ಪ್ರತಿಬಿಂಬತಃ = ಪ್ರತಿಬಿಂಬಕ್ಕಿಂತ, ಅನ್ಯಃ = ಬೇರೆಯಾಗಿದೆ.

**ಅನುವಾದ–** ಪ್ರತಿಮುಖಶಬ್ದವಾಚ್ಯವಾದಂತಹ ವಸ್ತುವು ಮುಖಶಬ್ದವಾಚ್ಯ ಮತ್ತು ಮುಖಾಭಿನ್ನವಾಗಲು ಸಾಧ್ಯವಿಲ್ಲ. ಹೀಗೆ ವಿರುದ್ಧ ದಿಕ್ಕಿಗೆ ಅಭಿಮುಖವಾದ್ದರಿಂದ, ಮುಖಗಳು ಪ್ರತಿಮುಖಗಳೆಂಬ ಬೇರೆ ಬೇರೆ ಹೆಸರು ಇರುವುದರಿಂದ ಶಬ್ದವ್ಯವಹಾರ ದಾಹಾದಿ ಕಾರ್ಯಭೇದ ಇರುವುದರಿಂದ, ಬಿಂಬಪ್ರತಿಬಿಂಬಗಳು ಬೇರೆ ಬೇರೆಯಾಗಿವೆ.

**ಭಾವವಿಲಾಸಿನೀ–** ಮುಖಂ ಮುಖಶಬ್ದವಾಚ್ಯಂ ಮುಖಾಭಿನ್ನಂ ಚ । ಮುಖ- ಪ್ರತಿಮುಖ-ಯೋರ್ವಿರುದ್ಧಾರ್ಥತ್ವೇನೋಭಯೋರಪ್ಯೇಕತ್ರವಮುಖ್ಯವೃತ್ತ್ಯ ಯೋಗಾತ್ ಸ್ವಸ್ಯೈವ ಪ್ರತಿಸ್ಥಿತತ್ವಾಯೋಗಾಚ್ಚೇತಿ ಭಾವಃ । ಬಿಂಬಪ್ರತಿಬಿಂಬವಾದಮುಪಸಂಹರತಿ – **ತಸ್ಮಾದಿತಿ** ॥ ತಸ್ಮಾದುಕ್ತ ನ್ಯಾಯಾತ್ । ಕರ್ಮಭೇದಾತ್ ಶಬ್ದವ್ಯವಹಾರದಾಹಾದಿಕರ್ಮಭೇದಾತ್ । ಪರಿಮಾಣಗುರುತ್ವಾದಿ ಗುಣಭೇದಾಚ್ಚೇತ್ಯಪಿ ದ್ರಷ್ಟವ್ಯಮ್ ॥ ೧೫೨ ॥

**ವಿವರಣೆ–** ಇಲ್ಲಿ ಕಥಂ ತದೇವ ಚ ಮುಖಂ ಎಂಬ ಪಾದದ ಅರ್ಥವನ್ನು ಹಿಂದಿನ ಶ್ಲೋಕಾರ್ಥಕ್ಕೆ ಅನ್ವಯಿಸಬೇಕು. ಮುಖಶಬ್ದಕ್ಕೆ ಮುಖಶಬ್ದವಾಚ್ಯತ್ವ ಮತ್ತು ಮಖಾಭೇದ ಎಂಬ ಎರಡರ್ಥವನ್ನು ಇಟ್ಟುಕೊಳ್ಳಬೇಕು. ಎರಡನೇ ಪಾದದಿಂದ ತಸ್ಮಾದಿತ್ಯಾದಿ ಬಿಂಬ ಪ್ರತಿಬಿಂಬಗಳಲ್ಲಿರುವಶಬ್ದವ್ಯವಹಾರ, ದಾಹಾದಿ ವಿರುದ್ಧಧರ್ಮಗಳನ್ನು ಇಟ್ಟುಕೊಳ್ಳ ಬೇಕು. ಹಾಗೆಯೇ ಉಪಲಕ್ಷಣವಾಗಿ ಪರಿಮಾಣ ಗುರುತ್ವ, ಲಘುತ್ವ ಮೊದಲಾದ ಬಿಂಬ ಪ್ರತಿಬಿಂಬಗಳಲ್ಲಿರುವ ಗುಣಭೇದಗಳನ್ನೂ ಇಟ್ಟುಕೊಳ್ಳಬೇಕು.

**ವಾದಿರಾಜಾಖ್ಯಯತಿನಾ ಸಾಧಿತಾ ಯುಕ್ತಿಮಲ್ಲಿಕಾ ।**
**ಭೇದಸೌರಭಸರ್ವಸ್ವಮಥ ವಿಷ್ಣೋರ್ನ್ಯವೇದಯತ್ ॥ ೧೫೩ ॥**

**ಅರ್ಥ–** ಅಥ = ಶುದ್ಧಿಸೌರಭದ ನಂತರ, ವಾದಿರಾಜಾಖ್ಯಯತಿನಾ = ವಾದಿರಾಜರೆಂಬ ಸ್ವಾಮಿಗಳಿಂದ, ಯುಕ್ತಿಮಲ್ಲಿಕಾ = ಯುಕ್ತಿಗಳೆಂಬ ಮಲ್ಲಿಗೆಯು, ಸಾಧಿತಾ = ರಚಿಸಲ್ಪಟ್ಟಿದೆ. ಅಥ = ಅನಂತರ, ಭೇದಸೌರಭಸರ್ವಸ್ವಂ = ಭೇದಸೌರಭದ ಎಲ್ಲವನ್ನೂ ವಿಷ್ಣೋಃ = ನಾರಾಯಣನಿಗೆ, ನ್ಯವೇದಯತ್ = ಸಮರ್ಪಿಸಿದ್ದಾರೆ.

**ಅನುವಾದ–** ವಾದಿರಾಜರೆಂಬ ಯತಿಗಳು ಯುಕ್ತಿಮಲ್ಲಿಕೆಯನ್ನು ಮಾಡಿದ್ದಾರೆ. ಆ ಯುಕ್ತಿಮಲ್ಲಿಕೆಯಲ್ಲಿ ಶುದ್ಧಿಸೌರಭದ ಅನಂತರ ಭೇದಸೌರಭ ಎಂಬ ಭಾಗವನ್ನು ನಾರಾಯಣನಿಗೆ ಅರ್ಪಿಸಿದ್ದಾರೆ.

**ಭಾವವಿಲಾಸಿನೀ–** ಪರಿಚ್ಛೇದಮುಪಸಂಹರತಿ–**ವಾದಿರಾಜೇತಿ** ॥ ಅಥ ಶುದ್ಧಿಸೌರಭಾನಂತರಂ । ಭಗವತೋ ಬ್ರಹ್ಮಶಬ್ದಸೂಚಿತಂ ಸಕಲಗುಣಪೂರ್ಣತ್ವಾಖ್ಯಲಕ್ಷಣಮೇವ ಸಜಾತೀಯ-ವಿಜಾತೀಯ ವ್ಯಾವೃತ್ತತಯಾ ಭಗವದವಧಾರಣಹೇತುತ್ವಾಲ್ಲಕ್ಷಣಪ್ರಮಾಣಾಭ್ಯಾಂ ವಸ್ತುಸಿದ್ಧಿರಿತಿ ವದತಾಪಿ ಲಕ್ಷಣಸ್ಯೈವಾದಾವುಪಾತ್ತತ್ವಾಚ್ಚ ಪ್ರಥಮತೋವಿಚಾರಯೋಗ್ಯಮ್ । ಯತ್ರ ಗುಣಾಸ್ತತ್ರದೋಷಾ ಇತಿ ನ್ಯಾಯೇನ ಭಗವತಿ ಪ್ರಾಪ್ತದೋಷಾಣಾಂ ಪರಿಹಾರಾಯ ಭಗವತಃ ಶುದ್ಧಿರೇವತದನಂತರಂ ವಿಚಾರಯೋಗ್ಯಾ । ಏವಂಚೋ ಭಯಸೌರಭಾರ್ಥಯೋರಪಿ ಭಗವದಸಾಧಾರಣಧರ್ಮತ್ವೇನ ಲಕ್ಷಣತ್ವಾತ್ತಾಭ್ಯಾಂ ಕಿಂ ಭಗವತಿ ಸಿದ್ಧಮಿತಿ ಬುಭುತ್ಸಾಯಾಂ ಸಜಾತೀಯ ವಿಜಾತೀಯ ವ್ಯವಚ್ಛೇದಾತ್ಮಕಲಕ್ಷಣಫಲೀಭೂತಭೇದ ಏವ ಭಗವತಿ ತದನುವಿಚಾರಯೋಗ್ಯಃ । ತತಶ್ಚ ಭೇದಾವಧಿಭೂತಸಜಾತೀಯವಿಜಾತೀಯಾತ್ಮಕ ಚೇತನಾ-ಚೇತನರೂಪ ಪ್ರಪಂಚ ಏವ ಪ್ರಪಂಚಯಿತುಂ ಯೋಗ್ಯಃ । ತದುಪರಿವಿಷಯಭೂತಾದಸ್ಮಾತ್

**ಪರಮಪುರುಷಾನ್ಮಮಾಪೇಕ್ಷಿತಫಲಂ ಕಥಂ ಸಿದ್ಧ್ಯೇದಿತ್ಯಾಕಾಂಕ್ಷಾಯಾಂ ಮೋಕ್ಷಸಾಧಕತಯಾ ಶ್ರುತ್ಯುಕ್ತಃ ಶ್ರವಣಮನನಜನ್ಯಾ ಪರೋಕ್ಷಜನ್ಯ ಮಹಾಪ್ರಸಾದ ಏವ ವಿಚಾರಯೋಗ್ಯಃ। ಅಂತೇಸ್ವಾಮಿದ್ರೋಹಿತಯಾ ಭಗವದೈಕ್ಯಪ್ರಾಪ್ತೇ ಷಡ್‌ಬುದ್ಧ್ಯಭಾವೇನ ಜಡತ್ವಾಪಾದಕ ದುಃಖಧ್ವಂಸಸ್ಯ? ಸತತೋರ್ಧ್ವಗಮನಾದೇಶ್ಚಾನಾಕಾಂಕ್ಷಿತತ್ವೇನ ತತ್‌ಸರ್ವಂ ನಿರಸ್ಯ ಸುಖಮೇವ ಮೇ ಸ್ಯಾತ್ ದುಃಖಂ ಮನಾಗಪಿ ಮಾ ಭೂದಿತಿ ಸರ್ವಾಪೇಕ್ಷಿತಮೋಕ್ಷಸ್ಯ ಸ್ವರೂಪಮೇವ ನಿರೂಪಣಯೋಗ್ಯಮಿತಿ ಪಂಚಸೌರಭಕ್ರಮೋಽಪ್ಯಥೇತಿ ವದತೈವ ಸೂಚಿತ ಇತಿ ಜ್ಞಾತವ್ಯಮ್ ॥ ೧೫೯೧ ॥**

**ವಿವರಣೆ–** ಶುದ್ಧಿಸೌರಭದ ನಂತರ ಬ್ರಹ್ಮಶಬ್ದದಿಂದ ಸೂಚಿತವಾದ ಸರ್ವಗುಣ ಪೂರ್ಣತ್ವ ಎಂಬ ಲಕ್ಷಣವೇ ಮೊದಲು ವಿಚಾರಮಾಡಲು ಯೋಗ್ಯವಾಗಿದೆ. ಏಕೆಂದರೆ ಈ ಲಕ್ಷಣವೇ ಸಜಾತೀಯ ವಿಜಾತೀಯ ವಸ್ತುಗಳಿಗಿಂತ ಭಿನ್ನವಾಗಿ ಬ್ರಹ್ಮನ ನಿಶ್ಚಯಕ್ಕೆ ಕಾರಣವಾಗಿದೆ. ಲಕ್ಷಣ ಮತ್ತು ಪ್ರಮಾಣಗಳಿಂದ ವಸ್ತುಸಿದ್ಧಿಯಾಗುವುದು ಎಂದು ಹೇಳುವವರೂ ಕೂಡ ಮೊದಲು ಲಕ್ಷಣವನ್ನೇ ಸ್ವೀಕಾರಮಾಡಿದ್ದಾರೆ. ಎಲ್ಲಿ ಗುಣವಿದೆಯೋ ಅಲ್ಲಿ ದೋಷವಿದೆ ಎಂಬ ವ್ಯಾಪ್ತಿಯಿಂದ ಬ್ರಹ್ಮನಲ್ಲಿ ಪ್ರಾಪ್ತವಾದ ದೋಷ ಗಳ ಪರಿಹಾರಕ್ಕೆ ಭಗವಂತನ ಶುದ್ಧಿಯೇ ನಂತರ ವಿಚಾರಮಾಡಲು ಯೋಗ್ಯವಾಗಿದೆ. ಈ ರೀತಿಯಾಗಿ ಹಿಂದಿನ ಎರಡು ಸೌರಭಗಳಲ್ಲಿ ದೇವರ ಅಸಾಧಾರಣಧರ್ಮವು ಸಿದ್ಧವಾದಾಗ ಆದರಿಂದ ಏನು ಉಪಯೋಗ ಎಂಬ ಜಿಜ್ಞಾಸೆ ಬಂದರೆ ಸಜಾತೀಯ ವಿಜಾತೀಯ ವಸ್ತುಗಳಿಗಿಂತ ಭಿನ್ನನಾಗಿ ಭಗವಂತನು ತಿಳಿಯಲ್ಪಡುತ್ತಾನೆ ಎಂಬುದು ಉತ್ತರವಾಗಿದೆ. ಆ ಭೇದವನ್ನು ಈ ಸೌರಭದಲ್ಲಿ ಸಾಧನೆ ಮಾಡಿದ್ದಾರೆ. ಪ್ರತಿಯೋಗಿಯಾದ ಚೇತನಾಚೇತನಾತ್ಮಕ ಪ್ರಪಂಚದ ವಿಚಾರವೇ ಯೋಗ್ಯ. ಅದನ್ನು ವಿಶ್ವಸೌರಭದಲ್ಲಿ ಮಾಡಿದ್ದಾರೆ. ಅನಂತರ ಶಾಸ್ತ್ರವಿಷಯನಾದ ಈ ಪರಮಪುರುಷನಿಂದ ನನಗೆ ಅಪೇಕ್ಷಿತವಾದ ಫಲವು ಹೇಗೆ ಉಂಟಾಗುತ್ತದೆ ಎಂಬ ಆಕಾಂಕ್ಷೆಯು ಬಂದರೆ ಶ್ರವಣಾದಿಜನ್ಯ ಮಹಾಪ್ರಸಾದವೇ ವಿಚಾರಯೋಗ್ಯ.

ಅನಂತರ ಆ ಮಹಾಪ್ರಸಾದದಿಂದ ದೊರಕುವ ಮೋಕ್ಷಸ್ವರೂಪ ವಿಚಾರವೇ ಯೋಗ್ಯ. ಆ ಪ್ರಸಂಗದಲ್ಲಿ ನೈಯಾಯಿಕಜೈನಾದಿ ಮತಗಳ ಮೋಕ್ಷಸ್ವರೂಪದ ನಿರಾಕರಣೆ ಪ್ರಾಪ್ತವಾಗುತ್ತದೆ. ನನಗೇ ಸುಖವೇ ಆಗಬೇಕು ದುಃಖವು ಬೇಡ ಎಂಬ ನಿಖಿಲಾಪೇಕ್ಷಿತ ಮೋಕ್ಷಸ್ವರೂಪವನ್ನು ಉಪಪಾದನೆ ಮಾಡಲು ಉಳಿದ ಮತಗಳ ನಿರಾಕರಣೆ. ಇದೆಲ್ಲವೂ ಫಲಸೌರಭದಲ್ಲಿ ಸೇರುತ್ತದೆ. ಹೀಗೆ ಐದು ಸೌರಭಗಳ ಕ್ರಮವು ಅತ್ಯಂತ ಸಂಗತವಾಗಿದೆ ಎಂದು ರಾಜರು ಅಥಶಬ್ದದಿಂದ ಸೂಚಿಸುತ್ತಾರೆಂದು ಸುರೋತ್ತಮತೀರ್ಥರು ತಿಳಿಸುತ್ತಾರೆ. ಇತಿಶಂ.

॥ ಶ್ರೀಕೃಷ್ಣಾರ್ಪಣಮಸ್ತು ॥

## ಭೇದಸೌರಭೋದಾಹೃತಸ್ವಾರಸಿಕಯುಕ್ತಯಃ

ನ ಹಿ ದ್ವಿಜಿಹ್ವಃ ಶಬ್ದೋಽಸೌ ನಾಪಿ ತ್ರಿಕ್ಷಣವರ್ತಿನಃ ।
ವಿರಮ್ಯ ವ್ಯಾಪೃತಿರ್ಯುಕ್ತಾ ನಾಪಿ ಸಾ ವಿದುಷಾಂ ಮತಾ ॥ ೮ ॥

**ಅನುವಾದ–** ಅನಂತ ಎಂಬ ಶಬ್ದವು ಎರಡು ನಾಲಿಗೆಯುಳ್ಳದ್ದಲ್ಲ ಮತ್ತು ಮೂರು ಕ್ಷಣ ಮಾತ್ರ ಇರುವ ಶಬ್ದಕ್ಕೆ ವಿರಮ್ಯ ವ್ಯಾಪಾರವು ಕೂಡುವುದಿಲ್ಲ ಮತ್ತು ಕರಣವಾದ ಶಬ್ದಕ್ಕೆ ವಿರಮ್ಯವ್ಯಾಪಾರವು ವಿದ್ವಜ್ಜನರಿಗೆ ಸಮ್ಮತವೂ ಅಲ್ಲ.

ದೇಶಕಾಲಾಂತಶೂನ್ಯತ್ವಂ ದೇಶೇ ಕಾಲೇ ಚ ವರ್ತನಂ ।
ಯಥಾ ವಸ್ತ್ವಂತಶೂನ್ಯತ್ವಂ ತಥಾ ವಸ್ತುಷು ವರ್ತನಂ ।
ಭವೇತ್ ಪರಂ ದ್ವಿಧಾ ನೈಕಪಂಕ್ತೌ ಯತ್ ಪರಿವೇಷಣಂ ॥ ೯ ॥

**ಅನುವಾದ–** ದೇಶಕಾಲಾಂತಶೂನ್ಯತ್ವವೆಂದರೆ ಸರ್ವದೇಶದಲ್ಲಿಯೂ, ಸರ್ವಕಾಲ ದಲ್ಲಿಯೂ ಇದೆ ಎಂದು ಅರ್ಥ ಹೇಗೋ ಅದರಂತೆ ವಸ್ತ್ವಂತಶೂನ್ಯತ್ವವೆಂದರೆ ಸರ್ವವಸ್ತುವಿನಲ್ಲಿಯೂ ಇದೆ ಎಂದೇ ಅರ್ಥ. ಒಂದೇ ಪಂಕ್ತಿಯಲ್ಲಿ ಎರಡು ವಿಧವಾಗಿ ಬಡಿಸಿ ಪಂಕ್ತಿಭೇದವನ್ನು ಮಾಡುವುದಿಲ್ಲವಷ್ಟೇ?

ಬಹುವಸ್ತ್ವಾಶ್ರಯತ್ವಂ ವಾ ಭವೇಲ್ಲೋಕನಿದರ್ಶನಾತ್ ।
ರತ್ನತೋಽನಂತ ಇತ್ಯಾಹುರ್ಯತೋ ರತ್ನಾಕರಂ ಜನಾಃ ।
ತಥಾ ಗುಣಾನಂತತಾ ಚ ಸ್ಯಾದ್ ಗುಣೈಃ ಪೂರ್ಣತಾ ಹರೇಃ ॥ ೧೦ ॥

**ಅನುವಾದ–** ವಸ್ತುತಃ ಅನಂತವೆಂದರೆ ಸಕಲವಸ್ತ್ವಾಶ್ರಯತ್ವ ಎಂಬ ಅರ್ಥವನ್ನು ಲೋಕದ ದೃಷ್ಟಾಂತದಿಂದ ಹೇಳಬಹುದು. ಏಕೆಂದರೆ ಜನರು ಅನಂತ ರತ್ನಗಳಿಗೆ ಆಶ್ರಯವಾದ ಸಮುದ್ರವನ್ನು ರತ್ನಾಕರವೆಂದು ಕರೆಯುತ್ತಾರೆ. ಹಾಗೆಯೇ ಗುಣಾನಂತ್ಯ ಎಂದರೆ ಶ್ರೀಹರಿಗೆ ಗುಣಗಳಿಂದ ಪೂರ್ಣತ್ವ ಎಂದೇ ಅರ್ಥವಾಗುತ್ತದೆ.

**ಶಿಶೋರ್ವೃದ್ಧಸ್ಯ ಯೂನಶ್ಚ ಯಥಾಯೋಗ್ಯಂ ಹಿ ಭೋಜನಂ ।**
**ಭಿನ್ನಭಿನ್ನಾನ್ನದಾನೇ ಹಿ ಪಂಕ್ತಿಭೇದಂ ವಿದುರ್ಬುಧಾಃ ॥ ೧೬ ॥**

ಅನುವಾದ– ಶಿಶುವಿಗೂ, ಯುವಕನಿಗೂ ಮತ್ತು ವೃದ್ಧನಿಗೂ ಬೇರೆ ಬೇರೆ ಪ್ರಮಾಣದಲ್ಲಿ ಅನ್ನವನ್ನು ಬಡಿಸುತ್ತಾರೆ. ಅದು ಪಂಕ್ತಿಭೇದವಾಗುವುದಿಲ್ಲ. ಆದರೆ ಒಬ್ಬೊಬ್ಬರಿಗೆ ಒಂದೊಂದು ವಿಧವಾದ ಅನ್ನಬಡಿಸಿದರೆ ಮಾತ್ರ ಅದು ಪಂಕ್ತಿಭೇದ ಎಂದು ಜ್ಞಾನಿಗಳು ತಿಳಿಯುತ್ತಾರೆ.

**ಏಕಾನ್ನಸ್ಯ ಯಥಾಯೋಗಂ ದಾನೇ ಕೋ ನೇತಿ ಶಂಸತಿ ।**
**ಅತೋ ವಸ್ತುಪರತ್ವೋಕ್ತಿರ್ವಸ್ತುತತ್ತ್ವಾಜ್ಞತಾವಶಾತ್ ॥ ೧೭ ॥**

**ಅನುವಾದ–** ಒಂದೇ ವಿಧವಾದ ಅನ್ನವನ್ನು ಅವರವರ ಯೋಗ್ಯತೆಗೆ ಅನುಗುಣವಾಗಿ ಬಡಿಸಿದರೆ ಅದನ್ನು ಯಾರೂ ದೋಷವೆಂದು ಹೇಳುವುದಿಲ್ಲ. ಆದ್ದರಿಂದ ವಸ್ತುಪರತ್ವೋಕ್ತಿಯು ಎಂದರೆ ಸಕಲವಸ್ತುಗಳಿಂದ ಭೇದರಾಹಿತ್ಯದ ವಚನವು ವಾಸ್ತವ ಸ್ಥಿತಿಯ ಅಜ್ಞಾನದ ಕಾರಣದಿಂದಲೇ ಉಂಟಾಗಿದೆ (ಎಂದು ನಮ್ಮ ಅಭಿಪ್ರಾಯ).

**ಇಮಾಂ ಹಿ ಶಾಸ್ತ್ರಮರ್ಯಾದಾಮಾಚಾರ್ಯಸ್ತತ್ತ್ವವಾದಿನಾಮ್ ।**
**ವೇದ ತಸ್ಮಾತ್ ತದುದಿತಂ ತತ್ತ್ವಂ ನಾನ್ಯದಿತಿ ಸ್ಥಿತಂ ॥ ೬೧ ॥**

**ಅನುವಾದ–** ಈ ಶಾಸ್ತ್ರಮರ್ಯಾದೆಯನ್ನು ತತ್ತ್ವವಾದಿಗಳ ಆಚಾರ್ಯರಾದ ಶ್ರೀಮಧ್ವಾಚಾರ್ಯರು ಒಬ್ಬರೇ ತಿಳಿದಿದ್ದಾರೆ. ಆದ್ದರಿಂದ ಅವರು ಹೇಳಿದುದೇ ತತ್ತ್ವ. ಬೇರೆಯವರು ಹೇಳುವ ಅರ್ಥವು ತತ್ತ್ವವಲ್ಲವೆಂದು ಸಿದ್ಧವಾಗುತ್ತದೆ.

**ಸೌಂದರ್ಯೇಣ ಸಮಗ್ರೇಣ ಜ್ಞಾನೇನ ಚ ಬಲೇನ ಚ ।**
**ಪೂರ್ಣಸ್ಯ ಹ್ಯಾಪ್ತಕಾಮಸ್ಯ ವಿಭೋರ್ನಿತ್ಯಸ್ಯ ಚ ಪ್ರಭೋಃ ॥ ೬೮ ॥**

**ಸುಖಮೇವ ಭವೇತ್ ಪೂರ್ಣಂ ದುಃಖಸ್ಯಾವಸರೋಽಪಿ ನ ।**
**ತತ್ಪೂರ್ಣಸೌಖ್ಯಸಿದ್ಧ್ಯರ್ಥಮಾನಂತ್ಯೋಕ್ತಿಶ್ಚ ಶೋಭತೇ ॥ ೬೯ ॥**

**ಅನುವಾದ–** ಸಮಗ್ರವಾದ ಸೌಂದರ್ಯದಿಂದಲೂ, ಸರ್ವವಿಷಯಕವಾದ ಜ್ಞಾನದಿಂದಲೂ, ಸಮಗ್ರವಾದ ಬಲದಿಂದಲೂ ಪೂರ್ಣನಾದಂತಹ, ಆಪ್ತಕಾಮನಾದಂತಹ, ವ್ಯಾಪ್ತನಾದಂತಹ ಮತ್ತು ನಿತ್ಯನಾದಂತಹ ಪ್ರಭುವಾದ ನಾರಾಯಣನಿಗೆ ಸುಖವೇ ಪೂರ್ಣವಾಗಿ ಆದೀತೇ ಹೊರತು ದುಃಖದ ಪ್ರಾಪ್ತಿಯ ಅವಕಾಶವೇ ಇಲ್ಲ. ಆದ್ದರಿಂದ ಪೂರ್ಣಸೌಖ್ಯದ ಸಿದ್ಧಿಗಾಗಿ ಆನಂತ್ಯವನ್ನು ಹೇಳಿದುದೂ ಸಹ ಶೋಭಿಸುತ್ತದೆ.

ತತ್ ತ್ರಿವರ್ಣಂ ಪದಮಿದಂ ತ್ರಿವಿಕ್ರಮಪದೋಪಮಂ ।
ಪರಾಜಯಾಯ ದೈತ್ಯಾನಾಂ ಜಯಾಯ ಚ ಸತಾಮಭೂತ್ ॥ ೯೨ ॥

**ಅನುವಾದ–** ಆದ್ದರಿಂದ ಅನಂತ ಎಂಬ ಮೂರು ವರ್ಣದ ಪದವು ತ್ರಿವಿಕ್ರಮನ ಪಾದವಿದ್ದಂತೆ. ದೈತ್ಯರ ಪರಾಜಯಕ್ಕೂ ಸಜ್ಜನರ ವಿಜಯಕ್ಕೂ ಕಾರಣವಾಯಿತು.

ಸರ್ವೋಪನಿಷದಾಮರ್ಥಂ ನಿರ್ಣೇತುಂ ಬಾದರಾಯಣಃ ।
ನಿರ್ಮಮೇ ಬ್ರಹ್ಮಸೂತ್ರಾಣಿ ಸೂಚನಾತ್ ಸೂತ್ರಮುಚ್ಯತೇ ॥ ೯೩ ॥

**ಅನುವಾದ–** ವೇದವ್ಯಾಸರು ಎಲ್ಲಾ ವೇದಗಳ ಮತ್ತು ಉಪನಿಷತ್ತುಗಳ ಅರ್ಥವನ್ನು ನಿರ್ಣಯ ಮಾಡಲು ಬ್ರಹ್ಮಸೂತ್ರಗಳನ್ನು ರಚಿಸಿದರು. ಸೂತ್ರವೆಂದರೆ ಸೂಚನೆ ಮಾಡುವುದು ಎಂದು ಅರ್ಥ.

ಅತಸ್ತತ್ಸೂಚಿತಂ ಗ್ರಾಹ್ಯಂ ಕಿಂ ಪುನಃ ಸಕೃದೀರಿತಂ ।
ತದಭ್ಯಸ್ತಂ ಸಮಸ್ತಂ ತು ಚೂಡಾರತ್ನಾಯತೇ ವಿದಾಂ ॥ ೯೪ ॥

**ಅನುವಾದ–** ಆದ್ದರಿಂದ ಸೂತ್ರಸೂಚಿತವಾದುದನ್ನು ಸ್ವೀಕರಿಸಬೇಕು. ಇನ್ನು ಸೂತ್ರವು ಕಂಠತಃ ಹೇಳಿದುದನ್ನು ಸ್ವೀಕರಿಸಬೇಕೆಂದು ಪುನಃ ಹೇಳಬೇಕಾದ ಅವಶ್ಯಕತೆ ಇದೆಯೇ? ಇನ್ನು ಸೂತ್ರದಲ್ಲಿ ಪುನಃ ಪುನಃ ಹೇಳಿದ ವಿಷಯವಂತೂ ಜ್ಞಾನಿಗಳಿಗೆ ಶಿರೋರತ್ನದಂತೆ ಇರುತ್ತದೆ.

ನಿರ್ಣಾಯಕಾನುಸಾರೇಣ ನಿರ್ಣೇಯಸ್ಯ ಗತಿಂ ವಿದುಃ ।
ಅಧ್ವನೀನಸ್ಯ ಸ ಹ್ಯಧ್ವಾ ಯೋ ದೀಪೇನ ಪ್ರದರ್ಶಿತಃ ॥ ೯೫ ॥

**ಅನುವಾದ–** ನಿರ್ಣಾಯಕವಾದ ಬ್ರಹ್ಮಸೂತ್ರಕ್ಕೆ ಅನುಸಾರವಾಗಿ ನಿರ್ಣೇಯವಾದ ಉಪನಿಷತ್ತುಗಳ ಅರ್ಥವನ್ನು ಜ್ಞಾನಿಗಳು ತಿಳಿಯುತ್ತಾರೆ. ಕತ್ತಲೆಯಲ್ಲಿ ದಾರಿಯಲ್ಲಿ ಹೋಗುವವನಿಗೆ ದೀಪವು ಯಾವುದನ್ನು ಮಾರ್ಗವೆಂದು ತೋರಿಸುತ್ತದೆಯೋ ಅದೇ ಮಾರ್ಗವಷ್ಟೇ?

ಚೋರಃ ಪ್ರದೀಪನಾಶಂ ಚ ಕಾಮಯೇತ್ ಕಾಮುಕೋಽಪಿ ವಾ ।
ರಾಜ್ಞ್ಯಾ ರಾಜಗೃಹಂ ರಾತ್ರೌ ಯಾಂತ್ಯಾ ಸೋಽರ್ಥ್ಯಃ ಪದೇ ಪದೇ ॥ ೯೬ ॥

**ಅನುವಾದ–** ಕಳ್ಳನಾದವನು ಅಥವಾ ಕಾಮುಕನಾದವನು ತನ್ನ ಅಯೋಗ್ಯವಾದ ಕೆಲಸವನ್ನು ಯಾರೂ ನೋಡದೆ ಇರಲಿ ಎಂದು ದೀಪದ ನಾಶವನ್ನು ಬಯಸುತ್ತಾನೆ. ಆದರೆ ರಾತ್ರಿಯ ಅಂಧಕಾರದಲ್ಲಿ ರಾಜನನ್ನು ಸೇರಲು ರಾಜಗೃಹಕ್ಕೆ ಹೋಗುವ ರಾಣಿಯು ಮಾತ್ರ ಹೆಜ್ಜೆ ಹೆಜ್ಜೆಗೂ ದೀಪವನ್ನು ಬಯಸುತ್ತಾಳೆ.

ಅತಃ ಸೂತ್ರಂ ತಿರಸ್ಕೃತ್ಯ ಯಃ ಶ್ರುತ್ಯರ್ಥಮತತ್ತ್ವವಿತ್ ।
ವಕ್ತಿ ಸ ಶ್ರುತಿಸುಂದರ್ಯಾಃ ಕಂಠಾತ್ ಸೂತ್ರಂ ಜಿಹೀರ್ಷತಿ ॥ ೯೭ ॥

**ಅನುವಾದ–** ಆದ್ದರಿಂದ ತತ್ತ್ವಜ್ಞಾನಿಯಲ್ಲದ ಯಾವ ಭಾಷ್ಯಕಾರನು ಸೂತ್ರಗಳನ್ನು ಉಲ್ಲಂಘಿಸಿ ಶ್ರುತಿಯ ಅರ್ಥವನ್ನು ಹೇಳುತ್ತಾನೆಯೋ ಅವನು ಶ್ರುತಿಮಾತೆಯ ಕಂಠದಿಂದ ಮಂಗಳ ಸೂತ್ರವನ್ನು ಕಿತ್ತುಹಾಕಲು ಬಯಸುತ್ತಾನೆ.

ಉಪಕರ್ತರ್ಯಪ್ರಕೃತಿಃ ಕೃತಘ್ನಸ್ಯೈವ ಶೋಭತೇ ।
ಧರ್ಮವಕ್ತ್ರೀ ಕಥಂ ಜಹ್ಯಾತ್ ಸೂತ್ರಂ ಸ್ವಾರ್ಥಕೃತೇ ಕೃತಂ ॥ ೯೮ ॥

**ಅನುವಾದ–** ಉಪಕಾರವನ್ನು ಮಾಡುವವರಿಗೆ ಅಪಕಾರವನ್ನು ಮಾಡುವುದು ಕೃತಘ್ನನಿಗೆ ಶೋಭಿಸುತ್ತದೆ. ಧರ್ಮಂ ಚರ ಎಂದು ಧರ್ಮವನ್ನು ಮಾಡಿ ಎಂದು ಹೇಳುವ ಶ್ರುತಿಯು, ತನ್ನ ಅರ್ಥದ ಸಲುವಾಗಿಯೇ ಎಂದರೆ ತನ್ನ ಉಪಕಾರಕ್ಕಾಗಿಯೇ ರಚಿಸಲ್ಪಟ್ಟ ಬ್ರಹ್ಮಸೂತ್ರಗಳನ್ನು ಹೇಗೆ ಪರಿತ್ಯಜಿಸುತ್ತದೆ?

ಸತೀಮಪ್ಯಸತೀಂ ಕರ್ತುಂ ಚಕಮೇ ದಶಕಂಧರಃ ।
ಸಾ ವಾಯುತನಯಾದೇಶೈಸ್ತಪ್ತಾ ತನ್ಮಾರ್ಗಮನ್ವಗಾತ್ ॥ ೯೯ ॥

**ಅನುವಾದ–** ಪತಿವ್ರತೆಯಾದ ಸೀತೆಯನ್ನೂ ಸಹ ರಾವಣನು ದೂಷಿತಳನ್ನಾಗಿ ಮಾಡಲು ಬಯಸಿದನು. ಆದರೆ ಅವಳು ರಾವಣನ ಕಿರುಕುಳದಿಂದ ತಪ್ತಳಾಗಿದ್ದರೂ ಹನುಮಂತನ ಸಂದೇಶಗಳಿಂದ ಸನ್ಮಾರ್ಗದಲ್ಲಿಯೇ ನಡೆದಳು.

ಕೇಶಸ್ಯ ಬ್ರಹ್ಮತಾ ದೃಷ್ಟಾ ಕೇಶವಸ್ಯಾಪಿ ಕಿಂ ನ ಸಾ ॥ ೧೧೧ ॥

**ಅನುವಾದ–** ಪದ್ಮನಾಭ ನಾಮವುಳ್ಳ ಮೂಲರೂಪದ ಕೃಷ್ಣಕೇಶನಾದ ಕೃಷ್ಣಾವತಾರಕ್ಕೂ ಬ್ರಹ್ಮತ್ವವಿರುವುದು ದೃಷ್ಟವಾಗಿದೆ. ಮೂಲರೂಪವಾದ ಕೇಶವನಿಗೆ ಬ್ರಹ್ಮತ್ವವಿಲ್ಲವೇ?

ಪುಚ್ಛಸ್ಯ ಬ್ರಹ್ಮತಾಯಾಂ ತು ಮಧ್ಯಸ್ಯಾಬ್ರಹ್ಮತಾ ಕಥಂ ।
ಮೃತ್ಪುಚ್ಛಂ ಮೃನ್ಮಯಸ್ಯೋಕ್ಷ್ಣ ಇತ್ಯಜ್ಞಾಘಾಣಕಂ ಸ್ಮರ ॥ ೧೧೨ ॥

**ಅನುವಾದ–** ಪುಚ್ಛವು ಬ್ರಹ್ಮವಾದರೆ ಮಧ್ಯವು ಏಕೆ ಬ್ರಹ್ಮವಾಗಬಾರದು? ಮೂಢನೇ, ಮಣ್ಣಿನಿಂದ ಮಾಡಿದ ಎತ್ತಿನ ಬಾಲವೂ ಮಣ್ಣು ಎಂಬ ಗಾದೆಯನ್ನು ಸ್ಮರಿಸಿಕೋ.

ಸರ್ವಥಾ ತದಸಂಬದ್ಧಸ್ತತ್ರೋಪಕುರುತೇ ಕಥಮ್ ।
ಮಹಿಷ್ಯಾಃ ಕ್ಷೀರವತ್ತ್ವೇ ಸ್ಯಾದ್ ಗೋವೃಷಸ್ಯ ತು ಕಿಂ ಫಲಮ್ ।
ಕಾಕಸ್ಯ ಕಾರ್ಷ್ಣ್ಯಾದ್ ಧವಲಃ ಪ್ರಾಸಾದಃ ಸ್ಯಾನ್ನ ಚೇತ್ ತವ ॥ ೧೫೨ ॥

**ಅನುವಾದ–** ಯಾವುದು ಯಾವ ವಸ್ತುವಿನ ಸಂಬಂಧವನ್ನು ಹೊಂದಿರುವುದಿಲ್ಲವೋ, ಅದು ಆ ವಸ್ತುವಿಗೆ ಯಾವ ಉಪಕಾರವನ್ನೂ ಮಾಡುವುದಿಲ್ಲ. ಎಮ್ಮೆಯ ಕೆಚ್ಚಲಿನಲ್ಲಿ ಹಾಲಿದ್ದರೆ, ಹಸುವಿನ ಹೋರಿ ಕರುವಿಗೆ ಅದರಿಂದ ಏನು ಪ್ರಯೋಜನ? ಸಂಬಂಧ ವಿಲ್ಲದಿರುವುದಕ್ಕೂ ಉಪಕಾರ್ಯ- ಉಪಕಾರಿ ಭಾವವಿದೆ ಎನ್ನುವುದಾದರೆ, ಕಾಗೆಯ ಕಪ್ಪು ಬಣ್ಣದಿಂದ ನಿನ್ನ ಮನೆಗೆ ಬಿಳಿಯ ಬಣ್ಣವುಂಟಾಗಲಿ.

ಸ ಚ ಶ್ರೌತಮಿಮಂ ಧರ್ಮಂ ಬ್ರಹ್ಮಣ್ಯನುಶಶಾಸ ಹಿ ।
ಅತಃ ಪಾಣಿನಿಸೂತ್ರಂ ತದನ್ಯತ್ರ ಸ್ಯಾನ್ನ ಲಕ್ಷಣಂ ।
ಜಾರಾನುಸರಣಾಜ್ಜ್ಯಾಯಃ ಪತ್ಯುಃ ಪಾದೋಪಸರ್ಪಣಂ ॥ ೧೬೫ ॥

**ಅನುವಾದ–** ವ್ಯಾಸರಾದರೂ ಯತೋವಾ ಇಮಾನಿ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಈ ಧರ್ಮವು ಬ್ರಹ್ಮನಲ್ಲಿಯೇ ಇದೆ ಎಂದು ಜನ್ಮಾದಿಸೂತ್ರದಲ್ಲಿ ಹೇಳಿದ್ದಾರಷ್ಟೇ? ಆದ್ದರಿಂದ ಪಾಣಿನಿ ಸೂತ್ರಕ್ಕೆ ಈ ಸ್ಥಳವನ್ನು ಬಿಟ್ಟು ಬೇರೆ ಸ್ಥಳದಲ್ಲಿ ಅವಕಾಶವನ್ನು ಹೇಳಬೇಕು. ಜಗತ್ಕಾರಣತ್ವ ರೂಪವಾದ ಲಕ್ಷಣವು ಬ್ರಹ್ಮನನ್ನು ಬಿಟ್ಟು ಬೇರೆ ಕಡೆಗೆ ಹೋಗುವುದಿಲ್ಲ. ಜಾರನ ಪಾದವನ್ನು ಅನುಸರಿಸುವುದಕ್ಕಿಂತಲೂ ಪತಿಯ ಪಾದವನ್ನು ಅನುಸರಿಸುವುದು ಶ್ರೇಷ್ಠವಷ್ಟೇ?

ತವ ಯಃ ಶ್ವಾ ಕಥಂ ವ್ಯಾಘ್ರಃ ಸ ಪರಸ್ಯ ಭವಿಷ್ಯತಿ ।
ಅನಿಚ್ಛತಾಪಿ ಕರ್ತೃತ್ವಮತೋ ವಾಚ್ಯಂ ತ್ವಯಾಪಿ ಹಿ ॥ ೧೮೮ ॥

**ಅನುವಾದ–** ಯಾವುದು ನಿನಗೆ ನಾಯಿಯಾಗಿದೆಯೋ ಅದು ಇನ್ನೊಬ್ಬರಿಗೆ ಹೇಗೆ ಹುಲಿಯಾಗುತ್ತದೆ? ಆದ್ದರಿಂದ ನೀನು ಇಷ್ಟವಿಲ್ಲದಿದ್ದರೂ ಇಲ್ಲಿ ಕರ್ತೃವನ್ನೇ ಹೇಳಬೇಕು.

ವಿಸ್ತರಸ್ತಸ್ಯ ಸರ್ವಸ್ಯ ಭಾಷ್ಯಾದಿಷ್ವೇವ ದೃಶ್ಯತಾಮ್ ।
ಮೂಲಶಾಸ್ತ್ರಾರ್ಣವೋತ್ಕ್ಷಿಪ್ತಬಿಂದೂನ್ ವಂದಾಮಹೇ ವಯಮ್ ॥೨೦೯॥

**ಅನುವಾದ–** ಎಲ್ಲಾ ಪ್ರಮೇಯಗಳ ವಿಸ್ತಾರವನ್ನು ಸೂತ್ರಭಾಷ್ಯಮೊದಲಾದ ಗ್ರಂಥಗಳ ಅವಲೋಕನದಿಂದಲೇ ತಿಳಿಯಬೇಕು. ನಾವು ಮೂಲಶಾಸ್ತ್ರವೆಂಬ ಸಮುದ್ರದಿಂದ ಸಿಡಿದ ಬಿಂದುಗಳಿಗೆ ನಮಸ್ಕರಿಸುವವರು ಮಾತ್ರ.

ಭೇದಮಾಘೋಷಯಾಮಾಸ ಸೂತ್ರೇ ಸೂತ್ರೇ ಸ ಸೂತ್ರಕೃತ್ ।
ಪಂಚ ಧಾಯೋ ಭಿನತ್ತೀದಂ ಸ ಭೇದಃ ಕೇನ ವಾರ್ಯತೇ ॥ ೨೨೨ ॥

**ಅನುವಾದ–** ಆ ಸೂತ್ರಕಾರರು ಪ್ರತಿಸೂತ್ರದಲ್ಲಿಯೂ ಭೇದವನ್ನು ಘೋಷಿಸಿದ್ದಾರೆ. ಈಶ್ವರ ಸಹಿತವಾದ ಜಗತ್ತನ್ನು ಐದು ವಿಭಾಗವಾಗಿ ವಿಂಗಡಿಸುವ ಈ ಭೇದವನ್ನು ಯಾವ ವಾದಿಯು ತಾನೇ ನಿರಾಕರಿಸಲು ಸಾಧ್ಯ?

ವ್ಯಾಸವಿಸ್ತೃತಮೂರ್ತೀನಾಂ ಶ್ರುತೀನಾಂ ತತ್ ಪದೇ ಪದೇ ।
ಜೀವೇಶಭೇದೇ ತಾತ್ಪರ್ಯಮಿತಿಹಾಸಪುರಾಣಯೋಃ ॥ ೨೨೩ ॥

ಶ್ರೀವ್ಯಾಸಕೃತಯೋರ್ನಿತ್ಯಂ ಮಹಾತಾತ್ಪರ್ಯಮತ್ರ ಹಿ ।
ಸೂತ್ರಾನುಸಾರಿ ಯತ್ ಸರ್ವಂ ಶಾಸ್ತ್ರಮಿತ್ಯತಿಮಂಗಲಂ ॥ ೨೨೪ ॥

**ಅನುವಾದ–** ಶ್ರೀ ವ್ಯಾಸರಿಂದ ವಿಸ್ತರಿಸಲ್ಪಟ್ಟ ವೇದಗಳ ಪ್ರತಿಯೊಂದು ಪದಕ್ಕೂ ಜೀವೇಶಭೇದದಲ್ಲಿ ತಾತ್ಪರ್ಯವಿದೆ. ಶ್ರೀ ವೇದವ್ಯಾಸರು ರಚಿಸಿದ ಇತಿಹಾಸ ಪುರಾಣಗಳಿಗೂ ಈ ಜೀವೇಶ ಭೇದದಲ್ಲಿ ಯಾವಾಗಲೂ ಮಹಾತಾತ್ಪರ್ಯವಿದೆ. ಆದ್ದರಿಂದ ಯಾವುದೆಲ್ಲವೂ ಸೂತ್ರಕ್ಕೆ ಅನುಸಾರವಾಗಿದೆಯೋ ಅವೆಲ್ಲವೂ ಶಾಸ್ತ್ರವೇ ಆಗುತ್ತದೆ ಎಂದು ಪರಮ ಮಂಗಳ.

ಕಿಂ ಚ ಶಾಣಶಿತೈರ್ಬಾಣೈಃ ಪ್ರತ್ಯರ್ಥಿಮುಖಮುದ್ರಣಂ ।
ಕುರ್ವನ್ ನಾಮಂಸ್ತ ಬಾಣಾಗ್ರನ್ಯೂನತಾಂ ಸ ರಣಾಗ್ರಣೀಃ ॥ ೨೩೩ ॥

**ಅನುವಾದ–** ಅದೂ ಅಲ್ಲದೆ, ಸಾಣೆಯನ್ನು ಹಿಡಿದ ತಮ್ಮ ಬಾಣಗಳಿಂದ ಪ್ರತಿಪಕ್ಷಿಗಳ ಮುಖವನ್ನು ಮುದ್ರಿಸಲು ಹೊರಟ ರಣಾಗ್ರಣಿಗಳಾದ ವೇದವ್ಯಾಸರು ತಮ್ಮ ಬಾಣಗಳಿಗೆ ಅಗ್ರಭಾಗದ ನ್ಯೂನತೆಯನ್ನು ಎಂದೂ ಪರಿಗಣಿಸಲಿಲ್ಲ.

ಭೇದಶಬ್ದೋ ಹಿ ವಿದ್ವದ್ಭಿರ್ಮಿಥೋ ಭೇದೇ ಪ್ರಯುಜ್ಯತೇ ।
ಭ್ರಮೇ ವಿರೋಧೇ ಧೀಭೇದೇ ನಾಶೇಽನ್ಯೋನ್ಯವಿಮಿಶ್ರಣೇ ।
ಅಸಂಯುಕ್ತತಯಾಽನ್ಯೋನ್ಯಸ್ಥಿತಿಶ್ಚಾಪಿ ಭಿದೋಚ್ಯತೇ ॥ ೨೮೭ ॥

**ಅನುವಾದ–** ಭೇದಶಬ್ದವು ವಿದ್ವಾಂಸರಿಂದ ಅನ್ಯೋನ್ಯಾಭಾವದಲ್ಲಿಯೂ ಭ್ರಮದಲ್ಲಿಯೂ, ವಿರೋಧದಲ್ಲಿಯೂ, ಬುದ್ಧಿ ಭೇದದಲ್ಲಿಯೂ, ನಾಶದಲ್ಲಿಯೂ, ಪರಸ್ಪರ ವಿಮಿಶ್ರಣದಲ್ಲಿಯೂ ಪ್ರಯೋಗಿಸಲ್ಪಡುತ್ತದೆಯಷ್ಟೇ. ಪರಸ್ಪರ ಸಂಬಂಧವಿರದೇ ಸ್ವತಂತ್ರವಾಗಿರುವ ಸ್ಥಿತಿಯೂ ಸಹ ಭೇದವೆಂದು ಹೇಳಲ್ಪಡುತ್ತದೆ.

ತಚ್ಛ್ರುತ್ವಾ ಮುನಯಃ ಸರ್ವೇ ವಿಸ್ಮಿತಾ ಮುಕ್ತಸಂಶಯಾಃ ।
ಭೂಯಾಂಸಂ ಶ್ರದ್ಧಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಮ್ ॥೨೯೩॥

**ಅನುವಾದ–** ಭೃಗು ಋಷಿಗಳು ಪರೀಕ್ಷೆಯನ್ನು ಮಾಡಿಬಂದು ಹೇಳಿದ ಮಾತುಗಳನ್ನು ಕೇಳಿದ ಎಲ್ಲಾ ಋಷಿಗಳು ವಿಸ್ಮಿತರಾಗಿ ತಮ್ಮ ಸಂಶಯಗಳನ್ನು ಕಳೆದುಕೊಂಡು ಯಾವ ವಿಷ್ಣುವಿನಿಂದ ಸಂಸಾರ ಭಯಪರಿಹಾರವು ಮತ್ತು ಅಪರಿಮಿತ ಮೋಕ್ಷಸುಖವು ಉಂಟಾಗುತ್ತದೆಯೋ, ಅಂತಹ ವಿಷ್ಣುವನ್ನು ಸರ್ವೋತ್ತಮನೆಂದು ತಿಳಿದು ಅವನಲ್ಲಿ ಶ್ರದ್ಧೆಯನ್ನು ಮಾಡಿದರು.

ಕಿಂಚೈಕಪದವಿನ್ಯಾಸೇ ಪ್ರಾಗಂಶೇ ದೇಹನಿರ್ಗತೇಃ ।
ಮೃತಿಃ ಸ್ಯಾದಪರಾಂಶೇ ತು ಜನಿಃ ಸ್ಯಾದ್ ದೇಹಸಂಗತೇಃ ॥ ೪೫೮ ॥

ದೇಹಯೋಗವಿಯೋಗೌ ಹಿ ಜೀವಜನ್ಮಮೃತೀ ಶ್ರುತೇ ।
ಪದೇಪದೇ ಪ್ರೇತಕರ್ಮ ಜಾತಕರ್ಮ ಕರೋತಿ ಕಃ ॥ ೪೫೯ ॥

**ಅನುವಾದ–** ಒಂದು ಹೆಜ್ಜೆಯನ್ನು ಮುಂದಿಟ್ಟರೆ ಹಿಂದಿನ ಬ್ರಹ್ಮಭಾಗದಿಂದ ದೇಹವು ನಿರ್ಗಮಿಸುವುದರಿಂದ ಹಿಂದಿನ ಭಾಗದಲ್ಲಿದ್ದ ದೇಹಾವಚ್ಛಿನ್ನವಾದ ಬ್ರಹ್ಮಭಾಗವೇ ಜೀವವಾದುದರಿಂದ ಆ ಜೀವನಿಗೆ ಮೃತಿಯೇ ಉಂಟಾಯಿತು. ಹೆಜ್ಜೆಯನ್ನು ಮುಂದಿಟ್ಟಾಗ ಆ ಹೊಸಭಾಗದಲ್ಲಿ ಇದ್ದ ಬ್ರಹ್ಮಾಂಶಕ್ಕೆ ದೇಹ ಸಂಬಂಧವು ಬಂದುದರಿಂದ ಅಲ್ಲಿ ಜೀವದ ಉತ್ಪತ್ತಿಯಾಯಿತು. ದೇಹದ ಸಂಯೋಗ ವಿಯೋಗಗಳನ್ನೇ ಜೀವನ ಜನನ ಮರಣ ಎಂದು ಕರೆಯುತ್ತಾರಷ್ಟೇ? ಆದ್ದರಿಂದ ಹಿಂದಿನ ಜೀವನ ಮರಣವು ಮುಂದಿನ ಜೀವನ ಉತ್ಪತ್ತಿಯು ಆಗುವುದರಿಂದ ಹೆಜ್ಜೆ ಹೆಜ್ಜೆಗೂ ಪ್ರೇತಕರ್ಮವನ್ನೂ ಮತ್ತು ಜಾತಕರ್ಮವನ್ನೂ ಯಾವನು ಮಾಡುತ್ತಾನೆ?

ವಿಚಿತ್ರಶಕ್ತಿಯುಕ್ತೋಽಸೌ ಸರ್ವಜ್ಞಃ ಸಕಲೇಶ್ವರಃ ।
ಸ್ವತಂತ್ರೋಽಖಿಲಕರ್ತಾ ಚ ಸದಾಽಣೀಯಾನ್ ಮಹಾನ್ ಕಿಲ ॥ ೪೬೪ ॥

**ಅನುವಾದ–** ಈ ಪರಮಾತ್ಮನು ವಿಚಿತ್ರಶಕ್ತಿ ಸಂಪನ್ನನಾದವನು. ಆದ್ದರಿಂದ ಅವನು ಸರ್ವಜ್ಞನು, ಸಕಲ ಪ್ರಭುವು, ಸ್ವತಂತ್ರನು, ಅಖಿಲ ಕರ್ತೃವು, ಯಾವಾಗಲೂ ಅಣುವಿಗಿಂತ ಅಣುವು, ಮತ್ತು ಮಹತ್ ಪರಿಮಾಣ ಉಳ್ಳವನೂ ಆಗಿದ್ದಾನಷ್ಟೇ?

ತಚ್ಛಕ್ತ್ಯಾ ಕಿಂ ನ ಘಟತೇ ಸೋಽಪಿ ನ ಸ್ವಾತ್ಮಘಾತಕಃ ।
ಸ್ವರೋಮಾಪಿ ಕ್ವಚಿಚ್ಚಕ್ರೀ ಚಕ್ರೇಣ ನಿಚಕರ್ತ ಕಿಂ ॥ ೪೬೫ ॥

**ಅನುವಾದ–** ಅವನ ವಿಚಿತ್ರಶಕ್ತಿಯಿಂದ ಎಲ್ಲವೂ ಉಪಪನ್ನವಾಗುತ್ತದೆ. ಆದರೂ ಅವನು ತನಗೆ ತಾನು ಹಿಂಸೆಯನ್ನು ಮಾಡಿಕೊಳ್ಳುವುದಿಲ್ಲ. ಚಕ್ರಾಯುಧವನ್ನು ಧರಿಸಿದ ಅವನು ಎಲ್ಲಿಯಾದರೂ ತನ್ನ ಚಕ್ರದಿಂದ ತನ್ನ ರೋಮವನ್ನಾದರೂ ಕತ್ತರಿಸಿದನೇನು?

ಜಡಸ್ಯ ನ ವಿವೇಕೋಽಸ್ತಿ ಛಿಂದ್ಯಾತ್ ತರ್ಹಿ ನಭೋಪಿ ತತ್ ॥ ೪೯೮ ॥

ಚಿತ್ಖಂಡನೇ ಸಮರ್ಥಸ್ಯ ಸುಕರಂ ಜಡಖಂಡನಂ ।
ವೃಕ್ಷಚ್ಛೇದಿಕುಠಾರಸ್ಯ ಪತ್ರಚ್ಛೇದೇ ನ ಕಿಂ ಬಲಂ ॥ ೪೯೯ ॥

**ಅನುವಾದ–** ಜಡಕ್ಕೆ ವಿವೇಕವಿಲ್ಲ. ಆದ್ದರಿಂದ ಅದು ಆಕಾಶವನ್ನೂ ಛೇದಿಸಲಿ. ಚೈತನ್ಯವನ್ನೇ ಛೇದಿಸುವ ಸಾಮರ್ಥ್ಯವನ್ನು ಹೊಂದಿರುವ ಜಡವಾದ ಅವಿದ್ಯೆಗೆ ಜಡವನ್ನು ಛೇದಿಸುವುದು ಇನ್ನೂ ಸುಲಭವಾದುದು. ಮರವನ್ನು ಕತ್ತರಿಸುವ ಕೊಡಲಿಗೆ ಎಲೆಯನ್ನು ಕತ್ತರಿಸುವ ಶಕ್ತಿ ಇಲ್ಲವೇನು?

ಅತಃ ಸತ್ಯಜಗತ್ಸೃಷ್ಟೌ ಮಿಥ್ಯಾಜ್ಞಾನಂ ತವ ಪ್ರಿಯಂ ।
ಕುತ್ರೋಪಯುಜ್ಯತೇ ತಸ್ಮಾತ್ ಸ್ವಜಾಯಾಂ ನ ಪರೇಽರ್ಪಯ ॥ ೫೦೮ ॥

**ಅನುವಾದ–** ಆದ್ದರಿಂದ ಸತ್ಯವಾದ ಜಗತ್ತನ್ನು ಸೃಷ್ಟಿಸಲು ನಿನಗೆ ಪ್ರಿಯವಾದ ಮಿಥ್ಯಾಭೂತವಾದ ಅಜ್ಞಾನಕ್ಕೆ (ಮಾಯೆಗೆ) ಎಲ್ಲಿ ಉಪಯೋಗವಿದೆ? ಆದ್ದರಿಂದ ನಿನ್ನ ಹೆಂಡತಿಯನ್ನು ಇನ್ನೊಬ್ಬರಿಗೆ ಒಪ್ಪಿಸಬೇಡ.

ಮುಕ್ತಾಸ್ತು ಧೌತಮಣಿವತ್ ಪಂಕಾರ್ದ್ರಮಣಿವತ್ ಸೃತೌ ॥ ೫೨೭ ॥

**ಅನುವಾದ–** ಜೀವರಾದರೂ ಸಂಸಾರದಲ್ಲಿ ಕೆಸರಿನಿಂದ ಆವರಿಸಲ್ಪಟ್ಟ ಮಣಿಯಂತೆಯೂ ಮೋಕ್ಷದಲ್ಲಿ ತೊಳೆದು ಶುದ್ಧ ಮಾಡಿದ ಮಣಿಯಂತೆಯೂ ಇರುತ್ತಾರೆ.

ಸರ್ವತೋಪ್ಯಪರಿಚ್ಛಿನ್ನಚೈತ್ಯನ್ಯೇ ಬ್ರಹ್ಮಣಿ ಸ್ಥಿರೇ ।
ಇತಸ್ತತಶ್ಚರಚ್ಛಿನ್ನಚೈತನ್ಯಂ ಹ್ಯನ್ಯದೇವ ಹಿ ॥ ೫೨೮ ॥

ಮುಗ್ಧಸ್ತ್ರೀ ಮೂರ್ಧಮಾಲಾವದಬ್ಧಿಸ್ಥಜಲಜಂತುವತ್ ।
ವ್ಯೋಮಸ್ಥಪಕ್ಷಿಶ್ರೇಣೀವದ್ ಭೂಮಿಸ್ಥಜನಜಾಲವತ್ ॥ ೫೨೯ ॥

**ಅನುವಾದ–** ಎಲ್ಲ ರೀತಿಯಿಂದಲೂ ಅಪರಿಚ್ಛಿನ್ನವಾದ ಚಲನ ರಹಿತವಾದ ಬ್ರಹ್ಮನಲ್ಲಿ ಇಲ್ಲಿಂದಲ್ಲಿಗೆ ಚಲಿಸುವ ಪರಿಚ್ಛಿನ್ನವಾದ ಚೈತನ್ಯವು ಬೇರೆಯೇ ಆಗಿದೆಯಷ್ಟೇ?

ಮುಗ್ಧ ವನಿತೆಯು ತಲೆಯಲ್ಲಿ ಮುಡಿದ ಹೂವಿನಂತೆ, ಸಮುದ್ರದಲ್ಲಿರುವ ಜಲಜಂತುಗಳಂತೆ, ಆಕಾಶದಲ್ಲಿರುವ ಪಕ್ಷಿ ಸಮೂಹದಂತೆ, ಭೂಮಿಯಲ್ಲಿರುವ ಜನಸಮೂಹದಂತೆ ಅದು ಭಿನ್ನವೇ ಆಗಿದೆ.

ಅನರ್ಘರತ್ನಚೋರಸ್ತು ರಕ್ಷ್ಯೋ ಮೃದ್ಭಾಂಡತಸ್ಕರಃ ।
ಶಿಕ್ಷ್ಯಃ ಕಿಲ ಕೃಪಾಲುಸ್ತು ದೀನೇಷು ಕುರುತೇ ದಯಾಂ ॥ ೫೫೫ ॥

**ಅನುವಾದ–** ಅನರ್ಘವಾದ ರತ್ನಗಳನ್ನು ಕದಿಯುವ ಕಳ್ಳನು ರಕ್ಷಿಸಲ್ಪಡಬೇಕು. ಮಣ್ಣಿನ ಮಡಿಕೆಯನ್ನು ಕದಿಯುವ ಕಳ್ಳನು ಶಿಕ್ಷಿಸಲ್ಪಡಬೇಕಷ್ಟೇ! ದಯಾಳುವಾದರೋ ದೀನರಲ್ಲೇ ದಯೆಯನ್ನು ತೋರಿಸುವನಷ್ಟೇ!

ತಥಾಪಿ ಚಿತ್ತ್ವಮಾತ್ರಸ್ಯ ತ್ಯಾಗಾದ್ ಭೀತೋ ಜಡ್ಯೈಕತಾಮ್ ।
ಶ್ರುತಾಮಪಿ ಜಹಾಸಿ ತ್ವಂ ಯರ್ಹಿ ತರ್ಹಿ ತವೈಕತಾಮ್ ॥ ೫೬೪ ॥

ಮಹಾಗುಣಾಪಹತ್ರೀಂ ತ್ವಂ ತ್ಯಜ ಭಕ್ತ್ಯಾ ಭಜಾಚ್ಯುತಮ್ ।
ನ ಚೇತ್ ಪ್ರಭುರ್ಮಹಾಚೋರಂ ತ್ವಾಮಂಧೇತಮಸಿ ಕ್ಷಿಪೇತ್ ॥ ೫೬೫ ॥

**ಅನುವಾದ–** ಹಾಗಿದ್ದರೂ ನೀನು ಚಿತ್ತ್ವರೂಪವಾದ ಧರ್ಮದ ನಾಶವಾಗುತ್ತದೆ ಎಂದು ಹೆದರಿ ಶ್ರುತಿಯಲ್ಲಿ ಹೇಳಿದ ಜಡ್ಯೈಕ್ಯವನ್ನು ಪರಿತ್ಯಾಗ ಮಾಡುವುದಾದರೆ ಆಗ ಈಶ್ವರನ ಮಹಾಗುಣಗಳನ್ನು ಅಪಹಾರ ಮಾಡುವ ಜೀವೈಕ್ಯವನ್ನೂ ಪರಿತ್ಯಜಿಸಿ ಭಕ್ತಿಯಿಂದ ಅಚ್ಯುತನನ್ನು ಭಜಿಸು. ಇಲ್ಲದಿದ್ದರೆ ಮಹಾಚೋರನಾದ ನಿನ್ನನ್ನು ನಮ್ಮ ಪ್ರಭುವು ಅಂಧತಮಸ್ಸಿನಲ್ಲಿ ಹಾಕುತ್ತಾನೆ.

ಶ್ರುತಿಶ್ಚತುರ್ಮುಖೈಕ್ಯಂ ಚ ಮನ್ಯತೇ ನ ಪರಾತ್ಮನಃ ।
ಜೀವೈಕ್ಯಂ ಕಿಮು ತೇನೈವ ಮೋಚಿತಾನೇಕಸಂಕಟಾ ॥ ೫೬೮ ॥

**ಅನುವಾದ–** ಸೃಷ್ಟಿಯ ಪ್ರಾರಂಭದಲ್ಲಿ ಚತುರ್ಮುಖನ ಮುಖದಿಂದಲೇ ವೇದವನ್ನು ಮಧುಕೈಟಭಾದಿ ದೈತ್ಯರು ಅಪಹಾರಮಾಡಿದರು. ಆಗ ಅದನ್ನುಬಿಡಿಸಿ ತರಲು ಸಾಮರ್ಥ್ಯವಿಲ್ಲದ ಚತುರ್ಮುಖನು ಸುಮ್ಮನೆ ಕುಳಿತಿದ್ದ. ಆ ಸಮಯದಲ್ಲಿ ಸರ್ವಸಮರ್ಥನಾದ ಸರ್ವೋತ್ತಮನಾದ ಹರಿಯು ಮಾತ್ರ ಹಯಗ್ರೀವಮತ್ಸ್ಯಾದಿ ಅವತಾರಗಳನ್ನು ಮಾಡಿ ಆ ದೈತ್ಯರನ್ನು ಸಂಹಾರ ಮಾಡಿ ಶ್ರುತಿಯನ್ನು ಅವರಿಂದ ರಕ್ಷಿಸಿ ಅವಳ ದುಃಖವನ್ನು ಪರಿಹರಿಸಿದ್ದಾನೆ. ಇದನ್ನೆಲ್ಲಾ ಅನುಭವಿಸಿದ ಶ್ರುತಿಗೆ ಹರಿಯೇ ಸರ್ವಸಮರ್ಥ ಹಾಗೂ ಸರ್ವೋತ್ತಮ ಎಂದು ಅನುಭವಕ್ಕೆ ಬಂದಿದೆ.

ಹೀಗಾಗಿ ಶ್ರುತಿಯು ಪರಮಾತ್ಮನಾದ ನಾರಾಯಣನಿಗೆ ಜೀವೋತ್ತಮರಾದ ಚತುರ್ಮುಖನಿಂದಲೇ ಐಕ್ಯವನ್ನು ತಿಳಿಯುವುದಿಲ್ಲ. ಹೀಗಿದ್ದ ಮೇಲೆ ಉಳಿದ ಅತ್ಯಲ್ಪಸಾಮರ್ಥ್ಯವುಳ್ಳ ಜೀವರಿಂದ ಐಕ್ಯವನ್ನು ತಿಳಿಯುವುದಿಲ್ಲ ಎಂದು ಪ್ರತ್ಯೇಕವಾಗಿ ಹೇಳಬೇಕೆ? ಆದ್ದರಿಂದ ಪರಬ್ರಹ್ಮನಿಗೆ ಜೀವಾಭೇದವನ್ನು ಹೇಳುವುದು ಶ್ರುತಿಯ ಅಭಿಪ್ರಾಯಕ್ಕೆ ವಿರುದ್ಧವೆಂದು ತಿಳಿಯುತ್ತದೆ.

ತಸ್ಮಾನ್ನಾತ್ಮೈಕ್ಯಮನ್ಯೇಷಾಂ ಕೇಷಾಮಪಿ ಸ ದಿತ್ಸತಿ ।
ಯಃ ಪೌಂಡ್ರಕವಧಂ ಚಕ್ರೆ ಯಶ್ಚೇದಿಪಮಖಂಡಯತ್ ॥ ೫೮೦ ॥

**ಅನುವಾದ–** ಯಾವ ಹರಿಯು ಪೌಂಡ್ರಕ ವಾಸುದೇವನ ವಧೆಯನ್ನು ಮಾಡಿದನೋ ಮತ್ತು ಯಾವ ಹರಿಯು ಶಿಶುಪಾಲನ ವಧೆಯನ್ನು ಮಾಡಿದನೋ ಅಂತಹ ಹರಿಯು ಹಿಂದೆ ಹೇಳಿದ ಕಾರಣದಿಂದ ತನ್ನ ಐಕ್ಯವನ್ನು ಯಾರಿಗೂ ಕೊಡುವುದಿಲ್ಲ.

ಸೋಽಹಂಭಾವಾತ್ ಕಿಮನ್ಯೋಽಸ್ತಿ ದ್ರೋಹಃ ಪೌಂಡ್ರಕರಾಕ್ಷಸೇ ।
ಸ ಚೇಚ್ಛಾಸ್ತ್ರಸ್ಯ ತತ್ತ್ವಾರ್ಥಃ ಕುತಸ್ತಂ ಶಿಕ್ಷಯೇತ್ ಪ್ರಭುಃ ॥ ೫೮೧ ॥

**ಅನುವಾದ–** ರಾಕ್ಷಸನಾದ ಪೌಂಡ್ರಕ ವಾಸುದೇವನಲ್ಲಿ ನಾನೇ ಬ್ರಹ್ಮ ಎಂಬ ಚಿಂತನೆಯನ್ನು ಬಿಟ್ಟು ಬೇರೆ ಯಾವ ದ್ರೋಹವಿದೆ? ಅದೇ ಶಾಸ್ತ್ರದ ತತ್ತ್ವಾರ್ಥವಾದರೆ ಪ್ರಭುವಾದ ಹರಿಯು ಅವನಿಗೆ ಏಕೆ ಶಿಕ್ಷೆಯನ್ನು ಕೊಟ್ಟನು?

ಸತ್ಯಂ ಪ್ರಿಯಂ ವಚೋ ವಾಚ್ಯಂ ವಾಚ್ಯಂ ನಾಸತ್ಯಮಪ್ರಿಯಂ ।
ಯದಚ್ಯುತೋಽಹಮಿತ್ಯುಚ್ಚೈರುಚ್ಚರನ್ ಪೌಂಡ್ರಕಶ್ಚ್ಯುತಃ ॥ ೫೮೨ ॥

**ಅನುವಾದ–** ಯಾವ ಕಾರಣದಿಂದ ನಾನೇ ಅಚ್ಯುತನೆಂದು ಉಚ್ಚಕಂಠದಿಂದ ಹೇಳುವ ಪೌಂಡ್ರಕನು ಹತನಾದನೋ ಆ ಕಾರಣದಿಂದ ಸತ್ಯವಾದ ಮತ್ತು ಪ್ರಿಯವಾದ ಮಾತನ್ನೇ ಆಡಬೇಕು. ಅಸತ್ಯವಾದ ಮತ್ತು ಅಪ್ರಿಯವಾದ ಮಾತನ್ನು ಆಡಬಾರದು.

ಮುಖ್ಯಾರ್ಥಬಾಧೇ ವಾಕ್ಯಾನಾಮನ್ಯೋಽರ್ಥಃ ಕಥ್ಯತೇ ಬುಧೈಃ ।
ಯಜಮಾನಃ ಪ್ರಸ್ತರಃ ಕಿಮಗ್ನಿರ್ಮಾಣವಕೋಽಪಿ ವಾ ॥ ೫೯೨ ॥

ಕಿಂ ಯೋಷಿದಗ್ನಿರಾದಿತ್ಯೋ ಯೂಪೋಽಂಧೋ ಮಣಿಮೀಕ್ಷತೇ ।
ಮೃದಬ್ರವೀತ್‌ಕಿಮು ಗ್ರಾವಾ ಪ್ಲವತೇ ಕಿಮಪಾಂ ಚ ವಾಕ್ ॥ ೫೯೩ ॥

ಏತಾಸಾಂ ಬಾಧಿತಾರ್ಥಾನಾಂ ಯಥಾನ್ಯೋಽರ್ಥೋ ಮತಸ್ತವ ।
ತಥಾಪಿ ಬಾಧಿತಾರ್ಥೈಕ್ಯವಾಕ್ಯೇಷ್ವನ್ಯೋಽರ್ಥ ಈರ್ಯತಾಂ ॥ ೫೯೪ ॥

**ಅನುವಾದ–** ಮುಖ್ಯಾರ್ಥಕ್ಕೆ ಬಾಧವುಂಟಾದಾಗ ಮಾತ್ರ ವಿವೇಕಿಗಳು ವಾಕ್ಯಗಳಿಗೆ ಬೇರೆ ಅರ್ಥವನ್ನು ಹೇಳುತ್ತಾರೆ. ಪ್ರಸ್ತರವೇ ಯಜಮಾನವಾಗುತ್ತದೆಯೇ? ಅಥವಾ ಅಗ್ನಿಯೇ ಮಾಣವಕನಾಗುತ್ತಾನೆಯೇ? ವನಿತೆಯೇ ಅಗ್ನಿಯಾಗುತ್ತಾಳೆಯೇ? ಯೂಪವೇ ಸೂರ್ಯನಾಗುತ್ತದೆಯೇ? ಅಂಧನು ಮಣಿಯನ್ನು ನೋಡುತ್ತಾನೆಯೇ? ಮಣ್ಣು ಮಾತನಾಡುತ್ತದೆಯೇ? ಕಲ್ಲುಗಳು ತೇಲುತ್ತವೆಯೇ? ಜಲಕ್ಕೆ ಮಾತನಾಡುವ ಶಕ್ತಿಯಿದೆಯೇ? ಇಂತಹ ಬಾಧಿತಾರ್ಥವಾದ ವಾಕ್ಯಗಳಿಗೆ ಹೇಗೆ ನೀನು ಬೇರೆ ಅರ್ಥವನ್ನು ಹೇಳುತ್ತೀಯೋ, ಅದರಂತೆ ಬಾಧಿತಾರ್ಥವಾದ ಐಕ್ಯವಾಕ್ಯಕ್ಕೂ ಬೇರೆ ಅರ್ಥವನ್ನು ಹೇಳು.

**ಸತ್ಸು ಸ್ವದಾರೇಷು ಖಲಃ ಪರದಾರಾನಪೇಕ್ಷತೇ ।**
**ಲೋಕಮಾತೃಪತಿತ್ವೇ ಕಿಂ ನಾಶಾ ತೇಷಾಂ ತಮೋಜುಷಾಮ್ ॥ ೬೧೨ ॥**

**ಅನುವಾದ–** ಮನೆಯಲ್ಲಿ ಪತ್ನಿಯಿದ್ದರೂ ದುಷ್ಟನು ಮತ್ತೊಬ್ಬರ ಪತ್ನಿಯನ್ನು ಬಯಸುತ್ತಾನೆ. ತಮೋಯೋಗ್ಯರಾದ ಈ ಅದ್ವೈತಿಗಳಿಗೆ ಜಗನ್ಮಾತೆಯಾದ ಲಕ್ಷ್ಮೀದೇವಿಯ ಗಂಡನಾಗುವ ಹಂಬಲವಿಲ್ಲವೇನು?

**ದೈವೇ ಗುರೌ ಚ ಯಸ್ಯಾಹಂಭಾವೋ ದೇವದ್ವಿಡೇವ ಸಃ ।**
**ರಮೋಮಾಕಾಂತತೋತ್ಕಂಠಾ ದಶಕಂಠಸ್ಯ ಕೇವಲಮ್ ॥ ೬೧೩ ॥**

**ಅನುವಾದ–** ನಾನೇ ದೇವರು, ನಾನೇ ಗುರು ಎಂದು ಅಹಂಕಾರಪಡುವವನು ದೇವದ್ರೋಹಿಯೆನಿಸುತ್ತಾನೆ. ಇದಕ್ಕೆ ರಾವಣನೇ ನಿದರ್ಶನ. ಅವನು ಲಕ್ಷ್ಮೀರೂಪಳಾದ ಸೀತೆಯನ್ನು ಮತ್ತು ಪಾರ್ವತಿಯನ್ನು ಪಡೆಯಲು ಯತ್ನಿಸಿದನು.

**ಬಿಭೇತಿ ಕುಮತಿಃ ಸದ್ಯಃ ಶಾಸ್ತುರ್ನ ಸಮಯಾಂತರೇ ।**
**ರಾಜಾಹಮಿತಿ ನ ಬ್ರೂತೇ ಬ್ರೂತೇ ದೇವೋಽಹಮಿತ್ಯಹೋ ॥ ೬೧೪ ॥**

**ಅನುವಾದ–** ಮೂರ್ಖನಾದವನು ತಕ್ಷಣದಲ್ಲಿ ಉಂಟಾಗುವ ಅನರ್ಥಕ್ಕೆ ಹೆದರುತ್ತಾನೆ. ಕಾಲಾಂತರದಲ್ಲಿ ಉಂಟಾಗುವ ಅನರ್ಥಕ್ಕೆ ಹೆದರುವುದಿಲ್ಲ. ನಾನು ರಾಜನೆಂದು ಹೇಳಿಕೊಳ್ಳುವುದಿಲ್ಲ. ಆದರೆ ನಾನು ದೇವನೆಂದು ಹೇಳಿಕೊಳ್ಳುತ್ತಾನೆ. ಎಂತಹ ಆಶ್ಚರ್ಯ!

**ದುಷ್ಟೋಽಹಂಕುರುತೇ ತುಷ್ಟಃ ಕ್ಲಿಷ್ಟಃ ಕ್ಲೇಶಕರಂ ಭಜೇತ್ ।**
**ಶಿವೇಽಹಂಭಾವಧೀರ್ಭರ್ಗೇ ರೋಗೇ ಮೃತ್ಯುಂಜಯಾರ್ಚಕಃ ॥ ೬೧೬ ॥**

**ಅನುವಾದ–** ದುಷ್ಟನಾದವನು ಸಂತೋಷದಲ್ಲಿರುವಾಗ ಅಹಂಕಾರಪಡುತ್ತಾನೆ. ಕ್ಲೇಶವುಂಟಾದಾಗ ಮಾತ್ರ ಕ್ಲೇಶಹಾರಕನಾದ ಭಗವಂತನನ್ನು ಅಥವಾ ಇನ್ನೊಬ್ಬ ಮನುಷ್ಯನನ್ನು ಭಜಿಸುತ್ತಾನೆ. ಮಾಯಾವಾದಿಯೂ ಸಹ ಭೋಗದ ಸಮಯದಲ್ಲಿ ಶಿವೋಹಂ ಎಂಬ ಭಾವನೆಯನ್ನು ಹೊಂದುತ್ತಾನೆ. ವಿರೋಧ ಬಂದ ಕೂಡಲೇ ಮೃತ್ಯುಂಜಯನ ಅರ್ಚನೆಯನ್ನು ಮಾಡುತ್ತಾನೆ.

ವಾಚಾಽನ್ಯಜ್ಜಲ್ಪತಿ ಸ್ವಲ್ಪಃ ಕರ್ಮಣಾನ್ಯತ್ ಕರೋತಿ ಚ ।
ಯೋಽಚ್ಯುತೋಽಹಮಿತಿ ಬ್ರೂತೇ ಸ್ನಾತುಂ ಗಂಗಾಂ ಸ ಗಚ್ಛತಿ ॥ ೬೧೭ ॥

**ಅನುವಾದ–** ನೀಚನಾದವನು ಮಾತಿನಿಂದ ಬೇರೆಯದನ್ನೇ ಹೇಳುತ್ತಾನೆ, ಕೃತಿಯಿಂದ ಬೇರೆಯದನ್ನೇ ಮಾಡುತ್ತಾನೆ. ನಾನೇ ಅಚ್ಯುತನೆಂದು ಹೇಳುತ್ತಾನೆ ಮತ್ತು ಸ್ನಾನ ಮಾಡಲು ಗಂಗೆಗೆ ಹೋಗುತ್ತಾನೆ.

ಸತೀರತಿಕ್ರಮ್ಯ ಕಾಮೀ ಪತಿಃ ಸ್ಯಾದಸತೀಪತಿಃ ।
ಯಥೈಕ್ಯಶ್ರುತಿಮಾದತ್ತೇ ಭೇದಾದ್ಯರ್ಥಶ್ರುತೀಸ್ತ್ಯಜನ್ ॥ ೬೧೮ ॥

**ಅನುವಾದ–** ಕಾಮಿಯಾದವನು ಶುದ್ಧಸ್ವಭಾವವುಳ್ಳ ಪತಿವ್ರತೆಯಾದ ಸತಿಯನ್ನು ಬಿಟ್ಟು ಅಸತಿಯನ್ನು ಸೇವಿಸುತ್ತಾನಷ್ಟೇ? ಹೇಗೆ ನಿರ್ದುಷ್ಟವಾದ ಭೇದ ಪ್ರತಿಪಾದಕವಾದ ಶ್ರುತಿಗಳನ್ನು ಬಿಟ್ಟು ಐಕ್ಯಶ್ರುತಿಯನ್ನು ಮಾಯಾವಾದಿಯು ಸ್ವೀಕರಿಸುತ್ತಾನೆಯೋ ಅದರಂತೆ.

ಯದ್ಯನ್ಯೋಽನ್ಯಮಭಿನ್ನಾಃ ಸ್ಯುಃ ಜೀವಾಃ ಸರ್ವೇಽಪಿ ಸರ್ವದಾ ।
ತರ್ಹಿ ಸ್ಯಾಜ್ಜಾತಿಭೇದಸ್ಯೈವಾಭಾವಾತ್ ಸರ್ವಸಂಕರಃ ॥ ೬೩೩ ॥

**ಅನುವಾದ–** ಎಲ್ಲ ಜೀವರೂ ಯಾವಾಗಲೂ ಪರಸ್ಪರವಾಗಿ ಅಭಿನ್ನರೇ ಆದರೆ, ಜಾತಿಭೇದವೇ ಇಲ್ಲದಿರುವ ಕಾರಣದಿಂದ ಸರ್ವಸಂಕರವು ಉಂಟಾಗುತ್ತದೆ.

ಸ್ನುಷಾ ಚ ಭಾರ್ಯಾ ಭಾರ್ಯಾ ಚ ಮಾತಾ ಗೌಶ್ಚ ಶುನೀ ಬುಧಃ ।
ಮತ್ತ ಏವೇತಿ ತಚ್ಛಾಸ್ತ್ರಂ ಸ್ಯಾದುನ್ಮತ್ತಸ್ಯ ಜಲ್ಪಿತಂ ॥ ೬೩೬ ॥

ಗಮ್ಯಾಗಮ್ಯವಿಭಾಗಶ್ಚ ಸ್ವರೂಪೈಕ್ಯೇ ಕಥಂ ವದ ॥ ೬೩೭ ॥

**ಅನುವಾದ–** ಸೊಸೆಯೂ ಹೆಂಡತಿ, ತಾಯಿಯೂ ಹೆಂಡತಿ (ಹೆಂಡತಿಯು ತಾಯಿ) ಹಸುವು ಒಂದು ಹೆಣ್ಣು ನಾಯಿ, ವಿವೇಕಿಯಾದವನೂ ಒಬ್ಬ ಪಾನಮತ್ತನೇ ಎಂದಾಗುವುದರಿಂದ ಆ ಶಾಸ್ತ್ರವು ಹುಚ್ಚರ ಪ್ರಲಾಪದಂತೆ ಆಗುತ್ತದೆ.

ಸ್ವರೂಪೈಕ್ಯವಿದ್ದರೆ ಇವಳು ಗಮ್ಯಳು, ಇವಳು ಅಗಮ್ಯಳು ಎಂಬ ವಿಭಾಗವು ಹೇಗೆ ಉಂಟಾಗುತ್ತದೆ ಎಂದು ಹೇಳು.

**ಶಿಷ್ಯಪಾಪಂ ಗುರೋಶ್ಚ ಸ್ಯಾತ್ ತತ್ಪುಣ್ಯಂ ಚ ಗುರೋರ್ಭವೇತ್ ।**
**ಅಪಿ ಸಂಬಂಧಮಾತ್ರೇಣ ಸ್ವರೂಪೈಕ್ಯೇ ಕಥಂ ನ ತತ್ ॥ ೬೬೩ ॥**

**ಅನುವಾದ–** ಕೇವಲ ಗುರುಶಿಷ್ಯಭಾವರೂಪವಾದ ಸಂಬಂಧ ಇರುವುದರಿಂದ, ಶಿಷ್ಯನ ಪಾಪವೂ ಗುರುವಿಗೆ ಉಂಟಾಗುತ್ತದೆ ಮತ್ತು ಶಿಷ್ಯನ ಪುಣ್ಯವೂ ಗುರುವಿಗೆ ಉಂಟಾಗುತ್ತದೆ. ಹೀಗಿರುವ ಸ್ವರೂಪೈಕ್ಯವೇ ಇದ್ದರೆ, ಕರ್ಮಸಾಂಕರ್ಯವು ಹೇಗೆ ಬರದೇ ಇರಲು ಸಾಧ್ಯ?

ದೇವಾನಾಂ ಕಿಲ ಮಾನುಷ್ಯಂ ನಾಜ್ಞಾನೇನೈವ ಕೇವಲಂ ।
ಕಿಂತು ಶಾಪೇನ ತನ್ಮೂಲಪಾಪಾದ್ವೈರ್ವಾ ಭವೇದ್ ಭುವಿ ॥ ೮೧೦ ॥

ವಿಪ್ರಾಣಾಮಂತ್ಯಜತ್ವಂ ಚ ಮಹಾಪಾಪಫಲಂ ಕಿಲ ।
ಅಂತ್ಯಜಾನಾಂ ಚ ವಿಷ್ಠಾಯಾಂ ಕ್ರಿಮಿತಾ ಪಾಪತಃ ಕಿಲ ॥ ೮೧೧ ॥

**ಅನುವಾದ–** ದೇವತೆಗಳಿಗೆ ಭೂಮಿಯಲ್ಲಿ ಮನುಷ್ಯ ಶರೀರ ಪ್ರಾಪ್ತಿಯು ಕೇವಲ ಅಜ್ಞಾನದಿಂದಲೇ ಉಂಟಾಗುವುದಿಲ್ಲ. ಆದರೆ ಶಾಪದಿಂದಲಾಗಲೀ ಅಥವಾ ಆ ಶಾಪಕ್ಕೆ ಮೂಲವಾದ ಪಾಪದಿಂದಾಗಲೀ ಉಂಟಾಗುತ್ತದೆ. ಬ್ರಾಹ್ಮಣರಿಗೆ ಅಂತ್ಯಜ ಜನ್ಮವು ಮಹಾಪಾಪ ಫಲವಷ್ಟೇ. ಅದರಂತೆ ಅಂತ್ಯಜರಿಗೂ ಅಶುಚಿ ಪದಾರ್ಥದಲ್ಲಿ ಕ್ರಿಮಿರೂಪವಾಗಿ ಜನ್ಮವು ಪಾಪದ ಫಲವಷ್ಟೇ?

ತಸ್ಮಾದುಚ್ಚಸ್ಯ ನೀಚತ್ವಪ್ರಾಪ್ತಿಃ ಪಾಪೇನ ಕೇವಲಂ ।
ಅಜ್ಞಾನಮಾತ್ರತಃ ಸಾ ಚೇತ್ ಸ್ಮೃತ್ಯಾದೀನಾಮಪಾರ್ಥತಾ ॥ ೮೧೨ ॥

**ಅನುವಾದ–** ಆದ್ದರಿಂದ ಶ್ರೇಷ್ಠನಾದವನಿಗೆ ನೀಚತ್ವ ಪ್ರಾಪ್ತಿಯು ಕೇವಲ ಪಾಪದಿಂದಲೇ ಉಂಟಾಗುತ್ತದೆ. ಹಾಗಲ್ಲದೇ ಕೇವಲ ಅಜ್ಞಾನದಿಂದಲೇ ನೀಚತ್ವ ಪ್ರಾಪ್ತಿಯಾಗುತ್ತದೆ ಎಂದು ಹೇಳಿದರೆ ಶ್ರುತಿ ಪುರಾಣಗಳಿಗೆ ಅಪ್ರಾಮಾಣ್ಯವು ಬರುತ್ತದೆ.

ಏವಂ ಸತಿ ಶ್ವಚಂಡಾಲಪಶುಪಕ್ಷ್ಯಾದಿಯೋನಿಷು ।
ಅನಾದಿಕಾಲತೋ ಭೂತ್ವಾ ಸದಾ ಸರ್ವತ್ರ ಸಂಸರೇತ್ ॥ ೮೧೩ ॥

ತೇ ಬ್ರಹ್ಮ ಬಹುದುಷ್ಕರ್ಮವಿಣ್ಮಯಾರ್ಣವಮಜ್ಜಿತಂ ।
ಪರಂಬ್ರಹ್ಮ ತವೈವ ಸ್ಯಾತ್ತದೇವ ತ್ವಂ ನ ಸಂಶಯಃ ॥ ೮೧೪ ॥

**ಅನುವಾದ–** ಹೀಗೆ ಬ್ರಹ್ಮನಿಗೆ ಎಲ್ಲಾ ಜೀವರ ಐಕ್ಯವಿದ್ದರೆ ನಿನ್ನ ಬ್ರಹ್ಮನು ಅನಾದಿಕಾಲದಿಂದಲೂ ನಾಯಿ ಚಂಡಾಲ ಪಶು ಪಕ್ಷ್ಯಾದಿ ಯೋನಿಗಳಲ್ಲಿ ಸಂಭವಿಸಿ ಎಲ್ಲ ಕಡೆಗಳಲ್ಲಿಯೂ ಯಾವಾಗಲೂ ಸಂಸಾರವನ್ನು ಹೊಂದಿದ್ದಾನೆಂದಾಯಿತು. ಅನೇಕ ದುಷ್ಕರ್ಮಮಯವಾದ ಅಸಹ್ಯ ಸಾಗರದಲ್ಲಿ ಮುಳುಗಿರುವ ಆ ಪರಬ್ರಹ್ಮನು ನಿನಗೇ ಇರಲಿ. ನೀನೇ ಆ ಪರಬ್ರಹ್ಮ. ಇದರಲ್ಲಿ ಸಂಶಯವಿಲ್ಲ.

ಅಸ್ಮದ್ಬ್ರಹ್ಮ ಹಯಗ್ರೀವಮತ್ಸ್ಯಕೂರ್ಮಾದಿವಿಗ್ರಹೇ ।
ಅಪಿ ಚಿತ್ಸುಖಸಂಪೂರ್ಣಂ ಸಹಸ್ರಾರ್ಕಸಮಪ್ರಭಂ ॥ ೮೧೫ ॥

ಅನಂತವೇದವೇದಾಂಗಪುರಾಣಸ್ಮೃತಿಪಾರಗಂ ।
ಚತುರ್ಮುಖಾದ್ಯೈರಾರಾಧ್ಯಂ ತೇಷಾಂ ವಿದ್ಯೋಪದೇಷ್ಟೃ ಚ ॥ ೮೧೬ ॥

**ಅನುವಾದ–** ನಮ್ಮ ಬ್ರಹ್ಮನಾದರೂ ಹಯಗ್ರೀವ, ಮತ್ಸ್ಯಕೂರ್ಮ ವರಾಹ ಮೊದಲಾದ ಶರೀರಗಳಲ್ಲಿಯೂ ಜ್ಞಾನಾನಂದ ಪರಿಪೂರ್ಣನೂ ಸಹಸ್ರ ಸೂರ್ಯರ ಕಾಂತಿಯುಳ್ಳವನೂ, ಅನಂತ ವೇದ ವೇದಾಂಗ ಪುರಾಣ ಸ್ಮೃತಿಗಳಲ್ಲಿ ಪಾರಂಗತನಾದವನೂ, ಚತುರ್ಮುಖಾದಿಗಳಿಂದ ಆರಾಧ್ಯನಾದವನೂ ಮತ್ತು ಚತುರ್ಮುಖಾದಿಗಳಿಗೆ ವಿದ್ಯೋಪದೇಶಕನೂ ಆಗಿದ್ದಾನೆ.

ಯನ್ಮಂತ್ರೋಪಿ ಚ ಮರ್ತ್ಯಾನಾಂ ವಿದ್ಯಾಸಿದ್ಧ್ಯೈ ನಿಯುಜ್ಯತೇ ।
ಯದ್ಭಕ್ತ್ಯಾ ಮುಚ್ಯತೇ ಜಂತುರ್ಯಸ್ಯ ಮಾತಾ ಪಿತಾ ಚ ನ ॥ ೮೧೭ ॥

ಯತ್ ಕೃಪಾವೀಕ್ಷಣಾತ್ ಸದ್ಯೋ ಮುಕ್ತೋ ನಿಷ್ಪಾಪತಾಮಿಯಾತ್ ।
ಅವದ್ಯಗಂಧವಿಧುರಂ ಪರಕ್ಲೇಶವಿಮೋಚನಂ ॥ ೮೧೮ ॥

ಅನಂತರೂಪೇಷ್ವಪ್ಯೇವಂ ಯಸ್ಯ ಶಕ್ತಿರನಂತಧಾ ।
ತತೋಧಿಕಂ ಪರಂಬ್ರಹ್ಮ ಕಿಂ ಸ್ಯಾದ್ ವದ ವಿವೇಕಿನಾಂ ॥ ೮೧೯ ॥

**ಅನುವಾದ–** ಯಾರ ಹಯಗ್ರೀವಾದಿ ಮಂತ್ರಗಳೂ ಸಹ ಮನುಷ್ಯರಿಗೆ ವಿದ್ಯಾಸಿದ್ಧಿಗಾಗಿ ವಿಧಿಸಲ್ಪಡುತ್ತದೆಯೋ, ಯಾವನಲ್ಲಿ ಭಕ್ತಿಯಿಂದ ಜೀವನು ಮುಕ್ತನಾಗುತ್ತಾನೆಯೋ, ಯಾವನಿಗೆ ಮಾತಾ ಪಿತೃಗಳೂ ಇಲ್ಲವೋ, ಯಾವನ ಕೃಪಾ ದೃಷ್ಟಿಯಿಂದ ಮುಕ್ತನಾದವನು ತಕ್ಷಣದಲ್ಲಿಯೇ ಸರ್ವಪಾಪರಹಿತನಾಗುತ್ತಾನೆಯೋ, ಯಾವನ ಶಕ್ತಿಯು ಅನಂತ ಪ್ರಕಾರವಾಗಿದೆಯೋ ಅಂತಹ ಅನಂತ ರೂಪಗಳಲ್ಲಿಯೂ ದೋಷಲೇಶವಿಧುರನೂ, ಇನ್ನೊಬ್ಬರ ಕ್ಲೇಶವನ್ನು

ಪರಿಹರಿಸುವವನೂ ಆದ ನಮ್ಮ ಹಯಗ್ರೀವ ಬ್ರಹ್ಮನಿಗಿಂತಲೂ ಅಧಿಕವಾದ ಪರಬ್ರಹ್ಮವಸ್ತುವು ವಿವೇಕಿಗಳ ದೃಷ್ಟಿಯಲ್ಲಿ ಯಾವುದು ಇದೆ ಎಂದು ಹೇಳು.

**ಕಿಂಚಾಹಮರ್ಥೋ ನಾತ್ಮಾ ತೇ ಬ್ರಹ್ಮಾಹಮಿತಿ ವಾಕ್ಯತಃ ।**
**ಜಡಾಹಂಕೃತ್ಯೈಕ್ಯಮಾಹ ನ ಜೀವೈಕ್ಯಂ ಭವನ್ಮತೇ ॥ ೯೩೧ ॥**

**ಅನುವಾದ–** ಅದೂ ಅಲ್ಲದೇ ನಿನ್ನ ಮತದಲ್ಲಿ ಅಹಂ ಎಂಬ ಪದಾರ್ಥವು ಆತ್ಮಭಿನ್ನವಾದ ಜಡ. ಆದ್ದರಿಂದ ಬ್ರಹ್ಮಾಹಮಸ್ಮಿ ಎಂಬ ವಾಕ್ಯವು ಅಹಂ ಪದಾರ್ಥಕ್ಕೂ ಮತ್ತು ಬ್ರಹ್ಮನಿಗೂ ಅಭೇದವನ್ನು ಹೇಳಿದರೆ ಜಡಬ್ರಹ್ಮೈಕ್ಯವೇ ಸಿದ್ಧವಾದೀತೇ ಹೊರತು, ನಿನ್ನ ಮತದಂತೆಯೇ ಜೀವಬ್ರಹ್ಮೈಕ್ಯವು ಸಿದ್ಧವಾಗುವುದಿಲ್ಲ.

**ಯಥಾ ತಪ್ತೋದಕೇ ರೂಪಸ್ಪರ್ಶಾಭ್ಯಾಮಭಿಭೂತಯೋಃ ।**
**ಅಬಗ್ನ್ಯೋರುಭಯೋರ್ಯೋಗಸ್ತಥೈವ ಲವಣೋದಕೇ ।**
**ರೂಪಾಭಿಭೂತಲವಣೇ ರಸಸ್ಯಾಭಿಭವೋ ಜಲೇ ॥ ೧೦೧೧ ॥**

**ಅನುವಾದ–** ಹೇಗೆ ಬಿಸಿನೀರಿನಲ್ಲಿ ರೂಪಸ್ಪರ್ಶಗಳ ಅಭಿಭವವುಳ್ಳ ಅಗ್ನಿ ಮತ್ತು ಉದಕಗಳಿಗೆ ಮಿಶ್ರಣ ಮಾತ್ರವೋ, ಅದರಂತೆ ಲವಣೋದಕದಲ್ಲಿ ರೂಪಾಭಿಭವವನ್ನು ಹೊಂದಿದ ಲವಣದೊಂದಿಗೆ ರಸಾಭಿಭವವನ್ನು ಹೊಂದಿದ ಜಲದ ಮಿಶ್ರಣ ಮಾತ್ರ ಇದೆ.

**ಶುದ್ಧೇ ಶುದ್ಧೋದಕಂ ಸಿಕ್ತಂ ತಾದೃಗೇವ ಭವೇತ್ ಪರಂ ।**
**ಏಕಪ್ರಕಾರೋದಕಯೋರಪ್ಯೈಕ್ಯಂ ನ ತಯೋಃ ಕಿಲ ॥ ೧೦೧೩ ॥**

**ಅನುವಾದ–** ಶುದ್ಧೋದಕಕ್ಕೆ ಶುದ್ಧೋದಕವನ್ನು ಬೆರೆಸಿದಾಗ ಶುದ್ಧೋದಕವು ಮೊದಲಿನ ನೀರಿಗೆ ಸದೃಶವಾಗುತ್ತದೆಯೇ ಹೊರತು, ಒಂದೇ ರೀತಿಯಲ್ಲಿರುವ ಆ ಎರಡು ನೀರುಗಳಿಗೆ ಐಕ್ಯವಿಲ್ಲವಷ್ಟೇ?

**ಸ್ವೋಕ್ತತಾದೃಕ್ತ್ವದಾರ್ಢ್ಯಾರ್ಥಮೇವೇತ್ಯೈಕ್ಯಂ ವ್ಯವಚ್ಛಿನತ್ ।**
**ಯತಃ ಶ್ರುತಿಸ್ತತಸ್ತತ್ರ ತಯೋರೈಕ್ಯಂ ನ ಸರ್ವಥಾ ॥ ೧೦೧೪ ॥**

**ಅನುವಾದ–** ಶ್ರುತಿಯು ತಾನು ತಾದೃಕ್ ಎಂಬ ಪದದಿಂದ ಹೇಳಿದ ಸಾದೃಶ್ಯವನ್ನು ದೃಢೀಕರಿಸುವುದಕ್ಕಾಗಿ ಏವಕಾರದಿಂದ ಐಕ್ಯದ ವ್ಯವಚ್ಛೇದವನ್ನು ಮಾಡಿತು. ಆದ್ದರಿಂದ ಅಲ್ಲಿ ಆ ಶುದ್ಧವಾದ ಎರಡು ಜಲಗಳಿಗೂ ಯಾವ ರೀತಿಯಿಂದಲೂ ಐಕ್ಯವಿಲ್ಲ.

ಏವಂ ಚೇತ್ ಕಥಮೈಕ್ಯಂ ಸ್ಯಾತ್ ಶುದ್ಧೋದಲವಣೋದಯೋಃ ।
ವೃದ್ಧೇಃ ಪ್ರತ್ಯಕ್ಷಸಿದ್ಧತ್ವಾದಪ್ಯೈಕ್ಯಂ ನೋಭಯತ್ರ ಚ ॥ ೧೦೧೫ ॥

**ಅನುವಾದ–** ಹೀಗಿರುವುದರಿಂದ ಶುದ್ಧೋದಕ ಮತ್ತು ಲವಣೋದಕಗಳಿಗೆ ಹೇಗೆ ಐಕ್ಯವು ಉಂಟಾಗುತ್ತದೆ? ಪ್ರತ್ಯಕ್ಷವಾಗಿ ವೃದ್ಧಿಯು ಕಾಣುವುದರಿಂದ ಶುದ್ಧೋದಕ ಲವಣೋದಕಗಳಿಗೂ, ಶುದ್ಧೋದಕ ಶುದ್ಧೋದಕಗಳಿಗೂ ಐಕ್ಯವಿಲ್ಲ.

ನ ಹಿ ರಾಸೋತ್ಸವಸ್ಯಾಂತೇ ಬಹುಮೂರ್ತ್ಯೇಕತಾಂ ಗತೇ ।
ಕೃಷ್ಣೇ ವಿಶತಿ ನಂದಸ್ಯ ಗೃಹದ್ವಾರಮವರ್ಧತ ॥ ೧೦೧೬ ॥

**ಅನುವಾದ–** ರಾಸೋತ್ಸವದ ಅವಸಾನದಲ್ಲಿ ತನ್ನ ಅನೇಕ ಮೂರ್ತಿಗಳಿಂದ ಏಕತ್ವವನ್ನು ಹೊಂದಿದ ಕೃಷ್ಣನು ನಂದನ ಗೃಹವನ್ನು ಪ್ರವೇಶಿಸಿದಾಗ ನಂದನ ಗೃಹದ್ವಾರವು ದೊಡ್ಡದಾಗಿಲ್ಲವಷ್ಟೇ?

ನದ್ಯಂಬುಯೋಗೇ ವರ್ಷಾಸು ವಾರ್ಧಿರಪ್ಯಭಿವರ್ಧತೇ ॥ ೧೦೧೭ ॥

**ಅನುವಾದ–** ಮಳೆಗಾಲದಲ್ಲಿ ನದಿಗಳ ನೀರು ಸಮುದ್ರವನ್ನು ಸೇರಿದಾಗ ಸಮುದ್ರವೂ ವೃದ್ಧಿಯನ್ನು ಹೊಂದುತ್ತದೆ.

ನ ಚೇದ್ವರ್ಷಾಸು ವಾರ್ಧ್ಯಂಬುಮಧ್ಯಾನ್ನದ್ಯಂಬುವಾರ್ಧರಾಃ ।
ಆನಯಂತಿ ಕಥಂ ಶುದ್ಧಂ ವರ್ಷಂತಿ ಚ ತತಸ್ತತಃ ॥ ೧೦೨೨ ॥

**ಅನುವಾದ–** ಮಿಶ್ರಣವನ್ನು ಒಪ್ಪದಿದ್ದರೆ ಮಳೆಗಾಲದಲ್ಲಿ ಸಮುದ್ರದ ನೀರಿನ ಮಧ್ಯದಿಂದ ನದಿಯ ನೀರಿನ ಮೋಡಗಳು ಹೇಗೆ ಶುದ್ಧ ಜಲವನ್ನು ತೆಗೆದುಕೊಳ್ಳುತ್ತವೆ ಮತ್ತು ಅಲ್ಲಲ್ಲಿ ಅದನ್ನು ಸುರಿಸುತ್ತವೆ?

ಶ್ವೇತಂ ಗಂಗೋದಕಂ ಸ್ವಾದು ತುಂಗಾಂಬು ಯಮುನಾಜಲಂ ।
ನೀಲಮಿತ್ಯಾದಿಭೋದೋऽಸ್ತಿ ಪ್ರತ್ಯಬ್ದಮಪಿ ತಜ್ಜಲೇ ॥ ೧೦೨೩ ॥

**ಅನುವಾದ–** ಗಂಗೆಯ ಜಲವು ಬಿಳಿ. ತುಂಗೆಯ ಜಲವು ಸಿಹಿ. ಯಮುನೆಯ ಜಲವು ಕಪ್ಪು. ಈ ಮುಂತಾದ ಭೇದಗಳು ಪ್ರತಿವರ್ಷವೂ (ಯಾವಾಗಲೂ) ಆ ನದಿಗಳ ಜಲದಲ್ಲಿ ಇರುವುದಷ್ಟೇ?

ಸೋऽಬ್ದೌ ಚ ಭಿನ್ನಭಿನ್ನಾಂಬುಸದ್ಭಾವೇನ ವಿನಾ ಕಥಂ ।
ನಹ್ಯಪೂರ್ವಂ ಸ ವಾರ್ವಾಹಃ ಕುರ್ವೀತಾಂಬು ಸ್ಥಲೇಸ್ಥಲೇ ॥ ೧೦೨೪ ॥

**ಅನುವಾದ–** ಸಮುದ್ರದಲ್ಲಿ ಭಿನ್ನ ಭಿನ್ನ ಜಲಗಳು ಇಲ್ಲದಿದ್ದರೆ ಆ ಭೇದವು ಹೇಗೆ ಉಪಪನ್ನವಾಗುತ್ತದೆ? ಮೋಡವು ಪ್ರತಿಯೊಂದು ಸ್ಥಳದಲ್ಲಿಯೂ ಹೊಸ ಹೊಸ ನೀರನ್ನು ಸೃಷ್ಟಿಸುವುದಿಲ್ಲವಷ್ಟೇ?

**ಸರ್ವೇ ಚ ಸಂಗಮಂ ಬ್ರೂಯುಸ್ತ್ವಂ ಬ್ರೂಷೇ ಕಥಮೇಕತಾಮ್ ।**
**ಹಂತಾಜ್ಞಾಶ್ಚ ಹಸೇಯುಸ್ತ್ವಾಂ ಪೂರ್ಣಪ್ರಜ್ಞಭಟಾಸ್ತು ಕಿಮ್ ॥ ೧೦೨೫ ॥**

**ಅನುವಾದ–** ಎಲ್ಲರೂ ಸಂಗಮವೆಂದು ಕರೆಯುತ್ತಾರೆ. ನೀನು ಮಾತ್ರ ಅಭೇದವೆಂದು ಹೇಳುತ್ತೀಯೆ. ಆಶ್ಚರ್ಯ! ಅಜ್ಞರೂ ನಿನ್ನನ್ನು ಅಪಹಾಸ ಮಾಡುತ್ತಾರೆ. ಇನ್ನು ಪೂರ್ಣಪ್ರಜ್ಞಾಚಾರ್ಯರ ಭಟರು ಹಾಸ್ಯಮಾಡುತ್ತಾರೆಂದು ಹೇಳುವುದೇನು?

**ತತೋ ವರ್ಣಾದಿನಾ ಭಿನ್ನಂ ಪದಂ ಸಂಧಾಯ ಸಾ ಶ್ರುತಿಃ ।**
**ಚರೇದ್ ಭೇದಾರ್ಥಲಾಭಾಯ ಯಾ ಬ್ರಾಹ್ಮಣಜನಪ್ರಿಯಾ ॥ ೧೦೪೧ ॥**

**ಅನುವಾದ–** ಬ್ರಾಹ್ಮಣ ಜನರಿಗೆ ಪ್ರಿಯವಾದ ಆ ಶ್ರುತಿಯು ತತ್ತ್ವಮಸಿ ಎಂದು ಮೊದಲು ಭಿನ್ನವಾದ ತನ್ನ ಪದವನ್ನು (ಪಾದವನ್ನು) ವರ್ಣಾದಿಯಾದ ಅಕಾರದಿಂದ ಜೋಡಿಸಿಕೊಂಡು ಭೇದರೂಪ ಅರ್ಥವನ್ನು ಪಡೆಯಲು ಸಂಚರಿಸುತ್ತದೆ.

**ಕಿಂಚ ಶಬ್ದೋ ನಿತ್ಯ ಇತಿ ವಾಕ್ಯೇ ಘಟನಿದರ್ಶನೇ ।**
**ಅನಿತ್ಯ ಇತ್ಯೇವ ಯದಾ ಪದಚ್ಛೇದಂ ವಿದೋ ವಿದುಃ ॥ ೧೦೪೨ ॥**

**ಏವಂ ಶಕುನಿಸೂತ್ರಾಖ್ಯಸ್ಪಷ್ಟದೃಷ್ಟಾಂತಶಕ್ತಿತಃ ।**
**ಆತ್ಮಾತತ್ತ್ವಮಸೀತ್ಯತ್ರಾಪ್ಯತದ್ಬ್ರಹ್ಮೇತಿ ಗಮ್ಯತೇ ॥ ೧೦೪೩ ॥**

**ಅನುವಾದ–** 'ಶಬ್ದೋ ನಿತ್ಯಃ' ಎಂಬ ವಾಕ್ಯದಲ್ಲಿ ಘಟದ ನಿದರ್ಶನವಿದ್ದರೆ ಹೇಗೆ ವಿದ್ವಾಂಸರು ಅನಿತ್ಯಃ ಎಂಬ ಪದಚ್ಛೇದವನ್ನು ಮಾಡುತ್ತಾರೆಯೋ, ಅದರಂತೆ ಸ್ಪಷ್ಟವಾದ ಶಕುನಿ ಸೂತ್ರ ಮೊದಲಾದ ಒಂಭತ್ತು ದೃಷ್ಟಾಂತಗಳ ಸಾಮರ್ಥ್ಯದಿಂದ 'ಸ ಆತ್ಮಾತತ್ತ್ವಮಸಿ' ಎಂಬ ವಾಕ್ಯದಲ್ಲಿಯೂ ಅತತ್ ಎಂದೇ ಪದಚ್ಛೇದವನ್ನು ಮಾಡಿ ನೀನು ಬ್ರಹ್ಮನಲ್ಲ ಎಂಬ ಅರ್ಥವನ್ನೇ ಹೇಳಬೇಕು.

**ವಿಶಿಷ್ಟಾರ್ಥಪರತ್ವೇಪಿ ವಿಶೇಷಣಬಲಾನ್ನ ತತ್ ।**
**ಅವಿಶಿಷ್ಟಾರ್ಥನಿಷ್ಠತ್ವೇ ಸಾಧಕಾಭಾವತೋ ನ ತತ್ ॥ ೧೦೬೨ ॥**

**ಅನುವಾದ–** ವಿಶಿಷ್ಟಾರ್ಥಪರತ್ವವನ್ನು ಒಪ್ಪಿದರೆ ವಿರುದ್ಧವಾದ ವಿಶೇಷಣಗಳ ಸಾಮರ್ಥ್ಯದಿಂದಲೇ ಐಕ್ಯವು ಇರುವುದಿಲ್ಲ. ಅವಿಶಿಷ್ಟಾರ್ಥಪರತ್ವವನ್ನು ಒಪ್ಪಿದರೂ ಐಕ್ಯದಲ್ಲಿ ಪ್ರಮಾಣವೇ ಇಲ್ಲವಾದ್ದರಿಂದ ಐಕ್ಯವು ಸಿದ್ಧವಾಗುವುದಿಲ್ಲ.

ಜೀವಚೈತನ್ಯಮಿತಿ ತಚ್ಚೈತನ್ಯದ್ವಯಮೇವ ಹಿ ।
ಮಿಥೋ ವಿರುದ್ಧಂ ನೀಚೋಚ್ಚಚಿತೋರೈಕ್ಯಂ ಕಥಂ ವದ ॥ ೧೦೭೧ ॥

ಅನುವಾದ– ಅಜ್ಞಾನಿಗಳಲ್ಲೇ ಸಂಭವಿಸುವ ಶೋಕಮೋಹಗಳು ಮತ್ತು ದುರ್ವಿಷಯ ಸ್ನೇಹವು ಅಥವಾ ಭಯವು ಎಲ್ಲಿ? ನಿತ್ಯವಾದ ವಿಜ್ಞಾನ, ಜ್ಞಾನ ಮತ್ತು ಐಶ್ವರ್ಯಕ್ಕೆ ಪ್ರಭುವಾದ ಹರಿಯು ಎಲ್ಲಿ? ಈ ರೀತಿಯಾಗಿ ಭಾಗವತದಲ್ಲಿ ಹೇಳಿರುವುದರಿಂದ ಈಶ್ವರಚೈತನ್ಯವು ಸದಾ ದೋಷವನ್ನು ಪರಿಹಾರ ಮಾಡಲು ಅತ್ಯಂತ ಶಕ್ತವಾದುದು. ಹಾಗಿಲ್ಲದ ಜೀವಚೈತನ್ಯವು ಅಶಕ್ತವಾದುದು. ಆದ್ದರಿಂದ ಆ ಎರಡು ಚೈತನ್ಯಗಳೇ ಪರಸ್ಪರ ವಿರುದ್ಧವಾಗಿವೆ. ನೀಚವಾದ ಜೀವಚೈತನ್ಯಕ್ಕೂ ಮತ್ತು ಉಚ್ಚವಾದ ಬ್ರಹ್ಮಚೈತನ್ಯಕ್ಕೂ ಐಕ್ಯವು ಹೇಗೆ ಉಂಟಾಗುತ್ತದೆ ಎಂದು ನೀನೇ ಹೇಳು.

ಕಿಂ ನ ಶ್ರುತಂ ಹರಿರ್ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ ।
ಇತಿ ನಾಮಸಹಸ್ರಸ್ಥಂ ಪುಣ್ಯನಾಮ ಮಹಾತ್ಮನಃ ॥ ೧೦೭೩ ॥

**ಅನುವಾದ–** ವಾಸುದೇವ ಸಹಸ್ರನಾಮದಲ್ಲಿರುವ 'ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ' ಎಂಬ ಮಹಾನುಭಾವನ ಪವಿತ್ರವಾದ ನಾಮವನ್ನು ನೀನು ಕೇಳಿಲ್ಲವೇನು?

ಉತ್ಕೃಷ್ಟಚೇತನತ್ವೋಕ್ತ್ಯಾ ಚಿನ್ಮಾತ್ರಮಪಿ ಮಾಪತೇಃ ।
ಅತ್ಯುಚ್ಚಂ ಜೀವಚೈತನ್ಯಾದಿತ್ಯರ್ಥಃ ಕಿಂ ನ ಸಿದ್ಧ್ಯತಿ ॥ ೧೦೭೪ ॥

**ಅನುವಾದ–** ಉತ್ಕೃಷ್ಟಚೇತನ' ಎಂದು ಹೇಳಿರುವುದರಿಂದ ಲಕ್ಷ್ಮೀಪತಿಯ ಚಿನ್ಮಾತ್ರವೂ ಸಹ ಜೀವಚೈತನ್ಯಕ್ಕಿಂತಲೂ ಅತ್ಯಂತ ಉತ್ಕೃಷ್ಟವಾದುದು ಎಂಬ ಅರ್ಥವು ಸಿದ್ಧವಾಗುವುದಿಲ್ಲವೇನು?

ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ ಕೈವಲ್ಯೇ ಸ್ಥಿತ ಆತ್ಮನಿ ।
ಇತಿ ಭಾಗವತೋಕ್ತ್ಯಾ ಚ ಸಮರ್ಥಾ ನೃಹರೇರ್ಹಿ ಚಿತ್ ॥ ೧೦೭೫ ॥

**ಅನುವಾದ–** 'ಮಾಯಾಂ ವ್ಯುದಸ್ಯ ಚಿಚ್ಛಕ್ತ್ಯಾ' ಎಂಬ ಭಾಗವತ ಶ್ಲೋಕವು ತನ್ನ ಚಿಚ್ಛಕ್ತಿಯಿಂದಲೇ ಹರಿಯು ಮಾಯೆಯನ್ನು ದೂರ ಮಾಡುತ್ತಾನೆಂದು ಹೇಳಿರುವುದರಿಂದ ಚಿಚ್ಛಕ್ತಿಯೇ ಉತ್ಕೃಷ್ಟವಾದುದು ಮತ್ತು ಸಮರ್ಥವಾದುದು.

ತತ್ಪೂರ್ಣಾಪೂರ್ಣಯೋಃ ಶಕ್ತಾಶಕ್ತಯೋರುಚ್ಚನೀಚಯೋಃ ।
ಜೀವಬ್ರಹ್ಮಚಿತೋರೈಕ್ಯಮಪಿ ಶಕ್ಯಂ ಕಥಂ ವದ ॥ ೧೦೭೬ ॥

**ಅನುವಾದ–** ಆದ್ದರಿಂದ ಪೂರ್ಣಾಪೂರ್ಣಗಳಾದ, ಶಕ್ತಾಶಕ್ತಗಳಾದ, ಉತ್ಕೃಷ್ಟ ನೀಚಗಳಾದ ಬ್ರಹ್ಮ ಚೈತನ್ಯಕ್ಕೂ ಜೀವಚೈತನ್ಯಕ್ಕೂ ಐಕ್ಯವು ಹೇಗೆ ಉಂಟಾಗುತ್ತದೆ ಎಂದು ಹೇಳು.

ವೃಥಾಮುಂಡನಮೇವೇದಂ ತಸ್ಮಾತ್ ತದ್ಧರ್ಮಮುಂಡನಮ್ ।
ನ್ಯಾಸಾನರ್ಹಸ್ಯ ಶೂದ್ರಸ್ಯ ಯಥಾ ಮೂರ್ಧಜಮುಂಡನಮ್ ॥ ೧೦೭೭ ॥

**ಅನುವಾದ–** ಆದ್ದರಿಂದ ತತ್ ತ್ವಂ ಪದ ಮುಖ್ಯಾರ್ಥರಾದ ಬ್ರಹ್ಮ ಮತ್ತು ಜೀವರಿಗೆ ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವವನ್ನು ಪರಿತ್ಯಾಗ ಮಾಡುವುದು ವ್ಯರ್ಥವಾದುದು. ಇದು ಸಂನ್ಯಾಸ ಅನರ್ಹನಾದ ಶೂದ್ರನಿಗೆ ಕೇಶ ಮುಂಡನವನ್ನು ಮಾಡಿದಂತೆ.

ಯತಶ್ಚ ಮುಂಡಿತಾವ್ಯಕ್ತಿರಪಿ ತೇಽರ್ಥಸ್ಯ ಬಾಧಿಕಾ ।
ಯಸ್ಮಾಚ್ಚಿನ್ಮಾತ್ರಮಪ್ಯೈಶಂ ಶಕ್ತಂ ಶೋಕಾದಿಧೂನನೇ ।
ಜೈವಂ ತು ತದಶಕ್ತಂ ಚೇತ್ಯುಕ್ತಂ ಭಾಗವತೇ ಸ್ಫುಟಂ ॥ ೧೦೭೮ ॥

**ಅನುವಾದ–** ಮುಂಡಿತವಾದ ಚಿದ್ವ್ಯಕ್ತಿಯೂ ಸಹ ನಿನಗೆ ಅಭೀಷ್ಟವಾದ ಅರ್ಥಕ್ಕೆ ಬಾಧಕವಾಗುತ್ತದೆ. ಏಕೆಂದರೆ ಈಶ ಚೈತನ್ಯವು ಅಜ್ಞಾನವನ್ನು ನಾಶ ಮಾಡಲು ಸಮರ್ಥವಾಗಿದೆ. ಜೀವ ಚೈತನ್ಯವು ಅಜ್ಞಾನವನ್ನು ನಾಶ ಮಾಡಲು ಸಮರ್ಥವಾಗಿಲ್ಲ ಎಂದು ಸ್ಪಷ್ಟವಾಗಿ ಭಾಗವತದಲ್ಲಿ ಹೇಳಲ್ಪಟ್ಟಿದೆ.

ಅಯೋಗ್ಯಸ್ತ್ವನ್ವಯೋಽರ್ಥೋ ನ ಮುಖ್ಯಾರ್ಥೋ ನ ತರಾಮಸೌ ।
ತದ್ಯುಕ್ತಾಯುಕ್ತವಿನ್ಯಾಸಸಂನ್ಯಾಸೌ ಚ ಗುಣೋಚಿತೌ ॥ ೧೦೭೯ ॥

**ಅನುವಾದ–** ಆದ್ದರಿಂದ ಇಂತಹ ಸ್ಥಳದಲ್ಲಿ ಗೌಣೀವೃತ್ತಿಯನ್ನು ಅಂಗೀಕರಿಸುವುದು ಶ್ರೇಷ್ಠವಾದುದು. ಶಿರಚ್ಛೇದಕ್ಕಿಂತಲೂ ಕರಚ್ಛೇದವು ಶ್ರೇಷ್ಠವಾದುದಷ್ಟೇ. ಪದಗಳು ಅನ್ವಯವನ್ನು ವಿಶೇಷಣತಯಾ ತಿಳಿಸುವುದರಿಂದ ಪದಗಳ ಅರ್ಥವು ಮುಖ್ಯವಾದುದು. ಅನ್ವಯವು ಅಮುಖ್ಯವಾದುದು ಅಯೋಗ್ಯವಾದ ಅನ್ವಯವು ಅರ್ಥವೇ ಅಲ್ಲ. ಆದ್ದರಿಂದ ಅದು ಮುಖ್ಯಾರ್ಥವಂತೂ ಖಂಡಿತವಾಗಿಯೂ ಅಲ್ಲ. ಆದ್ದರಿಂದ ಯುಕ್ತವಾದ ಅನ್ವಯವನ್ನು ತೆಗೆದುಕೊಂಡು ಅಯುಕ್ತವಾದ ಅನ್ವಯವನ್ನು ಪರಿತ್ಯಾಗ ಮಾಡಬೇಕು.

ಯೋಗ್ಯಾನ್ವಯಂ ಸಮಾದಾಯ ಜಹತೀ ಬಾಧಿತಂ ಚ ತಮ್ ।
ಮುಖ್ಯಾರ್ಥಾವಭಿರಕ್ಷಂತೀ ವೃತ್ತಿಃ ಸಾಽತಿಬಲೀಯಸೀ ॥ ೧೦೮೦ ॥

**ಅನುವಾದ–** ಯಾವ ವೃತ್ತಿಯಲ್ಲಿ ಯೋಗ್ಯವಾದ ಅನ್ವಯವನ್ನು ಸ್ವೀಕಾರ ಮಾಡಿ ಬಾಧಿತವಾದ ಅನ್ವಯವನ್ನು ಪರಿತ್ಯಾಗ ಮಾಡಿ ಎರಡು ಪದಗಳಿಗೂ ಮುಖ್ಯಾರ್ಥವನ್ನೇ ರಕ್ಷಣೆ ಮಾಡುತ್ತೇವೆಯೋ ಆ ವೃತ್ತಿಯು ಲಕ್ಷಣಾವೃತ್ತಿಗಿಂತಲೂ ಪ್ರಬಲವಾದುದು.

ಯಸ್ಯಾಂ ಲಕ್ಷ್ಯಾರ್ಥನಿರ್ದಿಷ್ಟೇ ನಾಸ್ತಿ ತದ್ವಾಚಕಂ ಪದಮ್ ।
ಲಕ್ಷಕೇಣೈವ ಬೋಧ್ಯೋऽಸೌ ಯುಕ್ತೋऽನ್ಯೋಽಪ್ಯನ್ವಯೋऽಸ್ತಿ ನ ।
ಅಗತ್ಯಾ ಜಹತೀ ಮುಖ್ಯಂ ವೃತ್ತಿಃ ಸಾऽತಿಲಘೀಯಸೀ ॥ ೧೦೮೬ ॥

**ಅನುವಾದ–** ಎಲ್ಲಿ ಲಕ್ಷ್ಯಾರ್ಥವನ್ನು ಸಾಕ್ಷಾತ್ತಾಗಿ ಹೇಳುವ ಪದವೇ ಇಲ್ಲವೋ ಮತ್ತು ವಾಕ್ಯದಲ್ಲಿರುವ ಎರಡು ಪದಗಳಿಗೆ ಯೋಗ್ಯವಾದ ಬೇರೆ ಅನ್ವಯವೂ ಇಲ್ಲವೋ, ಅಲ್ಲಿ ಅನಿವಾರ್ಯವಾಗಿ ಒಂದು ಪದಕ್ಕೆ ಅದರ ಸ್ವಾಭಾವಿಕವಾದ ಅರ್ಥವನ್ನು ಪರಿತ್ಯಾಗ ಮಾಡಿ ಅನ್ವಯವನ್ನು ಹೇಳಬೇಕು. ಈ ವೃತ್ತಿಯು ದುರ್ಬಲವಾದುದು.

ಅದ್ಯಾ ಗೌಣೀತಿ ನಿರ್ದಿಷ್ಟಾ ದ್ವಿತೀಯಾ ಲಕ್ಷಣಾ ಕಿಲ ।
ವಿರುದ್ಧಾ ಕಾರಸಂಪತ್ತೀ ವೃತ್ತೀ ದ್ವೇ ನಾತ್ರ ಸಂಶಯಃ ॥ ೧೦೮೭ ॥

**ಅನುವಾದ–** ಇದರಲ್ಲಿ ಹಿಂದಿನ ಎರಡು ಶ್ಲೋಕಗಳಲ್ಲಿ ಮೊದಲನೆಯ ಶ್ಲೋಕದಲ್ಲಿ ಹೇಳಿದ ವೃತ್ತಿಗೆ ಗೌಣೀ ಎಂದು ಎರಡನೆಯ ಶ್ಲೋಕದಲ್ಲಿ ಹೇಳಿದ ವೃತ್ತಿಗೆ ಲಕ್ಷಣಾ ಎಂದು ಹೆಸರು. ಅವೆರಡೂ ಪರಸ್ಪರ ವಿರುದ್ಧವಾದ ಸ್ವರೂಪವನ್ನು ಹೊಂದಿರುತ್ತವೆ. ಈ ವಿಷಯದಲ್ಲಿ ಸಂಶಯವಿಲ್ಲ.

ಜಹತ್ಸ್ವಾರ್ಥಾऽಜಹತ್ಸ್ವಾರ್ಥೇತ್ಯಾಹುರ್ಯಲ್ಲಕ್ಷಣಾದ್ವಯಂ ।
ತದಾದ್ಯಾಯಾಂ ಮುಖ್ಯಯೋಗೋऽಪ್ಯಾರ್ಥಿಕೋ ನ ತು ಶಾಬ್ದಿಕಃ ।
ವಾಕ್ಯಾರ್ಥೋऽಪ್ಯನ್ವಯಸ್ತೀರಘೋಷಯೋರೇವ ನ ತ್ವಯಂ ॥ ೧೦೮೮ ॥

**ಅನುವಾದ–** ಜಹತ್ಸ್ವಾರ್ಥ ಮತ್ತು ಅಜಹತ್ಸ್ವಾರ್ಥ ಎಂದು ಎರಡು ಲಕ್ಷಣಾ ಸ್ವರೂಪವನ್ನು ಒಪ್ಪುತ್ತಾರೆ. ಜಹತ್ಸ್ವಾರ್ಥ ಲಕ್ಷಣಾ ಸ್ಥಳದಲ್ಲಿ ಮುಖ್ಯಾರ್ಥ ಮತ್ತು ಲಕ್ಷಣಾರ್ಥ ಸಂಬಂಧವು ಆರ್ಥಿಕವಾದುದು ಹೊರತು ಶಬ್ದದಿಂದ ಲಭಿಸುವುದಿಲ್ಲ. ತೀರ ಮತ್ತು ಘೋಷಗಳ ಅನ್ವಯವು ವಾಕ್ಯಾರ್ಥರೂಪವಾದುದು. ಮುಖ್ಯಾರ್ಥ ಮತ್ತು ಲಕ್ಷ್ಯಾರ್ಥಗಳ ಸಂಬಂಧವು ವಾಕ್ಯಾರ್ಥವಲ್ಲ.

ಲಕ್ಷ್ಯಾರ್ಥೇ ನಿರ್ವಿಕಲ್ಪಾ ಧೀರ್ಯಸ್ಯ ತಸ್ಯ ಮತೇ ಪದಂ ।
ಮುಖ್ಯಾರ್ಥಯೋಗಂ ಮುಖ್ಯಂ ಚ ನ ವದೇನ್ನಾಪಿ ಲಕ್ಷಯೇತ್ ॥೧೦೮೯॥

**ಅನುವಾದ–** ಯಾವ ತಾರ್ಕಿಕರ ಮತದಲ್ಲಿ ಇಂತಹ ಲಕ್ಷಣಾ ಸ್ಥಳದಲ್ಲಿ ಲಕ್ಷ್ಯಾರ್ಥದ ನಿರ್ವಿಕಲ್ಪಕ ಜ್ಞಾನವನ್ನು ಅಂಗೀಕಾರ ಮಾಡುತ್ತಾರೆಯೋ ಅವರಿಗೆ ಮುಖ್ಯಾರ್ಥ ಸಂಬಂಧವಾಗಲೀ, ಮುಖ್ಯವಾದ ಅನ್ವಯವಾಗಲೀ ಶಬ್ದ ಶಕ್ತಿಯಿಂದಲಾಗಲೀ ಅಥವಾ ಲಕ್ಷಣಾದಿಂದಲಾಗಲೀ ಲಬ್ಧವಾಗುವುದಿಲ್ಲ.

**ಪೌನರುಕ್ತ್ಯಾ ಸಿಂಹಪದಂ ದೇವದತ್ತಂ ನ ಲಕ್ಷಯೇತ್ ।**
**ಕಿಂತು ಸಿಂಹಾತ್ಮತಾಂ ಸಿಂಹಸಾದೃಶ್ಯಂ ವಾಸ್ಯ ಶಂಸತಿ ॥ ೧೮೯೦ ॥**

**ಅನುವಾದ–** 'ಸಿಂಹೋದೇವದತ್ತಃ' ಎಂಬ ಸ್ಥಳದಲ್ಲಿ ಪೌನರುಕ್ತಿಯು ಬರುವ ಕಾರಣದಿಂದ ಸಿಂಹ ಪದವು ದೇವದತ್ತನಿಗೆ ಲಕ್ಷಕವಾಗುವುದಿಲ್ಲ. ಆದರೆ ಸಿಂಹಾಭೇದವನ್ನಾಗಲೀ ಅಥವಾ ಸಿಂಹಸಾದೃಶ್ಯವನ್ನಾಗಲೀ ಹೇಳುತ್ತದೆ.

**ವ್ಯಾವಹಾರಿಕಭೇದಂ ತೇ ಕಾ ವಾ ವಕ್ತಿ ಶ್ರುತಿಸ್ತಯೋಃ ।**
**ವಾಕ್ಯಸ್ಯಾಸ್ಯ ಕುಸೃಷ್ಟ್ಯೈವಮನ್ಯಥಾಕರಣೇ ವದ ॥ ೧೨೪೬ ॥**

**ಅನುವಾದ–** ಇಂತಹ ಕುಕಲ್ಪನೆಯನ್ನು ಮಾಡಿ ದ್ವಾಸುಪರ್ಣಾ ಶ್ರುತಿಗೆ ನೀನು ಅನ್ಯಾರ್ಥವನ್ನು ಹೇಳಲು ನಿನಗೆ ಯಾವ ಶ್ರುತಿಯು ಜೀವೇಶ್ವರರಿಗೆ ವ್ಯಾವಹಾರಿಕ ಭೇದವನ್ನು ಹೇಳುತ್ತದೆ ಎಂದು ಹೇಳು.

**ಸಿದ್ಧಭೇದಾನುವಾದಶ್ಚ ಕಸ್ಮಿನ್ ವಾಕ್ಯೇ ಪ್ರಕಥ್ಯತೇ ।**
**ಭೇದೋಪಾಸ್ತೇಶ್ಚ ಕಿಂ ಮೂಲಮತಶ್ಚಾಯಂ ವೃಥಾಶ್ರಮಃ ॥ ೧೨೪೭ ॥**

**ಅನುವಾದ–** ಶ್ರುತಿಯು ಯಾವ ವಾಕ್ಯದಲ್ಲಿ ತಾನು ಭೇದವನ್ನು ಅನುವಾದ ಮಾಡುತ್ತಿದ್ದೇನೆ ಎಂದು ಹೇಳುತ್ತದೆ? ಶ್ರುತಿಯು ಭೇದವನ್ನು ಹೇಳದಿದ್ದರೆ ಭೇದೋಪಾಸನೆಗೆ ಮೂಲವಾದರೂ ಯಾವುದು? ಆದ್ದರಿಂದಲೂ ಈ ನಿನ್ನ ಶ್ರಮ ವ್ಯರ್ಥವಾದುದು.

**ಪರಪ್ರಯೋಜನಾರ್ಥಂ ಹಿ ಪರಮಾತ್ಮಾ ಪ್ರವರ್ತತೇ ।**
**ಸುರಾಂ ಸುಧಾಂ ಚ ದುಃಸಾಧ್ಯಾಂ ಕಿಂ ಸಂಸಾಧ್ಯ ಸ್ವಯಂ ಪಪೌ ।**
**ಅಸುರಾಂಶ್ಚ ಸುರಾಂಶ್ಚೈವ ಯಥಾಯೋಗ್ಯಮಪಾಯಯತ್॥ ೧೨೪೮ ॥**

**ಅನುವಾದ–** ಪರಮಾತ್ಮನು ಇನ್ನೊಬ್ಬರ ಪ್ರಯೋಜನಕ್ಕೋಸ್ಕರವಾಗಿಯೇ ಪ್ರವೃತ್ತ-ನಾಗುತ್ತಾನಷ್ಟೇ. ದುರ್ಲಭವಾದ ಸುರೆಯನ್ನು ಮತ್ತು ಅಮೃತವನ್ನು ಸಾಧಿಸಿ ತಾನೇ ಕುಡಿದನೇನು? ಯಥಾ ಯೋಗ್ಯವಾಗಿ ಅಸುರರಿಗೂ ಮತ್ತು ದೇವತೆಗಳಿಗೂ ಕುಡಿಸಿದನಷ್ಟೇ?

ಸ ಹಿ ಸರ್ವಂ ಜಗದಿದಂ ವ್ಯಾಪ್ಯ ನಾರಾಯಣಃ ಸ್ಥಿತಃ ।
ತತ್ರೈವ ದೇವದೈತ್ಯಾದಿಷ್ವಾವೇಶಸ್ಯ ಪ್ರಕೀರ್ತನಾತ್ ॥ ೧೨೪೯ ॥

ಸೋಽನಶ್ನನ್ ದೇಹಿನಾಂ ದೇಹೇಷ್ವಶ್ನಂಶ್ಚಾನ್ಯಸ್ತಥೈವ ಹಿ ।
ಪ್ರೇರಕಪ್ರೇರ್ಯರೂಪೌ ತೌ ಕಥಂ ನ ದ್ವೌ ತನೌ ತನೌ ॥ ೧೨೫೦ ॥

**ಅನುವಾದ–** ಅಮೃತ ಮಥನ ಪ್ರಸಂಗದಲ್ಲಿಯೇ ದೇವತೆಗಳಲ್ಲಿ, ದೈತ್ಯರಲ್ಲಿ ಮತ್ತು ವಾಸುಕಿಯಲ್ಲಿ ಪರಮಾತ್ಮನ ಪ್ರವೇಶವನ್ನು ಹೇಳಿರುವುದರಿಂದ ಆ ನಾರಾಯಣನೇ ಈ ಎಲ್ಲ ಜಗತ್ತನ್ನು ವ್ಯಾಪಿಸಿ ಇರುವವನಷ್ಟೇ? ದೇಹಿಗಳ ದೇಹದಲ್ಲಿ ಅವನು ಭೋಗಿಸದೇ ಇರುವವನು. ಆ ದೇಹದಲ್ಲಿ ಭೋಗಿಸುವವನು ಇನ್ನೊಬ್ಬನೇ ಇದ್ದಾನೆ. ಅವರಲ್ಲಿ ಪರಮಾತ್ಮನು ಪ್ರೇರಕನಾದವನು, ಜೀವನು ಪ್ರೇರ್ಯ-ನಾದವನು. ಪ್ರತಿ ಶರೀರದಲ್ಲಿಯೂ ಆ ಇಬ್ಬರನ್ನು ಹೇಗೆ ಒಪ್ಪದೇ ಇರಲು ಸಾಧ್ಯ?

ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥೧೨೫೧॥

**ಅನುವಾದ–** ಎಲೈ ಅರ್ಜುನನೇ! ಈಶ್ವರನು ಎಲ್ಲ ಜೀವರ ಹೃದಯ ಪ್ರದೇಶದಲ್ಲಿ ಎಲ್ಲ ಜೀವರನ್ನೂ ಯಂತ್ರಕ್ಕೆ ವಶವಾದವರಂತೆ ತನ್ನ ಇಚ್ಛೆಯಿಂದ ತಿರುಗಿಸುತ್ತಾ ಇರುತ್ತಾನೆ.

ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।
ಇತಿ ಗೀತಾಸು ಹರಿಣಾ ಗೀತಾಂ ಗಾಥಾಮನುಸ್ಮರ ॥ ೧೨೫೨ ॥

**ಅನುವಾದ–** ನನಗೆ ಕರ್ಮಫಲದ ಲೇಪವಿಲ್ಲ. ನನಗೆ ಕರ್ಮಜನ್ಯ ಫಲದ ಆಸೆಯೂ ಇಲ್ಲ ಎಂದು ಗೀತೆಯಲ್ಲಿ ಹೇಳಿದ ಹರಿಯ ಮಾತುಗಳನ್ನು ಸ್ಮರಿಸಿಕೋ.

ಅಂತೇ ಸಂಹೃತ್ಯ ಯೋಽನೇಕಾನ್ ವಿಪ್ರರ್ಷಿವಿಬುಧಾದಿಕಾನ್ ।
ನ ಲಿಪ್ಯತೇ ಪಾಪಕೇನ ಕನೀಯಾನ್ ನ ಸ ಕರ್ಮಣಾ ॥ ೧೨೫೩ ॥

**ಅನುವಾದ–** ಯಾವ ಪರಮಾತ್ಮನು ಪ್ರಳಯ ಕಾಲದಲ್ಲಿ ಅನೇಕ ಬ್ರಾಹ್ಮಣರನ್ನು, ಋಷಿಗಳನ್ನು, ದೇವತೆಗಳನ್ನು ಸಂಹರಿಸಿದರೂ ಪಾಪ ಲೇಪವನ್ನು ಹೊಂದುವುದಿಲ್ಲವೋ, ಅವನು ಯಾವ ಕರ್ಮದಿಂದಲೂ ಹಾನಿಯನ್ನು ಹೊಂದುವುದಿಲ್ಲ.

ಯೋಽಸಕ್ತಃ ಸನ್ ವಿವಿಕ್ತಶ್ಚ ಸಾಕ್ಷೀ ಕಿಲ ನೃಣಾಂ ಹೃದಿ ।
ಸ ಪಾಪಮೂಲದುಃಖಾನಿ ನೈವ ಭುಂಕ್ತ ಇತಿ ಸ್ಮೃತೇಃ ॥ ೧೨೫೪ ॥

**ಅನುವಾದ–** ಯಾವ ಪರಮಾತ್ಮನು ಸರ್ವಜೀವರ ಸಂಬಂಧವನ್ನು ಹೊಂದಿದ್ದರೂ ಅವರಿಗಿಂತ ಭಿನ್ನನಾಗಿ ಅವರ ಹೃದಯದಲ್ಲಿ ಸಾಕ್ಷಿಯಾಗಿದ್ದಾನೆಯೋ ಅವನು ಪಾಪ ಮೂಲಕವಾದ ದುಃಖವನ್ನು ಅನುಭವಿಸುವುದಿಲ್ಲ ಎಂಬ ಸ್ಮೃತಿ ಇದೆ.

ಸಮರ್ಥಾಯಾಂ ಪ್ರವೃತ್ತೌ ತು ಪ್ರಾಮಾಣ್ಯಂ ಹೀಯತೇ ಕಿಲ ।
ಅಸಮರ್ಥಪ್ರವೃತ್ತೌ ತು ಪ್ರಾಮಾಣ್ಯಮುಪಚೀಯತೇ ॥ ೧೩೦೫ ॥

**ಅನುವಾದ–** ಸಮರ್ಥ ಪ್ರವೃತ್ತಿ ಜನಕತ್ವವು ಬಂದರೆ ಪ್ರಾಮಾಣ್ಯವು ಕಡಿಮೆಯಾಗುತ್ತದೆ. ಸಮರ್ಥ ಪ್ರವೃತ್ತಿ ಜನಕತ್ವವು ಬರದಿದ್ದರೆ ಪ್ರಾಮಾಣ್ಯವು ವೃದ್ಧಿಯಾಗುತ್ತದೆ ಎಂಬುದು ಆಶ್ಚರ್ಯಕರವಾದ ಸಂಗತಿ.

ಯಾ ಬ್ರಹ್ಮಣ್ಯಭಿಲಾಪಾರ್ಹೇ ಸದಾಽಽದೇಯೇ ಮುಮುಕ್ಷುಭಿಃ ।
ಹೇಯೇ ಚ ಶುಕ್ತಿರೂಪ್ಯಾದೌ ಜಗತೀವ ಪ್ರದೃಶ್ಯತೇ ॥ ೧೩೧೨ ॥

**ಅನುವಾದ–** ಏಕೆಂದರೆ ಆ ಲಕ್ಷಣವು ಶಬ್ದಪ್ರಯೋಗಾರ್ಹನಾದ ಮತ್ತು ಮುಮುಕ್ಷುಗಳಿಂದ ಸದಾ ಉಪಾದೇಯನಾದ ಬ್ರಹ್ಮನಲ್ಲಿ ಬರುತ್ತದೆ. ಮತ್ತು ಆ ಲಕ್ಷಣವು ಜಗತ್ತಿನಲ್ಲಿದ್ದಂತೆ ಹೇಯವಾದ ಶುಕ್ತಿರೂಪ್ಯಗಳಲ್ಲಿಯೂ ಇದೆ.

ತದ್ಬ್ರಹ್ಮಸಮಸಾಮರ್ಥ್ಯೋ ಭೇದೋ ಭೇದ್ಯೋ ನ ಕೇನಚಿತ್॥ ೧೩೨೮ ॥

**ಅನುವಾದ–** ಆದ್ದರಿಂದ ಬ್ರಹ್ಮನಿಗೆ ಸಮಾನವಾದ ಸಾಮರ್ಥ್ಯವುಳ್ಳ ಭೇದವನ್ನು ಯಾರೂ ನಿರಾಕರಿಸಲು ಸಾಧ್ಯವಿಲ್ಲ.

ಅಪಿ ಸ್ವರೂಪನಿಷ್ಪತ್ತೌ ಸಮೀಪಪ್ರಾಪ್ತಿರುಚ್ಯತೇ ।
ಪರಂಜ್ಯೋತಿರಿತಿ ಶ್ರುತ್ಯಾ ತತ್ ತ್ಯಾಗಾರ್ಹಾ ಕಥಂ ಭಿದಾ॥ ೧೩೩೧ ॥

**ಅನುವಾದ–** 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ಶ್ರುತಿಯು ಜೀವನ ಸ್ವರೂಪಾಭಿವ್ಯಕ್ತಿಗೆ ಕಾರಣವಾಗಿ ಬ್ರಹ್ಮನ ಸಮೀಪಪ್ರಾಪ್ತಿಯನ್ನು ಹೇಳುತ್ತದೆ. ಆದ್ದರಿಂದ ಈ ಭೇದವು ಎಂದೂ ತ್ಯಾಗಾರ್ಹವಲ್ಲ.

ಪೂರ್ವೋಕ್ತಬ್ರಹ್ಮಸೂತ್ರಾಣಿ ಭೇದಮಾಘೋಷಯಂತಿ ಹಿ ।
ಅಭೇದೋಕ್ತೀಸ್ತಿರಸ್ಕೃತ್ಯ ಕುತಸ್ತಸ್ಯ ಹ್ಯಸತ್ಯತಾ ।
ಅತೋ ಭೇದಶ್ರುತೇರಗ್ರೇ ಕಸ್ಯ ಸ್ಯಾತ್ ಪ್ರತ್ಯವಸ್ಥಿತಿಃ ॥ ೧೩೩೨ ॥

**ಅನುವಾದ–** ಹಿಂದೆ ಉದಾಹರಿಸಿದ ಬ್ರಹ್ಮಸೂತ್ರಗಳು ಜೀವೇಶ್ವರ ಭೇದವನ್ನು ಘೋಷಣೆ ಮಾಡುತ್ತಿವೆ. ಅಷ್ಟೇ ಅಲ್ಲದೆ ಅಭೇದ ವಾಕ್ಯಗಳನ್ನು ನಿರಾಕರಿಸುತ್ತಿವೆ. ಹೀಗಿರುವಾಗ ಭೇದವು ಹೇಗೆ ಅಸತ್ಯವಾಗುತ್ತದೆ? ಆದ್ದರಿಂದ ಭೇದಶ್ರುತಿಯ ಮುಂದೆ ಯಾವನು ಪ್ರತಿಭಟನಾಗಿ ನಿಲ್ಲಲು ಸಾಧ್ಯ?

ಅನಾದಿವೇದವಾಕ್ಯೇಷು ಪರಾಪರಕಥಾ ವೃಥಾ ।
ನಿಷೇಧವಿಧಿವಾರ್ತಾಽದ್ಧಾ ದಗ್ಧಾಽಗ್ನೀಷೋಮಪಾವಕೇ ॥ ೧೩೩೩ ॥

**ಅನುವಾದ–** ಅನಾದಿಯಾದ ವೇದದಲ್ಲಿ ಒಂದು ವಾಕ್ಯವನ್ನು ಪೂರ್ವ, ಇನ್ನೊಂದು ವಾಕ್ಯವನ್ನು ಪರ ಎಂದು ಹೇಳಿ ಬಾಧ್ಯಬಾಧಕ ಭಾವವನ್ನು ಹೇಳಲು ಬರುವುದಿಲ್ಲ. ನಿಷೇಧವಿಧಿ ವಾರ್ತೆಯಂತೂ ಅಗ್ನಿಷೋಮಯಾಗದ ವಹ್ನಿಯಲ್ಲಿ ಚೆನ್ನಾಗಿ ಸುಟ್ಟುಹೋಯಿತು.

ಪರಸ್ಮಾತ್ ಪೂರ್ವಬಾಧಶ್ಚೇತ್ ಸ್ಮೃತ್ಯಾ ಸ್ಯಾಚ್ಛ್ರುತಿಬಾಧನಮ್ ।
ಪರಸ್ಮಾಜ್ಜಗತಃ ಪೂರ್ವಬ್ರಹ್ಮಬಾಧಶ್ಚ ತೇ ಭವೇತ್ ॥ ೧೩೩೪ ॥

**ಅನುವಾದ–** ಪರದಿಂದ ಪೂರ್ವಕ್ಕೆ ಬಾಧವುಂಟಾಗುವುದಾದರೆ ಸ್ಮೃತಿಯಿಂದ ಶ್ರುತಿಗೆ ಬಾಧವುಂಟಾಗಲಿ. ಅದು ನಿನ್ನ ನ್ಯಾಯದಂತೆ ಪೂರ್ವನಾದ ಬ್ರಹ್ಮನಿಗೆ ಪರವಾದ ಜಗತ್ತಿನಿಂದ ಬಾಧವುಂಟಾಗಲಿ.

ಶ್ರುತೇರನೃತತಾಂ ಕ್ವಾಪಿ ವದತೀತಿ ವಚಸ್ತು ಯತ್ ।
ಶ್ರುತಿಪ್ರಾಮಾಣ್ಯರಕ್ಷಾಯೈ ತದನ್ಯಾರ್ಥಂ ವದೇದ್ ಬುಧಃ ॥ ೧೩೩೮ ॥

**ಅನುವಾದ–** ಶ್ರುತಿಯಲ್ಲಿ ಎಲ್ಲಿಯಾದರೂ ಅನೃತವನ್ನು ಹೇಳುವಂತೆ ತೋರುವ ಒಂದು ವಾಕ್ಯವಿದ್ದರೆ, ವಿವೇಕಿಯಾದವನು ಶ್ರುತಿಪ್ರಾಮಾಣ್ಯ ರಕ್ಷಣೆಗೋಸ್ಕರವಾಗಿ ಆದಕ್ಕೆ ಬೇರೆ ಅರ್ಥವನ್ನೇ ಹೇಳಬೇಕು.

ಅತೋ ನೇದಂ ಯದಿದಮಿತ್ಯಾದಿ ವಾಕ್ಯಂ ನ ಬಾಧಕಂ ।
ವಾಚ್ಯೋಽನ್ಯೋಽರ್ಥಃ ಶ್ರುತೇರ್ಗುಪ್ತ್ಯೈ ತ್ವಯಾಪಿ ಚ ಮಯಾಪಿ ಚ ॥
॥ ೧೩೩೯ ॥

**ಅನುವಾದ–** ಆದ್ದರಿಂದ, 'ನೇದಂ ಯದಿದಂ ಉಪಾಸತೇ' ಮೊದಲಾದ ವಾಕ್ಯಗಳು ನಮಗೆ ಬಾಧಕವಾಗುವುದಿಲ್ಲ. ಶ್ರುತಿಯ ಪ್ರಾಮಾಣ್ಯವನ್ನು ರಕ್ಷಿಸುವುದಕ್ಕೋಸ್ಕರ ನೀನೂ ಮತ್ತು ನಾನೂ ಆ ವಾಕ್ಯಕ್ಕೆ ಬೇರೆಯೇ ಅರ್ಥವನ್ನು ಹೇಳಬೇಕು.

ಉಪಾಸನಾರ್ಥಂ ಧನವಾನ್ ಕಿಮನುಶ್ರಿ(ಸ್ರಿ)ಯತೇ ತ್ವಯಾ ।
ಅಧನೋ ವಾ ನರಃ ಕಶ್ಚಿತ್ ಸ್ವಾನುಭೂತಿಂ ವಿಚಾರಯ ॥ ೧೪೦೦ ॥

ವಿಷನಿರ್ಹರಣೇ ಶಕ್ತೋ ಧ್ಯಾತವ್ಯೋ ಗರುಡಸ್ತ್ವಯಾ ।
ಸರ್ಪದಷ್ಟೇನ ಕಿಮುತ ಕಾಕೋಲೂಕಾದಿಪಕ್ಷಿಣಃ ॥ ೧೪೦೧ ॥

ವಿಘ್ನಧ್ವಂಸಾಯ ವಿಘ್ನೇಶೋ ವಿದ್ಯಾಪ್ತ್ಯೈ ಶಾರದಾ ತ್ವಯಾ ।
ಮೃತ್ಯುಂಜಯೋ ಮೃತ್ಯುಜಿತ್ಯೈ ಕುತಃ ಸಂಸೇವ್ಯತೇ ವದ ॥ ೧೪೦೨ ॥

**ಅನುವಾದ–** ದರಿದ್ರನಾದ ನೀನು ಧನಪ್ರಾಪ್ತಿಗಾಗಿ ಒಬ್ಬ ಶ್ರೀಮಂತನನ್ನು ಉಪಾಸನೆ ಮಾಡುತ್ತೀಯೋ ಅಥವಾ ನಿರ್ಧನನಾದ ಯಾವನೋ ಒಬ್ಬ ಮನುಷ್ಯನನ್ನು ಉಪಾಸನೆ ಮಾಡುತ್ತೀಯೋ ಎಂದು ನಿನ್ನ ಅನುಭವವನ್ನೇ ವಿಮರ್ಶಿಸು. ಸರ್ಪದಿಂದ ಕಚ್ಚಲ್ಪಟ್ಟ ನೀನು ವಿಷಪರಿಹಾರಕ್ಕಾಗಿ ವಿಷ ಪರಿಹಾರ ಸಮರ್ಥನಾದ ಗರುಡನನ್ನು ಧ್ಯಾನ ಮಾಡುತ್ತೀಯೋ ಅಥವಾ ಕಾಗೆ ಗೂಬೆ ಮೊದಲಾದ ಪಕ್ಷಿಗಳನ್ನು ಧ್ಯಾನ ಮಾಡುತ್ತೀಯೋ ಎಂದು ನಿನ್ನ ಅನುಭವವನ್ನೇ ವಿಮರ್ಶಿಸು. ನೀನು ವಿಘ್ನ ನಿವಾರಣೆಗಾಗಿ ವಿಘ್ನೇಶನನ್ನು, ವಿದ್ಯಾಪ್ರಾಪ್ತಿಗಾಗಿ ಶಾರದೆಯನ್ನು ಮೃತ್ಯುಪರಿಹಾರಕ್ಕಾಗಿ ಮೃತ್ಯುಂಜಯನನ್ನು ಏಕೆ ಉಪಾಸನೆ ಮಾಡುತ್ತೀಯೆ ಎಂದು ಹೇಳು.

ಅವಿದ್ಯಮಾನಃ ಸವಿತಾ ಸಂಧ್ಯೋಪಾಸ್ತ್ಯೈ ಕಿಮೀರ್ಯತೇ ।
ಸ್ವಾಮಾನತಾಂ ಸ್ವಯಂ ಕರ್ತುಂ ಕಿಮುನ್ಮತ್ತವಚಃ ಶ್ರುತಿಃ ॥ ೧೪೦೩ ॥

**ಅನುವಾದ–** ಸಂಧ್ಯೋಪಾಸನೆಯ ಸಲುವಾಗಿ ವೇದವು ಎಲ್ಲಾದರೂ ಅವಿದ್ಯ-ಮಾನನಾದ ಅಥವಾ ಮಿಥ್ಯಾಭೂತನಾದ ಸೂರ್ಯನನ್ನು ಹೇಳುತ್ತದೆಯೇನು? ತನ್ನ ಅಪ್ರಾಮಾಣ್ಯವನ್ನು ತಾನೇ ಸಾಧಿಸಿಕೊಳ್ಳಲು ಶ್ರುತಿಯು ಉನ್ಮತ್ತವಾಕ್ಯವೇನು?

ಸತ್ಯಂ ವದೇತಿ ಯಾ ವಾಣೀ ವಕ್ತಿ ಧರ್ಮಾನುಶಾಸನಮ್ ।
ಅಸತ್ಯಂ ಕಿಲ ಸಾ ವಕ್ತಿ ಧ್ಯಾತುಂ ಸರ್ವತ್ರ ಸರ್ವದಾ ॥ ೧೪೦೪ ॥

**ಅನುವಾದ–** ಯಾವ ವೇದವಾಣಿಯು ಸತ್ಯವನ್ನು ಹೇಳು ಎಂಬ ಧರ್ಮಾನು-ಶಾಸನವನ್ನು ಹೇಳುತ್ತದೆಯೋ, ಅದು ಸರ್ವದಾ ಮತ್ತು ಸರ್ವ ಸ್ಥಳಗಳಲ್ಲಿ ಧ್ಯಾನ ಮಾಡುವುದಕ್ಕೋಸ್ಕರ ಅಸತ್ಯವನ್ನು ಹೇಳುತ್ತದೆಯಷ್ಟೇ!

ಯನ್ನ ಪ್ರತೀಕೇ ನ ಹಿ ಸಃ ಇತ್ಥಂ ಸೂತ್ರಕೃತೈವ ಹಿ ।
ಅವಿದ್ಯಮಾನಸ್ಯೋಪಾಸ್ತಿರ್ನ ಕ್ವಾಪ್ಯಸ್ತೀತಿ ಸಾಧಿತಂ ॥ ೧೪೦೫ ॥

**ಅನುವಾದ–** 'ನ ಪ್ರತೀಕೇ ನ ಹಿ ಸಃ' ಎಂಬ ಬ್ರಹ್ಮಸೂತ್ರದಲ್ಲಿ ಸೂತ್ರಕಾರರೇ ವೇದದಲ್ಲಿ ಅವಿದ್ಯಮಾನವಾದ ವಸ್ತುವಿನ ಉಪಾಸನೆಯು ಎಲ್ಲಿಯೂ ಹೇಳಲ್ಪಟ್ಟಿಲ್ಲವೆಂದು ಸಾಧಿಸಿರುವುದರಿಂದ ಎಲ್ಲಿಯೂ ವೇದವು ಅವಿದ್ಯಮಾನವಾದ ವಸ್ತುವಿನ ಉಪಾಸನೆಯನ್ನು ಹೇಳುವುದಿಲ್ಲ.

ಮುಕ್ತೌ ಚ ಸ್ವಸ್ಯ ನೈರ್ದೋಷ್ಯಂ ಯದವಶ್ಯಮಪೇಕ್ಷಿತಮ್ ।
ಅತೋಽಜ್ಞಾನಕ್ಲೇಶನಾಶಜನ್ಮಾದ್ಯಂ ನ ಸ್ಮರೇದ್ಧರೌ ।
ಇತಿ ಸಿದ್ಧಂ ತತೋಽವದ್ಯಶೂನ್ಯೋಪ್ಯಾಸೀದ್ ರಮಾಪತಿಃ ॥ ೧೪೦೯ ॥

**ಅನುವಾದ–** ಮೋಕ್ಷದಲ್ಲಿ ಉಪಾಸಕನಾದ ಜೀವನು ತನಗೆ ದೋಷಾಭಾವವನ್ನು ಅವಶ್ಯವಾಗಿ ಅಪೇಕ್ಷಿಸುವುದರಿಂದಲೂ ಹರಿಯಲ್ಲಿ ಅಜ್ಞಾನ, ದುಃಖ, ನಾಶ ಮತ್ತು ಜನ್ಮಾದಿಗಳನ್ನು ಚಿಂತಿಸಬಾರದು ಎಂದು ಸಿದ್ಧವಾಯಿತು. ಆ ಕಾರಣದಿಂದಲೂ ಸಹ ರಮಾಪತಿಯು ದೋಷದೂರನೆಂದು ಸಿದ್ಧವಾಯಿತು.

ಬ್ರಹ್ಮಣಃ ಸನ್ನಿಧಾನಾಚ್ಚ ತದುಪಾಸ್ತಿರ್ದಿದೃಕ್ಷತಾಂ ।
ರಾಜದ್ವಾರೋಪಾಸ್ತಿತೋಽಪಿ ರಾಜ್ಞಃ ಸ್ಯಾದ್ಧಿ ಪ್ರಸನ್ನತಾ ॥ ೧೪೨೮ ॥

**ಅನುವಾದ–** ಬ್ರಹ್ಮನ ಸನ್ನಿಧಾನವಿರುವುದರಿಂದಲೇ ಬ್ರಹ್ಮನನ್ನು ನೋಡಲು ಬಯಸುವವರಿಗೆ ಆ ಪ್ರತೀಕಗಳ ಉಪಾಸನೆಯು ವಿಹಿತವಾಗುತ್ತದೆ. ಅರಮನೆಯ ದ್ವಾರವನ್ನು ಉಪಾಸನೆ ಮಾಡಿದರೆ ರಾಜನ ಪ್ರಸನ್ನತೆಯು ಉಂಟಾಗುವುದಷ್ಟೇ.

ಅತಿಸೂಕ್ಷ್ಮಾಂ ಹರೇರ್ಮೂರ್ತಿಂ ದರ್ಶಯೇದಿತಿ ವಾದಿನಾಂ ।
ತವೋಪಮೈವಾನುಪಮಾ ಬಲಮಾಸೀದ್ ವಿವೇಚನೇ ॥ ೧೪೩೫ ॥

**ಅನುವಾದ–** ಉಪಾಸ್ಯಮಾನವಾದ ಮಾನಸವಾಸನಾಮಯವಾದ ಸ್ಥೂಲವೂ ಪ್ರಕಾಶಮಾನವೂ ಆದ ಪ್ರತಿಮೆಯೇ ತನ್ನೊಳಗಿರುವ ಜ್ಞಾನಾನಂದರೂಪವಾದ ಪ್ರಕಾಶವುಳ್ಳ ಅತ್ಯಂತ ಸೂಕ್ಷ್ಮವಾದ ಹರಿಯ ಮೂರ್ತಿಯನ್ನು ತೋರಿಸುತ್ತದೆ ಎಂದು ಹೇಳುವ ನಮಗಾದರೂ ನಿನ್ನ ಈ ಅಸದೃಶವಾದ ಸ್ಥೂಲಾರುಂಧತಿಯ ದೃಷ್ಟಾಂತವೇ ವಿವೇಚನೆಯನ್ನು ಮಾಡಿದರೆ ಬಲವಾಯಿತಷ್ಟೇ!

ಸಾಕ್ಷಿಸಿದ್ಧಮಿದಂ ಜೀವ ತೇ ರೂಪಂ ಬ್ರಹ್ಮ ನೋಪ ತೇ ।
ಯದಾಸ ತತ್ ಪರಂ ಬ್ರಹ್ಮೇತ್ಯಾಹ ಸೇಯಂ ಶ್ರುತಿಃ ಕಿಲ ॥ ೧೪೪೮ ॥

**ಅನುವಾದ–** ಎಲೈ ಜೀವನೇ! ಸಾಕ್ಷಿಸಿದ್ಧವಾದ ಈ ನಿನ್ನ ಸ್ವರೂಪವೇನಿದೆಯೋ ಅದು ಬ್ರಹ್ಮನಲ್ಲ. ಆದರೆ ನಿನ್ನ ಸಮೀಪದಲ್ಲಿ ಯಾವುದು ಇದೆಯೋ ಅದು ಪರಬ್ರಹ್ಮನೆಂದು ಈ ಶ್ರುತಿಯು ಹೇಳುತ್ತದೆ.

ತಸ್ಮಾಜ್ಜೀವೇಶಭೇದಸ್ಯ ಸಾಧಿಕೇಯಮಭೂಚ್ಛ್ರುತಿಃ ।
ಉಪಾಸ್ಯಸ್ಯ ತು ಮಿಥ್ಯಾತ್ವಂ ನಿರ್ನಿಮಿತ್ತಮಭೂತ್ ತವ ॥ ೧೪೪೯ ॥

**ಅನುವಾದ–** ಆದ್ದರಿಂದ ಈ ಶ್ರುತಿಯು ಜೀವೇಶ ಭೇದಕ್ಕೇ ಸಾಧಕವಾಯಿತು. ನಿನಗೆ ಅಭಿಪ್ರೇತವಾದ ಉಪಾಸ್ಯಮಾನವಾದ ವಸ್ತುವಿನ ಮಿಥ್ಯಾತ್ವವು ನಿರ್ನಿಮಿತ್ತವೆಂದು ಸಿದ್ಧವಾಯಿತು.

ಘಟಕುಡ್ಯವದನ್ಯತ್ವೇ ಸಾಮ್ಯಂ ಸ್ಯಾತ್ ತೇನ ತಂ ಶ್ರುತಿಃ ।
ಈಶಮಾಹ ಗುಣಾಖ್ಯಂ ಚ ಮಹಿಮಾನಂ ಪುನರ್ಜಗೌ ॥ ೧೪೯೨ ॥

**ಅನುವಾದ–** ಕೇವಲ ಭೇದವನ್ನಷ್ಟೇ ಹೇಳಿದರೆ ಘಟಪಟಗಳಿರುವಂತೆ ಸಾಮ್ಯವೇ ಸಿದ್ಧವಾದೀತು. ಆದಕ್ಕಾಗಿ ಶ್ರುತಿಯು ಈಶನೆಂದು ಮೊದಲು ಹೇಳಿ ಅನಂತರ ಅವನ ಮಹಿಮೆಯೆಂಬ ಗುಣವನ್ನೂ ಹೇಳುತ್ತದೆ.

ತ್ರಿತಯಜ್ಞಾನತೋ ಜೀವೋ ವೀತಶೋಕೋ ಭವೇತ್ ಕಿಲ ।
ಇತಿ ಶಬ್ದೇನ ತಜ್ಜ್ಞಾನಂ ಸಪ್ರಕಾರಕಮಾಹ ಚ ॥ ೧೪೯೩ ॥

**ಅನುವಾದ–** ಜೀವ ಭೇದ, ಸರ್ವೇಶ್ವರತ್ವ ಮತ್ತು ಸಗುಣತ್ವ ಈ ಮೂರರ ಜ್ಞಾನದಿಂದ ಜೀವನು ವೀತಶೋಕನಾಗುವನಷ್ಟೇ (ಮುಕ್ತನಾಗುವನಷ್ಟೇ). ಆದ್ದರಿಂದ ಇತಿ ವೀತಶೋಕ ಎಂಬಲ್ಲಿರುವ ಇತಿ ಶಬ್ದವು ಮೋಕ್ಷ ಜನಕವಾದ ಬ್ರಹ್ಮವಿಷಯಕವಾದ ಜ್ಞಾನವು ಸಪ್ರಕಾರಕ ಜ್ಞಾನವೆಂದೇ ಹೇಳುತ್ತದೆ.

ಸಾಕ್ಷಾನ್ಮೋಕ್ಷಪ್ರದತ್ವೋಕ್ತ್ಯಾ ತತ್ತ್ವಮಾಸೀದಿದಂ ತ್ರಯಮ್ ।
ತಸ್ಮಾದಭೇದಃ ಸಾಮ್ಯಂ ಚ ನೈರ್ಗುಣ್ಯಂ ಚ ನಿರಾಕೃತಂ ॥ ೧೪೯೪ ॥

**ಅನುವಾದ–** ಜೀವಭಿನ್ನನು, ಸರ್ವೇಶ್ವರನು, ಗುಣಪೂರ್ಣನು ಇದನ್ನು ತಿಳಿದವನು ಕರ್ಮಬಂಧದಿಂದ ಮುಕ್ತನಾಗುವನು ಎಂದಿರುವುದರಿಂದ ಇವು ನೇರವಾಗಿ ಮುಕ್ತಿಗೆ ಕಾರಣ ಎಂದಾಯಿತು. ಹೀಗಿರುವಾಗ ಇದಕ್ಕೆ ವಿರುದ್ಧವಾದ ಜೀವಾಭೇದ, ಜೀವರೊಂದಿಗೆ ಸಾಮ್ಯ, ಈಶ್ವರನ ನಿರ್ಗುಣತ್ವ ಈ ಮೂರು ನಿರಾಕೃತವಾದುವು.

ವೀತಶೋಕ ಇತಿ ಪ್ರಾಹ ಯತಃ ಸ ಜ್ಞಾನಿನಃ ಫಲಂ ।
ತತೋ ಜೀವೇಶಭೇದೇಽಸ್ಯ ತಾತ್ಪರ್ಯಂ ಚಾವಗಮ್ಯತೇ ॥ ೧೪೫ ॥

**ಅನುವಾದ–** ಇದನ್ನು ತಿಳಿದವನು ಪುಣ್ಯಪಾಪಗಳಿಂದ ಮುಕ್ತನಾಗುತ್ತಾನೆ ಎಂದು ಫಲವನ್ನು ಹೇಳಿರುವುದರಿಂದ ಶ್ರುತಿವಾಕ್ಯಕ್ಕೆ ಜೀವೇಶ್ವರರ ಭೇದದಲ್ಲಿಯೇ ತಾತ್ಪರ್ಯವಿದೆ ಎಂಬುದು ಸಿದ್ಧವಾಯಿತು.

ಏಷ ಸರ್ವೇಶ್ವರ ಇತಿ ಕಾಚಿದ್ ವಕ್ತಿ ತಮೀಶ್ವರಂ ।
ಸ ಸರ್ವಸ್ಯ ವಶೀ ಸರ್ವಸ್ಯೇಶಾನ ಇತಿ ಚಾಪರಾ ।
ಅತಃ ಸಯುಕ್ತಿಕಃ ಸ್ವಾಮಿಭೃತ್ಯಭೇದಃ ಶ್ರುತೌ ಶ್ರುತಃ ॥ ೧೪೬ ॥

**ಅನುವಾದ–** ಒಂದು ಶ್ರುತಿಯು ಭಗವಂತನನ್ನು ಸರ್ವೇಶ್ವರನು ಎಂದು ಹೇಳಿದರೆ, ಇನ್ನೊಂದು ಶ್ರುತಿಯು ಅವನನ್ನು ಸರ್ವವನ್ನೂ ವಶಪಡಿಸಿಕೊಂಡಿರುವವನು ಮತ್ತು ಸರ್ವಸ್ವಾಮಿ ಎಂದು ನಿರೂಪಿಸುತ್ತಿದೆ. ಹೀಗಿರುವಾಗ ಶ್ರುತಿಯಲ್ಲಿ ಹೇಳಿದ ಸ್ವಾಮಿಭೃತ್ಯಭೇದವು ಯುಕ್ತಿಸಹಿತವಾದುದು ಎಂದು ಸಿದ್ಧವಾಯಿತು.

ಯ ಆತ್ಮನಿ ಸದಾ ತಿಷ್ಠನ್ ಆತ್ಮನೋಽಂತರ ಇತ್ಯಪಿ ।
ತೇಽಂತ್ಯರ್ಯಾಮ್ಯೇಷ ಇತ್ಯಾದ್ಯಾಃ ಶ್ರುತಯಃ ಸೂತ್ರಸೂಚಿತಾಃ ॥೧೪೭॥

**ಅನುವಾದ–** ಯ ಆತ್ಮನಿ ತಿಷ್ಠನ್ ಎಂಬ ಬೃಹದಾರಣ್ಯಕಶ್ರುತಿಯು ಭಗವಂತನನ್ನು ಜೀವನ ಒಳಗೆ ಜೀವನಿಗಿಂತ ಭಿನ್ನನಾಗಿ ಇರುವವನು ಎಂದು ಹೇಳುತ್ತಿದೆ. ಏಷ ತೇ ಅಂತರ್ಯಾಮೀ ಇವನೇ ನಿನ್ನ ಅಂತರ್ಯಾಮಿ ಎಂಬ ಇದೇ ಶ್ರುತಿಯೂ ನಿರ್ಣಾಯಕವಾದ ಬ್ರಹ್ಮಸೂತ್ರಗಳಿಂದ ಸೂಚಿತವಾಗಿದೆ. ಹೀಗಾಗಿ ನೂರಾರು ಸಾವಿರಾರು ಶ್ರುತಿಗಳು ಜೀವೇಶಭೇದವನ್ನೇ ಹೇಳುತ್ತಿವೆ.

ಉತ್ತಮಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಭಿಭರ್ತ್ಯವ್ಯಯ ಈಶ್ವರಃ ।
ಇತಿ ಗೀತಾಸು ಭೇದೋಽಯಂ ಸಯುಕ್ತಿಕಮುದಾಹೃತಃ ॥ ೧೪೮ ॥

**ಅನುವಾದ–** ಕ್ಷರ ಅಕ್ಷರರುಗಳಿಗಿಂತ ಬೇರೆಯಾದವನೇ ಉತ್ತಮಪುರುಷನು. ಅವನನ್ನು ಪರಮಾತ್ಮಾ ಎಂದು ಕರೆಯುತ್ತಾರೆ. ಅವನಂತೂ ಮೂರ್ಲೋಕದ ಒಳಗೂ ಸೇರಿಕೊಂಡು ಜಗತ್ತನ್ನು ರಕ್ಷಿಸುವನು. ನಾಶರಹಿತನು. ಸಾಮರ್ಥ್ಯ-ಶಾಲಿಯು.ಹೀಗೆಂದು ಜೀವೇಶ್ವರಭೇದವನ್ನು ಗೀತಾಶ್ಲೋಕಗಳಲ್ಲಿ ಯುಕ್ತಿ-ಸಹಿತವಾಗಿ ಹೇಳಲಾಗಿದೆ.

ಸ್ಥಾನಾಂತರೇಷ್ವದೃಷ್ಟೋಽಸ್ಯಾ ನ ಸ್ಥಾನದ್ವಯಸಂಗಮಃ ।
ಸೀಪುಂಸಯೋಶ್ಚ ಯೋಗೋಽಯಂ ಸೂತೇ ದೋಷಕುಮಾರಕಂ ॥೧೫೦೩॥

**ಅನುವಾದ–** ಈ ವಿದ್ಯಾ ಎಂಬ ಪದಕ್ಕೆ ಸ್ಥಳಾಂತರದಲ್ಲಿ ಅದೃಷ್ಟವಾದ ಅನುವಾದಕ ವಾಕ್ಯದಲ್ಲಿಯೂ ಮತ್ತು ವಿಧೇಯಕ ವಾಕ್ಯದಲ್ಲಿಯೂ ಸಂಗಮವು ಕೂಡುವುದಿಲ್ಲ ಮತ್ತು ಈ ಸ್ತ್ರೀಪುಮಾಂಸರ ಯೋಗವು ದೋಷಕುಮಾರಕನನ್ನೇ ಪ್ರಸವಿಸುತ್ತದೆ.

ಅಧ್ಯಾಹಾರೋ ಬಹುವ್ರೀಹಿವೃದ್ಧ್ಯೈ ಕಿಂ ಸ್ಯಾತ್ ವಿಚಾರಯ ॥ ೧೫೦೪ ॥

**ಅನುವಾದ–** ಅಧ್ಯಾಹಾರವನ್ನು ಮಾಡಿದರೆ ಬಹುವ್ರೀಹಿಯ ಪೋಷಣೆಯಾಗುತ್ತದೆಯೇ? ಎಂದು ವಿಚಾರ ಮಾಡು.

ತರ್ಹಿ ಸತ್ತದಸಚ್ಚಾಸನ್ನ ಚ ಕಾಲಜವೋಽಪಿ ನ ।
ಯದಾ ಶಾಸ್ತ್ರಂ ಸಮಾಕೃಷ್ಯ ಶಯೀತ ಸಲಿಲೇ ಹರಿಃ ॥ ೧೫೦೫ ॥

ಅರುವನ್ ದೇಹಿದೇಹೇಷು ವಾಯುಸ್ತಸ್ಯ ಪ್ರಸಾದತಃ ॥ ೧೫೦೬ ॥

ತದಾ ಪ್ರಾಗಸತೋ ಜನ್ಮ ಸತೋ ಮೃತಿಮಥಾತ್ಮನಿ ।
ಭಿದಾಂ ಚ ಯೇ ಪಣಮೃತೇ ಸ್ಮರಂತೀಶ ಸ್ಮೃತೇರ್ಗತಾಃ ॥ ೧೫೦೭ ॥

ತೇಷಾಂ ಉಪವಿಶಾಮ್ನಾಯಧ್ವನಿಂ ವೈಕುಂಥವಾಸಿನಾಂ।
ಇತ್ಯಾಹ ಶ್ರುತಿಗೀತಾಯಾಂ ಭಗವಾನ್ ಬಾದರಾಯಣಃ ॥ ೧೫೦೮ ॥

ಮೂರ್ತಾಮೂರ್ತಾಖ್ಯಭೂತಾನಾಂ ಲಯೋ ಬ್ರಹ್ಮಲಯಃ ಕಿಲ ।
ಕಾಲಸ್ಯ ರೂಪಮಾತ್ರಂ ತು ತದಾಽಪ್ಯಸ್ತಿ ಜವೋಽಸ್ಯ ನ ।
ಜರಾಮರಣಯೋಗ್ಯಸ್ಯ ಜವಾರ್ಹಜಗತಃ ಕ್ಷಯಾತ್ ॥ ೧೫೦೯ ॥

ನಿತ್ಯವೇದಾತ್ಮಕಂ ಶಾಸ್ತ್ರಂ ಅಪಕೃಷ್ಯ ಸ್ವಹೃದ್ಗುಹಾಂ ।
ಪ್ರವೇಶ್ಯ ಶೇತೇ ಕಿಲ ಸ ವಟಪತ್ರಪುಟೇ ಪ್ರಭುಃ ॥ ೧೫೧೦ ॥

**ಅನುವಾದ–** ಹರಿಯು ನಿತ್ಯವಾದ ವೇದಾತ್ಮಕ ಶಾಸ್ತ್ರವನ್ನು ಯಾವಾಗ ತನ್ನ ಹೃದಯ ಗುಹೆಯಲ್ಲಿ ಇಟ್ಟುಕೊಂಡು ಪ್ರಳಯೋದಕದಲ್ಲಿ ಮಲಗುತ್ತಾನೆಯೋ, ಆಗ ಮೂರ್ತ ಪದಾರ್ಥವಿರಲಿಲ್ಲ, ಅಮೂರ್ತ ಪದಾರ್ಥವೂ ಇರಲಿಲ್ಲ, ನಿತ್ಯಾನಿತ್ಯವಾದ ಪುರಾಣಗಳೂ ಇರಲಿಲ್ಲ, ಕಾಲವಿದ್ದರೂ ಕಾಲದ ವೇಗವಿರಲಿಲ್ಲ.

ಆಗ ಜೀವರ ದೇಹದಲ್ಲಿ ಇದ್ದು ಭಗವಂತನನ್ನು ಸ್ತೋತ್ರ ಮಾಡುವ ವಾಯುದೇವರ ಅನುಗ್ರಹದಿಂದ ಸಂಸಾರದಿಂದ ಉತ್ತೀರ್ಣರಾದ ಯಾವ ಜೀವರು ಹರಿಯಲ್ಲಿ ಮೊದಲು ಇರದಿದ್ದ ಜಗತ್ತಿನ ಸೃಷ್ಟಿಕರ್ತೃತ್ವವನ್ನು ಮತ್ತು ಹಿಂದೆ ಇದ್ದ ಜಗತ್ತಿನ ಸಂಹಾರ ಕರ್ತೃತ್ವವನ್ನು ಮತ್ತು ಅವನಲ್ಲಿರುವ ಸರ್ವ ಪ್ರಪಂಚ ಭೇದವನ್ನು ಫಲಾಪೇಕ್ಷೆ ಇಲ್ಲದೆ ಸ್ಮರಿಸುತ್ತಾರೆಯೋ, ಎಲೈ ಪ್ರಭುವೇ! ವೈಕುಂಠ ವಾಸಿಗಳಾದ ಅಂತಹವರ ವೇದಧ್ವನಿಯಲ್ಲಿ ನೀನು ಸನ್ನಿಹಿತನಾಗು ಎಂದು ಶ್ರುತಿ ಗೀತೆಯಲ್ಲಿ ಸಾಕ್ಷಾತ್ ವೇದವ್ಯಾಸದೇವರು ಹೇಳಿದ್ದಾರೆ. ಮೂರ್ತ ಮತ್ತು ಅಮೂರ್ತವಾದ ಎಲ್ಲ ಭೂತಗಳ ಲಯವು ಬ್ರಹ್ಮಲಯವೇ ಅಷ್ಟೇ. ಆಗ ಕಾಲದ ಸ್ವರೂಪ ಮಾತ್ರವು ಇದೆ. ಆದರೆ ಜರಾಮರಣಗಳಿಗೆ ಯೋಗ್ಯವಾದ ಜಗತ್ತು ನಾಶವನ್ನು ಹೊಂದಿರುವುದರಿಂದ ಜರಾಮರಣಾಪಾದಕವಾದ ಕಾಲದ ವೇಗವು ಮಾತ್ರ ಇಲ್ಲ. ಶಾಸ್ತ್ರವೆಂದರೆ ನಿತ್ಯವೇದ ರೂಪವಾದುದು ಎಂದು ಅರ್ಥ. ಅಪಕೃಷ್ಯ ಎಂದರೆ ತನ್ನ ಹೃದಯ ಗುಹೆಯಲ್ಲಿ ಇಟ್ಟುಕೊಂಡು ಎಂದು ಅರ್ಥ. ಹೀಗೆ ಮಾಡಿ ಪ್ರಭುವಾದ ಹರಿಯು ವಟಪತ್ರಪಟದಲ್ಲಿ ಶಯನ ಮಾಡುವನಷ್ಟೇ?

ಏವಂ ಚ ಬ್ರಹ್ಮಕಲ್ಪಾಂತೇ ಸಂತಿ ಸಂತಃ ಸ್ಮರಂತಿ ಚ ।
ಜಗತಾಂ ಜನ್ಮಮರಣೇ ಪರಮಾತ್ಮನಿ ಸರ್ವತಃ ॥ ೧೫೧೧ ॥

ಭಿದಾಂ ಚ ಇತ್ಯಾಗತಂ ಸ್ಪಷ್ಟಂ ಶಯಾನಸ್ಯ ತು ದೇಹಿತಾ ।
ಸ್ಮರ್ತೄಣಾಂ ಬಹುತಾ ಚಾರ್ಥಾತ್ ಪ್ರಾಪ್ತಾ ಶಬ್ದಾರ್ಥವಿನ್ಮತೇ ॥೧೫೧೨॥

**ಅನುವಾದ–** ಆದ್ದರಿಂದ ಬ್ರಹ್ಮಕಲ್ಪದ ಕೊನೆಯಲ್ಲಿ ಎಂದರೆ ಪ್ರಳಯ ಕಾಲದಲ್ಲಿ ಸಜ್ಜನರು ಇದ್ದಾರೆ. ಅವರು ಹರಿಯಲ್ಲಿ ಜಗಜ್ಜನ್ಮಕಾರಣತ್ವವನ್ನು, ಜಗತ್ ಸಂಹಾರ ಕಾರಣತ್ವವನ್ನು ಸ್ಮರಿಸುತ್ತಾರೆ. ಮತ್ತು ಅವನಲ್ಲಿ ಸರ್ವಪ್ರತಿಯೋಗಿಕವಾದ ಭೇದವನ್ನೂ ಸ್ಮರಿಸುತ್ತಾರೆ ಎಂದು ಸ್ಪಷ್ಟವಾಯಿತು. ಮಲಗಿರುವ ಹರಿಗೆ ದೇಹವಿದೆ ಎಂದು ಸಿದ್ಧವಾಯಿತು. ಸ್ಮರಂತಿ ಎಂಬ ಬಹುವಚನದಿಂದ ಸ್ಮರಿಸುವ ಜೀವರು ಅನೇಕರು ಇದ್ದಾರೆಂದು ಜೀವ ಬಹುತ್ವವು ಶಬ್ದ ಶಕ್ತಿಯನ್ನು ತಿಳಿದವರ ಮತದಲ್ಲಿ ಅರ್ಥಾತ್ ಪ್ರಾಪ್ತವಾಯಿತು.

ಯತೋ ಜಡದ್ವಯಂ ಮುಕ್ತೌ ಮುಕ್ತಾಶ್ಚ ಬಹವೋಽಭವನ್ ।
ತೇನಾದ್ವಿತೀಯತಾ ಮುಕ್ತೌ ಶುಕ್ತೌ ರೂಪ್ಯಮಭೂತ್ ತವ ॥ ೧೫೧೩ ॥

**ಅನುವಾದ–** ಮೋಕ್ಷದಲ್ಲಿ ದೇಶ ಕಾಲರೂಪವಾದ ಎರಡು ಜಡಗಳು ಮತ್ತು ಅನೇಕ ಮುಕ್ತರು ಇರುವುದರಿಂದ ಮೋಕ್ಷ ಕಾಲದಲ್ಲಿ ನಿನಗೆ ಅಭಿಮತವಾದ ಅದ್ವಿತೀಯತ್ವವು ಶುಕ್ತಿಯಲ್ಲಿ ತೋರುವ ರಜತವಾಯಿತು.

ಅತಃ ಪ್ರತ್ಯಕ್ಷರಾಗ್ಯಾವಾತ್ ಪ್ರತಿಬಿಂಬಸ್ತು ಬಿಂಬತಃ ।
ಭಿನ್ನೋ ವಿಸದೃಶತ್ವಾಚ್ಚ ಜ್ಞಾನಜ್ಞೇಯವದೇವ ಹಿ ॥ ೧೫೪೪ ॥

**ಅನುವಾದ–** ಆದ್ದರಿಂದ ಪ್ರತ್ಯಕ್ಷರಾಗ್ಯಾವವು ಇರುವುದರಿಂದಲೂ ಮತ್ತು ವೈಸಾದೃಶ್ಯ ಇರುವುದರಿಂದಲೂ ಜ್ಞಾನ ಮತ್ತು ಜ್ಞೇಯಗಳಂತೆ ಬಿಂಬಪ್ರತಿಬಿಂಬಗಳು ಭಿನ್ನವಾಗಿಯೇ ಇವೆಯಷ್ಟೇ.

ದ್ವಾವಿಮಾವತಿ ವಿಸ್ಪಷ್ಟದೃಷ್ಟೇರಪಿ ತಯೋರ್ಭಿದಾ ।
ದ್ವಾವಿಮಾವಿತಿ ಪಾರ್ಶ್ವಸ್ಥೋ ಯತಃ ಪಶ್ಯತಿ ತೌ ಸದಾ ॥ ೧೫೫೧ ॥

**ಅನುವಾದ–** ಬಿಂಬ ಪ್ರತಿಬಿಂಬಗಳ ಭೇದದಲ್ಲಿ ಪ್ರತ್ಯಕ್ಷಪ್ರಮಾಣವೂ ಇದೆ. ಏಕೆಂದರೆ ಹತ್ತಿರದ ವ್ಯಕ್ತಿಯು ಬಿಂಬಪ್ರತಿಬಿಂಬಗಳನ್ನು ಕಾಣುತ್ತಾನೆ. ಆಗ ಅವನಿಗೆ ದ್ವಾವಿಮೌ ಎಂಬುದಾಗಿ ಭೇದಪ್ರತ್ಯಕ್ಷವೇ ಬರುತ್ತದೆ. ಹೊರತಾಗಿ ಏಕ ಏವ ಎಂದು ಅಭೇದವು ಕಾಣುವುದಿಲ್ಲ. ಈ ಪಾರ್ಶ್ವಸ್ಥನ ಪ್ರತ್ಯಕ್ಷದಿಂದಲೂ ಭೇದವೇ ಸಿದ್ಧಿಸುವುದು.

ಅತಃ ಪ್ರತ್ಯಕ್ಷತೋಽಪ್ಯತ್ರ ಭೇದಃ ಸಿದ್ಧೋ ವಿವೇಕಿನಾಂ ।
ನ ದ್ವಾವಿಮಾವೇಕ ಏವೇತ್ಯತ್ರ ಧೀರಸ್ತಿ ಕಿಂ ಕ್ವಚಿತ್ ।
ತಸ್ಮಾದಬಾಧಿತಂ ಭೇದಪ್ರತ್ಯಕ್ಷಮಭವದ್ಧಿ ತತ್ ॥ ೧೫೫೨ ॥

**ಅನುವಾದ–** ಯುಕ್ತಾಯುಕ್ತತೆಯನ್ನು ಚಿಂತನೆ ಮಾಡುವ ವಿವೇಕಿಗಳಿಗೆ ಬಿಂಬಪ್ರತಿಬಿಂಬಗಳ ಭೇದವು ಪ್ರತ್ಯಕ್ಷಸಿದ್ಧವಾಯಿತು. ಯಾವ ಸಂದರ್ಭದಲ್ಲಿಯೂ ಇವು ಎರಡಲ್ಲ ಒಂದೇ ಎಂಬ ಅಭೇದವಿಷಯಕಬಾಧಜ್ಞಾನವು ಬರುವುದಿಲ್ಲ. ಆದ್ದರಿಂದ ಇದು ಅಬಾಧಿಕ ಪ್ರತ್ಯಕ್ಷವಾಗಿದೆ.

ತದೇವೇದಂ ಮುಖಮಿತಿ ವ್ಯವಹಾರಸ್ತು ಸಾಮ್ಯತಃ ।
ಸ ಏವಾಯಂ ರಾಮ ಇತಿ ಯಥಾ ಚಿತ್ರಸ್ಥಿತಾಕೃತೌ ॥ ೧೫೫೩ ॥

ಚಿತ್ರಸಿಂಹೋ ಯಥಾ ಸಿಂಹೋ ಮುಖಂ ಪ್ರತಿಮುಖಂ ತಥಾ॥ ೧೫೫೪ ॥

**ಅನುವಾದ–** ಲೋಕದಲ್ಲಿ ರಾಮನ ಚಿತ್ರವನ್ನು ನೋಡಿ ರಾಮಾಯಣದ ರಾಮ ಎಂದು ವ್ಯವಹರಿಸುತ್ತಾರೆ. ಹಾಗೆಯೇ ಚಿತ್ರಪಟದಲ್ಲಿ ಬರೆದ ಸಿಂಹದ ಚಿತ್ರವನ್ನು ಸಿಂಹ ಎಂದು ವ್ಯವಹರಿಸುತ್ತಾರೆ. ಈ ವ್ಯವಹಾರಗಳನ್ನು ಸಾದೃಶ್ಯದಿಂದಲೇ ಕೂಡಿಸಬೇಕು ಹೊರತು ಅಭೇದದಿಂದ ಅಲ್ಲ. ಹಾಗಯೇ ಪ್ರತಿಮುಖದಲ್ಲಿ ತದೇವೇದಂ ಮುಖಂ

ಎಂಬ ವ್ಯವಹಾರವೂ ಕೂಡ ಸಾದೃಶ್ಯದಿಂದಲೇ ಕೂಡಿಸಬೇಕು ಹೊರತು ವ್ಯವಹಾರಬಲದಿಂದ ಮುಖಪ್ರತಿಮುಖಗಳಿಗೆ ಅಭೇದವನ್ನು ಹೇಳಬಾರದು.

ಕಥಂ ನ ದಹ್ಯತೇ ವಕ್ತ್ರಂ ತಪ್ತವಾರ್ಯಂತರಾವಿಶತ್ ।
ಕಥಂ ಚ ನ ವ್ರಣಂ ವಕ್ತ್ರೇ ಕಾಂಸ್ಯಾದರ್ಶಪ್ರವೇಶಿನಿ ॥ ೧೫೫೫ ॥

**ಅನುವಾದ–** ಮುಖವು ಬಿಸಿನೀರಿನೊಳಗೆ ಪ್ರವೇಶಿಸಿದರೆ ಹೇಗೆ ದಹಿಸಲ್ಪಡುವುದಿಲ್ಲ? ಕಂಚಿನ ಕನ್ನಡಿಯಲ್ಲಿ ಪ್ರವೇಶಿಸುವ ಮುಖಕ್ಕೆ ಏಕೆ ವ್ರಣವಾಗುವುದಿಲ್ಲ?

ಕರಸ್ಥೇ ದರ್ಪಣೇ ಹಸ್ತೀ ಯದ್ಯಷ್ಟೈಶ್ವರ್ಯಯುತೋ ವಿಶೇತ್ ।
ಕಥಂ ಶಿಶುಸ್ತಂ ಬಿಭೃಯಾತ್ ಗಜಶಾಲೋದ್ಯಮೋ ವೃಥಾ ॥ ೧೫೫೬ ॥

**ಅನುವಾದ–** ನಿಜವಾದ ಆನೆಯೇ ಕೈಯಲ್ಲಿರುವ ಕನ್ನಡಿಯೊಳಗೆ ಅಣಿಮಾದಿ ಐಶ್ವರ್ಯದ ಬಲದಿಂದ ಪ್ರವೇಶಮಾಡುವುದಾದರೆ ಚಿಕ್ಕಮಗುವಿಗೆ ಆ ಕನ್ನಡಿಯನ್ನು ಎತ್ತುವುದು ಹೇಗೆ ಸಾಧ್ಯವಾದೀತು? ಹಾಗೆಯೇ ರಾತ್ರಿಯಲ್ಲಿ ಆನೆಗಳನ್ನು ಕಟ್ಟಿಹಾಕಲು ಗಜಶಾಲೆಗಳ ನಿರ್ಮಾಣವು ವ್ಯರ್ಥ.

ಅಷ್ಟಾಶೀತಿಸಹಸ್ರಾಣಿ ವಿಸ್ತೀರ್ಣೋ ಯೋಜನಸ್ಯ ಯಃ ।
ದರ್ಪಣೇಽಲ್ಪಪ್ರಮಾಣೇಽಸೌ ಕಥಂ ವಿಶತಿ ಚಂದ್ರಮಾಃ ॥ ೧೫೫೭ ॥

**ಅನುವಾದ–** ಎಂಬತ್ತೆಂಟು ಸಾವಿರಯೋಜನ ವಿಸ್ತಾರವುಳ್ಳದ್ದು ಚಂದ್ರಮಂಡಲ ಪರಿಮಾಣವಾಗಿದೆ. ಆ ಚಂದ್ರಮಂಡಲವು ಗೇಣು ಉದ್ದದ ಕನ್ನಡಿಯಲ್ಲಿ ಹೇಗೆ ತಾನೇ ಪ್ರವೇಶಿಸೀತು? ಆದ್ದರಿಂದ ಬಿಂಬಪ್ರತಿಬಿಂಬಗಳು ಒಂದಲ್ಲ.

ಯದಿ ತಪ್ತೋದಕೇಽತ್ಯುಷ್ಣೇ ವಕ್ತ್ರಮೇವ ವಿಶೇನ್ನೃಣಾಂ ।
ತದಾ ದಾಹೋ ಭವೇತ್ ತಸ್ಯ ಕವೋಷ್ಣಾದಾಪಿ ಯಸ್ಯ ಭೀಃ ॥ ೧೫೫೮ ॥

**ಅನುವಾದ–** ಮುಖ ಮತ್ತು ಮುಖದ ಪ್ರತಿಬಿಂಬಗಳಿಗೆ ಅಭೇದವನ್ನು ಹೇಳಬಾರದು. ಒಂದು ವೇಳೆ ಅಭೇದವನ್ನು ಹೇಳಿದರೆ ಬಹಳ ಬಿಸಿಯಾದ ನೀರಿನಲ್ಲಿ ಸಾಮಾನ್ಯ ಜನರ ಮುಖದ ಪ್ರತಿಬಿಂಬಬಿದ್ದಾಗ ಮುಖವೇ ನೀರಿನಲ್ಲಿ ಪ್ರವೇಶಮಾಡಿದಂತಾಯಿತು. ಆದರೆ ಮುಖವನ್ನು ಉಗುರುಬೆಚ್ಚಗಿನ ನೀರಿನಿಂದಲೂ ತೊಳೆಯಲಾಗುವುದಿಲ್ಲ. ಅಂತಹ ಮುಖವು ಆಗ ಬಹುಬಿಸಿನೀರಿನಲ್ಲಿ ಇರುವುದರಿಂದ ಸುಡಬೇಕಾದೀತು. ಆದರೆ ಪ್ರತಿಬಿಂಬವು ಬಿಸಿನೀರಿನಲ್ಲಿದ್ದರೂ ಮುಖವು ಸುಡುವುದಿಲ್ಲವಾದ ಕಾರಣ ಮುಖ ಮತ್ತು ಪ್ರತಿಬಿಂಬಗಳಿಗೆ ಅಭೇದವಿಲ್ಲ.

**ಯದ್ಯಂಬುನಿ ಚಿರಂ ನ್ಯಸ್ತಾಂ ಮುಖಮೇವ ವಿಶೇತ್ ತದಾ ।**
**ಶಿಕ್ಷಾ ಸ್ಯಾತ್ ತಸ್ಕರಸ್ಯೇವ ಯದ್ ಬಿಭೇತ್ಯಘಮರ್ಷಣಾತ್ ॥ ೧೫೫೯ ॥**

**ಅನುವಾದ–** ಒಬ್ಬನು ನೀರಿನಲ್ಲಿ ತನ್ನ ಮುಖದ ಪ್ರತಿಬಿಂಬವನ್ನು ಬಹುಕಾಲದ ತನಕ ನೋಡುತ್ತಿರುತ್ತಾನೆ. ಬಿಂಬಪ್ರತಿಬಿಂಬಗಳಿಗೆ ಅಭೇದವಿದ್ದರೆ ತನ್ನ ಮುಖವೇ ನೀರಿನೊಳಗೆ ಪ್ರವೇಶಿಸಿದಂತಾಯಿತು. ಆದರೆ ಆ ಮುಖವು ಕೇವಲ ಅಘಮರ್ಷಣ ಕಾಲದಲ್ಲಿ ಮುಳುಗಲು ಹಿಂಜರಿಯುತ್ತದೆ. ಅಂತಹ ಮುಖವು ಈಗ ನೀರನ್ನು ಬಹಳ ಹೊತ್ತು ಪ್ರವೇಶಿಸಿದರೆ ಕಳ್ಳನಿಗೆ ಆಗುವಂತಹ ಶಿಕ್ಷೆಯನ್ನು ಅನುಭವಿಸಬೇಕಾದೀತು.

**ನೈಮಿತ್ತಕಂ ಹಿ ತತ್ಕಾರ್ಯಂ ನಿಮಿತ್ತೇ ಸತಿ ಜಾಯತೇ ।**
**ತದಪಾಯೇ ನಾಶವಚ್ಚ ಸೂರ್ಯಾತ್ ಪದ್ಮವಿಕಾಸವತ್ ॥ ೧೫೬೦ ॥**

**ಅನುವಾದ–** ನಿಮಿತ್ತದಿಂದ ಹುಟ್ಟುವ ಕೆಲವು ಕಾರ್ಯವು ನಿಮಿತ್ತ ಇದ್ದಾಗ ಇರುತ್ತದೆ. ಕಾರಣಹೋದಾಗ ಹೋಗುತ್ತದೆ ಎಂಬುದು ಅನೇಕ ದೃಷ್ಟಾಂತಗಳಿಂದ ಸಿದ್ಧವಾಗಿದೆ. ಆ ದೃಷ್ಟಾಂತಗಳು ಕ್ರಮವಾಗಿ ಹೀಗಿವೆ.

**ಜಲಸ್ಥಂ ಚೇತ್ ಬಹಿರ್ನಸ್ಯಾತ್ ಬಹಿಸ್ಥಂ ಚ ಜಲೇ ಕುತಃ ।**
**ಮಜ್ಜನ್ ಮುಖಮಿವೈಕತ್ವಾತ್ ಏಕತ್ರೈವ ಭವೇದ್ಧಿ ತತ್ ॥ ೧೫೬೯ ॥**

**ಅನುವಾದ–** ಮುಖಪ್ರತಿಮುಖಗಳಿಗೆ ಅಭೇದವನ್ನು ಹೇಳುವ ವಾದಿಗಳು ಸ್ನಾನಕಾಲದಲ್ಲಿ ಮುಖವನ್ನು ಮುಳುಗಿಸಿದಾಗ ಹೊರಗೆ ಇರುವುದಿಲ್ಲ ಎಂದು ಒಪ್ಪುತ್ತಾರೆ. ಹೀಗಾದರೆ ಮುಳುಗುವ ಮೊದಲು ಹೊರಗಿರುವ ಮುಖವು ನೀರಿನ ಒಳಗೆ ಹೇಗೆ ತಾನೆ ಇರಲು ಸಾಧ್ಯವಾದೀತು? ಆದ್ದರಿಂದ ಮುಳುಗಿದಾಗ ಒಂದೇ ಮುಖವಿದ್ದಂತೆ ಮೊದಲೂ ಕೂಡ ಒಂದೇ ಮುಖವಿರುತ್ತದೆ. ಕಾಣುವ ಪ್ರತಿಮುಖವು ಬೇರೆಯಾಗಿದೆ ಎಂದು ಒಪ್ಪಿಕೊಳ್ಳಬೇಕು.

**ಯದ್ಯಾದರ್ಶೇ ಮುಖಂ ಸತ್ ತೇ ದೋಷೋಽಯಂ ದುಸ್ತರಸ್ತದಾ ।**
**ನ ಚೇತ್ ತದಾಧಾರತಾಧೀಃ ಭ್ರಮತ್ವಾನ್ನೈವ ಸಾಧಿಕಾ ॥ ೧೫೭೦ ॥**

**ಅನುವಾದ–** ದರ್ಪಣದಲ್ಲಿ ಕಾಣುವ ಪ್ರತಿಮುಖವು ನಿಜವಾದ ಮುಖವೇ ಆಗಿದ್ದರೆ, ಹಿಂದೆ ಹೇಳಿದ ದೋಷಗಳನ್ನು ಪರಿಹರಿಸಲಾಗುವುದಿಲ್ಲ. ಆ ಕಾಣುವ ಪ್ರತಿಬಿಂಬವು ಸುಳ್ಳಾದರೆ ಮುಖ ಮತ್ತು ಪ್ರತಿಮುಖಗಳಿಗೆ ಅಭೇದವನ್ನು ಸಾಧಿಸುವ ಪ್ರಮಾಣವಿಲ್ಲದಂತಾಗುತ್ತದೆ. ಏಕೆಂದರೆ ಪ್ರತಿವಾದಿಯು ದರ್ಪಣೇ ಮುಖಂ ಎಂಬ

ಪ್ರತ್ಯಕ್ಷದಿಂದ ಮುಖ ಮತ್ತು ಪ್ರತಿಮುಖಗಳಿಗೆ ಐಕ್ಯವನ್ನು ಸಾಧಿಸುತ್ತಾನೆ. ಆದರೆ ಕನ್ನಡಿಯಲ್ಲಿರುವ ಮುಖವು ಸುಳ್ಳಾದರೆ ಈ ಜ್ಞಾನವು ಭ್ರಮೆಯಾಗುತ್ತದೆ. ಈ ಭ್ರಾಂತ್ಯಾತ್ಮಕಜ್ಞಾನವು ಅಭೇದವನ್ನು ಸಾಧಿಸಿಕೊಡುವುದಿಲ್ಲ.

॥ ಶ್ರೀಕೃಷ್ಣಾರ್ಪಣಮಸ್ತು ॥





## ರಾಜಸುಭಾಷಿತ

**ತತ್ಸಂಪತ್ತೌ ವಿಪತ್ತೌ ಚ ಗತಿಃ ಶ್ರೀಪತಿರೇವ ನಃ ।**
**ಯೋ ಬ್ರಹ್ಮರುದ್ರವೀಂದ್ರೇಂದ್ರಚಂದ್ರಾದೀನಾಮಧೀಶ್ವರಃ ॥**

ಯಾವ ಶ್ರೀಪತಿಯು ಬ್ರಹ್ಮ-ರುದ್ರ-ಗರುಡ-ಇಂದ್ರ-ಚಂದ್ರಾದಿಗಳಿಗೆ
ಅಧಿಪತಿಯಾಗಿದ್ದಾನೆಯೋ ಅವನೇ ನಮಗೂ ಸಹ ಸಂಪತ್ತಿನಲ್ಲಿಯೂ
ಮತ್ತು ವಿಪತ್ತಿನಲ್ಲಿಯೂ ಗತಿಯಾಗಿದ್ದಾನೆ.

